ಪ್ರಕಟಣೆ -164



# ಆಯಸ್ಕಾಂತಾವರ

ಡಾ. ನಾ. ಮೊಗಸಾಲೆ ಅಭಿನಂದನಾ ಗ್ರಂಥ

ಸಂಪಾದಕರು

## ಡಾ. ಕಮಲಾ ಹೆಮ್ಮಿಗೆ






ಸುಮುಖ ಪ್ರಕಾಶನ
174ಇ/28, 1ನೇ ಮಹಡಿ, 1ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ
ಟೋಲ್‌ಗೇಟ್, ಬೆಂಗಳೂರು-23. ಫೋನ್: 23118585, 9844278792

*AYASKANTHAVARA (A Critical Perspective on life and works of Dr. N. Mogasale)*
*Edited by* ***Dr. Smt. Kamala Hemmige,*** *Published by* ***Narayana Malkod***
*SUMUKHA PRAKASHANA, No.174E/28, 1st Floor, 1st Main, Vidyaranya Nagar, Magadi Road Tolgate, Bangalore- 560 023, Ph:23118585, 98442 78792.*

*Size: 1/8 demy*
*Paper used: 70 GSM NS Maplitho*





**ಅಭಿನಂದನ ಗ್ರಂಥ ಸಂಪಾದನ ಸಮಿತಿ**

**ಸಂಪಾದಕರು**
ಕಮಲಾ ಹೆಮ್ಮಿಗೆ, ಧಾರವಾಡ

**ಸಹ ಸಂಪಾದಕರು**
ಡಾ. ಎಸ್.ಪಿ. ಪದ್ಮಪ್ರಸಾದ್, ತುಮಕೂರು
ನಾರಾಯಣ ಮಾಳ್ಕೋಡ್, ಬೆಂಗಳೂರು

ಪುಟಗಳು: ೩೨೪
Pages: 324

ಪ್ರಥಮ ಮುದ್ರಣ : ಜೂನ್ ೨೦೦೭
First Edition: June 2007

ಬೆಲೆ : ರೂ. ೧೫೦/-
Price: Rs. 150/-



ಪ್ರತಿಗಳಿಗೆ: ಸುಮುಖ ಬುಕ್ ಹೌಸ್
174ಇ/28, 1ನೇ ಮಹಡಿ, 1ನೇ ಮುಖ್ಯರಸ್ತೆ
ವಿದ್ಯಾರಣ್ಯನಗರ, ಮಾಗಡಿ ರಸ್ತೆ ಟೋಲ್‌ಗೇಟ್, ಬೆಂಗಳೂರು-23.
ಫೋನ್: 23118585, 9844278792



*Cover page: Kanthesh Badiger*
*DTP: Gangaraju N, Mathikere, Shivakumar R.*
*Sumukha Prakashana, B'lore-560 023, Ph: 23118585.*

***Printed at:***
*Sumukha News Syndicate & Printing Services*
*VidyaranyaNagara, Bangalore-23. Ph: 98442 78792*

# ನಾ. ಮೊಗಸಾಲೆ ಅಭಿನಂದನಾ ಸಮಿತಿ

ಅಧ್ಯಕ್ಷರು
**ಧರ್ಮದರ್ಶಿ ಹರಿಕೃಷ್ಣ ಪುನರೂರು, ಮುಲ್ಕಿ**

ಸಂಚಾಲಕರು
**ಡಾ. ಎಸ್.ಪಿ. ಪದ್ಮಪ್ರಸಾದ್, ತುಮಕೂರು**

ಸದಸ್ಯರು

| | | |
|---|---|---|
| ಬೆಳಗೋಡು ರಮೇಶ್‌ಭಟ್ | – | ಮಣಿಪಾಲ |
| ನಾದವೈಭವಂ ವಾಸುದೇವಭಟ್ | – | ಉಡುಪಿ |
| ಜಯರಾಮ ಕಾರಂತ | – | ಮಣಿಪಾಲ |
| ವಿರೂಪಾಕ್ಷ ಕೆ.ಸಿ. | – | ಉಡುಪಿ |
| ಅರುಣ್‌ಕುಮಾರ್ ಎಸ್.ಆರ್ | – | ಉಡುಪಿ |





ಪದ್ಮಭೂಷಣ
**ಡಾ.ವೀರೇಂದ್ರ ಹೆಗ್ಗಡೆ**
. ಧರ್ಮಾಧಿಕಾರಿಗಳು

ಕಾಂತಾವರದ ಡಾ. ನಾ. ಮೊಗಸಾಲೆ ಅವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಮಕಾಲೀನ ಸಾಹಿತಿಗಳಲ್ಲಿ ಗಮನ ಸೆಳೆದ ವ್ಯಕ್ತಿಯಾಗಿದ್ದಾರೆ.

ಕವಿತೆ, ಸಣ್ಣಕಥೆಗಳು, ವಿಮರ್ಶೆ ಮತ್ತು ವೈದ್ಯಕೀಯ ಹಾಗೂ ವೈಚಾರಿಕ ಸಾಹಿತ್ಯದ ಬಗ್ಗೆ ಅನೇಕ ಕೃತಿಗಳನ್ನು ಪ್ರಕಟಿಸಿ ಎಲ್ಲರ ಗಮನ ಸೆಳೆದಿದ್ದಾರೆ.

ಗ್ರಾಮೀಣ ಪ್ರದೇಶವಾದ ಕಾಂತಾವರದಲ್ಲಿ ಅನೇಕ ಸಾಹಿತ್ಯ ಸಮ್ಮೇಳನಗಳನ್ನು ಸಂಘಟಿಸಿ, ಪುಟ್ಟ ಊರಾದ ಕಾಂತಾವರವನ್ನು ರಾಜ್ಯಮಟ್ಟದಲ್ಲಿ ಗುರುತಿಸುವಂತೆ ಮಾಡಿದ್ದಾರೆ.

ಮೂಡಬಿದ್ರೆಯಲ್ಲಿ "ವರ್ಧಮಾನ ಪೀಠ"ವನ್ನು ಆರಂಭಿಸಿ ನಾಡಿನ ಉದಯೋನ್ಮುಖ ಸಾಹಿತಿಗಳನ್ನು ಗುರುತಿಸಿ ಸನ್ಮಾನಿಸುವ ಕೆಲಸವನ್ನೂ ಡಾ. ನಾ. ಮೊಗಸಾಲೆ ಮಾಡಿದ್ದಾರೆ. ಕೆಲವು ವರ್ಷಗಳ ವರೆಗೆ ನಾನು ಕೂಡಾ ಅದರ ಅಧ್ಯಕ್ಷನಾಗಿದ್ದೆ.

ಸಾಕಷ್ಟು ಗೊಂದಲ, ಸಮಸ್ಯೆಗಳಿದ್ದರೂ ತಮ್ಮ ಸ್ವ - ಪ್ರಯತ್ನದಿಂದ ಅದನ್ನೆಲ್ಲ ಬಗೆಹರಿಸಿ, ವರ್ಧಮಾನ ಪೀಠದ ಪ್ರಶಸ್ತಿಗೆ ರಾಜ್ಯದಲ್ಲೇ ಗೌರವದ ಸ್ಥಾನಬರುವಂತೆ ಮಾಡಿದ್ದಾರೆ. ಇದಕ್ಕೆ ಕಾರಣ, ನಿಷ್ಪಕ್ಷವಾದ ಮತ್ತು ಪಾರದರ್ಶಕವಾದ ಆಯ್ಕೆಯ ವಿಧಾನ.

ಜನಪ್ರಿಯ ವೈದ್ಯರಾಗಿಯೂ ಅವರು ಜನರ ಪ್ರೀತ್ಯಾದರ ಗಳಿಸಿದ್ದಾರೆ. ಉತ್ತಮ ಸಂಘಟಕ ಹಾಗೂ ಸಾಹಿತಿ ಡಾ.ನಾ. ಮೊಗಸಾಲೆ ಅವರ ಅಭಿನಂದನ ಗ್ರಂಥವನ್ನು ಪ್ರಕಟಿಸಲಿರುವುದು ಔಚಿತ್ಯಪೂರ್ಣವಾಗಿದೆ.

ಅಭಿನಂದನಾ ಗ್ರಂಥ ಪ್ರಕಾಶನವು ಸುಗಮವಾಗುವಂತಾಗಲೆಂದು ಹಾರೈಸುತ್ತೇನೆ.

ಶ್ರೀ ಮಂಜುನಾಥ ಸ್ವಾಮಿ ಅನುಗ್ರಹವಿರಲಿ.

ಶ್ರೀ ಕ್ಷೇತ್ರ ಧರ್ಮಸ್ಥಳ
ದಿ. 14.3.2007



# ಡಾ. ನಾ. ಮೊಗಸಾಲೆಯವರಿಗೆ ಶುಭವಾಗಲಿ



**ಹರಿಕೃಷ್ಣ ಪುನರೂರು**
ಮಾಜಿ ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು

ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯು 1956ರಲ್ಲಿ ಭಾಷಾವಾರು ಪ್ರಾಂತ್ಯವಾದಾಗ ನಮ್ಮನ್ನು ಬಿಟ್ಟು ಕೇರಳ ರಾಜ್ಯಕ್ಕೆ ಸೇರಿದ ಕನ್ನಡಿಗ ಡಾ. ನಾ. ಮೊಗಸಾಲೆಯವರು. ಕಾಂತಾವರದಂತಹ ಸಣ್ಣ ಹಳ್ಳಿಯಲ್ಲಿ ವೈದ್ಯಕೀಯ ವೃತ್ತಿಯನ್ನು ನಡಸುವುದರ ಜೊತೆಗೆ ಸಮಾಜ ಸೇವೆ, ಕನ್ನಡದ ಬೆಳವಣಿಗಾಗಿ ಹೋರಾಟ, ಸಾಹಿತ್ಯ ಸೇವೆಯನ್ನು ಮಾಡಿಕೊಂಡು ಬರುತ್ತಿರುವ ಅರವತ್ತರ ತರುಣ ಮೊಗಸಾಲೆಯವರನ್ನು ಹಿರಿಯನಾಗಿ ನಾನು ಪ್ರಶಂಸಿಸಲೇಬೇಕು.

ಸುಮಾರು ಇಪ್ಪತ್ತೈದು ವರ್ಷದ ನನ್ನ ಅವರ ಒಡನಾಟ; ಅವರ ಒಳ್ಳೆಯ ಗುಣಗಳನ್ನು ನಾನು ಮೆಚ್ಚಿಗೊಂಡವ. ನಾನು ಅವಿಭಾಜಿತ ದಕ್ಷಿಣ ಕನ್ನಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ಕೆಲಸ ಮಾಡುತ್ತಿರುವಾಗ, ನನ್ನೊಡನೆ ಸೇರಿ ಕನ್ನಡದ ಕೆಲಸಕ್ಕೆ ಮುಂದೆ ಬಂದ ಧೀಮಂತ ವ್ಯಕ್ತಿ.

ಮುದ್ದಣ ಹುಟ್ಟಿದ ಊರಿನ ಸಮೀಪ ಇರುವ ಕಾಂತಾವರದಲ್ಲಿ ಮುದ್ದಣ ಕಾವ್ಯ ಪ್ರಶಸ್ತಿಯನ್ನು ಪ್ರಾರಂಭಿಸಿ ಕವಿಗಳಿಗೆ ಪ್ರೋತ್ಸಾಹ ನೀಡಿದರು. ಮುದ್ದಣ ಕಾವ್ಯ ಪ್ರಶಸ್ತಿಯನ್ನು ಪ್ರಕಟಿಸುವಾಗ ಕರ್ನಾಟಕದಲ್ಲೇ ಕೇವಲ ಕೆಲವು ಪ್ರಶಸ್ತಿಗಳು ಮಾತ್ರವಿತ್ತು. ಅಂತಹ ಉತ್ತಮ ಹೆಸರಾಂತ ಮುದ್ದಣ ಕಾವ್ಯ ಪ್ರಶಸ್ತಿ ಇವತ್ತಿಗೂ ತನ್ನ ಗೌರವವನ್ನು ಉಳಿಸಿಕೊಂಡು ಬಂದಿದೆ. ಇದರ ಹಿಂದೆ ನಾ। ಮೊಗಸಾಲೆಯವರ ಸಾಧನೆಯನ್ನು ಗುರುತಿಸಲೇಬೇಕು. ಇವರು ರಾಜ್ಯದ ಉತ್ತಮ ಕಥೆಗಾರ ಹಾಗೂ ಕವಿಯಾಗಿದ್ದು, ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷರಾಗಿದ್ದು ನಮ್ಮ ಜಿಲ್ಲೆಗೆ ಹೆಸರನ್ನು ತಂದಿದ್ದಾರೆ. 60 ವಸಂತಗಳನ್ನು ಕಂಡ ಅವರ ಬಗ್ಗೆ ಈಗಾಗಲೇ ಪರಿಚಯ ಪುಸ್ತಕ ಬಿಡುಗಡೆಯಾಗಿದೆ. ಈಗ ಅವರ ಅಭಿಮಾನಿಗಳಿಂದ ಅಭಿನಂದನಾ ಗ್ರಂಥವು ಬಿಡುಗಡೆಯಾಗಲಿದೆ.

ಡಾ. ನಾ. ಮೊಗಸಾಲೆಯುವರಿಗೆ, ಅವರ ಕುಟುಂಬಕ್ಕೆ ದೇವರು ನೂರ್ಕಾಲ ಆಯುರಾರೋಗ್ಯವನ್ನು ಇತ್ತು ಹೆಚ್ಚಿನ ಕನ್ನಡದ ಹಾಗೂ ಸಮಾಜದ ಸೇವೆ ಮಾಡುವ ಶಕ್ತಿಯನ್ನು ನೀಡಲಿ ಎಂದು ಹಾರೈಸುತ್ತೇನೆ.

**ಮೂಲ್ಕಿ 20.3.2007**

# ಸಂಪಾದಕೀಯ

'ಉಸಿರು ಕಟ್ಟಿಸುವ ಸಣ್ಣ ಸಣ್ಣ ಕೋಣೆಗಳ, ಈ ಕಾಲದಲ್ಲಿ ಮೊಗಸಾಲೆ ತೀರಾ ಅಪರೂಪ' ಎಂದು ಡುಂಡಿರಾಜರು 'ಅಪರೂಪದ ಮೊಗಸಾಲೆ'[1] ಕವನದಲ್ಲಿ ಹೇಳಿರುವ ಮಾತುಗಳು ಡಾ. ನಾ. ಮೊಗಸಾಲೆಯವರಿಗೆ ಹೇಳಿ ಮಾಡಿಸಿದಂತಿವೆ. ತಾನು ಹುಟ್ಟಿದ ಕೋಳ್ಯೂರನ್ನು, ಸುತ್ತಲ ಪರಿಸರವನ್ನೂ, ತಮ್ಮ ಕಾವ್ಯ ಪಯಣದುದ್ದಕ್ಕೂ ನೆನೆಯುತ್ತಾ ಸಾಗಿದ್ದಾರೆ ಡಾ. ನಾರಾಯಣ ಭಟ್ಟ ಮೊಗಸಾಲೆ. ಹಳ್ಳಿಯ ನೆನಪು ಕೇವಲ ಹಳವಂಡವಲ್ಲ, ಗಾಂಧೀಜಿಯವರಂತೆ ಗ್ರಾಮಗಳಲ್ಲೇ ನಮ್ಮ ಸಂಸ್ಕೃತಿಯ ಬೇರುಗಳಿವೆ ಎಂಬ ಗಾಢ ನಂಬಿಕೆ, ಅವರದು. ತನ್ನ ಕಾವ್ಯ ಸಂದರ್ಭಕ್ಕೂ ಊರ ನೆನಪಿಗೂ ಇರುವ ಸಂಬಂಧವನ್ನು ಕವಿಯೇ 'ಮೊಗಸಾಲೆಯ ನೆನಪುಗಳು'[2] ಕವಿತೆಯಲ್ಲಿ ಹೀಗೆ ಬಣ್ಣಿಸಿದ್ದಾರೆ:

ಮತ್ತೆ ಕೆಲವು ಸಲ ನೆನಪಾಗುವುದು ಊರು ನಾವು
ನೀವು ಫ್ಯಾನಿನ ಗಾಳಿಗೆ ಮುಖಮಾಡಿ ಸಿಗರೇಟು ಸುಡುತ್ತಾ ವ್ಯವಸ್ಥೆಯ
ವಿರುದ್ಧ ಬಂಡಾಯದ ಗಾಳಿ ಹೇಗೆ ಎಬ್ಬಿಸಬಹುದೆಂದು
ವ್ಯವಸ್ಥಿತ ಶಾಬ್ದಿಕ ಪ್ರಪಂಚದಲ್ಲಿ ಮುಳುಗಿರುವಾಗ
ಹೆಂಡತಿಯ ಔಷಧದ ಖರ್ಚಿಗಾಗಿ ಕಳ್ಳನಾದ ಜೋರು
ಪೆಟ್ಟು ತಿಂದೂ ಆರೈಕೆ ಮಾಡುತ್ತಿದ್ದ ರೀತಿ....



ಬಾಲ್ಯ ಮತ್ತು ಯೌವನಗಳ ಸವಾಲುಗಳು, ಹಳ್ಳಿಯ ಬಾಲ್ಯದ ಮುಗ್ಧತೆ, ನಾಗರಬದುಕಿನ ........ ಕನಸು ವಾಸ್ತವಗಳಿಗಿರುವ ಅಂತರ, ಹಳ್ಳಿಗರ ಅಂತಃಕರಣ, ಇವೆಲ್ಲವನ್ನೂ ಈ ಚಿತ್ರ, ಧ್ವನಿಸುತ್ತದೆ. ಇಂಥ ದ್ವಂದ್ವಗಳ ನಡುವಣ ಕವಿ ಜೀವನದ ಹೋರಾಟವೂ ಕವಿತೆಯಲ್ಲಿ ಸೂಚ್ಯವಾಗಿದೆ. ಕೋಳ್ಯೂರು ಅದರ ಮುಂದುವರಿದ ಕನಸುಗಳ ಬಲೆಯಂತೆ ತೋರುತ್ತದೆ. 'ಬಾಲ್ಯ ಸಖಿ'ಯಂತೆ ಭಾಸವಾಗುತ್ತದೆ.

ಹಳ್ಳಿಯಿಂದ ಪಟ್ಟಣಗಳಿಗೆ ವಲಸೆ ಹೋಗುವವರೇ ಹೆಚ್ಚು. ಹೀಗಿದ್ದಾಗ, ಹಳ್ಳಿಯೊಂದನ್ನೇ ತಮ್ಮ ಕಾಯಕಭೂಮಿಯಾಗಿ ಆರಿಸಿಕೊಂಡ ಮೊಗಸಾಲೆಯವರು ತಮ್ಮನ್ನು ಸಾಹಿತ್ಯ ಸೇವೆಗಾಗಿ ಗಂಧದಂತೆ ತೇದುಕೊಂಡಿದ್ದು ಅಚ್ಚರಿಯ ಸಂಗತಿಯಲ್ಲ. ಪ್ರಯತ್ನಶೀಲತೆಯಲ್ಲಿ ಆಳವಾದ ನಂಬಿಕೆಯಿಟ್ಟು ಅವರು ಬೇಕಾದ ವಾತಾವರಣವನ್ನು ಸ್ವತಃ ನಿರ್ಮಿಸಿಕೊಂಡರು.

ಸಹಜ ಪ್ರವೃತ್ತಿಯಾದ ಸಾಹಿತ್ಯ ರಚನೆ ಹಾಗೂ, ಸಂಘಟನೆಗಳೆರಡರಲ್ಲೂ ತೊಡಗಿದ ತನ್ನನ್ನು 'ಸಾಹಿತ್ಯ ಪರಿಚಾರಕ' ಎಂದು ಕರೆದುಕೊಂಡಿರುವ ಮೊಗಸಾಲೆಯವರ ವಿನಯ ಸ್ನೇಹಶೀಲತೆಗಳು ಎಲ್ಲರಿಗೂ ಪ್ರಿಯ ಹಾಗೂ ಸುಪರಿಚಿತ.

1966ರಲ್ಲಿ ಕಾಂತಾವರದಲ್ಲಿ ರೈತಯುವಕ ವೃಂದದ ಸ್ಥಾಪನೆ, 1976ರಲ್ಲಿ ಬೇಲಾಡಿಯಲ್ಲಿ ಕಾಂತಾವರ ಕನ್ನಡ ಸಂಘದ ಉಗಮ, 1978ರಲ್ಲಿ ಮೂಡಬಿದರೆಯಲ್ಲಿ ವರ್ಧಮಾನ ಪ್ರಶಸ್ತಿ ಪೀಠದ ಸ್ಥಾಪನೆ. ಮುದ್ದಣ ಕಾವ್ಯ ಪ್ರಶಸ್ತಿಯ ಹುಟ್ಟು-ಇವೆಲ್ಲಕ್ಕೂ ಮೊಗಸಾಲೆಯವರೇ ಮೂಲ ಪ್ರೇರಣೆ. ಮೂವತ್ತೆರಡನೆಯ ಹರೆಯದ ಕಾಂತಾವರದ ಕನ್ನಡ ಸಂಘ ಹೊರತಂದ 'ದಕ್ಷಿಣ ಕನ್ನಡಕಾವ್ಯ' ಜಿಲ್ಲೆಯ ಕೊಡುಗೆಯ ದಾಖಲೆಯೇ ಸರಿ. ಬೆಳ್ಳಿ ಹಬ್ಬದ ನೆನಪಿಗೆ ಮೂಡಿ ಬಂದ, ದಕ್ಷಿಣ ಕನ್ನಡದ ಶತಮಾನದ ಕಾವ್ಯ ಮೌಲಿಕ ಹೆಬ್ಬೊತ್ತಿಗೆ. ಏಕೀಕರಣದ ರೂವಾರಿ ದಿ. ಜಿನರಾಜಹೆಗ್ಡೆ ಸ್ಮಾರಕ ಭವನ ನಿರ್ಮಾಣ, ಮೊಗಸಾಲೆಯವರ ಪ್ರಯತ್ನಶೀಲತೆ ಹಾಗೂ ಧೀಮಂತ ಶಕ್ತಿಗಳಿಗೆ ಸಾಕ್ಷಿ; ಲಿಂಗವೂ ಮೆಚ್ಚಿ ಅಹುದಹುದೆಂದೀತು.

ಇದೀಗ ಕಾಂತಾವರ ಕನ್ನಡ ಸಂಘಕ್ಕೆ ಮೂವತ್ತು ವರ್ಷ ತುಂಬಿದ ಹಾಗೂ ಸುವರ್ಣಕರ್ನಾಟಕದ ಸಂಭ್ರಮಾಚರಣೆಯ ಧ್ಯೋತಕವಾಗಿ 'ನಾಡಿಗೆ ನಮಸ್ಕಾರ' ಎಂಬ ಅವಿಭಜಕ ದಕ್ಷಿಣ ಕನ್ನಡದ ಅಪೂರ್ವ ಸಾಧಕರಲ್ಲಿ ಆಯ್ದ ಮೂವತ್ತು ಮಂದಿಯ ಸಿದ್ಧಿ ಸಾಧನೆಗಳನ್ನು ಪರಿಚಯಿಸುವ ಮಾಲಿಕೆ ಆರಂಭಿಸಲಾಗಿದೆ. ಮೊದಲ ಕಂತಿನಲ್ಲಿ ಹತ್ತು ಮಂದಿ ಸಾಧಕರಿದ್ದಾರೆ. ಸಾಹಿತ್ಯ, ವೈದ್ಯಕೀಯ, ಶಿಕ್ಷಣ, ವಿಜ್ಞಾನ, ಬ್ಯಾಂಕಿಂಗ್ ಮುಂತಾದ ತಜ್ಞರ ಕೊಡುಗೆಯ ಕುರಿತು ತಜ್ಞರು ಕೃತಿ ರಚಿಸಿದ್ದಾರೆ.

ಆಯಾ ಪ್ರದೇಶದ ಮಂದಿ, ಆ ಪ್ರದೇಶದ ಪರಂಪರೆಗೆ, ಸಂಸ್ಕೃತಿಗೆ ಅಲ್ಲಿಯವರು ನೀಡಿದ ಕೊಡುಗೆಯನ್ನು ಗುರುತಿಸಿ, ಮುಂದಿನ ಪೀಳಿಗೆ ಅದರಿಂದ ಪ್ರಭಾವಿತವಾಗುವ ಹಾಗೆ, ದಾಖಲಿಸಿದರೆ ಮಾತ್ರ ನಾಡನ್ನು ಕಟ್ಟುವ ಕೆಲಸ ಸಾಧ್ಯವಾಗಬಹುದು ಎಂಬುದು ಕನ್ನಡ ಸಂಘದ ನಿಲುವು. ಸಂಸ್ಕೃತಿ ಪುನರುತ್ಥಾನಕ್ಕೆ ಇದು ಉತ್ತಮ ಕೊಡುಗೆ.

* * * * *

ಮೊಗಸಾಲೆ ವ್ಯಕ್ತಿತ್ವದ ಮೂಲ ಗುಣ-ಸ್ನೇಹಶೀಲತೆ, ಅವರಿಗೀಗ 63. ಆದರೆ ಮಿತ್ರ ವೃಂದದಲ್ಲಿ ಅವರೆಂದೂ 36 ಆಗಿರಲಿಲ್ಲ! ಶರಣರಂತೆ ಸಂಗದ ಮಹತ್ವ ಬಲ್ಲವರು. ಲೇಖಕನಾಗಿ ಹೃದಯಗಳ ನಡುವೆ ಸೇತುವೆಗಳಿದ್ದರಷ್ಟೇ ಅರಿವಿನ ವಿಸ್ತಾರಸಾಧ್ಯ ಎಂದು ನಂಬಿದವರು. ಹಾಗಾಗೇ ಮಳೆ, ಸವುಡು ಕೊಟ್ಟಾಗೆಲ್ಲ ಕಾಂತಾವರದಲ್ಲಿ ಸಾಹಿತ್ಯಗೋಷ್ಠಿಗಳು, ನಾಡಿನ ಪ್ರಮುಖ ಬರಹಗಾರರು ಕಾಂತಾವರದಲ್ಲಿ ಸೇರುವುದು. ಆಗ, ಅದೊಂದು ಜೇನುಗೂಡೇ ಸರಿ.

* * * * *

ಮೊಗಸಾಲೆಯವರು ಕವಿತೆಯ ಬಗೆಗೆ, ಸಹೃದಯರ ಬಗೆಗೆ, ನಿರಂತರ ಯೋಚಿಸುತ್ತಾ ಬಂದಿದ್ದಾರೆ. ಕಾವ್ಯ, 'ಸಾಂತ್ವನ'ಕ್ಕಾಗಿ ಎನ್ನುವ ಅವರು 'ಅರಸುವ ಸ್ವರೂಪ'' ಎಂದೂ

ವ್ಯಾಖ್ಯಾನಿಸಿದ್ದಾರೆ. 'ಯಾರ ಹಾಗೂ ಆಗದ' ಅಭಿಲಾಷೆಯನ್ನೂ ಪ್ರಕಟಿಸಿದ್ದಿದೆ. 'ಕವಿತೆಯೇ ಹೋಗು, ಮನುಷ್ಯನ ಮಾತಾಗು'[2] ಎಂದೂ ಹೇಳಿಕೊಂಡಿದ್ದುಂಟು. ತುರ್ತು ಪರಿಸ್ಥಿತಿಯಲ್ಲಿನ ಕಾವ್ಯ 'ಅನಾಥ'[3] ವೆಂದೂ ಕರೆದಿದ್ದಿದೆ. 'ಹಕ್ಕಿಗಳೇ ಕಣ್ಣ ಅಂಗಳದಿ ಕಾವ್ಯವಾಗಲಿ' ಎಂಬ ಹಂಬಲವೂ ಒಂದೆಡೆ ಇದೆ. 'ಬರೆಯದ ಕವಿತೆಗಳೇ ಮಳೆಯಾಗಲಿ ಬರಗಾಲ ಬಾಗಿಲಲ್ಲಿ ವಾಮನನಾದಾಗ' ಎಂದು, ಸಮೃದ್ಧತೆಯ ಸಂಕೇತವಾಗಿ ಕೂಡ ಕವಿತೆಯ ಕೈಕುಲುಕಿದ್ದಾರೆ ('ಬರೆಯದ ಕವಿತೆಗಳು'). 1999ರಲ್ಲಿ ಹೊರಬಂದ 'ನೆಲದ ನೆರಳು'ವಿನಲ್ಲಿ ಕವಿತೆ ಕುರಿತ ವಿಸ್ಮಯದ ಭಾವಗಳಿವೆ:

ಒಂದು: ರಂಗೋಲಿ ಚೆಲ್ಲಿ
ಮುಟ್ಟಿದವರ ಕಣ್ಣಲ್ಲಿ
ಆಕಾಶದಿಂದ ನೆಲಕ್ಕೆ ನೆಲದಿಂದ ಆಕಾಶಕ್ಕೆ
ಮೂಡುವ ಕಾಮನ ಬಿಲ್ಲು

ಎರಡು: ಕವಿತೆ ಬರೆದು ಮುಗಿಸಿದಗಳಿಗೆ
ಸೂರ್ಯೋದಯದ ತತ್‌ಕ್ಷಣದ ಹಾಗೆ!

ಮೂರು: ಅನ್ನವಾದರೆ ಕವಿತೆ ನಿಮ್ಮ
ಉಣ್ಣದುರಿಯುವ ಹೊಟ್ಟೆಗೆ
ಕಣ್ಣ ಮಾಮರದಲ್ಲಿ ಕೋಗಿಲೆ
ಚೈತ್ರವನ್ನು ಕರೆತಂದರೆ
ನನ್ನ ಕವಿತೆಗೆ ಧನ್ಯತೆ!

2006ರಲ್ಲಿ ಪ್ರಕಟವಾದ ಅವತ 'ಇಹ ಪರದ ಕೊಳ'ದಲ್ಲಿಯ ಕವಿಯ ಮಾತುಗಳನ್ನು ಕುತೂಹಲಕ್ಕಾಗಿ ನೋಡಬಹುದು:

'ಕವಿತೆಯಿಂದ ಏನು ಲಾಭ' ಎಂದು ಯಾರಾದರೂ ಕೇಳಿದರೆ ಹೇಳಲು ಉತ್ತರವಿಲ್ಲ ಹಾಗೆಯೇ ಇಹದ ವ್ಯಾಮೋಹವೂ ಪರದ ತುಡಿತವೂ'

ಪ್ರಾಯ: ಕವಿತೆ
ನದಿಯ ಹಾಗೇ ಹೇಳದೇ
ಕರವಸ್ತ್ರವಾಗಿ ಕಾಣಿಸದೇ
ಕಣ್ಣೀರನ್ನೇ ಅಳಿಸಬಹುದು (ವ್ಯತ್ಯಾಸ)

ಇವು, ಮೊಗಸಾಲೆಯವ ತಾತ್ವಿಕ ಔನ್ನತ್ಯಕ್ಕೂ ಕೈವಾರವಾಗಿವೆ. ಅರಿವಿನ ವಿಸ್ಮಯ 'ಇದಲ್ಲ ಇದಲ್ಲ' ಎನ್ನುತ್ತಿದ್ದರೂ, 'ಇದು ಹೌದು' ಎನ್ನಿಸುವ ಬೆರಗಿಗೂ ಸಾಕ್ಷಿಯಾಗುತ್ತದೆ. ಕಥೆಗಾರರಾಗಿ, ಕಾದಂಬರಿಕಾರರಾಗಿ ಕೂಡ ಮೊಗಸಾಲೆ ಯಶಸ್ವೀ ಬರಹಗಾರರು. ತಂತ್ರ, ಭಾಷೆ, ಪಾತ್ರ ಚಿತ್ರಣಗಳಿಂದ, ಸಾಮಾಜಿಕ ಕಳಕಳಿಯಿಂದ ಗಮನಾರ್ಹವಾಗಿವೆ. ಗ್ರಾಮೀಣ ಬದುಕಿನ ಸಂಘರ್ಷದ ಚಿತ್ರವಾಗಿ 'ಪಲ್ಲಟ' ಪ್ರೇಮದ ದುರಂತ ಚಿತ್ರಿಸುವ 'ಕನಸಿನ ಬಳ್ಳಿ'

ಮತ್ತು 'ಅನಂತ', ನವ್ಯದ ಹಲವಾರು ಸಾಧ್ಯತೆಗಳನ್ನು ಬಿಟ್ಟುಕೊಡುವ 'ನನ್ನದಲ್ಲದ್ದು' ಜಾಗತೀಕರಣದ ಸಂದರ್ಭದಲ್ಲಿ ಮಹತ್ವದ್ದಾಗುವ 'ದೃಷ್ಟಿ', ಕೊಳೆತ ಸಮಾಜ ಚಿತ್ರಿಸುವ 'ತೊಟ್ಟಿ', ಅರ್ಥದ ಅತ್ಯಾಸೆಯ ಪರಿಣಾಮ ತೋರುವ 'ಅರ್ಥ', ರಾಜಕೀಯ ಕಾಳಜಿಯ 'ಉಪ್ಪು', ಆದರ್ಶ ಸಮಾಜದ ಕನಸಿನ 'ದಿಗಂತ', ರೈತ ಜಗತ್ತಿನ 'ಮಣ್ಣಿನ ಮಕ್ಕಳು', ದಯಾಮರಣಕುರಿತ ' ನೆಲಮುಗಿಲುಗಳ ಮಧ್ಯೆ', ಮತಾಂತರ ಕುರಿತ 'ಪಂಥ' ಇವು ವಸ್ತು ವೈವಿಧ್ಯದಿಂದ ಮನಸೆಳೆಯುತ್ತವೆ. ತಮ್ಮ ಕಥಾಸಂಕಲನ, 'ಸುಂದರಿಯ ಎರಡನೆಯ ಅವತಾರ'ದ ಬಗೆಗೆ ಅವರಿಗೆ ಅತೀವ ನಿರ್ಲಿಪ್ತತೆ ಇದ್ದರೂ, ಆ ಪ್ರಕಾರಕ್ಕೆ ಅವರು ಹೊಸಬರಲ್ಲ ಎಂಬುದು ಗೊತ್ತಾಗುತ್ತದೆ. ಸುಂದರಿಯಂಥ ದಿಟ್ಟ ಪಾತ್ರ ಚಿತ್ರಿಸಿ, ಮನದಲ್ಲಿ ಬಹುಕಾಲ ಉಳಿಯುವಂತೆ ಮಾಡಿದ್ದಾರೆ. 'ಮೊಗಸಾಲೆ ಒಲವು ನಿಲುವು' ಲೇಖನ ಸಂಕಲನದಲ್ಲಿ ಮೂವತ್ತು ಲೇಖನಗಳಿವೆ. ಮೊದಲಭಾಗ ವ್ಯಕ್ತಿಪರಿಚಯಕ್ಕೆ, ಎರಡನೆಯದು ಧೋರಣೆ, ಚಿಂತನೆ, ಮೂರನೆಯದು ಲೇಖಕರಿಗೆ ಬರೆದ ಮುನ್ನುಡಿ–ಹೀಗೆ ಸಂಚಯಗೊಂಡಿವೆ. ಅವರ ಅಗಾಧ ವ್ಯಾಸಂಗ, ಸೊಗಸಾದ ಗದ್ಯಶೈಲಿಗಳಿಗಿದು ನಿದರ್ಶನ. ವೈದ್ಯಕೀಯ ಬರಹ ಸಂಕಲನಗಳಾದ 'ಪ್ರತಿಕ್ಷಣವೂ ನಿಮ್ಮದೇ' 'ಹೆಣ್ಣು ಹೆಣ್ಣನ್ನು ಅರಿಯುವ ಬಗೆ', 'ಆರೋಗ್ಯ ಅನಾರೋಗ್ಯದ ನಡುವೆ' ವಿಶಿಷ್ಟ ರೀತಿಯವು ಅರುವತ್ತು ದಾಟಿದ ಮೊಗಸಾಲೆಯವರು ತಮ್ಮ ಆತ್ಮವೃತ್ತಾಂತ, ವಾದ 'ಬಯಲುಬೆಟ್ಟ', ಪ್ರಕಟಿಸಿದ್ದಾರೆ. ಗತಕಾಲದ ಅಕ್ಷಯ ನೆನಪುಗಳು ಇಲ್ಲಿ ರಾಶಿಬಿದ್ದಿವೆ. ಇದು ಘಟನೆಗಳ ಯಾದಿಯಾಗಿರದೆ ಸ್ಮರಣೆಗಳ ರಸಕ್ಷಣವಾಗಿದೆ. ಮಾಗಿದ ಜೀವದ ಕೈಬುತ್ತಿ ಎಂದರೂ ತಪ್ಪಿಲ್ಲ. ಕನ್ನಡದಲ್ಲಿ ವಿರಳವಾದ ಆತ್ಮಚರಿತ್ರೆ ಪ್ರಕಾರಕ್ಕೆ ಇದೊಂದು ಅಮೂಲ್ಯ ಸೇರ್ಪಡೆ.

* * * * *

ನವೋದಯದಿಂದ ಬರಹ ಆರಂಭಿಸಿದ ಮೊಗಸಾಲೆ, ಪ್ರಗತಿಶೀಲರ ಪ್ರಭಾವಕ್ಕೊಳಗಾದರು. ಗದ್ಯಕ್ಕೆ ಕಾರಂತರು, ಪದ್ಯಕ್ಕೆ ಬೇಂದ್ರೆ ಅಡಿಗರು ಆದರ್ಶಪ್ರಾಯರಾಗಿದ್ದರು. ಆದರೂ ತಮಗಿಂತ ಕಿರಿಯರ ಮಾರ್ಗವನ್ನು, ಅಭಿವ್ಯಕ್ತಿಯನ್ನು ಮೆಚ್ಚಿ ಆ ಹಾದಿಯನ್ನು ಸ್ವೀಕರಿಸುವ ಸಮತೂಕದ ವ್ಯಕ್ತಿತ್ವವೂ ಅವರಿಗಿದೆ. (ಎಸ್. ಮಂಜುನಾಥ್, ತಮ್ಮ ಮೇಲೆ 'ಪ್ರಭಾವ ಬೀರಿದ್ದಾರೆ' ಎಂದು ಎಷ್ಟೋ ಬಾರಿ ಹೇಳಿದ್ದುಂಟು) ರಾಘವೇಂದ್ರ ಪಾಟೀಲರ, ಶ್ರೀಧರ ಬಳಗಾರರ ಬರಹ ಕುರಿತು ಮೆಚ್ಚಿ ಮಾತಾಡಿದ್ದುಂಟು.

ಎಲ್ಲ ಪಂಥಗಳ ಉತ್ತಮ ಅಂಶಗಳನ್ನು ಮೊಗಸಾಲೆ ಹೀರಿಕೊಂಡಿದ್ದಾರೆ. ಆದ್ದರಿಂದಲೇ ಡಾ. ಯು. ಆರ್. ಅನಂತಮೂರ್ತಿ ಅಂಥವರಿಂದ 'ಈ ಸಂಕಲನ ಕನ್ನಡ ಕಾವ್ಯ ಇನ್ನೂ ಜೀವಂತವಾಗಿದೆ ಎಂದು ತಿಳಿಸುವಂತೆ ಇದೆ' ಎಂಬ ಶಹಭಾಸಗಿರಿಯನ್ನೂ ಪಡೆದಿದ್ದಾರೆ. ಜತೆಗೇ, ತಮ್ಮ ಕೃತಿಗಳಿಗೆ ಬಂದ ಕಟು ಟೀಕೆಗಳನ್ನು ಮೊಗಸಾಲೆ ನಿರ್ಲಿಪ್ತವಾಗಿ ಸ್ವೀಕರಿಸಿದ್ದಾರೆ.

* * * * *

ನುರಿತ ವೈದ್ಯರಾದ, ಹಳ್ಳಿಗರ ಮಿತ್ರರಾದ, ವಾರಿಗೆಯವರಿಗೆ ಬಿಚ್ಚು ಮನಸ್ಸರಾದ ಮೊಗಸಾಲೆಯವರು ಸಾಹಿತ್ಯದ ಮುಖ್ಯವಾಹಿನಿಯಲ್ಲಿದ್ದಾರೆ ಎಂಬುದು ಬಹಳ ಮುಖ್ಯ.

ರಾಜ್ಯ ಪ್ರಶಸ್ತಿಯೂ ಸೇರಿದಂತೆ ಅನೇಕ ಗೌರವಗಳು ಅವರನ್ನಲಂಕರಿಸಿವೆ. ಅವರ ಆರುವತ್ತನೇ ವರ್ಷದ ಸಂದರ್ಭದಲ್ಲಿ ಅವರ ಬದುಕು ಬರೆಹ ಕುರಿತಂತೆ ಒಂದು ಕೃತಿ ಬರಬೇಕೆಂಬ ಆತ್ಮೀಯರ ಹಂಬಲ, ಈಗ ಈಡೇರಿದೆ. 'ಐವತ್ತರ ಹೊತ್ತಿಗೆ' ನಂತರ, ಅನೇಕ ಸತ್ಫಲಗಳು ಒದಗಿವೆ. ಆದ್ದರಿಂದ ಮೊಗಸಾಲೆಯವರನ್ನು ಗೌರವಿಸುತ್ತಲೇ ಅವರ ವ್ಯಕ್ತಿತ್ವ, ಬರಹಗಳ ವಿವಿಧ ಮಗ್ಗುಲುಗಳನ್ನು ಅಕ್ಷರಗಳಲ್ಲಿ ಕಂಡರಿಸುವ ಪ್ರಯತ್ನ ಇಲ್ಲಿದೆ.

ಕೈಗೆತ್ತಿಕೊಂಡ ಯಾವುದೇ ಕೆಲಸಕ್ಕೆ, ಏನೇ ಅಡ್ಡ ಬಂದರೂ ಅರ್ಧಕ್ಕೆ ನಿಲ್ಲಿಸದೆ ಮುಕ್ತಾಯಗೊಳಿಸುವುದು ಸಂಘಟಕರಾದ ಮೊಗಸಾಲೆಯವರ ಸುಗುಣ. ದೇಹದ ಪರಿಮಿತಿಯನ್ನರಿತೂ, ಮನಸ್ಸಿನ ಇಚ್ಛಾಶಕ್ತಿಯನ್ನೂ ಬಳಸಿಕೊಳ್ಳುವ ಅವರ ತಿಳಿವಳಿಕೆ ಸಣ್ಣದಲ್ಲ. ಆವರ ವ್ಯಕ್ತಿತ್ವದ ವೈಶಿಷ್ಟ್ಯಗಳನ್ನು ವಿವಿಧ ಕ್ಷೇತ್ರಗಳಲ್ಲಿನ ಸಾಧನೆಗಳನ್ನು ನಾಡಿನ ವಿವಿಧ ಭಾಗಗಳ ಸಾಹಿತ್ಯ, ಸಂಸ್ಕೃತಿ ಅಭಿಮಾನಿಗಳು ಹೇಗೆ ಕಂಡಿದ್ದಾರೆ, ಜತೆಗೆ ಅವರ ಕಾರ್ಯಗಳು, ನಾಡಿನ ಸಾಂಸ್ಕೃತಿಕ ಸಂದರ್ಭದಲ್ಲಿ ಎಷ್ಟು ಅರ್ಥಪೂರ್ಣ ಎಂಬುದನ್ನೂ ವಸ್ತುನಿಷ್ಠವಾಗಿ ದಾಖಲಿಸುವುದು ಈ ಕೃತಿಯ ಉದ್ದೇಶ.

* * * * *

ಮೊದಲ ಭಾಗದಲ್ಲಿ, ಅದರ ಬಂಧು ಬಾಂಧವರು, ಆತ್ಮೀಯರು ವಾರಿಗೆಯವರು ಅವರನ್ನು ಕಂಡ ರೀತಿ ಇದೆ. ವೈದೇಹಿ ಮುಂತಾದವರ ನೆನಪುಗಳೂ ಇವೆ. ಸುನೀತ ಸಾಮ್ರಾಟರೆಂದೇ ಗುರುತಿಸಿಕೊಂಡ ಚೆನ್ನವೀರ ಕಣವಿಯವರ ಅಪೂರ್ವ ಕವಿತೆ ಇದೆ. ಇಲ್ಲಿ ಬಂದ ಆಯಸ್ಕಾಂತಾವರದ ತೆರೆದ ಜೀವನಕಲೆ, ಎಂಬ ಭಾಗ ಕುಂದಣದಂತಿರುವುದರಿಂದ, 'ಆಯಸ್ಕಾಂತಾವರ' ವೆಂಬುದೇ ಕೃತಿ ಶೀರ್ಷಿಕೆಯಾಗಲು ಕಾರಣ. ಚೊಕ್ಕಾಡಿಯವರ ಕಾವ್ಯ ಶುಭಾಶಂಸನೆಯೂ ಇದೆ. ಎರಡನೆಯ ಭಾಗ, ಕಾವ್ಯ ವಿಸ್ತಾರ. ಇಲ್ಲಿ ಪ್ರೊ. ಚಂಪಾ, ಎಸ್. ಮಂಜುನಾಥ, ಮುಂತಾದವರ ಲೇಖನಗಳಿವೆ.

'ಗದ್ಯಯಾನ' ಮೂರನೆಯ ಭಾಗ. ಅಬ್ಬಾಸ್ ಮೇಲಿನಮನಿ, ಅರವಿಂದ ಚೊಕ್ಕಾಡಿ, ಮಲ್ಲಿಕಾರ್ಜುನ ಹಿರೇಮಠ, ಸುಬ್ರಾಯ ಮತ್ತಿಹಳ್ಳಿ, ಶ್ಯಾಮಸುಂದರ್ ಬಿದರಕುಂದಿ, ಮಾಲತಿ ಪಟ್ಟಣಶೆಟ್ಟಿ, ಬಾಳಾ ಸಾಹೇಬ ಲೋಕಾಪೂರ, ಡಾ. ಎಚ್.ಎಸ್., ರಾಘವೇಂದ್ರ ರಾವ್, ಜನಾರ್ಧನ ಗುರ್ಕಾರ್, ಮಾಧವ ಕುಲಕರ್ಣಿಯವರು ಡಾ. ಮೊಗಸಾಲೆಯವರ ಕಾವ್ಯ, ಸಾಹಿತ್ಯಗಳನ್ನು ಕುರಿತು ವಿಮರ್ಶಿಸಿದ್ದಾರೆ. ಅವರ ವೈದ್ಯಕೀಯ ಸಾಹಿತ್ಯ ಕುರಿತ ಮೌಲಿಕ ವಿಮರ್ಶೆಯನ್ನು ಇಬ್ಬರು ಖ್ಯಾತ ವೈದ್ಯರಿಂದಲೇ ಮಾಡಿಸಲಾಗಿದೆ. (ಡಾ. ಸ.ಜ. ನಾಗಲೋಟಿಯವರು ಈಗ ಕೀರ್ತಿಶೇಷರಾಗಿದ್ದಾರೆ)

ಐದನೆಯ ಭಾಗದಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾದ ಡಾ.ನಾ.ಮೊಗಸಾಲೆ ಹಾಗೂ ಕಾಂತಾವರ ಕನ್ನಡ ಸಂಘವನ್ನು ಕುರಿತ ಲೇಖನಗಳಿವೆ. ಇದು ದಾಖಲೆಯ ದೃಷ್ಟಿಯಿಂದ ಇಲ್ಲಿ ಸೇರಿಸಲ್ಪಟ್ಟಿದೆ.

ಅನುಬಂಧದಲ್ಲಿ ಪತ್ರಿಕಾ ಸಂದರ್ಶನ ಮೊಗಸಾಲೆಯವರು ನಡೆದು ಬಂದ ದಾರಿ, ಕೃತಿ ವಿವರ, ಪ್ರಶಸ್ತಿ ವಿವರ, ಇತ್ಯಾದಿಗಳಿವೆ.

*        *        *        *        *

ಧರ್ಮದರ್ಶಿ ಹರಿಕೃಷ್ಣ ಪುನರೂರು, ಕಲಾಪೋಷಕರಾದ ಡಿ.ಕೆ. ಚೌಟ ಮುಂತಾದವರು ಈ ಕೃತಿ ಪ್ರಕಟವಾಗಬೇಕೆಂಬ ಅಭಿಲಾಷೆ ವ್ಯಕ್ತಪಡಿಸಿದರು

2004ರಲ್ಲಿ ನಾನು, ನಾಡಿನ ಎಲ್ಲ ಪ್ರಮುಖ ಸಾಹಿತಿಗಳೊಂದಿಗೆ ಈ ಕುರಿತು ಪತ್ರ ವ್ಯವಹಾರ ಆರಂಭಿಸಿದೆ. ಋಷಿಗಳಿಗೆ ಅಪ್ಸರೆಯರ ಆಮಿಷವಿರುವಂತೆ, ಬಹುಮಾಧ್ಯಮಗಳ ತಡೆ ಇದ್ದರೂ ನಮ್ಮ ಲೇಖಕರು ಬಂಗಾರದಂಥವರು! ದೊರಕದ ಕೃತಿಗಳನ್ನು ಕೊರಿಯರ್ ಮೂಲಕ ತರಿಸಿಕೊಂಡರು. 'ಜಂಗಮವಾಣಿ'ಯಿಂದ ಸಂದೇಶ ಹೋದ ಕ್ಷಣವೇ, ಭರವಸೆ ನೀಡಿ ಲೇಖನಗಳನ್ನು ಕಳುಹಿಸಿ ಪ್ರೋತ್ಸಾಹಿಸಿದರು. ಮೊಗಸಾಲೆಯವರ ಕುರಿತು ಅಭಿಮಾನ ಇದಕ್ಕೆ ಕಾರಣ. ವಿವಿಧ ತಲೆಮಾರಿನ ಲೇಖಕ, ಲೇಖಕಿಯರು ಇಲ್ಲಿ ತಮ್ಮ ಕೊಡುಗೆ ನೀಡಿದ್ದಾರೆ.

ಆರಂಭದಲ್ಲಿ ವಿಜಯೇಂದ್ರ ಪಾಟೀಲರು ನನ್ನೊಟ್ಟಿಗೆ ಇದ್ದರು. ಕೆಲ ಲೇಖಕರೊಂದಿಗೆ ಪತ್ರ ವ್ಯವಹಾರವನ್ನೂ ಮಾಡಿದ್ದರು. ಮುಕ್ತಾಯದ ಹಂತದಲ್ಲಿ ಖ್ಯಾತ ವಿಮರ್ಶಕ ಡಾ. ಎಸ್.ಪಿ. ಪದ್ಮಪ್ರಸಾದ್ ಮತ್ತು 'ಸುಮುಖ'ದ ನಾರಾಯಣ ಮಾಳ್ಕೋಡ್, ನನ್ನ ಜತೆಗೂಡಿ ಈ ಕೆಲಸ ಸಾಂಗವಾಗುವಂತೆ ನೋಡಿಕೊಂಡರು.

ಈ ಎಲ್ಲರಿಗೂ ಗೌರವಪೂರ್ವಕ ವಂದನೆಗಳು.

**10 ಮೇ, 2007**

**ಕಮಲಾ ಹೆಮ್ಮಿಗೆ**
**ಧಾರವಾಡ**

# ಲೇಖನದ ಸೂಚಿ

# ನಾ ಮೊಗಸಾಲೆ

ಹಾದು ಹೋದೆ: ಪಾಂಡವರಿಗೂ ದೊರೆಯದಿದ್ದೂರು -*
ಗಳ ಪಡೆದು, ಜನಮನವ ಗೆದ್ದು, ಬಿತ್ತಿ ಕನಸು
ಕಂಡವರಿಗೆ, ಕಣ್ಣೆದುರು ನಿಲಿಸಿ ಬಿಟ್ಟಿರಿ ತೇರು!
ಬೆಳೆಯುತ್ತ ತ್ಯಾಗದಲಿ ಹಿರಿ-ಕಿರಿಯ ತಲೆಮಾರು.
ಯಾವ ಕಾಲೇಜಿನಲಿ ಕಲಿಸಬಹುದಿದನೆಲ್ಲ ಮೊಗ-
ಸಾಲೆ? ಬಿಚ್ಚುಮಲ್ಲಿಗೆ ನಗೆಯಿದಾವ ಮಣ್ಣಿನ
ಕಂಪು? 'ಇದಲ್ಲ, ಅಲ್ಲ' ಎನ್ನುತ್ತಲಿ ಕವಿತೆಯ
ಗಲ್ಲ ನೇವರಿಸಿ ತೋರಿದ ಸಹಜಾಂತರಂಗ.
ಇದ್ದದ್ದೊಂದು ಇಲ್ಲದ್ದೊಂದು ಹೇಳುವುದಲ್ಲ-
'ನನ್ನದಲ್ಲದ್ದ'ನು ಎಲ್ಲರದ್ದಾಗಿಸುವ ನೆಲೆ-
ಯು ಅಂತು ಕಾಂತಾವರದಿ ತೆರೆದ ಜೀವನ ಕಲೆ.
ಮುಕ್ತನಾಗ ನೆನಹೆ ನಂದಾದೀಪ. ಬೆಳಕೆಲ್ಲ
ಹಚ್ಚ ಹಸಿರು, ಬೆಟ್ಟಗಳ ಸ್ನೇಹದಂತಃಕರಣ-
ತರುವಿದಾತ್ರ ಗದ್ದಲಿತೆ! ಸಹಜ ಸುಮ್ಮಾನ.

—ಚೆನ್ನವೀರ ಕಣವಿ

* ಕಾಂತಾವರ, ಬೋಳ, ನಂದಳಿಕೆ, ಕೆದಿಂಜೆ, ಬೆಳುವಾಯಿ ಎಂಬ ಈ ಐದು ಗ್ರಾಮಗಳು

## ಮೊಗಸಾಲೆಯ ನಡಿಗೆ

– ಬನ್ನಂಜೆ ಗೋವಿಂದಾಚಾರ್ಯ

ಕೆಲವರು ಇಳಿಯಲಿಕ್ಕೆ ಹತ್ತುತ್ತಾರೆ
ಕೆಲವರು ಹತ್ತಲಿಕ್ಕೆ ಇಳಿಯುತ್ತಾರೆ
ಕೆಲವರು ಹತ್ತದೇ ಇಳಿಯದೇ
ದೂರದಲ್ಲೆ ಉಳಿಯುತ್ತಾರೆ

ಆದರೂ ಅವರು ನಡೆಯುತ್ತಾರೆ
ಅಲ್ಲ ಬೆಟ್ಟದ ಕೋಡಿನೆಡೆಗೆ
ಅಲ್ಲ ಬಯಲಿನಡಿಗೆ
ಅವರ ನಡಿಗೆ ಅಡಿಗೆ ಮನೆ ಕಡೆಗೆ
ಕತ್ತಲಾಯಿತೋ ಹೆಂಡತಿಯ

ಅಥವಾ ಯಾರದೋ ಹೆಂಡತಿಯ
ಅಥವಾ ಯಾರಿಗೂ ಹೆಂಡತಿಯಾಗದ ರತಿಯ
ಕತ್ತಲ ಕುಚ್ಚಿನೆಡೆಗೆ
ಸಾವಿರ ಜನ ಉಂಡ ತೀರ್ಥ ಕುಂಡದಲ್ಲಿ ಮಡೆಸ್ನಾನ
ಚ್ಯವನಪ್ರಾಶದ ಅನುಪಾನ

ಕಡೆಗೆ ಯಾರುಯಾರದೋ ಯಾತ್ರೆ
ನಾಕು ಹೆಗಲಿನ ಮೇಲೆ ಚೈತ್ರಯಾತ್ರೆ

* * *

ನೀವು ಅಂಥವರಲ್ಲ
ಬಯಲಿಂದ ಬೆಟ್ಟದ ಕೋಡಿನೆಡೆಗೆ
ಬೆಟ್ಟದಿಂದ ಬಯಲಿನಡೆಗೆ
ನಿಮ್ಮ ನಡಿಗೆ
ಅಡಿಗಡಿಗೆ ಭೂವ್ಯೋಮಗಳನಳೆವ ನಿಮ್ಮ ನಡಿಗೆ



# ಬಯಲಲ್ಲೆ ಬೆಟ್ಟವಾದವರು

ಸುಬ್ರಾಯ ಚೊಕ್ಕಾಡಿ

ಅಗಲಗಲ ತೆರೆದ ಬೆರಗು ಕಣ್ಣುಗಳ ಸುತ್ತ
ಸ್ನೇಹ ಸಿಂಚನದ ಮಾಯಾಜಾಲ – ಹರಡಿ, ಮನ
ದಾಳದಿಂದೆದ್ದು, ಹೃದಯಕೆ ಬಡಿದು ಪ್ರತಿಧ್ವನಿಸುವಂತೆ
ಹೊಟ್ಟೆಕುಲುಕಿನ ನಗುವಿನಬ್ಬರದ ನಿರ್ಭಿಡೆ ಮಾತು
ಅವರಿವರ ಜನ್ಮ ಜಾಲಾಡಿಯೂ ಕಲ್ಮಷವಿರದ
ಪ್ರೀತಿಯಧಾರೆ – ಆಪ್ತತೆಯ
ಬೆಚ್ಚಗಿನ ಹವೆಯ ಸಡಗರದಲ್ಲಿ
ಪ್ರೇಮ – ಕವಿತೆಯ ನಡುವೆ ಮೊಗಸಾಲೆಯಲ್ಲಿ
ಒಡ್ಡೋಲಗವ ಕೊಟ್ಟವರು
ಈ ನಮ್ಮ ನಿಮ್ಮ – ಮೊಗಸಾಲೆಯವರು

ಶರತ್ತಿನ ಶರಾರತ್ತೆಲ್ಲ ಇವರ ಬೆರಳ ತುದಿಯಲ್ಲಿ:
ಒಮ್ಮೆ ಮಳೆ, ಇನ್ನೊಮ್ಮೆ ಬಿಸಿಲು, ನಡು ನಡುವೆ ಕೇವಲ ಮೋಡ
ಕ್ರಮವಿರದ ಆವರ್ತದಲಿ
ಆಗೀಗ ಹೊಳೆವ ಮಿಂಚಿನ ಹಾಗೆ ಸಿಟ್ಟು
ಮತ್ತೆ ಯಥಾ ಪ್ರಕಾರ ಮೂಲಕೆ ಪಯಣ
ಉಳಿಯುವುದು ಕೊನೆಗೂ ಅಲ್ಲಿ ತಿಳಿನೀರ ಕಾಸಾರ
ಯಾವ ಕಹಿಯೂ ಉಳಿಯದಂಥ – ಅಷ್ಟೇ ಅಲ್ಲ
ಎಲ್ಲ ಮರೆಸುವ ಹಾಗೆ ಹೊಮ್ಮುವ ನಿರಾಳ ನಡೆ
ಭುಜಕುಣಿಸಿ, ಹೆಗಲಿಗೆ ಹೆಗಲು ಕೊಟ್ಟು
ಜತೆಗೇ ಹೆಜ್ಜೆ ಹಾಕುತ್ತ ಮುನ್ನಡೆವ ಬಗೆ
ಒಂದಿಷ್ಟು ಹುಂಬತನ, ಉಳಿದದ್ದೆಲ್ಲ ಅಪ್ಪಟ ಪ್ರೀತಿ
ಇದು ನಮ್ಮ ಮೊಗಸಾಲೆ ರೀತಿ, ನೀತಿ.

ಕಟ್ಟುವುದಷ್ಟೇ ಗೊತ್ತು ಇವರಿಗೆ – ಒಡೆಯುವುದಲ್ಲ:
ಕಟ್ಟಿದರು ತನ್ನದೇ ಬದುಕು, ತನ್ನನಾವರಿಸಿರುವ ಜಗವ
ಕಟ್ಟಿದರು ಕವಿತೆಗಳ, ತನ್ನನಲ್ಲಾಡಿಸಿದ ಕತೆಗಳ
ಕಟ್ಟಿದರು ಸಂಘ ಸಂಸ್ಥೆಗಳ, ಅನೇಕ ಸ್ನೇಹದ ಕಟ್ಟೆಗಳ
ತಾಯಂತೆ ಹಾಲೂಡಿ, ಮಮತೆಯ ಲಾಲಿ ಹಾಡಿದರು
ತಂದೆಯ ಹಾಗೆ ಹುಸಿಕೋಪ, ಪ್ರೀತಿಯಲಿ ಬೆಳೆಸಿದರು
ಗುರುವಿನ ಹಾಗೆ ವಿನಯ, ವಿವೇಕ ಕಲಿಸಿದರು
ಗೆಳೆಯನ ಹಾಗೆ ಎಲ್ಲರೊಳಗೊಂದಾದರು.

ಬಿಚ್ಚುತ್ತಾರೆ ಮೊಗಸಾಲೆಯಲಿ ತನ್ನೊಳಗನ್ನು
ಬಿಚ್ಚುತ್ತಾರೆ ಬಂದದಾರಿಯ ಸಿಹಿಕಹಿಗಳನ್ನು
ಬಿಚ್ಚುತ್ತಾರೆ ಭವಿಷ್ಯದ ಸ್ವತಂತ್ರ ಹಾದಿಗಳನ್ನು
ಬಿತ್ತುತ್ತಾರೆ ಅಲ್ಲೆಲ್ಲ ಹೊಸ ಕನಸು ಕವಿತೆಗಳ ಬೀಜಗಳನ್ನು

ಎಷ್ಟೊಂದು ಬಣ್ಣ ಈ ಸ್ವಂತಾವತಾರಿಗೆ!
ಇದಲ್ಲ ಇದಲ್ಲ ಎನುತ ಹೊರಟ ಈ ಯಾತ್ರಿಕಗೆ
ಕಂಡಿತೇ ಕಡಲಾಚೆ ಪಂಚವರ್ಣದ ಗಿಣಿ?
ದಕ್ಕಿತೇ ಮುಗಿಲಾಚೆ ನಗುವ ಬಣ್ಣದ ಹೂವು?

ಒಂದು ಹೆಜ್ಜೆಯನಿಲ್ಲಿ ಗಟ್ಟಿ ನೆಲದಲ್ಲಿಟ್ಟು
ಇನ್ನೊಂದ ಇಂದ್ರಚಾಪದಲ್ಲಿಟ್ಟು ಸಾಗಿದರು;
ದಾಟುತ್ತ ಹೋದಂತೆ ಸುಖದುಃಖಗಳ ಕೋಟೆಗಳ
ತನ್ನದಲ್ಲದ್ದನ್ನು ಒಂದೊಂದಾಗಿ ಕೈ ಬಿಡುತ್ತ
ಕಾಂತಾವರದ ಗಡಿಯ ಹಿಗ್ಗಿಸುತ ಹಿಗ್ಗಿಸುತ
ನಿಗೂಢ ಚೆಲುವೆಗೇವ ಕಾಂತಾರವಾಗುತ್ತ
ಸ್ಥಾವರದ, ಜಂಗಮದ ನಡೆಯ ಬದಲಾಯಿಸುತ
ನೆಲ ಮುಗಿಲಗಳ ಮಧ್ಯೆ ಬಯಲಾದರು;
ಆ ಬಯಲ ಭವ್ಯತೆಯಲ್ಲೆ
ಕೋಳ್ಯೂರು – ಕಾಂತಾವರವ ಬೆಸೆವ ಎತ್ತರದ
ಬೆಟ್ಟವೇ ಆದರು.



O

# ಮೊಗಸಾಲೆಯವರಂಥ ವ್ಯಕ್ತಿಗಳು ನಮ್ಮ ನಾಡಿನಲ್ಲಿ ಅಲ್ಲಲ್ಲಿ ಬೇಕು.

ಡಾ. ಪಾಟೀಲ ಪುಟ್ಟಪ್ಪ

'ಅವನು ಬಂದ, ನೋಡಿದ, ಜಯಿಸಿದ' ಎಂಬ ಒಂದು ಮಾತನ್ನು ಸೀಜರನ ಬಗೆಗೆ ಹೇಳುತ್ತಾರೆ. ಸೀಜರನಂಥ ಜನರು ಎಲ್ಲ ಕಾಲದಲ್ಲಿಯೂ ಇರುತ್ತಾರೆ. ಎಲ್ಲ ರಂಗದಲ್ಲಿಯೂ ಇರುತ್ತಾರೆ. ಎಲ್ಲ ಪೀಳಿಗೆಗಳಿಗೆ ಸೇರಿದ ಜನರು ಅವರನ್ನು ನೆನೆಯುತ್ತಾರೆ.

ಅವರು ಅಶೋಕ, ಅಕ್ಬರ್, ಅಲೆಗ್ಸಾಂಡರನಂಥ ಚಕ್ರವರ್ತಿಯೇ ಆಗಿರಬೇಕಾಗಿಲ್ಲ. ಲಿಂಕನ್ ಚರ್ಚಿಲ್ ........ ನಂಥ ರಾಷ್ಟ್ರನಾಯಕನೇ ಆಗಿರಬೇಕಾಗಿಲ್ಲ. ನ್ಯೂಟನ್, ಐನ್‌ಸ್ಟೀನ್, ರಾಯನ್‌ರಂಥ ವಿಜ್ಞಾನಿಯೇ ಆಗಿರಬೇಕಾಗಿಲ್ಲ. ಕಾಳಿದಾಸ, ಶೇಕ್ಸ್‌ಪಿಯರ್, ರವೀಂದ್ರನಾಥರಂಥ ಸಾಹಿತ್ಯ ಶ್ರೇಷ್ಠರೇ ಆಗಿರಬೇಕಾಗಿಲ್ಲ. ಜನರ ಮಧ್ಯದಲ್ಲಿದ್ದು ತಮ್ಮ ವೃತ್ತಿ ಮಾಡಿಕೊಂಡು ಸಾರ್ವಜನಿಕರಿಗೆ ಉಪಕಾರಿಯೆನಿಸಿದ ಜೀವನವನ್ನು ಬದುಕಿದ ಜನರು ಅಸಂಖ್ಯರಿದ್ದಾರೆ. ಅಂಥ ಜನರು ಇನ್ನೂ ಇದ್ದಾರೆಂತಲೇ ಜೀವನವು ತನ್ನ ರುಚಿಯನ್ನು ಉಳಿಸಿಕೊಂಡಿದೆ.

ಅಂಥ ಜನರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಕಾಂತಾವರದ ನಾ. ಮೊಗಸಾಲೆಯವರೂ ಒಬ್ಬರು. ಅವರು ಮೂಲತಃ ಕಾಂತಾವರದವರಲ್ಲ, ಕಾಸರಗೋಡಿಯನವರು. ಕಿತ್ತು ಹಚ್ಚಿದ ಸಸಿಯಂತೆ ಅವರು ಕಾಂತಾವರಕ್ಕೆ ಬಂದು ಬೃಹತ್ತಾದ ವೃಕ್ಷವಾಗಿ ಬೆಳೆದಿದ್ದಾರೆ.

ಅವರು ಕಾಂತಾವರವನ್ನು ಹಚ್ಚಿಕೊಂಡಂತೆ, ಕಾಂತಾವರ ಅವರನ್ನು ಹಚ್ಚಿಕೊಂಡಿದೆ. ಅವರು ತಮ್ಮ ಪ್ರೀತಿಯ ಸೇವೆಯಿಂದ ಆ ಪ್ರದೇಶವನ್ನು ತಮ್ಮದನ್ನಾಗಿ ಮಾಡಿಕೊಂಡಿದ್ದಾರೆ. ಆ ಪ್ರದೇಶದ ಎಲ್ಲ ಜನರಿಗೂ ಅವರು ಬೇಕು. ಪ್ರೀತಿ ಜಯಿಸದೇ ಇರುವಂಥ ವಸ್ತು ಯಾವುದೂ ಇಲ್ಲ. ಜನರು ಎಲ್ಲಿ ಪ್ರೀತಿಸುವರೋ ಅದೇ ನನ್ನ ಸ್ಥಳ ಎಂದು ಹೇಳುವ ಮಾತು ಮೊಗಸಾಲೆಯವರನ್ನೇ ಕುರಿತು ಹೇಳಿದಂತೆ ಇದೆ. ಅವರು ಕಾಂತಾವರದವರಿಗಿಂತಲೂ ಹೆಚ್ಚು ಕಾಂತಾವರದವರಾಗಿದ್ದಾರೆ. ಅವರು ಅಲ್ಲಿಯ ಪ್ರತಿಯೊಬ್ಬರ ಮನೆಮನೆಯಲ್ಲಿ ಪ್ರತಿಯೊಬ್ಬರ ಮನಮನದಲ್ಲಿ ಸಕ್ಕರೆಯು ಹಾಲಿನಲ್ಲಿ ಬೆರೆತಂತೆ ಬೆರೆತಿದ್ದಾರೆ.

ಮೊಗಸಾಲೆಯವರು ವೃತ್ತಿಯಿಂದ ವೈದ್ಯರು. ಪ್ರವೃತ್ತಿಯಿಂದ ಸಾಹಿತಿಗಳು. ಸಾರ್ವಜನಿಕ ಸೇವೆಯಿಂದ ಲೋಕಮಾನ್ಯರು. ಸಮಾಜಕ್ಕೆ ಅವರಂತೆ ಉಪಕಾರಿಯೆನಿಸಿ ಬದುಕಿದವರು ಯಾವ ಪ್ರದೇಶದಲ್ಲಿಯಾದರೂ ಬಂಗಾರದ ಬೆಲೆಯ ಮನುಷ್ಯರೆನಿಸುತ್ತಾರೆ.

ನಮ್ಮ ದೇಶದಲ್ಲಿ ಅನೇಕ ಬಗೆಗಳಿಗೆ ಸೇರಿದ ಅನೇಕ ಬಗೆಯ ಜನರು

ತುಂಬಿಕೊಂಡಿರುವುದನ್ನು ನಾವು ಕಾಣುತ್ತೇವೆ. ಒಂದಿಷ್ಟು ತೆರೆದರೂ ನಮಗೆ ಅವರ ಜಾತಿ ಕಾಣಿಸುತ್ತದೆ. ನಮ್ಮ ನಾಡು, ನಮ್ಮದೇಶ, ಜಾತೀಯತೆಯನ್ನೂ ಮೀರಿ ಬೆಳೆದಾಗಲೇ ಮರ್ಯಾದೆವಂತ ಜನರಿರುವ ಜನಪದಗಳೆನ್ನುವ ಹೆಸರನ್ನು ಪಡೆಯುತ್ತೇವೆ. ಕಾಂತಾವರವು ಜೈನರೇ ತುಂಬಿರುವ ಬಲ್ಲಾಳ ಭೂಮಿ. ತೀರ ಇತ್ತೀಚಿನವರೆಗೂ ಅವರೂ ಕೂಡ ಒಬ್ಬ ಜೈನರೆಂದೇ ನನ್ನ ಭಾವನೆ ಆಗಿದ್ದಿತು. ಅಲ್ಲಿಯ ಜೈನರೊಂದಿಗೆ ಬೆಳೆದಿರುವ ಅವರು ತಮ್ಮೊಳಗೆ ಎಲ್ಲ ಜೈನ ಗುಣಧರ್ಮಗಳನ್ನೂ ಮೈಗೂಡಿಸಿಕೊಂಡಿದ್ದಾರೆ. ಒಂದು ಎತ್ತರಕ್ಕೆ ಹೋದವನಿಗೆ ಎಲ್ಲ ಎತ್ತರಗಳೂ ಕಾಣಿಸುತ್ತವೆ.

ಜಿನಬೋಧಿಯ ಶ್ರೇಷ್ಠತೆಯನ್ನೆಲ್ಲ ಮೊಗಸಾಲೆಯವರು ತಮ್ಮಲ್ಲಿ ತುಂಬಿಕೊಂಡಿರುವರೆನ್ನುವುದು. ಅವರ ಸಂಪರ್ಕದಲ್ಲಿ ಬಂದವರಿಗೆಲ್ಲ ಕಂಡಿದೆ. ಅವರಲ್ಲಿ ಸಮಸ್ತವನ್ನೂ ತಿಳಿದುಕೊಳ್ಳುವ ಸಾಮಾನ್ಯ ಜ್ಞಾನ ಇದೆ. ಸರ್ವರನ್ನೂ ಸಮದೃಷ್ಟಿಯಿಂದ ನೋಡುವ ದೃಷ್ಟಿ ಇದೆ. ಯಾವ ಸ್ಖಾಲಿತ್ಯವೂ ಇಲ್ಲದ ಸಮ್ಯಕ್ ಚಾರಿತ್ರ್ಯ ಇದೆ.

ಸ್ವಂತದ ಸ್ವಾಸ್ಥ್ಯಕ್ಕಿಂತ ಅವರು, ತಮ್ಮ ಜೀವನದ ಉದ್ದಕ್ಕೂ ಸಮಾಜದ ಸ್ವಾಸ್ಥ್ಯದ ಕಡೆಗೇ ಹೆಚ್ಚು ಗಮನ ಕೊಟ್ಟಿದ್ದಾರೆ. ಕಾಂತಾವರದಲ್ಲಿ ಮೊಗಸಾಲೆಯವರು ಇದ್ದಾರೆನ್ನುವ ಕಾರಣದಿಂದೇ ಅದು ಕರ್ನಾಟಕದ ಸಾಂಸ್ಕೃತಿಕ ನಕ್ಷೆಯ ಮೇಲೆ ಒಂದು ಸ್ಥಾನವನ್ನು ಪಡೆದುಕೊಂಡಿದೆ. ಒಬ್ಬ ಮನುಷ್ಯ, ತನ್ನನ್ನೇ ಸಾರ್ವಜನಿಕ ಸೇವೆಗೆ ಅರ್ಪಿಸಿಕೊಂಡರೆ ಏನು ಮಾಡಬಲ್ಲ ಎನ್ನುವುದಕ್ಕೆ ಕಾಂತಾವರ ಎತ್ತಿ ಹೇಳುವ ಒಂದು ನಿದರ್ಶನವೆನಿಸಿದೆ.

ಕಾಂತಾವರ ಗ್ರಾಮವು ನಮ್ಮ ರಾಜ್ಯಕ್ಕೆ ಮಾದರಿಯೆನಿಸುವ ಒಬ್ಬ ಮುತ್ಸದ್ದಿ ರಾಜಕಾರಣಿಯನ್ನು ನೀಡಿದೆ. ಜಿನರಾಜ ಹೆಗ್ಗಡೆಯವರು ಕರ್ನಾಟಕ ಏಕೀಕರಣಕ್ಕೆ ಬುನಾದಿ ಸದೃಶವಾದ ಬಹು ದೊಡ್ಡ ಕೆಲಸವನ್ನು ಮಾಡಿದರು. ಆದರೆ ನಮ್ಮ ಜನರು ಸದಾ ಸ್ಮರಿಸಬೇಕಾದ ವ್ಯಕ್ತಿಗಳನ್ನು ಮರೆಯುತ್ತಾರೆ. ಮರೆಯಬೇಕಾದ ವ್ಯಕ್ತಿಗಳನ್ನು ನೆನಪಿನಲ್ಲಿ ಇರಿಸಿಕೊಳ್ಳುತ್ತಾರೆ.

ಆದರೆ ನಮ್ಮ ಪುಣ್ಯ ವಿಶೇಷವೇನೆಂದರೆ, ಕಾಂತಾವರದಲ್ಲಿ ನಾ ಮೊಗಸಾಲೆಯವರು ಇದ್ದಾರೆಂದು, ಜಿನರಾಜ ಹೆಗ್ಗಡೆಯವರು ಪುನರ್ಜನ್ಮ ಪಡೆದು ಬಂದವರಂತೆ ಈಗ ನಮ್ಮೆದುರು ಜೀವಂತವಾಗಿ ಉಳಿದಿದ್ದಾರೆ. ಘನವಾದ ವ್ಯಕ್ತಿಯ ಸ್ಮರಣೆ ನಮ್ಮಲ್ಲಿ ಸದಾ ಇರಲೆಂದು ಮೊಗಸಾಲೆಯವರ ಪ್ರಯತ್ನದಿಂದ ಅಲ್ಲಿ ಜಿನರಾಜ ಹೆಗ್ಗಡೆ ಸ್ಮಾರಕ ಭವನ ನಿರ್ಮಾಣಗೊಂಡಿದೆ. ಅಲ್ಲಿ ಸದಾ ಕಾಲವೂ ಸಾಹಿತ್ಯಕ ಹಾಗೂ ಸಂಸ್ಕೃತಿ ಕಾರ್ಯಕ್ರಮಗಳು ನಡೆದೇ ಇರುತ್ತವೆ. ಮೊಗಸಾಲೆಯವರು ಚಿಂತನಶೀಲರೂ ಚಲನಶೀಲರೂ ಆಗಿದ್ದಾರೆ. ಅವರು ಜಾಗೃತಿ ಯನ್ನು ತುಂಬಿಕೊಂಡ ಜಂಗಮ ವಸ್ತು ಆಗಿದ್ದಾರೆ. ಮೊಗಸಾಲೆಯವರಂಥ ವ್ಯಕ್ತಿಗಳು ನಮ್ಮ ನಾಡಿನಲ್ಲಿ ಅಲ್ಲಲ್ಲಿ ಇದ್ದರೆ ನಮ್ಮ ನಾಡು ಮೂಲೆಗುಂಪಾಗುವ ಸ್ಥಿತಿಯನ್ನು ಎಂದೂ ತಂದುಕೊಳ್ಳುವುದಿಲ್ಲ. ಅದು ಸದಾಕಾಲವೂ ಪ್ರಸನ್ನತೆಯನ್ನು ಪ್ರಖ್ಯಾತಿಯನ್ನು ತಂದುಕೊಳ್ಳುತ್ತದೆ. ಮೊಗಸಾಲೆಯವರಂಥ ಜನರ ಪೀಳಿಗೆ ಪ್ರವರ್ಧಮಾನವಾಗಿ ಬೆಳೆಯಲಿ.

o

# ಅರ್ಥ ಮತ್ತು ಸಾರ್ಥಕತೆಗಳ ನಡುವೆ ಮಿಡಿಯುವ ಮೊಗಸಾಲೆ

ಡಾ. ಬಿ. ಜನಾರ್ದನ ಭಟ್

ಕಾಂತಾವರದಿಂದ ನನ್ನೂರು ಬೆಳ್ಮಣ್ಣು ದೂರವೇನಲ್ಲ. ಬಸ್ಸಿನಲ್ಲಿ ಮುಕ್ಕಾಲು ಗಂಟೆಯ ದಾರಿ. ಬೆಂಗಳೂರಿನಲ್ಲಿ ಚಾಮರಾಜಪೇಟೆಯಿಂದ ಜಯನಗರಕ್ಕೆ ಹೋದಷ್ಟು ಸಮಯವಷ್ಟೇ! ಆದರೆ ಆಧುನಿಕ ಜೀವನ ಕ್ರಮ, ಕೆಲಸದ ಒತ್ತಡಗಳಿಂದ ನನಗೆ ಮೊಗಸಾಲೆಯವರ ಕಾಂತಾವರಕ್ಕೆ ಆಗಾಗ ಹೋಗಿ ಕಂಡು ಬರಲು ಈಗ ಪುರಸೊತ್ತಿಲ್ಲ!

ಮೊಗಸಾಲೆಯವರ ವ್ಯಕ್ತಿತ್ವ, ಅವರ ಜೀವನಕ್ರಮ ಅವರ ಚಿಂತನೆಗಳಿಗೆ ಈ ಸಬೂಬುಗಳು ಒಪ್ಪಿಗೆಯಾಗುವುದಿಲ್ಲ. ಅವರಿಗೆ ಸುತ್ತಮುತ್ತ ಜನ ಬೇಕು. ಧಾರಾಳವಾಗಿ ಮಾತಾಡಿ ನಕ್ಕು ನಗಿಸಿ, ಎರಡೆರಡು ಬಾರಿ ಕಾಫಿ ತಿಂಡಿ ಸೇವನೆಯಾಗಿ, ಊಟದ ಹೊತ್ತಾದರೆ ಊಟವಾಗಿ, ಎಲೆಯಡಿಕೆ ಜಗಿದು ನಿರಾಳವಾಗಿರಬೇಕು. ಹಾಗಾದರೆ ಅವರು ಬರೆಯುವುದು ಯಾವಾಗ ಎನ್ನುವುದೇ ನನ್ನಂತೆ ಹಲವರನ್ನು ಕಾಡಿದ ಪ್ರಶ್ನೆ.

ಅವರ ಕಾವ್ಯ ಕಟ್ಟುವ ಧ್ಯಾನಸ್ಥಿತಿ ಪ್ರಸನ್ನ ಪ್ರಾತಃಕಾಲಗಳಲ್ಲಿ ಮತ್ತು ಕತೆಗಳು ಹುಟ್ಟುವುದು ನೀರವ ರಾತ್ರಿಗಳಲ್ಲಿ! ಬೆಳಗಿನ ವಾಕಿಂಗ್ ಸಮಯದಲ್ಲಿ ಅವರೊಬ್ಬ ಋಷಿ; ಮನೆಗೆ ಹಿಂದಿರುಗಿದ ಮೇಲೆ ವಾಲ್ಮೀಕಿ. ರಾತ್ರಿ ವ್ಯಾಸ! ನನ್ನ ಊಹೆಯೇನೆಂದರೆ ಮೊಗಸಾಲೆ ಬೆಳಗಿನ ಹೊತ್ತು ಕಾವ್ಯವನ್ನೂ, ರಾತ್ರಿಯ ಹೊತ್ತು ಕತೆ, ಕಾದಂಬರಿಗಳನ್ನು ಬರೆಯುತ್ತಾರೆ. (ಯಾವ ಹೊತ್ತು ಏನು ಬರೆಯುತ್ತಾರೆನ್ನುವುದನ್ನು ಹೀಗೇ ದೇಶಾವರಿ ಮಾತಾಗಿ ಹೇಳಿದೆ. ಆದರೆ ಮೊಗಸಾಲೆಯವರ ಬರವಣಿಗೆಯ ವಿಸ್ತಾರ ಸೂಕ್ಷ್ಮ ರೂಪದಲ್ಲಿ ನೋಡಿದಾಗ ಧ್ಯಾನಸ್ಥ ಸ್ಥಿತಿಯಲ್ಲಿ ಮನಸ್ಸಿನೊಳಗೆ ಹುಟ್ಟಿ ಹೊರಗೆ ಚಾಚಿಕೊಳ್ಳುವ ರೀತಿಯ ಬರಹಗಳಿಂದ ಹಿಡಿದು ಹೊರ ಪ್ರಪಂಚದ ಜಂಜಡಗಳನ್ನು ಕುರಿತು ಧ್ಯಾನಿಸಿ ಅವುಗಳ ಅರ್ಥವನ್ನು ಗ್ರಹಿಸುವವರೆಗಿದೆ; ಸ್ಥೂಲ ರೂಪದಲ್ಲಿ ನೋಡಿದಾಗ ಕಾವ್ಯದಿಂದ ಹಿಡಿದು ಕತೆ, ಕಾದಂಬರಿ, ಆತ್ಮವೃತ್ತಾಂತದವರೆಗಿದೆ. ಇದನ್ನು ಮೊಗಸಾಲೆಯವರ ಜೀವನಕ್ರಮದ ಜತೆಗಿಟ್ಟು ನೋಡಿದಾಗ ಹೀಗೆ ಗ್ರಹಿಸಬಹುದು: ಮುಂಜಾನೆಯ ವಾಕಿಂಗಿನ ಪ್ರಶಾಂತ ವಾತಾವರಣದಲ್ಲಿ ತನ್ನೊಳಗಿನ ಭಾವಲೋಕದಲ್ಲಿ ಅವರು ವಿಹರಿಸುತ್ತಿರುತ್ತಾರೆ. ನಂತರ ಅವರ ಕ್ಲಿನಿಕಿನಲ್ಲಿ ಮತ್ತು ಕಾಂತಾವರದ ಸಣ್ಣ ಪೇಟೆಯಲ್ಲಿ ಊರ ಪರವೂರ ಜನರೊಡನೆ ಸಮಾಜದ ತರಹೇವಾರಿ ಸಮಸ್ಯೆಗಳ ಜೊತೆಗೆ ಮುಖಾಮುಖಿ, ಪತ್ರಿಕೆಗಳ ಮೂಲಕ ಲೋಕವ್ಯವಹಾರಗಳನ್ನು ತಿಳಿದು ತಮ್ಮ

ಆತ್ಮೀಯರೊಡನೆ ಅವುಗಳ ಬಗ್ಗೆ ಚರ್ಚೆ. ಈ ಸಾರ್ವಜನಿಕ ಬದುಕಿನಿಂದಾಗಿ ಅವರ ಕತೆ ಕಾದಂಬರಿಗಳು ಹುಟ್ಟಿವೆ. ಅವರ ಕತೆ ಕಾದಂಬರಿಗಳಲ್ಲಿ ಹೆಚ್ಚಾಗಿ ಕಾಣಿಸಿಕೊಳ್ಳುವ ತಂತ್ರವೆಂದರೆ ಸೀತಾಪುರಕ್ಕೆ (ಕಾಂತಾವರ) ಹೊರಗಿನಿಂದ (ಊರಿನವರೇ ಹೊರಗೆ ಹೋಗಿ ಮತ್ತೆ ಹಿಂದಿರುಗುವವರೇ ಇವರಲ್ಲಿ ಹೆಚ್ಚು) ಬರುವವರು ಸಮಸ್ಯೆಯ ಬೀಜವನ್ನು ಬಿತ್ತುತ್ತಾರೆ. ಅಲ್ಲಿಂದ ಕತೆ ಕಾದಂಬರಿಗಳು ಅನಾವರಣಗೊಳ್ಳಲು ಪ್ರಾರಂಭವಾಗುತ್ತವೆ. ಇವು ಮೊಗಸಾಲೆಯವರ ದಿನಚರಿಯ ವಿಸ್ತೃತ ರೂಪಗಳೆಂದೇ ಹೇಳಬಹುದು. ಇಲ್ಲಿ ಹೋಲಿಕೆಗಾಗಿ ಒಂದು ಸೂಚನೆ: ಮಾಸ್ತಿಯವರ ಕತೆಗಳಲ್ಲಿ ನಿರೂಪಕರ ಮನೆಗೆ ಬಂದು ಹರಟೆ ಹೊಡೆಯುತ್ತ ಕತೆಯನ್ನು ಅನಾವರಣಮಾಡುವ ಪಾತ್ರಗಳನ್ನೂ ಮೊಗಸಾಲೆಯವರ ಪಾತ್ರಗಳನ್ನೂ, ತುಲನೆ ಮಾಡುವ ಒಂದು ಅಧ್ಯಯನ ಕುತೂಹಲಕರವಾಗಬಲ್ಲುದು. ಈ ಲೇಖಕರ ಜೀವನ ಕ್ರಮಕ್ಕೂ ಈ ತಂತ್ರಗಳಿಗೂ ಇರುವ ಸಂಬಂಧವೇ ಇಲ್ಲಿ ಕುತೂಹಲದ ವಿಷಯ.

ಮೊಗಸಾಲೆ ನನ್ನ ಬದುಕಿನೊಳಗೆ ಪ್ರವೇಶಿಸಿದ್ದು ನಾನು ಸಾಹಿತ್ಯಲೋಕಕ್ಕೆ ಪ್ರವೇಶಿಸಿದ ಜತೆ ಜತೆಗೆಯೇ. ಹಾಗಾಗಿ ಮೊಗಸಾಲೆ ಅಂದರೆ ಸಾಹಿತ್ಯ, ಸಾಹಿತ್ಯ ಅಂದರೆ ಮೊಗಸಾಲೆ ಎಂಬ ಒಂದು ಅಜ್ಞಾತ ಬೋಧ ನನ್ನ ಮನಸ್ಸಿನೊಳಗೆ ಕೂತಿದೆ. ನಾನು ಎಂಟನೆಯ ತರಗತಿಯಿಂದ ಹಿಡಿದು ಹತ್ತನೆಯತರಗತಿಯವರೆಗೆ ಐಡೆಂಟಿಟಿಗಾಗಿ ತಹತಹಿಸುತ್ತ ಸಾಹಿತ್ಯವನ್ನು ಊರುಗೋಲಾಗಿ ಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದ ದಿನಗಳು: 1972 ರಿಂದ 1975. ಕಾರಂತ, ಕುವೆಂಪು, ತೇಜಸ್ವಿ, ಅನಂತಮೂರ್ತಿ ನನ್ನ ಮೆಚ್ಚಿನ ಲೇಖಕರು ಆಗ. ಮೈಸೂರಿನಲ್ಲಿ ಅನಂತಮೂರ್ತಿಯವರ ಶಿಷ್ಯನಾಗಿದ್ದ ನಮ್ಮಣ್ಣ ರಾಮಚಂದ್ರ ತಂದುಕೊಡುತ್ತಿದ್ದ ಪುಸ್ತಕಗಳೇ ನಮಗೆ ಆಹಾರ (ಮತ್ತು ಆಧಾರ!) ಇಂಥ ಜಿಂಡಿಟಚಿಣುತಜ ದಿನಗಳಲ್ಲಿ ನನಗೆ ಕಾವ್ಯ ಎಂಬ ಹೊಸಲೋಕದ ಪರಿಚಯ ಮಾಡಿಕೊಟ್ಟವರೇ 'ಡಾ. ನಾ. ಮೊಗಸಾಲೆ' ಎಂಬ ನಗುಮುಖದ ಸರಳ ವ್ಯಕ್ತಿತ್ವದ ಸಣ್ಣ ಪ್ರಾಯದ ದೊಡ್ಡ ಮನುಷ್ಯ. (ಸಾಹಿತ್ಯದ ಹುಚ್ಚು ಅಂಟಿಸಿಕೊಂಡಿರುವ ನಾವು ನಾಲ್ವರು ಸಹೋದರರಲ್ಲಿ ಕಾವ್ಯದ ಬಗ್ಗೆ ಆಸಕ್ತಿ ಮತ್ತು ಒಲವು ಇರುವವನು ನಾನೊಬ್ಬನೇ ಏಕೆ ಎನ್ನುವುದಕ್ಕೆ ಉತ್ತರವೇ 'ಮೊಗಸಾಲೆ.!)

* * * * *

ಮೊಗಸಾಲೆಯವರು ಕಾಂತಾವರ ಕನ್ನಡ ಸಂಘದ ಮೂಲಕ ಮಾಡಿದ ಮೊದಲನೆಯ ಮಹತ್ವದ ಸಾಧನೆಯೆಂದರೆ 1977ರಲ್ಲಿ ಪ್ರಕಟಿಸಿದ 'ದಕ್ಷಿಣ ಕನ್ನಡ ಕಾವ್ಯ: 1901–1976' ಎಂಬ ಸಂಪುಟ. ಇದರ ಮುದ್ರಣ ಬೆಳ್ಮಣ್ಣಿನ ಸುರೇಶ್ ಪ್ರಿಂಟಿಂಗ್ ಪ್ರೆಸ್ಸಿನಲ್ಲಿ ನಡೆಯುತ್ತಿತ್ತು. ಅದೇ ಕಟ್ಟಡದಲ್ಲಿ ನಮ್ಮ ತಂದೆಯವರ 'ದುರ್ಗಾ ವಿಲಾಸ' ಹೋಟೆಲು ಕೂಡ ಇತ್ತು. ಆ ಪುಸ್ತಕದ ಮುದ್ರಣ ಕೆಲವು ತಿಂಗಳುಗಳ ಕಾಲ ನಡೆಯುತ್ತಿತ್ತು. ಲೆಟರ್‌ಪ್ರೆಸ್ಸಿನಲ್ಲಿ ಸ್ವಲ್ಪ ಸ್ವಲ್ಪವೇ ಕಂಪೋಸ್ ಆಗುತ್ತಿದ್ದ ಪದ್ಯಗಳಿಗೆ ನಾನೇ ಮೊದಲ ಓದುಗ ಮತ್ತು ಪ್ರೂಫ್ ರೀಡರ್. ತರುಣರಾದ ಮೊಗಸಾಲೆ, ಸಂಪುಟದ ಸಂಪಾದಕರಾದ ಸುಬ್ರಾಯ ಚೊಕ್ಕಾಡಿ ಮತ್ತು ಮುರಳೀಧರ ಉಪಾಧ್ಯಾಯ (ಅವರೂ ಯುವಕರೇ) ಆಗಾಗ ಪ್ರೆಸ್ಸಿಗೆ ಭೇಟಿ ಕೊಡುತ್ತಿದ್ದರು. ಸಾಹಿತಿಗಳಾಗಿ ಪತ್ರಿಕೆಗಳಲ್ಲಿ ಕಾಣಿಸಿಕೊಳ್ಳುತ್ತಿದ್ದ ಮೊಗಸಾಲೆ, ಚೊಕ್ಕಾಡಿ, ಮುರಳೀಧರ

ಉಪಾಧ್ಯಾಯರನ್ನು ಆಗಾಗ ಎದುರಿಗೇ ಕಾಣುವ ಯೋಗದಿಂದ ನಾನು ಪುಳಕಿತನಾಗುತ್ತಿದ್ದೆ. ಜತೆಗೆ ಈ ಸಂಪುಟದ ಕವನಗಳನ್ನು ಓದಿ ಓದಿ ನನಗೆ ಕಾವ್ಯದ ಶಕ್ತಿಯ ಪರಿಚಯವಾಯಿತು. ಆ ಕವನಗಳಲ್ಲೆಲ್ಲ ನನಗೆ ಬಹಳ ಇಷ್ಟವಾದ ಕವನವೆಂದರೆ ರಾಮಚಂದ್ರ ದೇವರ 'ಅಪ್ಪೆ ಮಾವನ ಅರುಪ್ಪೆ ಕುರು'.

'ದಕ್ಷಿಣ ಕನ್ನಡ ಕಾವ್ಯ' ಪುಸ್ತಕದ ಮುದ್ರಣದ ಸಂದರ್ಭದಲ್ಲಿ ಬೆಳ್ಮಣ್ಣಿಗೆ ನಿಯಮಿತವಾಗಿ ಬರುತ್ತಿದ್ದವರು ಮೊಗಸಾಲೆಯವರೇ. ಚೊಕ್ಕಾಡಿ ಮತ್ತು ಉಪಾಧ್ಯಾಯರು ದೂರದಲ್ಲಿದ್ದುದರಿಂದ ಹೆಚ್ಚಾಗಿ ಬರುತ್ತಿರಲಿಲ್ಲ. ಪ್ರೆಸ್ಸಿನ ಮೂಲಕ ಸುರೇಶರಾಯರು ಮೊಗಸಾಲೆಯವರಿಗೆ ನನ್ನನ್ನು ತೋರಿಸಿ, 'ಇವನೂ ಬರೆಯುತ್ತಾನೆ' ಎಂದು ಪರಿಚಯಿಸಿದಾಗ ಅವರು ಬೆನ್ನು ತಟ್ಟಿ 'ಇನ್ನೂ ಬರೆ. ಹೆಚ್ಚು ಹೆಚ್ಚು ಓದು' ಎಂದು ಹೇಳಿದ್ದರು. (ನಾನು 1975ರಲ್ಲಿ ಹತ್ತನೆ ತರಗತಿಯಲ್ಲಿದ್ದಾಗ ಬರೆದ 'ಪೊಲೀಸರು' ಎಂಬ ಕತೆ 'ಸುಧಾ'ದಲ್ಲಿ ಅದಾಗಲೇ ಪ್ರಕಟವಾಗಿತ್ತು. 'ದಂತಕತೆಯಾಗಲು ಹೊರಟವನು' ಎಂಬ ಕತೆಯೂ ಅದಾಗಲೇ 'ಸುಧಾ'ದಲ್ಲಿ ಪ್ರಕಟವಾಗಿತ್ತು. ಇವುಗಳನ್ನು ಮೊಗಸಾಲೆಯವರಿಗೆ ತೋರಿಸಲು ಸಂಕೋಚವಾಗಿತ್ತು. ತೋರಿಸಿದ್ದರೆ ಅವರು ಯಾವ ರೀತಿ ಸಲಹೆ ನೀಡುತ್ತಿದ್ದರು ಇತ್ಯಾದಿ ಕುತೂಹಲ ನನಗೆ ಈಗ ಉಂಟಾಗುತ್ತಿದೆ. ಮುಂದೆ ನನಗೆ ಮೊಗಸಾಲೆಯವರ ಒಡನಾಟ ಸಮಾನಸ್ಕಂಧ ಸಾಹಿತ್ಯ ಚಿಂತನೆಯ ಮುಖಾಂತರವೇ ಆದದ್ದರಿಂದ, ಅವರಲ್ಲಿ ಹೆಚ್ಚಿನ ಸಲಹೆಯನ್ನು ಪಡೆಯುವ ಅವಕಾಶವನ್ನೂ ನಾನಾಗಿಯೇ ಬಿಟ್ಟುಕೊಟ್ಟಿದ್ದೆ ಅನಿಸುತ್ತದೆ).

* * * * *

ಮುಂದೆ ಮೊಗಸಾಲೆಯವರ ಕೃತಿಗಳನ್ನು ಓದುತ್ತ, ಅವರ ಭಾಷಣಗಳನ್ನು ಕೇಳುತ್ತ ದೂರದಿಂದಲೇ ಅವರ 'ಸಾಮೀಪ್ಯ' ನನಗೆ! ಎಂ.ಎ. ಮುಗಿಸಿ ಉಪನ್ಯಾಸಕನಾದ ಮೇಲೆ 'ಉದಯವಾಣಿ' ಪತ್ರಿಕೆಗೆ ಪುಸ್ತಕ ವಿಮರ್ಶೆ ಬರೆಯುವ ಸಂದರ್ಭದಲ್ಲಿ ಅವರ 'ಪ್ರಭವ' ಸಂಕಲನದ ಸಮೀಕ್ಷೆ ಬರೆದಿದ್ದೆ. ಅದರ ಬಗ್ಗೆ ಅವರ ಪ್ರತಿಕ್ರಿಯೆ ಏನು ಎನ್ನುವುದನ್ನು ತಿಳಿಯುವಷ್ಟು ಅವರ ಪರಿಚಯವನ್ನು ನಾನು ಬೆಳೆಸಿಕೊಂಡಿರಲಿಲ್ಲ. ಅವರೂ ದೂರದಿಂದಲೇ (ಸಮೀಪದಿಂದಲೇ) ಕೃತಿ ಸಮೀಕ್ಷಕನಾಗಿ ನನ್ನ ಬೆಳವಣಿಗೆಯನ್ನು ಗಮನಿಸುತ್ತಲೇ ಇದ್ದರು. ಮುದ್ದಣ ಕಾವ್ಯ ಪ್ರಶಸ್ತಿಯ ದಶಮಾನೋತ್ಸವದ ಸಂದರ್ಭದಲ್ಲಿ ಅವರು ಹೊರತಂದ ಗ್ರಂಥವೊಂದಕ್ಕಾಗಿ ಮೊದಲನೆಯ ಮುದ್ದಣ ಕಾವ್ಯ ಪ್ರಶಸ್ತಿ ಪಡೆದ ಕವಿ ಆನಂದ ಜಂಝುರವಾಡ ಅವರ ಕವನ ಸಂಕಲನದ ಸಮೀಕ್ಷೆಯನ್ನು ಬರೆದುಕೊಡಲು ನನ್ನನ್ನು ಅವರು ಕೇಳಿಕೊಂಡರು.

ಸಾಹಿತಿಗಳ ಒಡನಾಟ ಹೆಚ್ಚಿದಂತೆ ನನಗೆ ಸಂಕೋಚ ಕಡಿಮೆಯಾಗಿ, ಮೊಗಸಾಲೆಯವರ ಜತೆಯೂ ಸಲುಗೆ ಬೆಳೆಯಿತು. ಅವರ ಕಾಂತಾವರದ ಮನೆಗೆ ಹೋಗಿ ಸಾಹಿತ್ಯದ ವಿಚಾರವಾಗಿ ಚರ್ಚೆ ನಡೆಸಲು ಪ್ರಾರಂಭಿಸಿದೆ. ಮುದ್ದಣ ಕಾವ್ಯ ಪ್ರಶಸ್ತಿಯ ತೀರ್ಪುಗಾರನಾಗಿ, ವರ್ಧಮಾನ ಪ್ರಶಸ್ತಿಯ ತೀರ್ಪುಗಾರನಾಗಿ ಕೆಲಸ ನಿರ್ವಹಿಸಲು ಕೆಲವೊಮ್ಮೆ ಅವರು ಕೇಳಿಕೊಂಡದ್ದುಂಟು.

ಈ ನಡುವೆ ನನಗೆ ಮಂಗಳೂರಿನ 'ಕೆನರಾ ಟೈಮ್ಸ್' ಬಳಗದ ಕನ್ನಡ ದಿನಪತ್ರಿಕೆ 'ಕನ್ನಡ ಜನ ಅಂತರಂಗ'ದ ಸಾಪ್ತಾಹಿಕ ಪುರವಣಿಯ ಸಂಪಾದಕನಾಗಿ ದುಡಿಯುವ ಅವಕಾಶ

ಸಿಕ್ಕಿತು. ಆಗ ನಾನು ಪತ್ರಿಕೆಯನ್ನು ಜನಪ್ರಿಯಗೊಳಿಸಲು ಕೆಲವು ಅಂಕಣಗಳನ್ನು ಪ್ರಾರಂಭಿಸಿದೆ. 'ಆರೋಗ್ಯ ಸಲಹೆ' ಎಂಬ ಅಂಕಣ ಓದುಗರಿಗೆ ಉಪಯುಕ್ತವಾಗಬಹುದೆಂದು ನಿರ್ಧರಿಸಿ ಡಾ. ನಾ. ಮೊಗಸಾಲೆಯವರನ್ನು ಇಂಥದೊಂದು ಅಂಕಣವನ್ನು ನಡೆಸಿಕೊಡಬಹುದೆ ಎಂದು ಕೇಳಿದೆ. ಅವರು ಮೊದಲು ಸ್ವಲ್ಪ ಹಿಂಜರಿದರೂ ನಂತರ ಬರೆಯಲು ಒಪ್ಪಿದರು. ಆ ಅಂಕಣ ಬಹಳ ಜನಪ್ರಿಯವಾಯಿತು. ಮುಂದೆ ಕಾರಣಾಂತರಗಳಿಂದ ಕೆನರಾ ಟೈಮ್ಸ್ ಬಳಗ 'ಕನ್ನಡ ಜನ ಅಂತರಂಗ'ವನ್ನು ನಿಲ್ಲಿಸಿತಾದರೂ ಮೊಗಸಾಲೆಯವರ ಅಂಕಣ ಅವರ ಇನ್ನೊಂದು ಪತ್ರಿಕೆ 'ಕರಾವಳಿ ಅಲೆ'ಯಲ್ಲಿ ಮುಂದುವರಿದಿದೆ. ಆರೋಗ್ಯ ಸಲಹೆಯ ಐದಾರು ಪುಸ್ತಕಗಳನ್ನು ಮೊಗಸಾಲೆಯವರು ಪ್ರಕಟಿಸಿದ್ದಾರೆ.

* * * * *

2001ರಲ್ಲಿ ಮೊಗಸಾಲೆಯವರು ನನಗೆ ಒಂದು ಮಹತ್ವದ ಬ್ರೇಕ್ ನೀಡಿದರು. ಕಾಂತಾವರ ಕನ್ನಡ ಸಂಘದ ಬೆಳ್ಳಿ ಹಬ್ಬದ ಸಂದರ್ಭದಲ್ಲಿ ಪ್ರಕಟಿಸಿದ 'ದಕ್ಷಿಣ ಕನ್ನಡದ ಶತಮಾನದ ಕಾವ್ಯ' ಎಂಬ ಬೃಹತ್ ಸಂಪುಟದ ಸಂಪಾದಕನನ್ನಾಗಿ ಆಯ್ಕೆ ಮಾಡುವ ಮೂಲಕ. ಇದರ ಯಶಸ್ಸಿನಿಂದ ಪ್ರೇರಿತರಾದ ಪುತ್ತೂರು ಕರ್ನಾಟಕ ಸಂಘದ ದಿ। ಬೋಳಂತ ಕೋಡಿ ಈಶ್ವರ ಭಟ್ಟರು 'ದಕ್ಷಿಣ ಕನ್ನಡದ ಶತಮಾನದ ಕತೆಗಳು' ಎಂಬ ಇನ್ನೊಂದು ಬೃಹತ್ ಸಂಪುಟವನ್ನು ಸಂಪಾದಿಸಿಕೊಡುವ ಜವಾಬ್ದಾರಿಯನ್ನು ನನಗೆ ಒಪ್ಪಿಸಿದರು. ಮೊಗಸಾಲೆಯವರು ನನ್ನ ಮೇಲಿರಿಸಿದ್ದ ಭರವಸೆಯಿಂದಾಗಿ ಈ ಎರಡೂ ಗ್ರಂಥಗಳು ಹೊರಬರುವಂತಾಯಿತು.

ಮೊಗಸಾಲೆಯವರ ಬದುಕಿನ ಒಂದು ಧ್ಯೇಯಕ್ಕೆ. ಒಂದು ತುಡಿತಕ್ಕೆ ಈ ಸಂಗತಿ ಉದಾಹರಣೆಯಾಗಿದೆ. ಅದು ಯಾವುದೆಂದರೆ, ಯಾವುದೇ ಪ್ರತಿಭೆ ಗುರುತಿಸಲ್ಪಡಬೇಕು; ಅರ್ಥಪೂರ್ಣವಾದ ಯಾವುದೇ ಸಂಗತಿ ಸಾರ್ಥಕವಾಗಬೇಕು ಎನ್ನುವುದು. ಮೊಗಸಾಲೆಯವರ ಸಾಹಿತ್ಯರಚನೇತರ ಕೊಡುಗೆಯನ್ನು ಈ ತುಡಿತದ ಹಿನ್ನೆಲೆಯಲ್ಲಿ ಅರ್ಥೈಸಿಕೊಳ್ಳಬಹುದು. ಮೊಗಸಾಲೆಯವರು ಮುದ್ದಣ ಮತ್ತು ವರ್ಧಮಾನ ಪ್ರಶಸ್ತಿಗಳನ್ನು ಸ್ಥಾಪಿಸಿದ್ದಕ್ಕೂ, ಹಲವು ಪ್ರತಿಭಾವಂತರ ಸಾಹಿತ್ಯ ಕೃತಿಗಳು ರಚನೆಯಾಗಲು, ಪ್ರಕಟವಾಗಲು ಕಾರಣವಾದುದಕ್ಕೂ ಇದೇ ತುಡಿತ ಕಾರಣವೆಂದು ನಾನು ಭಾವಿಸಿದ್ದೇನೆ. ಮೊಗಸಾಲೆಯವರ ಪ್ರೋತ್ಸಾಹದಿಂದ ಕೃತಿ (ಕಥಾ ಸಂಕಲನ) ಪ್ರಕಟಿಸಿದವರಲ್ಲಿ ನನ್ನ ಸಹೋದರ, ಕತೆಗಾರ ಬಿ. ಸೀತಾರಾಮ ಭಟ್ ಕೂಡ ಒಬ್ಬರು.

ಮೊಗಸಾಲೆಯವರ ವ್ಯಕ್ತಿತ್ವವನ್ನು, ಅವರ ಜೀವನಕ್ರಮವನ್ನು, ಅವರ ಕ್ರಿಯಾಶೀಲತೆಯನ್ನು ಸಮೀಪದಿಂದ ಕಂಡವನಾಗಿ ನಾನು ಅವರನ್ನು ಅರ್ಥ ಮಾಡಿಕೊಂಡಿರುವುದು ಹೀಗೆ: ಮೊಗಸಾಲೆಯವರಿಗೆ, ಬದುಕಿಗೆ ಆದಷ್ಟು 'ಅರ್ಥ'ಗಳನ್ನು ತುಂಬುವ ಬಯಕೆ. ಬದುಕು ಅರ್ಥಶೂನ್ಯವಾಗಿ ವ್ಯರ್ಥವಾಗಿ ಸರಿದುಹೋಗುವುದನ್ನು ಅವರು ಸಹಿಸಲಾರರು. ಇದರಿಂದಾಗಿ ಅವರು ಸದಾ 'ಕಟ್ಟುವ' ಕ್ರಿಯೆಯಲ್ಲಿ ತೊಡಗಿರುತ್ತಾರೆ. ಸಂಘಗಳನ್ನು ಕಟ್ಟುವುದು; ಕಟ್ಟಡ ಕಟ್ಟುವುದು; ಕಾರ್ಯಕ್ರಮಗಳನ್ನು ಏರ್ಪಡಿಸುವುದು; ಸನ್ಮಾನಿಸುವುದು ಇತ್ಯಾದಿ. ಸಾಧನೆ ಮಾಡಿದವರನ್ನು ಗುರುತಿಸುವುದು, ಅಂದರೆ ಅವರ ಕೆಲಸ ಸಾರ್ಥಕವಾಗಿದೆ ಅನ್ನುವ

ಭಾವನೆಯನ್ನು ಮೂಡಿಸುವುದು ಮೊಗಸಾಲೆಯವರ ಈ ಎಲ್ಲ ಚಟುವಟಿಕೆಗಳ ಹಿಂದಿರುವ ವಿಶಾಲ ಮನಸ್ಸು. ಉದಾಹರಣೆಗೆ ಕಾಂತಾವರ 'ಕನ್ನಡ ಭವನ' ಜಿನರಾಜ ಹೆಗಡೆಯವರ 'ಸಾರ್ಥಕ' ಬದುಕಿನ ನೆನಪಿಗಾಗಿ ಕಟ್ಟಿರುವಂಥದು.

ಹೀಗೆ ತಾನು ಸದಾ ಚಟುವಟಿಕೆಯಿಂದಿರುತ್ತ, ಇನ್ನೊಬ್ಬರನ್ನೂ ಚಟುವಟಿಕೆಯಿಂದಿರಲು ಪ್ರೇರೇಪಿಸುವ ಡಾ. ನಾ. ಮೊಗಸಾಲೆಯವರದು ಅರ್ಥ ಮತ್ತು ಸಾರ್ಥಕತೆಗಳ ನಡುವೆ ಮಿಡಿಯುವ ಚೇತನ.

O

# ಮೊಗಸಾಲೆಯ ಬರಹಗಾರ...

ವೈದೇಹಿ

ಯಾವಾಗಿನಿಂದ ಬರೆಯುತ್ತಿದ್ದರು ಶ್ರೀ ನಾ. ಮೊಗಸಾಲೆ! ನಾವು ಕತೆ ಕಾದಂಬರಿ ಓದಲು ತೊಡಗಿದ ಕಾಲದಲ್ಲಿ ದ.ಕ. ಜಿಲ್ಲೆಯ ಪತ್ರಿಕೆಗಳಲ್ಲಿ ಅವರ ರಚನೆಗಳು ಅವ್ಯಾಹತವಾಗಿ ಬರುತ್ತಿದ್ದವೆಂದು ನೆನಪು. ರಾಜ್ಯ ಪತ್ರಿಕೆಗಳಲ್ಲಿಯೂ ಬರುತ್ತಿದ್ದುವೇನೋ. ಅವು ನಮಗೆ ನೋಡಲು ಸಿಗುತ್ತಿರಲಿಲ್ಲ. ಅಂತೂ ನಮಗೆ–ಓದುಗರಿಗೆ, ಮೊಗಸಾಲೆ ಅಂದರೆ ಕವಿ, ಕಥೆಗಾರ; ಅವರು ವೈದ್ಯರೂ ಹೌದು ಅಂತ ತಿಳಿದದ್ದು ಬಹಳ ಕಾಲದ ನಂತರ. ಆ ಹೆಸರಿನ ಹಿಂದೆ ಡಾ। ಅಂತ ಇದ್ದಿದ್ದರೂ. ಎಷ್ಟೋ ಸಲ ಮನಸ್ಸು ಹೀಗೇ ತಾನೆ–ಕೆಲ ವಿವರ ಮಾತ್ರ ಹೆಕ್ಕಿ ಅದು ಹೇಗೋ ಕಾರಣವೇ ಇಲ್ಲದೆ ಕೆಲ ವಿವರಗಳನ್ನು, ಅಲ್ಲೇ ಇದ್ದರೂ, ಕಂಡಿಲ್ಲ ಕೇಳಿಯೂ ಇಲ್ಲವೆಂಬಂತೆ ಬಿಟ್ಟುಬಿಡುತ್ತದೆ. ಎಂದೋ ಒಮ್ಮೆ ಗೋಚರಕ್ಕೆ ಬಂದಾಗ ಹೌದೆ ಅಂತ ಆಶ್ಚರ್ಯ ಪಡುತ್ತದೆ. ವಿಚಿತ್ರ!

ಪ್ರಥಮತಃ ಮೊಗಸಾಲೆಯವರನ್ನು ನೋಡಿದಾಗ ನನ್ನಲ್ಲಿ ದಾಖಲಾದದ್ದು ಅವರ ಮಾತಿನ ಉತ್ಸಾಹ. ಖುಷಿ. ಹೊಸಬರು ಅವರಲ್ಲಿ ಮೊದಲು ಗಮನಿಸುವುದು ಇದನ್ನೇ. ಖಂಡಿತ. ಮಾತೆಂದರೆ ಅದು ತನ್ನ ಕೃತಿಯನ್ನು ವಿವರಿಸುವುದರಲ್ಲಿರಬಹುದು. ಇನ್ನೊಬ್ಬರ ಕೃತಿಯ ಕುರಿತಿರಬಹುದು, ಇಡೀ ಸಾಹಿತ್ಯಲೋಕದ, ವಿಮರ್ಶಕರ, ಸಾಹಿತಿಗಳ ಕುರಿತು ತನಗಿರುವ ಪ್ರೀತಿ ಅಥವಾ ಸಿಟ್ಟೂ ಇರಬಹುದು, ತಾನು ಕಟ್ಟಿ ಬೆಳೆಸಿದ ಪೀಠ, ಸಂಘ ಸಂಸ್ಥೆಗಳ ಕುರಿತೂ ಇರಬಹುದು. ಯಾವುದನ್ನೂ ಅವರು ಸಂಕ್ಷಿಪ್ತವಾಗಿ ಹೇಳಿಕೊಳ್ಳಲಾರರು. ವಿವರಗಳ, ಸಮರ್ಥನೆಗಳ, ಘಟನಾವಳಿಗಳ ಸಮೇತ ಸೊಗಯಿಸುತ್ತ ಹೊರಡುವವರು. ಒಟ್ಟಾರೆ, ಸಾಹಿತ್ಯ ರಚನೆಯೊಂದಿಗೇ ಮಾತಿನ ಅಖಂಡ ಪ್ರೀತಿಯಿಂದ ಮೊಗಸಾಲೆ ಮಾತಿಗೆ ಶುರುಮಾಡಿದರೆಂದರೆ ಅದು ಅಡೆತಡೆಯಿಲ್ಲದೆ ಹರಿವ ಕನಸು, ಸಾಂಸಾರಿಕ ಸಾಮಾಜಿಕ ವಿದ್ಯಮಾನ, ಕಾರ್ಯ ಕರ್ತರ ವಿಮರ್ಶೆ. ಜಗತ್ತೆಲ್ಲ ಕಾಂತಾವರವೆಂಬ ಊರಲ್ಲಿ ಬೀಡುಬಿಟ್ಟಂತೆ. ಅಲ್ಲಿನ ಕನ್ನಡ ಸಂಘ, ಅದು ಕೊಡಮಾಡುವ ಪ್ರಶಸ್ತಿಗಳು ಜನಸಾಮಾನ್ಯರು, ಜನ ಅಸಾಮಾನ್ಯರು, ನಡುವೆ ತಾನು..... ಅಲ್ಲಲ್ಲಿ ಮಾತು ಕೊಚ್ಚಣಿಕೆಯಾಗಿ ಕಾಣುವ ಅಪಾಯವೂ ಹಣಕುತ್ತದೆ. ಆದರೆ ಅವರಂತೆ ಬರಿಗೈಯಲ್ಲಿ ಬರಿಊರಿಗೆ ಬಂದು ಅಲ್ಲಿನ ಶಾರೀರಿಕ ಮಾತ್ರವಲ್ಲ ಸಾಂಸ್ಕೃತಿಕ ಆರೋಗ್ಯಕ್ಕೂ ದುಡಿದು, ಜೊತೆಗೇ ತನ್ನ ಬದುಕನ್ನು ಕಟ್ಟಿ, ಸಂಘ ಕಟ್ಟಿ, ಕಥೆ ಕಾವ್ಯ ಸಾಹಿತ್ಯ,

ಸಭೆ ಸಮಾರಂಭ ಸಮ್ಮೇಳನ ಪ್ರಕಾಶನ ಅಂತ ಟೊಂಕ ಕಟ್ಟಿ ಶ್ರಮಿಸಿದವರ ಖಜಾನೆಯಲ್ಲಿ ಹೇಳಹೋದರೆ ಎಷ್ಟು ವಿಷಯಗಳು ಎಷ್ಟೆಲ್ಲಾ ಘಟನೆಗಳು ಇರುತ್ತವೆಯೋ, ಅದನ್ನೂ ವಿಚಾರಮಾಡಬೇಕಷ್ಟೆ?

ಮಾತಾಡುತ್ತಿದ್ದಂತೆ ಒಮ್ಮೊಮ್ಮೆ ಕಂಡದ್ದು ಕಂಡಂತೆ ಆಡಿಬಿಡುವವರಂತೆಯೂ ಕಾಣುತ್ತಾರೆ ಅವರು. ಒಮ್ಮೊಮ್ಮೆ ಕಂಡರೂ ಕಾಣದವರಂತೆ ಮಾತು ಬೀಸುವವರಾಗಿಯೂ. ಹಾಗೆ ಒಮ್ಮೆ ಅವರಿಗೂ ನನಗೂ ಒಂದು ವೇದಿಕೆಯ ಮೇಲೆ ಚಕಮಕಿಯಾಗಿತ್ತು. ಅದು ನನ್ನಣ್ಣ ಎ.ಎಸ್.ಎನ್. ಹೆಬ್ಬಾರರ ಷಷ್ಟ್ಯಬ್ಧಿ ಪೂರ್ತಿ ಸಮಾರಂಭದ ಪ್ರಯುಕ್ತ ನಡೆದ ಒಂದು ಸಂವಾದದಲ್ಲಿ. ಅವರ ಮಾತು ಒಪ್ಪದೆ ನಾನು ಪ್ರತಿ ವಾದ ಮಾಡಿದೆ. ಹಾಗಂತ ಅವರು ಕಹಿಗೊಳ್ಳಲಿಲ್ಲ. ಕಹಿಗೊಳ್ಳದಿರುವುದು ಅವರ ಗುಣಗಳಲ್ಲೊಂದು ಅಂತ ಕೇಳಿದ್ದೇನೆ. ಒಬ್ಬ ಸಂಘಟಕನ ಅಥವಾ ಸಂಸ್ಥೆಯನ್ನು ಕಟ್ಟಿ ಬೆಳೆಸುವವನ ಮನೋಹಿನ್ನೆಲೆಯಲ್ಲಿ ಇರಲೇಬೇಕಾದ ಗುಣವಷ್ಟೇ ಇದು? ಒಮ್ಮೆ ಕಾಂತಾವರದಲ್ಲಿ ನಡೆದ ಒಂದು ಸಮ್ಮೇಳನಕ್ಕೆ ಕರೆದಿದ್ದರು. ಹೋಗಿದ್ದೆ. ಹೋದರೆ ಅವರೆಲ್ಲಿ? ಎಷ್ಟೋ ಹೊತ್ತಿನ ಮೇಲೆ ಬಂದು 'ಹೊ ಬಂದಿದ್ದೀರ? ಸಮಾಧಾನವಾಯಿತು' ಎಂದರು. ಎಂದವರು ಥಟಥಟನೆ ಮಾಯವಾದರು. ಥೇಟ್ ಮದುವೆಮನೆ ಯಜಮಾನನ ಗಮ್ಮತ್ತೈಲ್ ಗಡಿಬಿಡಿ ಮೂರ್ತಿಯಂತೆ. ತಪ್ಪು ತಿಳಿಯುವಂತಿಲ್ಲ. ವ್ಯಕ್ತಿ ಹೇಗೆಂತ ಗೊತ್ತಿದ್ದ ಮೇಲೆ ತಪ್ಪು ತಿಳಿಯುವುದೇ ತಪ್ಪಷ್ಟೇ?.... ವರ್ಧಮಾನ ಉದಯೋನ್ಮುಖ ಪುರಸ್ಕಾರ ನೀಡುವ ಸಮಾರಂಭದಲ್ಲಿ ಉತ್ಸಾಹದಿಂದ ಬರಮಾಡಿಕೊಂಡದ್ದೂ ನೆನಪಾಗುತ್ತಿದೆ. ವಿಸ್ತೃತವಾಗಿ ಭಾಷಣ ಮಾಡಿ, ಪುರಸ್ಕಾರ ನಿರ್ಣಯಿಸಿದವರ ತೀರ್ಪುಪತ್ರವನ್ನು ಸಭೆಯ ಮುಂದೆ ಹೆಮ್ಮೆಯಿಂದ ಓದಿಹೇಳಿದ್ದು, ತೋರಿದ ಅಭಿಮಾನ–ಎಲ್ಲವೂ.

ಅವರು ರಚಿಸಿದ ಸಾಹಿತ್ಯದಲ್ಲಿ ನನಗೆ ಹೆಚ್ಚು ಇಷ್ಟವಾದದ್ದು ಇತ್ತೀಚೆಗಷ್ಟೇ ಬಂದಿರುವ ಆತ್ಮಕಥನ 'ಬಯಲು ಬೆಟ್ಟ' ಅಂದರೆ ಅವರ ಇತರ ಕೃತಿಗಳು ಅಮುಖ್ಯವೆಂದಲ್ಲ. ಸಾಮಾನ್ಯವಾಗಿ ಆತ್ಮಕಥನದ ಚೌಕಟ್ಟಿನಲ್ಲಿ ಒಂದು ಕಾಲದ ವ್ಯಕ್ತಿ ವ್ಯಕ್ತಿತ್ವ ಸಾಮಾಜಿಕ ಆರ್ಥಿಕ ಲೌಕಿಕ ಚಿತ್ರಣಗಳೆಲ್ಲ ಕೃತಿಕಾರ ಉದ್ದೇಶಪಟ್ಟು ಕರೆಯದೆಯೂ ತಾವಾಗಿ ಬಂದು ಸೇರಿಕೊಳ್ಳುತ್ತವೆ. ಬಂದವುಗಳನ್ನು ಬಂದಂತೆಯೆ ಚೆಲ್ಲಾಪಿಲ್ಲಿ ಸೇರಿಸಿಕೊಳ್ಳುವಂತಿದೆಯೇ? ಇಲ್ಲ. ಅಂತಿದ್ದರೆ ಅವನ್ನು ಸೇರಿಸಿಕೊಳ್ಳುವ ಬಗೆ ಹೇಗೆ? ನಿರ್ಣಯ ಕೃತಿಕಾರನಿಗೆ ಬಿಟ್ಟದ್ದು. ಈ ದೃಷ್ಟಿಯಿಂದ ಬಯಲು ಬೆಟ್ಟದಲ್ಲಿ ಮೊಗಸಾಲೆಯವರ ಕಥನ ಕೌಶಲ, ಕಾವ್ಯ ಕೌಶಲಗಳೆರಡೂ ತಮ್ಮನ್ನು ತಾವೇ ಮೀರಿವೆ. ಭಾಷಾ ಕೌಶಲವೂ ವಿಶೇಷವಾಗಿ ಕೃತಿಯ ಮೊದಲ ಪುಟಗಳಲ್ಲಿ, ಅವರ ಬಾಲ್ಯದ ಆದಿನಗಳ ವರ್ಣನೆಯಲ್ಲಿ. ಹೊಟ್ಟೆಪಾಡಿಗಾಗಿ ನಗರಾಭಿಮುಖವಾಗಿ ನಿಂತ ಹಳ್ಳಿಚಿತ್ರಗಳು, ಹೇಗಾದರೂ ಮಾಡಿ ಮಕ್ಕಳನ್ನು ಓದಿಸಿ "ಮುಂದೆ" ತರುವ ಹಂಬಲ ಹೊತ್ತವರು, ಶಿಕ್ಷಣಕ್ಕಾಗಿ ಊರುಬಿಟ್ಟು ದೂರ ಹೋಗಬೇಕಾದ ಪರಿಸ್ಥಿತಿ, ಅದರ ಸಾಧ್ಯಾಸಾಧ್ಯತೆಗಾಗಿ ಮನೆಯಲ್ಲಿ ನಡೆಯುವ ಚಿಂತೆ ಚಿಂತನೆಗಳು, ಮದುವೆಯಾಗಿ ಹೋಗುವ ಮಗಳು, ಶಿಕ್ಷಣಕ್ಕಾಗಿ ಹೊರಡುವ ಮಗ. ಅಂದಿನ ಬಡತನ, ಮಾನಸಿಕ ಸಿರಿತನ, ದುಡ್ಡಿಗಿಂತ

ಮರ್ಯಾದೆ ಮತ್ತು ಪ್ರೀತಿಗಿರುವ ಪ್ರಾಮುಖ್ಯತೆ.... ಮಕ್ಕಳ ಊಟ ಮತ್ತು ವಸತಿಯ ಒಂದು ಸರಳ ವ್ಯವಸ್ಥೆಗೂ ಹೆತ್ತವರು ಎಷ್ಟೆಲ್ಲ ಕಷ್ಟಪಟ್ಟರು!......

ಸಾಮಾನ್ಯವಾಗಿ ಬಾಲ್ಯಕಾಲದಲ್ಲಿ ಬರುವ ಪ್ರೀತಿಸುವ ಅಥವಾ ಹಿಂಸಿಸುವ ವ್ಯಕ್ತಿಗಳು ಎಲ್ಲರಿಗೂ ಪರಿಚಿತರೇ ಆಗಿರುತ್ತಾರೆ. ಮೊಗಸಾಲೆಯವರ ಆತ್ಮಕಥನದಲ್ಲಿಯೂ ಹೀಗೆಯೇ. ಮಮತೆಯ ಸಾಕಾರಚೇತನರು ಅನೇಕ ಮಂದಿ ಕಾಣಿಸುತ್ತಾರೆ. ಅವರ ಪುಟ್ಟತ್ತೆ, ಮಾಪಣ್ಣ, ಕೇಚಣ್ಣ ಮುಂತಾದವರೆಲ್ಲ ನಮಗೂ ಆಪ್ತರೇ.

ಅಚ್ಚರಿಯೆಂದರೆ ಈ ಕಥನದಲ್ಲಿ ತೀರಾ 'ಕೆಟ್ಟವರು' ಕಡಿಮೆ. ಅಥವಾ ಅವರ ನೆನಪಿನಲ್ಲಿಲ್ಲವೋ. ಅದರಲ್ಲಿ ಅವರು ತಿಳಿಸಿದ ಹಳ್ಳಿಗಳ ಹೆಸರುಗಳೋ! ಇದುವರೆಗೆ ಕೇಳಿಯೇ ಇಲ್ಲ ಎಂದು ಉದ್ಗರಿಸುವಂತೆ! ಸಾರ್ಕುಡೇಲು, ಕೊಮ್ಮೆ, ಪುಳು, ಕಿನಿಲ ಮುಂತಾಗಿ ಯಾವುದೋ ದೇಶದ ಹೆಸರುಗಳಂತಿರುವ ಇವುಗಳ ಜೊತೆ ತೀರಾ ದೇಸಿಕನ್ನಡ ಅನಿಸುವ ಅವರ ಹಳ್ಳಿಯ 'ಮೊಗಸಾಲೆ' ಎಂಬ ಹೆಸರು! ಅದನ್ನು ಕೇಳಿದ್ದೂ ಅವರಲ್ಲಿ ಮಾತ್ರ ! ಮತ್ತು, ಕಾಂತಾವರವೆಂಬ ಕೇಳರಿಯದ ಹೆಸರಾದರೂ ಇವತ್ತು ಎದ್ದುಬಂದದ್ದೇ ಮೊಗಸಾಲೆಯವರಿಂದಾಗಿ ಅಷ್ಟೆ? ಮೊಗಸಾಲೆ ಎಂದರೆ ಕಾಂತಾವರ ನೆನಪಾಗಬೇಕು, ಹಾಗೆ.



ಹಾಗೆ ನೋಡಿದರೆ 'ಬಯಲುಬೆಟ್ಟ' ದಲ್ಲಿ ವ್ಯಕ್ತಿಚಿತ್ರಗಳ ಪ್ರವಾಹವೇ ಇದೆ. 'ನಾನು' ಎಂಬುದಿದ್ದರೂ ಅದು ಗೌಣವಾಗುವಷ್ಟು ಮಂದಿ ಸಮೂಹವಿದೆ. ಮಂದಿಯ ಸುತ್ತ ಓಡಾಡುತ್ತ ಲೇಖಕ ಅವರನ್ನೆಲ್ಲ ನಮಗೆ ತೋರಿಸುತ್ತಿದ್ದಾರೆ. ವರ್ಣನೆ, ವಿಶ್ಲೇಷಣೆ ಮಾಡುತ್ತಿದ್ದಾರೆ. ಬರಬರುತ್ತಾ ಅವರೆಲ್ಲ ಕಾದಂಬರಿಯ ಪಾತ್ರಗಳಂತೆ ನಮಗೆ ಕಾಣತೊಡಗುತ್ತಾರೆ. ಅಂದಿನ ಮಠದ ಪರಿಸರ, ಸಾಹಿತ್ಯ ಪರಿಸರ, ಪತ್ರಿಕೆಗಳು, ವಿದ್ಯಾರ್ಥಿಜಗತ್ತು, ಆಗಿನ್ನೂ ಕಣ್ಣುಬಿಡುತ್ತಿರುವ ಮಣಿಪಾಲ – ಹೀಗೆ ಈ ಜಿಲ್ಲೆ ಹಾಗೂ ಜಿಲ್ಲೆಯಾಚೆಗಿನ ಪ್ರದೇಶಗಳನ್ನು ಸವರಿ ದಾಟಿ ಹೋದ ಒಂದು ಕಾಲ-ಸಂದರ್ಭಗಳ ಯಥಾವತ್ ಚರಿತ್ರೆಯಂತೆ ಈ ಕೃತಿ ಓದಿಸಿಕೊಳ್ಳುತ್ತದೆ. ಅಷ್ಟೇ ಅಲ್ಲ. ಲೇಖಕ ತನ್ನೊಂದಿಗೇ ಬೆಳೆದು ಬಂದ, ನಡುವಿನಲ್ಲೇ ಮಾಯವಾದ, ಬರಹಗಾರರ ಗಡಣವನ್ನೂ ತಿಳಿಸುತ್ತಾರೆ. ಆತ್ಮವೆಂಬುದು ಕೇವಲ ಅದಾಗಿಯೇ ಇರೂದಲ್ಲ. ಅದು ಸ್ವಂತದ ಮಾತ್ರವಲ್ಲ, ಸ್ವಂತದಲ್ಲದ್ದನ್ನೂ ತನ್ನ ಸ್ಮೃತಿಯಲ್ಲಿ ಹೀರಿಕೊಂಡಿರುತ್ತದೆ. ಅವುಗಳನ್ನು ಸಂಸ್ಕರಿಸಿ ಬಾಹ್ಯಾಂತರಂಗದಲ್ಲಿ ಲೀಲೆಯಾಡುತ್ತದೆ. ಅದು ಪ್ರಾಮಾಣಿಕವಾದಲ್ಲಿ ಸಾರ್ವತ್ರಿಕವಾಗಿ ತಲುಪುತ್ತದೆ...... ಒಂದು ದೃಶ್ಯದಲ್ಲಿ ಸ್ವಂತದ್ದು – ಸ್ವಂತದಲ್ಲದ್ದು ಎಂಬುದೇ ಮಿಥ್ಯೆಯಷ್ಟೇ!

ಹಳ್ಳಿಯಲ್ಲಿ ಹುಟ್ಟಿಬೆಳೆದು ಇನ್ನೊಂದು ಹಳ್ಳಿಗೆ ಉದ್ಯೋಗದ ಮೂಲಕ ಬಂದು ಸೇರಿದ ವ್ಯಕ್ತಿಯೊಬ್ಬ ವೃತ್ತಿನಿಷ್ಠೆಯಿಂದಿದ್ದು, ಅಲ್ಲಿ ಸ್ವಂತಬದುಕನ್ನು ಸಾಧ್ಯವಾಗಿಸಿಕೊಂಡು ಊರಿನ ಜನಜೀವನ ಪ್ರಕೃತಿಯೊಂದಿಗೆ ಗೌರವಾದರದಿಂದ ಹೊಂದಿಕೊಂಡು, ತನ್ನ ಪ್ರವೃತ್ತಿಗೂ ಶ್ರದ್ಧಾಪೂರ್ವಕ ಶರಣಾಗಿ ಕ್ರಿಯಾಶೀಲನಾದ ಕಥನ ಮೊಗಸಾಲೆಯವರದು. ಈ ಶ್ರದ್ಧೆ ಅವರನ್ನು ಸೃಜನಶೀಲ ಬರವಣಿಗೆಗೆ ಮಾತ್ರವಲ್ಲ, ಸದಾ ಹೊಸಹೊಸ ಮಹತ್ವಾಕಾಂಕ್ಷೀ

ಯೋಜನೆಗಳನ್ನು ಹುಟ್ಟುಹಾಕಲೂ ಪ್ರೇರಣೆ ನೀಡುತ್ತ ನಿತ್ಯ ಚಟುವಟಿಕೆಯ ಲೇಖಕನನ್ನಾಗಿ ಕಡೆದಿದೆ. ತಾನಿರುವ ಊರು 'ಅಹಮಸ್ಮಿ' ಎನ್ನುವಂತೆ ಮಾಡುವ ಪ್ರಕ್ರಿಯೆಯಲ್ಲಿ ಮೊಗಸಾಲೆಯವರ ಸಾಹಿತ್ಯಿಕ ಪ್ರತಿಭೆಯ ಪಾಲು ಬಹಳವಿದೆ.

o

# ಸೃಜನಶೀಲ ಸಂಘಟಕ.....

ಡಾ. ಜಯಪ್ರಕಾಶ ಮಾವಿನಕುಳಿ.

ಡಾ॥ನಾ. ಮೊಗಸಾಲೆಯವರು ನನಗೆ ಬಹಳ ವರುಷಗಳಿಂದಲೂ ಗೊತ್ತು. ಅವರ ಹೆಸರು ಪತ್ರಿಕೆಯಲ್ಲಿ ಸಾಹಿತ್ಯಕ ವಿಷಯಗಳ ಬಗ್ಗೆ- ಕಥೆ, ಕವಿತೆಗಳು ಹೀಗೆ ರಾರಾಜಿಸುತ್ತಿತ್ತು. ಅವರ ಹೆಸರು ನನ್ನ ಮನಸ್ಸಿನಲ್ಲಿ ಮೂಡಿ ಎಷ್ಟೋ ವರುಷಗಳ ನಂತರ ಅವರನ್ನು ನಾನು ವ್ಯೆಯಕ್ತಿಕವಾಗಿ ಭೇಟಿಮಾಡಿದ್ದು..... ನಂತರ ಅವರ ಗೆಳೆತನದ ಲೋಕದಲ್ಲಿ ನಾನು ವಿಹರಿಸಿದ್ದೇನೆ.....

ಅವರನ್ನು ನಾನು ಗೌರವಿಸುವುದು ಈ ಎರಡು ಕಾರಣಕ್ಕಾಗಿ-

ಒಂದು – ಸೃಜನಶೀಲತೆಗಾಗಿ

ಎರಡು – ಸಂಘಟನೆಗಾಗಿ

* * * * *

ಅವರು ತಮ್ಮ ಕಥೆ, ಕವಿತೆ, ಕಾದಂಬರಿಗಳಿಂದ ಕನ್ನಡ ಸಹೃದಯರನ್ನು ತಲುಪಿದ್ದಾರೆ. ಅವರ ಬರಹಗಳಲ್ಲಿನ ವೈಶಿಷ್ಟ್ಯತೆಯನ್ನು ಜನ ಗುರುತಿಸಿದ್ದಾರೆ; ಗೌರವಿಸಿದ್ದಾರೆ, ಪ್ರೋತ್ಸಾಹಿಸಿದ್ದಾರೆ. ಕೆಲವರು 'ಮಾಧ್ಯಮ ಇರ್ದೆ' ಎಂದು ಗುರುತಿಸಿಕೊಳ್ಳುತ್ತಾರೆ. ಅದರಲ್ಲೇ ಅವರು ತಮ್ಮ ಸಾಹಿತ್ಯ ಮೋಕ್ಷವನ್ನು ಕಂಡುಕೊಳ್ಳುತ್ತಾರೆ. ಅವರು ಆಧ್ಯಾತ್ಮದಲ್ಲಿಯೇ ತಮ್ಮ ಸಾಹಿತ್ಯ ಸಾಧನೆ ಮಾಡಿ ಸಿದ್ಧಿಪಡೆದುಕೊಳ್ಳುತ್ತಾರೆ. ಅಂದರೆ ಬೇರೆ ಬೇರೆ ಪ್ರಕಾರಗಳಲ್ಲಿ ಕೆಲಸ ಮಾಡುವುದಿಲ್ಲ ಎಂದು ನನ್ನ ಅನಿಸಿಕೆ ಅಲ್ಲ. ಆದರೆ ಅವರ ಸಾರ್ಥಕ್ಯ ಇರುವುದು ಒಂದು ಮಾಧ್ಯಮದಲ್ಲಿ. ಆದರೆ ಮೊಗಸಾಲೆಯವರದು ವಿಚಿತ್ರ, ವಿವಿಧ ಪ್ರಕಾರಗಳಲ್ಲಿ ನಿರಂತರವಾಗಿ ಕೆಲಸಮಾಡುತ್ತಲೇ ಬಂದಿದ್ದಾರೆ; ಬರುತ್ತಿದ್ದಾರೆ....ಹೀಗೆ ಮಾಡಿದ ಪ್ರತೀ ಪ್ರಕಾರದಲ್ಲೂ ಅವರ ಛಾಪು ಇದೆ; ಇದನ್ನು ನಾಡಿನ ಸಹೃದಯರು, ವಿಮರ್ಶಕರು ಗುರುತಿಸಿದ್ದಾರೆ.

ಇನ್ನೊಂದು ನಾನು ಎತ್ತಿಕೊಳ್ಳುವ ಮುಖ್ಯ ವಿಷಯ ಎಂದರೆ ಜಾಗತೀಕರಣ. ಇವತ್ತು ಭಾಷೆಯ ಪ್ರಶ್ನೆ ಇದೆ. ನಾವು, ವಿದ್ಯಾರ್ಥಿಗಳು ಆಂಗ್ಲಭಾಷೆ ಕಲಿಯದಿದ್ದರೆ ಬದುಕೇ ಶೂನ್ಯವಾಗುತ್ತದೆ ಎಂಬ ಲೋಕನಿಯಮ ಬಂದಿದೆ. ಹಾಗಾದರೆ ಆಡುಭಾಷೆಯ, ನಾಡಿನ ನುಡಿಯ ಭವಿಷ್ಯವೇನು? ಶಾಸ್ತ್ರೀಯ ಭಾಷೆಯ ಸ್ಥಾನಕ್ಕಾಗಿ ಹೋರಾಡುತ್ತಿರುವ ಈ

ಸಂದರ್ಭದಲ್ಲಿ ಮಾತನಾಡುವವರೇ ಇಲ್ಲವಾಗಿಬಿಡಬಹುದೇ? ಎಂಥ ವಿಪರ್ಯಾಸ ನೋಡಿ. ಮಾತನಾಡುವವರೇ ಇಲ್ಲ ಎಂದರೆ – ಬರಹ, ಮಾಧ್ಯಮ ಎಲ್ಲಾ ಕನ್ನಡಮಯವಾಗುವುದರ ಬದಲು – ಅನ್ಯ ಭಾಷೆಯ ಪಾಲಾಗಿಬಿಡುತ್ತದೆ ಎಂಬ ಗುಮಾನಿ ನನಗೆ. ಹಾಗಾದರೆ ಈ ಜಾಗತೀಕರಣದ ಶಾಪವನ್ನು ತಡೆಹಿಡಿಯುವ ಬಗೆ ಹೇಗೆ?

ಗಾಂಧಿ ಹೇಳಿದರು – 'ಭಾರತದ ಆತ್ಮ ಇರುವುದು ಹಳ್ಳಿಗಳಲ್ಲಿ'. ಇದನ್ನು ಬಹುಶಃ ಮೊಗಸಾಲೆಯವರು ಅರಿತಿರಬಹುದು ಅಥವಾ ಅವರಿಗೆ ಅನಿವಾರ್ಯವಾಗಿದ್ದಿರಬಹುದು. ಹೀಗಾಗಿ ಮೊಗಸಾಲೆಯಂಥವರು ಮಾಡುವ ಎಷ್ಟೇ ಸಣ್ಣ ಸಾಹಿತ್ಯಿಕ ಕಾರ್ಯಕ್ರಮವೂ ನನಗೆ ಬಹು ಮುಖ್ಯ ಎನಿಸುತ್ತದೆ ಮತ್ತು ಇಂಥ ಹಳ್ಳಿಯ ಸಣ್ಣ ಸಣ್ಣ ಕಾರ್ಯಕ್ರಮದಿಂದಾಗಿಯೇ ಈ ನಾಡಿನ ಭಾಷೆ, ಸಾಹಿತ್ಯ ಉಳಿಯುತ್ತದೆ ಎಂದು ನಾನು ನಂಬಿದ್ದೇನೆ.

ನನಗೆ ಗೊತ್ತು – ಮೊಗಸಾಲೆಯವರಿಗೂ ಗೊತ್ತು. ನಗರಗಳಲ್ಲಿ ಮುಖ್ಯವಾಗಿ ರಾಜಧಾನಿಯಲ್ಲಿ ಮಾಡುವ ಅತ್ಯಂತ ಕನಿಷ್ಠ ಕಾರ್ಯಕ್ರಮವೂ ಮಾಧ್ಯಮಗಳ ಬೆಂಬಲದಿಂದ ಪರಿಚಾಲನ ಕಾರ್ಯಕ್ರಮವಾಗಿ ರೂಪುಗೊಂಡುಬಿಡುತ್ತದೆ! ನಗರಗಳಲ್ಲಿ ಸಂಪನ್ಮೂಲ ಕ್ರೋಢೀಕರಿಸಿಕೊಳ್ಳುವ ಶಕ್ತಿ ಇದೆ. ಸಂಪರ್ಕ ಸಾಧನೆಗಳಿವೆ. ಸುಸಜ್ಜಿತ ಸಭಾಂಗಣಗಳಿರುತ್ತವೆ. ಆದರೆ ಹಳ್ಳಿಗಳ ಕಥೆ........ ಈಗಲೇ ಹೀಗಾದರೆ ಮೊಗಸಾಲೆಯವರು 1965ರಲ್ಲಿ ಕಾರ್ಕಳ ತಾಲ್ಲೂಕಿನ ಕಾಂತಾವರಕ್ಕೆ ಬಂದಾಗ ಹೇಗಿರಬಹುದು.....

ಹಾಗೇ ಇತ್ತು.

ಆದರೆ ಮೊಗಸಾಲೆಯವರ ಸಂಘಟನಾ ಚಾತುರ್ಯದಿಂದ ಈ ನಲವತ್ತು ವರುಷ ಅವರು ಹೆಣಗಿದ್ದು ಅವರಿಗೇ ಪ್ರೀತಿ. ಹೀಗಾಗಿ ಕಾಂತಾವರ –ಮೊಗಸಾಲೆ ಐಕ್ಯತೆಯನ್ನು ಕಂಡರು. ಜಾಗತೀಕರಣವನ್ನು, ನಗರದ ಹಲ್ಲೆಯನ್ನು ನಿರಾತಂಕವಾಗಿ ಎದುರಿಸುತ್ತಾ ಬಂದವರು. ಇದನ್ನೇ ನಾನು ಕ್ರಿಯಾಶೀಲ ಸಂಘಟನೆ ಎಂದಿದ್ದು.

ಇಷ್ಟೇ ಆದರೂ ಇದು ಬಹಿರಂಗದ ಆಲಾಪನೆ. ಆದರೆ ಅಂತರಂಗದ ಆಲಾಪನೆ? ಅದು ಅವರ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಬರೆಯಲು ಹುಮ್ಮಸ್ಸಿನಿಂದ ಬರೆಯುವುದಕ್ಕೆ ಸಾಧ್ಯವಾಯಿತು. ಹೀಗಾಗಿ 14 ಕಾದಂಬರಿಗಳು, 3 ಕಥಾಸಂಕಲನಗಳು, ಎಂಟು ಕವಿತಾ ಸಂಗ್ರಹಗಳು, 6 ವೈದ್ಯಕೀಯ ಕೃತಿಗಳನ್ನು ರಚಿಸಲು ಸಾಧ್ಯವಾಯಿತು.

ಮೊಗಸಾಲೆ ಅಂಥವರು ಕಾಂತಾವರದ ಮೊಗಸಾಲೆ ಅಲ್ಲ. ಅವರು ಕನ್ನಡ ನಾಡಿನ ಮೊಗಸಾಲೆ. ಇಂಥವರಿಂದಲೇ ನಾಡಿನ ನುಡಿ ಉಳಿಯುತ್ತದೆ ಎಂದು ಗಾಢವಾಗಿ ನಂಬಿದ್ದೇನೆ. ಅವರ ಹುಮ್ಮಸ್ಸು ಕರಗದಿರಲಿ.....

ಉತ್ಸಾಹ ಹೆಚ್ಚಲಿ

ಚಟುವಟಿಕೆ ನೂರಾರು ಹುಟ್ಟಲಿ.....

ನಿತ್ಯವೂ ಹಬ್ಬವಾಗಲಿ.

O

# ಕಾಂತಾವರದೊಳಗೊಂದು 'ಮೊಗಸಾಲೆ'

ವಿಷ್ಣು ನಾಯ್ಕ

'ಕಾಂತಾವರ' – ಇದು ಕೇಳುತ್ತಲೇ ಇರಬೇಕೆಂಬಷ್ಟು ಸಂತೋಷ ಕೊಡುವ ಪದ. ಆ ಊರಿಗೆ ಆ ಹೆಸರು ಹೇಗೆ ಬಂತೋ ! ಯಾರು ಇಟ್ಟರೋ! ನಿಜಿಡ 'ಕಾಂತಾರ'ಕ್ಕೊಂದು 'ವರ' ಎಂಬಂತೆ ಆ ಪುಟ್ಟ ಗ್ರಾಮ ತಾನೂ ಬೆಳಗಿ ಲೋಕಕ್ಕೆಲ್ಲ ಬೆಳಕು ಹಂಚುತ್ತಿರುವುದಂತೂ ನಿಜ. ಅಲ್ಲೊಂದು ಜೀವಜಗತ್ತನ್ನು ಪ್ರೀತಿಸುವ 'ಮೊಗಸಾಲೆ'! ಆ ಮೊಗಸಾಲೆಯ ಹಿಂದೆ ಒಬ್ಬ ನಾರಾಯಣ. ಆ ನಾರಾಯಣನ ಸಂಪರ್ಕಕ್ಕೆ ಬಂದವರಿಗೆ ಮಾತ್ರ ಆ ಮೊಗಸಾಲೆಯ ತಂಪು–ಕಂಪು ಏನೆಂಬುದು ಗೊತ್ತು.

ನಾನು ಬಹಳಷ್ಟು ಸಲ ನನ್ನಷ್ಟಕ್ಕೆ ಯೋಚಿಸಿದ್ದುಂಟು: ಪಿಎಚ್.ಡಿಗಾಗಿ ವಿಷಯಗಳ ಹುಡುಕಾಟದಲ್ಲೇ ಅರ್ಧ ಹೈರಾಣಾಗುತ್ತಿರುವ ನಮ್ಮ ಸಂಶೋಧನ ವಿದ್ಯಾರ್ಥಿ ಮಿತ್ರರಿಗೆ – ಅದು ಯಾಕೆ ಇದುವರೆಗೂ ಕಾಂತಾವರದಂಥ ಆರದ ಕೈದೀಪ, ಮೊಗಸಾಲೆಯಂಥ ತಂಪುಕೊಡುವ ಕೈಗಂಬಗಳು ಕಣ್ಣಿಗೆ ಬೀಳುತ್ತಿಲ್ಲ? ....ಒಂದಲ್ಲಾ ಎರಡು ಪಿ.ಎಚ್.ಡಿಗೆ ಸಾಲುವಷ್ಟು ಸಾಮಗ್ರಿ ಅಲ್ಲಿರುವುದನ್ನು ಯಾವುದೇ ಸೂಕ್ಷ್ಮ ಮನಸ್ಸು ಕಂಡುಕೊಳ್ಳಬಹುದಾಗಿದೆ. ಒಂದು ಊರಿನ ಲೋಕಪ್ರಖ್ಯಾತಿಗೆ ಒಬ್ಬನೇ ಒಬ್ಬ ವ್ಯಕ್ತಿ ಸಾಕು ಎನ್ನುತ್ತೇವೆ. ಕರ್ನಾಟಕದಲ್ಲೂ ಅಂಥ ಊರುಗಳಿವೆ. ಹೆಗ್ಗೋಡಿನಂಥ ಒಂದು ಕುಗ್ರಾಮ ಜಗತ್ತಿನ ನಕಾಶೆಯಲ್ಲಿ ಮಿಂಚುವ ನಕ್ಷತ್ರವಾಗಿರುವುದು ಯಾರಿಗೆ ಗೊತ್ತಿಲ್ಲ?...... ಹಾಗೆಯೇ ಕಾಂತಾವರವೂ ಕೂಡ!... ಸುಬ್ಬಣ್ಣನವರ ಮತ್ತು ಮೊಗಸಾಲೆಯವರ ಆಯ್ಕೆ– ಆಸಕ್ತಿಗಳಲ್ಲಿ ಮತ್ತು ಕಸಬುಗಾರಿಕೆಯಲ್ಲಿ ವ್ಯತ್ಯಾಸಗಳಿದ್ದಿರಬಹುದು. ಆದರೆ ಇವರಿಬ್ಬರೂ ತಮ್ಮ ತಮ್ಮ ಆಸಕ್ತಿಯ ಕ್ಷೇತ್ರಗಳಲ್ಲಿ ದಾಖಲಿಸಿದ ಸಾಧನೆ ಅಸಾಮಾನ್ಯದ್ದೆಂಬುದರಲ್ಲಿ ಎರಡು ಮಾತಿಲ್ಲ.

ವೃತ್ತಿಯಲ್ಲಿ ವೈದ್ಯ, ಪ್ರವೃತ್ತಿಯಲ್ಲಿ ಬರಹಗಾರ. ಇದಿಷ್ಟೇ ಆಗಿದ್ದರೆ 'ಇದೇನು ಮಹಾ?' ಎಂದು ಕೇಳಬಹುದಾಗಿತ್ತೋ ಏನೋ. ತಾನು ಬೆಳೆಯುವುದರ ಜೊತೆಗೆ ತನ್ನ ಓರಿಗೆಯವರನ್ನು ಮತ್ತು ತನ್ನ ನಂತರ ಪೀಳಿಗೆಯನ್ನು ಬೆಳೆಯುವಂತೆ ನೋಡಿಕೊಂಡದ್ದು ಒಂದು ವಿಶೇಷ ಸಂಗತಿ. ಒಬ್ಬ ಲೇಖಕ ಅದ್ಭುತ ಸಂಘಟಕನೂ ಆಗಿರುವುದು ಒಂದು ಪ್ರದೇಶದ ಭಾಗ್ಯವಿಶೇಷವೆನ್ನಬೇಕು. ಮೊಗಸಾಲೆಯವರನ್ನು ಪಡೆದ ಪ್ರದೇಶಕ್ಕೆ ಆ ಅದೃಷ್ಟ ಪ್ರಾಪ್ತವಾಗಿದೆ. ಎಷ್ಟೊಂದು ಪ್ರಶಸ್ತಿಗಳು ಅಲ್ಲಿಂದ ಹೊರಬಂದವು! ಎಷ್ಟೆಲ್ಲಾ ಸಾಹಿತಿ– ಕಲಾವಿದರು ಆ

ನೆಲದ ಪ್ರೇರಣೆಯಿಂದ ಬಂದರು! ದುರ್ದೈವದಿಂದ ಇವೆಲ್ಲ ನಮ್ಮ ಕಾನೇಸುಮಾರಿ ಲೆಕ್ಕಕ್ಕೆ ಬರುವುದೇ ಇಲ್ಲ.

ನಾ.ಮೊಗಸಾಲೆ ಮತ್ತು ನನ್ನ ನಡುವಿನ ಭಾವನಾತ್ಮಕ ಸಂಬಂಧ ಬಹುಕಾಲದವರೆಗೆ ಪತ್ರಮುಖೇನವೇ ಇತ್ತೇ ಹೊರತು ಮುಖಾಮುಖಿ ಭೇಟಿ, ನಿಕಟ ಒಡನಾಟ ಇವೆಲ್ಲ ಇತ್ತೀಚಿನ ಒಂದು– ಒಂದೂವರೆ ದಶಕದಷ್ಟೆ. ವಯಸ್ಸಿನಲ್ಲಿ ನಾವಿಬ್ಬರೂ ಸಮಾನರು. ಇಬ್ಬರೂ 1944ರಲ್ಲಿ ಹುಟ್ಟಿದವರೇ. ಬಹಳ ಚೌಕಾಶಿ ಮಾಡಿ ಹೇಳುವುದಾದರೆ ಮೊಗಸಾಲೆಯವರಿಗಿಂತ ನಾನು ಐವತ್ತೆಂಟು ದಿನಗಳಷ್ಟು ಹಿರಿಯವನು. ನಾನು ಜುಲೈ 1ರಂದು ಬಂದೆ; ಅವರು ಆಗಸ್ಟ್ 27ರಂದು ಹುಟ್ಟಿದರು. ಬರವಣಿಗೆಯ ಆರಂಭ ಕೂಡ ಹೆಚ್ಚು ಕಡಿಮೆ ಸಮವಯಸ್ಸಿನಲ್ಲೇ ಆಯಿತೆಂದು ತೋರುತ್ತದೆ. ಕನ್ನಡ ಆರನೇ ತರಗತಿಯಲ್ಲಿ ಓದುತ್ತಿದ್ದಾಗ 'ಗಂಗಾಧರ ಮಾಸ್ತರ' ಎಂಬ ನನ್ನ ವರ್ಗಶಿಕ್ಷಕರು ಹೊರತಂದ 'ಚಿಗುರು' ಎಂಬ ಹೆಸರಿನ ಹಸ್ತಪತ್ರಿಕೆಯೊಂದಕ್ಕೆ ನಾನು ತೀರಾಪ್ರಾಸಬದ್ಧವಾದ ಒಂದು ಕವಿತೆ ಬರೆದುಕೊಟ್ಟಿದ್ದೆ. ಅದೇ ನನ್ನ ಮೊದಲನೇ ಕವಿತೆ ಕೂಡ. ಮೊಗಸಾಲೆಯವರೂ ಕೂಡ ಹೆಚ್ಚೂಕಡಿಮೆ ಆ ವಯಸ್ಸಿನಲ್ಲೇ ಕವಿತೆಯೊಂದನ್ನು ಬರೆದಿರುವ ಬಗ್ಗೆ – ಇತ್ತೀಚೆಗೆ ಹೊರಬಂದ 'ಬಯಲುಪಟ್ಟ' ಎಂಬ ಅವರ ಜೀವನ ವೃತ್ತಾಂತ ಗ್ರಂಥದಲ್ಲಿ ಉಲ್ಲೇಖಿಸಿದೆ. ನನ್ನ ಮೊದಲನೇ ಕವನ ಸಂಕಲನ ('ಸುಮನ') 1973ರಲ್ಲಿ ಪ್ರಕಟವಾಯಿತು. ಮೊಗಸಾಲೆಯವರ ಚೊಚ್ಚಲು ಕೃತಿ ಹೆಚ್ಚೂಕಡಿಮೆ ಅದೇ ಅವಧಿಯಲ್ಲಿ ಅಂದರೆ 1974ರಲ್ಲಿ ('ವರ್ತಮಾನದ ಮುಖಗಳು') ಪ್ರಕಟವಾಗಿದೆ. ಇವನ್ನೆಲ್ಲ ಬರೆಯುತ್ತಿರುವುದು– ನಾನು ಮೊಗಸಾಲೆಯವರಷ್ಟೇ ಎತ್ತರಕ್ಕೆ ಬೆಳೆದವನು ಎಂದು ಹೇಳಿಕೊಳ್ಳುವುದಕ್ಕಾಗಿ ಅಲ್ಲ. ಕಾವ್ಯದ ದಾರಿಯಲ್ಲಿ ನಾವಿಬ್ಬರೂ ಸಹಪ್ರಯಾಣಿಕರು, ವಯೋಮಾನದಲ್ಲೂ ಕೂಡ ಸಹಪ್ರಯಾಣಿಕರು ಎಂದು ತಿಳಿಸುವುದಕ್ಕಾಗಿ ಮಾತ್ರ, ಅಷ್ಟೇ.

ಇದುವರೆಗೆ ನಾನು ಅವರಿಗೂ ಕೂಡ ತಿಳಿಸದೇ ಇರುವ ಗುಟ್ಟೊಂದನ್ನು ಈಗ ಹೇಳಿಬಿಡುತ್ತೇನೆ: ಹಾಗೆ ನೋಡಿದರೆ, 70 ರ ದಶಕಾರಂಭದಲ್ಲಿ ನನ್ನೊಳಗೆ ನಾ.ಮೊಗಸಾಲೆಯವರ ಬಗ್ಗೆ – ಯಾರಬಳಿಯೂ ಹೇಳಿಕೊಳ್ಳಲಾಗದಂಥ ಸಣ್ಣ ಕೋಪ ಇತ್ತು! 1960ರ ದಶಕದಲ್ಲಿ ನಾನು ಸ್ಥಳೀಯ ಪತ್ರಿಕೆಗಳಿಗೆ ಮಾತ್ರವಲ್ಲದೆ, ಹುಬ್ಬಳ್ಳಿಯಿಂದ ಹೊರಡುತ್ತಿದ್ದ 'ವಿಶಾಲ ಕರ್ನಾಟಕ' ದೈನಿಕಕ್ಕೂ ಬರೆಯುತ್ತಿದ್ದೆ. ಆಗ 'ನಾ.ವಿಷ್ಣು' ಎಂದೇ ಲೇಖನದ ಜೊತೆ ನನ್ನ ಹೆಸರನ್ನು ಬಳಕೆ ಮಾಡುತ್ತಿದ್ದೆ. ಮಾತ್ರವಲ್ಲ, ಅದೇ ಹೆಸರಿನ ಒಂದು ಸೀಲನ್ನು (ರಬ್ಬರ್ ಸ್ಟ್ಯಾಂಪ್) ಮಾಡಿಸಿಕೊಂಡಿದ್ದೆ. ಆ ಸೀಲು ಈಗಲೂ ನನ್ನ ಬಳಿ ಇದೆ. ಅ.ನ.ಕೃ. ಮತ್ತು ನಾ.ಕಸ್ತೂರಿಯವರ ಬರಹಗಳ ಬಗ್ಗೆ ವಿದ್ಯಾರ್ಥಿದೆಸೆಯಲ್ಲೇ ವಿಶೇಷ ಒಲವನ್ನು ಬೆಳೆಸಿಕೊಂಡಿದ್ದ ನನಗೆ– ದಿನಕರ ದೇಸಾಯಿಯವರಂತೆ– ಇವರಿಬ್ಬರೂ ಕೂಡ ಪ್ರೀತಿಯ ಸಾಹಿತಿಗಳಾಗಿದ್ದರು. ಅ.ನ.ಕೃ ಅವರಂತೆ ಜುಬ್ಬಾ ಮತ್ತು ಜಾಕೀಟು ತೊಟ್ಟು; ನಾ.ಕಸ್ತೂರಿಯವರಂತೆ ಹೆಸರಿನ ಅನುಕರಣೆ ಮಾಡತೊಡಗಿದೆ. 70ರ ದಶಕದಲ್ಲಿ ನಾ.ಮೊಗಸಾಲೆ ಎಂಬ ಹೆಸರು ಮತ್ತೆ ಮತ್ತೆ ಕಾಣಿಸಿಕೊಳ್ಳತೊಡಗಿದಂತೆ, 'ಇವನೆಲ್ಲಿಯವ ನನ್ನ ಪ್ರತಿಸ್ಪರ್ಧಿ?' ಎಂದೆಲ್ಲಾ ನನ್ನ ಮನಸ್ಸಿನಲ್ಲಿ ಬಂದು ಹೋಗುವುದಿತ್ತು. ನನ್ನ ಮೊದಲನೇ ಸಂಕಲನ ಹೊರಬರುವ ಹೊತ್ತಿಗೆ ನನ್ನ

ಬರವಣಿಗೆಯ ಜೊತೆ ದಾಖಲಾಗಬೇಕಾದ ಹೆಸರಿನ ಬಗ್ಗೆ ನಾನೊಂದು ಗಟ್ಟಿ ನಿರ್ಧಾರಕ್ಕೆ ಬರಲೇಬೇಕಿತ್ತು. ನಾ.ಕಸ್ತೂರಿ ಚೆನ್ನಾಗಿದೆ. ನಾ.ಮೊಗಸಾಲೆಯೂ ಚೆನ್ನಾಗಿಯೇ ಇದೆ. ಇದೇನಿದು ನಾ.ವಿಷ್ಣು?....ಬೇಡ. ಇದರೊಳಗೆ ದೇವರ ಹೆಸರೂ ಸೇರಿಕೊಂಡು ಬಿಟ್ಟಿದೆ. ಎಲ್ಲೋ ಒಂದು ಕಡೆ ನನ್ನನ್ನೇ ನಾನು ವೈಭವೀಕರಿಸಿಕೊಂಡಂತೆ ಭಾಸವಾಗುತ್ತಿದೆ. ಮೇಲಾಗಿ ಪಕ್ಕದ ಜಿಲ್ಲೆಯಲ್ಲಿ ನಾ.ಮೊಗಸಾಲೆ ಇರುವಾಗ ಇಲ್ಲಿ 'ನಾ.ವಿಷ್ಣು' ಎಂಬ ಹೆಸರು ಬೇಡವೇ ಬೇಡ ಎಂದೆಲ್ಲ ಅನ್ನಿಸಿ, ಸರಳವಾಗಿ 'ವಿಷ್ಣು ನಾಯ್ಕ' ಎಂಬ ಹೆಸರಿನಲ್ಲೇ ಮೊದಲ ಸಂಕಲನವನ್ನು ಪ್ರಕಟಿಸಿದೆ.

ಮೊಗಸಾಲೆಯವರು ಕವಿಯಾಗಿ ಪ್ರಸಿದ್ಧಿಗೆ ಬರುವ ಮೊದಲೇ ಕಾದಂಬರಿಕಾರರಾಗಿ ಕಾಣಿಸಿಕೊಂಡವರು. ಹೆಚ್ಚಿನ ಎಲ್ಲ ಲೇಖಕರಂತೆ ಇವರ ಬರವಣಿಗೆಯ ಆರಂಭವು ಕವಿತೆಯೊಂದಿಗೆ ಆಯಿತೆಂಬುದೇನೋ ನಿಜ. ಆದರೆ ಮೊದಲ ಕವನ ಸಂಕಲನ ಪ್ರಕಟವಾಗುವುದಕ್ಕಿಂತ ದಶಕದಷ್ಟು ಮೊದಲೇ ಇವರ 'ಮಣ್ಣಿನ ಮಕ್ಕಳು' ಕಾದಂಬರಿ (1965) ಹೊರಬಂತು. ಅಲ್ಲಿಂದ ಇಲ್ಲಿಯವರೆಗೆ ಅವರ ಹದಿನಾಲ್ಕು ಕಾದಂಬರಿಗಳು ಪ್ರಕಟವಾಗಿವೆ. ಕವನ ಸಂಕಲನಗಳ ಸಂಖ್ಯೆ ಕೇವಲ 'ಏಳು'. ಎಲ್ಲ ಕಾದಂಬರಿಗಳನ್ನು ನಾನು ಓದಿಲ್ಲ. ಓದಿದ ನಾಲ್ಕೈದು ಕಾದಂಬರಿಗಳನ್ನಷ್ಟೇ ತಲೆಯಲ್ಲಿಟ್ಟುಕೊಂಡು ಒಂದು ಮಾತನ್ನು ಹೇಳಬೇಕೆನಿಸುತ್ತದೆ: ಕಾದಂಬರಿಕಾರ ಮೊಗಸಾಲೆಯವರಿಗಿಂತ ಕವಿ ಮೊಗಸಾಲೆಯವರೇ ಹೆಚ್ಚು ನನಗೆ ಆಪ್ತರಾಗಿದ್ದಾರೆ. 70ರಿಂದ 90ರ ದಶಕದ ನಡುವೆ ಬಂದ ಇವರ 'ನನ್ನದಲ್ಲದ್ದು', 'ದೃಷ್ಟಿ', 'ದಿಗಂತ'. 'ತೊಟ್ಟಿ' ಹಾಗೂ ವರ್ಷದಷ್ಟು ಹಿಂದೆ ಪ್ರಕಟವಾದ 'ಅರ್ಥ'ದಂಥ ಕಾದಂಬರಿಗಳ ಮಹತ್ವವನ್ನು ಗಮನದಲ್ಲಿಟ್ಟುಕೊಂಡು ಈ ಮಾತನ್ನು ನಾನು ಸಂಕೋಚವಿಲ್ಲದೆ ಹೇಳಬಲ್ಲೆ.

ಇವರ ಕವಿತೆಯಲ್ಲಿ ಧಾರಾಳವಾಗಿ ನವ್ಯ ಸೆಳಕುಗಳಿವೆ. ನವೋದಯದ ರಮ್ಯ ಗುಣವಿದೆ. ಬಂಡಾಯಕ್ಕೆ ಸಮೀಪವಾದ ಎಡಪಂಥೀಯ ಆಲೋಚನಾಕ್ರಮಗಳಿವೆ. ಪ್ರಗತಿಶೀಲರ ಎಚ್ಚರವಿದೆ. ವಿಶೇಷವೆಂದರೆ. ಮೇಲೆ ಹೇಳಿದ ಎಲ್ಲ ಕಾಲಘಟ್ಟಗಳ ಅತಿರೇಕಗಳಿಂದ ಬಿಡಿಸಿಕೊಂಡು ತಮ್ಮದೇ ಆದ ವಿಶಿಷ್ಟ ಕಾವ್ಯ ಕಸಬುಗಾರಿಕೆಯಲ್ಲಿ ಮೊಗಸಾಲೆಯವರು ಉದ್ದಕ್ಕೂ ಮೆರೆದದ್ದು. ಇವರ ಅತ್ಯುತ್ತಮ ಕವನ ಸಂಕಲನಗಳಲ್ಲೊಂದಾದ 'ನ[illegible] ನೆರಳು' ಕೃತಿಗೆ ಅಂಕೋಲೆಯ ಡಾ॥ದಿನಕರ ದೇಸಾಯಿ ಸ್ಮಾರಕ ಪ್ರತಿಷ್ಠಾನವು 'ದಿನಕರ ದೇಸಾಯಿ ಕಾವ್ಯ ಪುರಸ್ಕಾರ ' ನೀಡಿ ಗೌರವಿಸಿದ್ದನ್ನು (2000) ಈ ಸಂದರ್ಭದಲ್ಲಿ ನೆನೆಪಿಸಿಕೊಳ್ಳುತ್ತೇನೆ. ಇನ್ನೂ ಹತ್ತು-ಹಲವು ಪ್ರಶಸ್ತಿಗಳಿಗೆ, ಗೌರವಗಳಿಗೆ ಭಾಜನರಾಗಿದ್ದಾರೆ. ಇಪ್ಪತ್ತೈದು ವರ್ಷಗಳ ಹಿಂದೆಯೇ (1977) ಇವರ 'ನನ್ನದಲ್ಲದ್ದು' ಕಾದಂಬರಿ ಸಾಹಿತ್ಯ ಅಕಾಡೆಮಿಯ ಬಹುಮಾನ ಪಡೆದುದನ್ನು ಇಲ್ಲಿ ನೆನೆಯಬಹುದು.

ಈ ಲೇಖನದ ಆರಂಭದಲ್ಲಿ ಮೊಗಸಾಲೆಯವರನ್ನು 'ಜೀವಜಗತ್ತನ್ನು ಪ್ರೀತಿಸುವ ಮನುಷ್ಯ' ಎಂದು ಕರೆದೆ. ಅದು ಅವರೇ ಬರೆದ ಒಂದು ಕವಿತೆಯಲ್ಲೂ ಧ್ವನಿಪಡೆದಿದೆ. ಕಡೆಂಗೋಡ್ಲು ಕಾವ್ಯ ಪ್ರಶಸ್ತಿಯಿಂದ ಪುರಸ್ಕೃತವಾದ ಅವರ 'ಪ್ರಭವ' ಎಂಬ ಸಂಕಲನದ 'ನಾ ಪ್ರೀತಿಸುತ್ತೇನೆ' ಕವನದ ಈ ಸಾಲುಗಳನ್ನು ನೋಡಿ :

" ನಾನು ಪ್ರೀತಿಸುತ್ತೇನೆ – ಮನುಷ್ಯರನ್ನು
ಅವರು ಕೇವಲ ಮನುಷ್ಯರೆಂದು

.................................................................

ಸಾಕುನಾಯಿಗೂ ನನ್ನ ಪ್ರೀತಿಯಿದೆ, ಬಾಲ ಬಗ್ಗಿದ್ದಕ್ಕಲ್ಲ
ಅದರ ಮೂಗಿನ ತುದಿ ತಂಪಿರುವುದಕ್ಕೆ.
ದನವನ್ನೂ ಪ್ರೀತಿಯಿಂದ ಸಾಕುತ್ತೇನೆ – ಬರೇ ಹಾಲಿಗಲ್ಲ,
ಅದರ ಕಣ್ಣಲಿ ನಾನು ತುಂಬಿರುವುದಕ್ಕೆ.
ಹುಲಿಯನ್ನೂ ಪ್ರೀತಿಸಬೇಕೆಂದಿದೆ, ಆದರೆ
ಎಲ್ಲಿದೆ ದಟ್ಟವಾದ ಕಾಡು?.......ಇತ್ಯಾದಿ.

– ತುಸು ವಾಚ್ಯವೆನಿಸಿದರೂ ಆಶಯದ ದೃಷ್ಟಿಯಿಂದ, – ಅದರಲ್ಲೂ ಮುಖ್ಯವಾಗಿ ಮೊಗಸಾಲೆಯವರ ಅಂತಃಕರಣವನ್ನು ತಿಳಿಯುವ ದೃಷ್ಟಿಯಿಂದ ನನಗೆ ಮುಖ್ಯವೆನಿಸಿದ ಸಾಲುಗಳಿವು.

ಮೊಗಸಾಲೆಯವರ ಕಲ್ಪನಾಶಕ್ತಿ ಅದ್ಭುತವಾದುದು. ಇದಕ್ಕೆ ನಾನು ಅವರ ಕವಿತೆಗಳಿಂದ ಸಾಲುಸಾಲಾಗಿ ನಿದರ್ಶನಗಳನ್ನು ಕೊಡುತ್ತ ಹೋಗಬಹುದು. (ಇದು ಸಂದರ್ಭವಲ್ಲ). ಕರಾವಳಿಯ ಮಳೆಗಾಲದ ನದಿಗಳ ಬಗ್ಗೆ ಬರೆಯುತ್ತ ಅವರು ಹೇಳುವುದು ಹೀಗೆ :

" ಕರಾವಳಿಯ ಮಳೆಗಾಲದ ನದಿಗಳು
ಥೇಟು ಕಾಲೇಜು ಹುಡುಗರು

.................................................................

ಸದಾ ಕೆಂಪುಕೆಂಪಾಗಿ ಹೊಳೆಯುವ ಇವರ ಕಣ್ಣುಗಳಲ್ಲಿ
ಕಂತುವುದಿಲ್ಲ ನೀರು ಎಷ್ಟು ಹೊತ್ತು ಇದ್ದೂ.""

ತಮ್ಮ ವೈದ್ಯಕೀಯ ಅಂಕಣಬರಹಗಳ ಮೂಲಕ ಕೂಡ ಮೊಗಸಾಲೆಯವರು ನಾಡಿನ ಓದುಗರಿಗೆ ಅತ್ಯಂತ ಪ್ರಿಯರು. 'ನಿಮ್ಮ ಕೈಯಲ್ಲೇ ನಿಮ್ಮ ಆರೋಗ್ಯ', 'ಹೆಣ್ಣು ಹೆಣ್ಣನ್ನು ಅರಿಯುವ ಬಗೆ', 'ಆರೋಗ್ಯ –ಅನಾರೋಗ್ಯದ ನಡುವೆ', 'ದಾಂಪತ್ಯಯೋಗ', 'ಪ್ರತಿಕ್ಷಣವೂ ನಿಮ್ಮದೇ' ಇವೆಲ್ಲ ಯಾವ ಕಾಲಕ್ಕೂ ಸಲ್ಲುವ ಬಹು ಉಪಯುಕ್ತ ಹೊತ್ತಿಗೆಗಳು.

ಕನ್ನಡದಲ್ಲಿ ಲೇಖಕರಿಗೆ ಯಾವತ್ತೂ ಕೊರತೆಯಾಗಿಲ್ಲ. ಸಾಹಿತ್ಯ, ಚರಿತ್ರಕಾರರು ಶಾಂತವಲಯ (silent area) ಎಂದು ಗುರುತಿಸಿದ ಕಾಲದಲ್ಲೂ ಬರಹಗಾರರಿಗೆ ಹೇಳಿಕೊಳ್ಳುವಂಥ ಬರವೇನೂ ಇರಲಿಲ್ಲ. ಇತ್ತೀಚಿನ ದಶಕಗಳಲ್ಲಂತೂ ಅದ್ಭುತವೆನ್ನಬಹುದಾದ

ಪ್ರತಿಭೆಗಳು ಕಾಣಿಸಕೊಳ್ಳುತ್ತಲೇ ಇವೆ. ಏಳು ಜ್ಞಾನಪೀಠ ಪ್ರಶಸ್ತಿಗಳನ್ನು ಕನ್ನಡಕ್ಕೆ ತಂದ ಲೇಖಕರ ಹೊರತಾಗಿಯೂ ನಮ್ಮಲ್ಲಿ, ಸಾಹಿತ್ಯಸೃಷ್ಟಿಕ್ರಿಯೆಯಲ್ಲಿ ಅಸಾಧಾರಣವಾದುದನ್ನು ಸಾಧಿಸಿದವರ ಸಂಖ್ಯೆ ಬಹುದೊಡ್ಡದಿದೆ. ಕಳೆದ ಸಾವಿರ ವರ್ಷಗಳ ಇತಿಹಾಸದಲ್ಲಿ ಈ 'ಕನ್ನಡವೆನಿಪ್ಪಾ ನಾಡು' ಸಾಹಿತಿಗಳ ಕೊರತೆಯನ್ನು ಅನುಭವಿಸಲಿಲ್ಲ. ಅನುಭವಿಸಿದ್ದಿದ್ದರೆ ಸಾಹಿತ್ಯ–ಸಂಸ್ಕೃತಿ ಪೋಷಕರ ಕೊರತೆಯನ್ನು. ಬರಹಗಾರರ ಸಂಖ್ಯೆ ಹೆಚ್ಚಿದ್ದಷ್ಟೂ ಅಂಥವರನ್ನು ಗುರುತಿಸಿ ಗೌರವಿಸುವವರ ಬಳಗ ಕಡಿಮೆಯಾಗುತ್ತಿದೆ. ಮೊಗಸಾಲೆಯವರು ಈ ಸೂಕ್ಷ್ಮವನ್ನು ಬಲ್ಲವರಾಗಿರುವುದರಿಂದಲೇ, ಈ ನೋವನ್ನು ತಿಳಿದವರಾಗಿರುವುದರಿಂದಲೇ ಕಳೆದ ಮೂರು ದಶಕಗಳಿಂದ ನಿರಂತರವಾಗಿ ಕವಿ–ಕಲಾವಿದರನ್ನು ಗುರುತಿಸಿ ಗೌರವಿಸುವ ಕಾರ್ಯದಲ್ಲಿ ವಿವಿಧ ಸಂಸ್ಥೆಗಳ ಮೂಲಕ ಪ್ರಯತ್ನಿಸಿ, ನಾಡಿನ ಸಾಂಸ್ಕೃತಿಕ ವಲಯದ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಅಪ್ಪಟ ಜನಪದ ನಿಲುವಿನ ಸಂಸ್ಕೃತಿಪ್ರಿಯರೂ, ಸಾಹಿತ್ಯಾರಾಧಕರೂ ಆದ ಇಂಥ ವ್ಯಕ್ತಿಗಳು ಕನಿಷ್ಠಪಕ್ಷ ತಾಲೂಕಿಗೊಬ್ಬ ಇದ್ದರೂ ಸಾಕು, ಈ ನಾಡು ನೆಮ್ಮದಿಯಿಂದಿರುತ್ತದೆ.

ಸಾಕಷ್ಟು ಚೌಕಾಶಿಯ ನಂತರ ಆರಂಭವಾದ ಪ್ರೀತಿ ಬಹುಕಾಲ ಅಭಾದಿತವಾಗಿ ಉಳಿಯುತ್ತದೆ ಎಂಬುದನ್ನು ಅವರಿವರ ಉದಾಹರಣೆಗಳೊಂದಿಗೆ ನಾನು ಕಲಿತದ್ದಲ್ಲ, ನನ್ನ ಅನುಭವವೇ ಹೇಳಿಕೊಟ್ಟದ್ದು. ನಾನು ಮತ್ತು ಮೊಗಸಾಲೆ ತುಸು ತಡವಾಗಿಯೇ ಸಮೀಪಕ್ಕೆ ಬಂದೆವು ಎಂಬ ಮಾತನ್ನು ಈಗಾಗಲೇ ಹೇಳಿದ್ದೇನೆ. ಕ್ರಮೇಣ ಈ ಕಾಂತಾವರವನ್ನು ನನ್ನ ಅಂಬಾರಕೊಡಲಿಗೆ (ಅಂಕೋಲೆಗೆ) ಬರಮಾಡಿಕೊಳ್ಳುವ ಅದಮ್ಯ ಆಸೆಯೊಂದು ನನ್ನಲ್ಲಿ ಬೆಳೆಯುತ್ತ ಹೋಯಿತು. ಆ ದಿಶೆಯಲ್ಲಿ ನಾನು ಒಮ್ಮೆ ಪ್ರಯತ್ನಿಸಿ ವಿಫಲನಾದದ್ದೂ ಉಂಟು. ನಮ್ಮ ದಿನಕರ ದೇಸಾಯಿ ಪ್ರತಿಷ್ಠಾನದ ಪ್ರಶಸ್ತಿ ಪ್ರದಾನ ಸಮಾರಂಭವೊಂದಕ್ಕೆ ಮುಖ್ಯ ಅತಿಥಿಗಳಾಗಿ ಅವರನ್ನು ಆಮಂತ್ರಿಸಿದ್ದೆ. ಸಂತೋಷದಿಂದಲೇ ಒಪ್ಪಿಕೊಂಡಿದ್ದರು. ಅನಿರೀಕ್ಷಿತವಾದ ಯಾವುದೋ ಅಡಚಣೆ ಅಡ್ಡ ಬಂದು ಅವರ ಸ್ಥಾನವನ್ನು ಅಂದು ಡಾ॥ ಜಯಂತ ಕಾಯ್ಕಿಣಿ ತುಂಬಿಕೊಟ್ಟಿದ್ದರು. ಕವಯಿತ್ರಿ ಡಿ.ಬಿ.ರಜಿಯಾ ಅವರಿಗೆ ಪ್ರಶಸ್ತಿ ನೀಡಿದ ವರ್ಷ ಅದು. ಆದಾದ ಒಂದೆರಡು ವರ್ಷಕ್ಕೆ ಇವರ 'ನೆಲದ ನೆರಳು' ಸಂಕಲನಕ್ಕೆ ಪುರಸ್ಕಾರ ಬಂತು. ಅಂದು ಮೊಗಸಾಲೆಯವರನ್ನು ಕವಿ ಕಣವಿಯವರ ಹಿರಿತನದಲ್ಲಿ ಗೌರವಿಸುವ ಸಂತೋಷವನ್ನು ನಾವು ಅನುಭವಿಸಿದೆವು. ಆ ನಂತರ ಮೊಗಸಾಲೆಯವರನ್ನು ನಾನು ರಾಘವೇಂದ್ರ ಪ್ರಕಾಶನದ ವಾರ್ಷಿಕೋತ್ಸವಕ್ಕೂ ಆಮಂತ್ರಿಸಿದೆ.ಆ ಸಂದರ್ಭದಲ್ಲಿ ಅವರು ನನ್ನ 'ಮುಚ್ಚಿದ ಬಾಗಿಲು ಮತ್ತು ಮರಿಗುಬ್ಬಿ' ಸಂಕಲನವನ್ನು ಬಿಡುಗಡೆ ಮಾಡಿ ಮಾತನಾಡಿದರು. ಬರಿ ಮಾತಾಡಲಿಲ್ಲ, ಆ ಸಂಕಲನದ ಕುರಿತು ದೈನಿಕವೊಂದಕ್ಕೆ ಬರೆದರು.ಆ ಸಂಕಲನದ ಆರಂಭದ 'ಶೀರ್ಷಿಕೆ' ಕವನದ ಜೊತೆಗೆ ಕೊನೆಯಲ್ಲಿ ಸೇರಿಸಿದ 'ಅಪ್ಪ ಮತ್ತು ನಾನು' ಎಂಬ ದೀರ್ಘವಾದ ಕಥನಕವನವನ್ನು ಮೆಚ್ಚಿಕೊಂಡು ಭಾವಪೂರ್ಣವಾಗಿ ಮಾತನಾಡುತ್ತಿದ್ದಾಗಿನ ಅವರ ಮೈ–ಮುಖಭಾವದಲ್ಲಿ ನನ್ನನ್ನೇ ನಾನು ಓದಿಕೊಂಡು ಖುಷಿ ಅನುಭವಿಸಿದ್ದನ್ನು ಮರೆಯಲಾರೆ.

ಅವರಿಗೂ ಕೂಡ ನನ್ನನ್ನು ಕಾಂತಾವರಕ್ಕೆ ಕರೆಯಿಸಿಕೊಳ್ಳುವ ಆಸೆ. ಒಂದೆರಡು ಸಲ

ನೀಡಿದ ಆಮಂತ್ರಣಕ್ಕೆ ಹೊಂದಿಕೊಳ್ಳಲು ನನಗೇ ಆಗಿರಲಿಲ್ಲ. ಕೊನೆಗೆ ಅವರ 'ಮುದ್ದಣ್ಣ ಕಾವ್ಯ ಪ್ರಶಸ್ತಿ'ಗೆ ಇಪ್ಪತ್ತೈದು ತುಂಬಿದ ಸಂದರ್ಭದಲ್ಲಿ ಆ ಯೋಗ ಕೂಡಿ ಬಂತೆಂದು ತೋರುತ್ತದೆ. ಆದರೂ ನನಗೆ ಅಳುಕು. ನನ್ನ ಬೆನ್ನುನೋವು, ಮಣಶಿರದ ಯಾತನೆ (ಸರ್ವಿಕಲ್ ಸ್ಪೊಂಡಿಲಿಟಿಸ್)! ಎಲ್ಲಿಗೆ ಹೋಗುವುದಿದ್ದರೂ ವಿಶೇಷ ವಾಹನದಲ್ಲೇ ಹೋಗಬೇಕಾದ ಅನಿವಾರ್ಯತೆ. ನನ್ನೊಬ್ಬನಿಂದಾಗಿ ಈ ಸಂಘಟಕನ ತಲೆಯಮೇಲೆ ಸಾವಿರದಷ್ಟು ಹೆಚ್ಚುವರಿ ಭಾರ ಹೇರುವುದು ನನಗೆ ಸುತಾರಾಂ ಇಷ್ಟವಿರಲಿಲ್ಲ. ಹಾಗೆಂದು ಅವರಿಗೆ ತಿಳಿಸಿದಾಗ "ನನಗೆ ಸಾವಿರಕ್ಕಿಂತ ನಿಮ್ಮ ಸಾನಿಧ್ಯ ಮುಖ್ಯ" ಎಂದು ಬಿಡಬೇಕೆ?....ಒಳಗೆ ಹಾಸಿಗೆಯಲ್ಲಿದ್ದ ನನ್ನ ಅವ್ವ ತತ್‌ಕ್ಷಣ ಕಣ್ಮುಂದೆ ಬಂದುನಿಂತು,' ಹೋಗಿ ಬಾ ಮಗಾ' ಅಂದಂತೆನಿಸಿತು. ಒಪ್ಪಿಕೊಂಡೆ. ಕಾರ್ಯಕ್ರಮ ನಿಗದಿಯಾದ ದಿನಕ್ಕೆ ಕೇವಲ ಐದು ದಿನ ಮೊದಲು ಅವ್ವ ಹೋಗಿಬಿಟ್ಟಳು. ಕಾಂತಾವರದ ನನ್ನ ಕಾರ್ಯಕ್ರಮವನ್ನು ನನ್ನ ಸ್ಥಾನದಲ್ಲಿರುವ ಯಾರೇ ಆಗಿದ್ದರೂ ಕೈಬಿಡಲೇಬೇಕಾದಂಥ ಅನಿವಾರ್ಯತೆಯ ಬೆಳವಣಿಗೆ. ಆದರೆ ಪ್ರಾಯಶಃ ಮೊಗಸಾಲೆಯವರಿಗೆ ಆಶ್ಚರ್ಯವಾಗುವಂತೆ, ಆ ಸೂತಕದ ಅವಧಿಯನ್ನೂ ಗಣನೆಗೆ ತೆಗೆದುಕೊಳ್ಳದೆ ನೇರ ಕಾಂತಾವರಕ್ಕೆ ಹೋಗಿದ್ದೆ. ಅದಕ್ಕೆ ಕಾರಣ ನನ್ನ ಅವ್ವನೇ. ಅವಳು 'ಓಡಾಡಿದ' ಪರಿಮಳದ ಅಂಗಳಕ್ಕೇ ಬಂದು ಶಾಲು ಹೊದಿಸಿ, ಭಾವಪೂರ್ಣವಾಗಿ ನಮಿಸಿ ಗೌರವಿಸುವ ಮೂಲಕ ಜಗತ್ತಿನ ಎಲ್ಲ ತಾಯಂದಿರ ಕಾಲನ್ನು ಮುಟ್ಟಿದ ಹೃದಯವಂತಿಕೆ ತೋರಿದ ಮೊಗಸಾಲೆಯವರ ಬಾಡಿದ ಮುಖ ಕಣ್ಮುಂದೆ ಬಂದಿತ್ತು. ಕಾಂತಾವರಕ್ಕೆ ಅಂದು ನಾನು ನನ್ನ ತಾಯಿಯನ್ನು ಜೊತೆಗಿಟ್ಟುಕೊಂಡೇ ಹೋಗಿಬಂದಿದ್ದೆ ಎಂಬುದು ಎಷ್ಟು ಜನಕ್ಕೆ ಅರ್ಥವಾಗಿದೆಯೋ ಗೊತ್ತಿಲ್ಲ. ಅಂದಿನ ಆ ವೇದಿಕೆಯಲ್ಲಿ ಹಂಚಿಕೊಂಡ ನನ್ನ ಭಾವನೆಯ ಆರಂಭದಲ್ಲೇ ಅವಳಿದ್ದಳು. ಪ್ರಾಯಶಃ ಇವನ್ನೆಲ್ಲ ಗಮನಿಸಿಯೇ ಇದ್ದಿರಬಹುದು, ಸೋದರ ಮೊಗಸಾಲೆ ನನ್ನ ಕುರಿತು ಸುನಂದ-ಪ್ರಕಾಶ್ ಸೇರಿ ಹೊರತಂದ ಅಭಿನಂದನ ಗ್ರಂಥಕ್ಕೆ ಬರೆಯುತ್ತ, 'ರಕ್ತಸಂಬಂಧಗಳನ್ನು ಮೀರಿದ ಆರ್ದ್ರತೆ' ಎಂಬ ಪದಬಳಕೆ ಮಾಡಿದ್ದಾರೆ. ಅವರ ಈ ಅಂತಃಕರಣಕ್ಕೆ ಶರಣೆಂಬೆ.

○

# ಶಿಷ್ಟ ಸಾಹಿತ್ಯ ವೈದ್ಯ - ನಾ. ಮೊಗಸಾಲೆ

ಪ್ರಕಾಶ ಕಡಮೆ

ಮೊಗಸಾಲೆಯವರನ್ನು ನಾನು ಮೊದಲ ಬಾರಿಗೆ ಕಂಡದ್ದು 1997ರಲ್ಲಿ. ಆಗ ಅಂಕೋಲೆಯ ಶ್ರೀ ರಾಘವೇಂದ್ರ ಪ್ರಕಾಶನದ ವಾರ್ಷಿಕೋತ್ಸವ ಸಂದರ್ಭದಲ್ಲಿ ಅವರು ಅತಿಥಿಗಳಾಗಿ ಆಗಮಿಸಿದ್ದರು. ಹಾಗೂ ಅಂದು ಅಲ್ಲಿ ಏರ್ಪಡಿಸಲಾಗಿದ್ದ ಕಥಾಗೋಷ್ಠಿಯಲ್ಲಿ ಮೊಗಸಾಲೆಯವರು ತಮ್ಮದೇ ಆದ ವಿಶಿಷ್ಟ ಶೈಲಿಯ ಸೂಕ್ಷ್ಮ ಅನುಭವ ಜನ್ಯ ಕಥೆಯೊಂದನ್ನು ಮಂಡಿಸಿದ್ದರು. ಆ ಕಥೆಯ ಶೀರ್ಷಿಕೆ ತಕ್ಷಣಕ್ಕೆ ಈಗ ನೆನಪಿಗೆ ಬರುತ್ತಿಲ್ಲ. ಆದರೆ ಆಗ ಮೊಗಸಾಲೆಯವರು ಬರೆದು ತಂದಿದ್ದ ಆ ಕತೆಯನ್ನು ಅವರ ಕೊಂಚ ಅನಾರೋಗ್ಯದ ಕಾರಣ, ನಮ್ಮ ಪ್ರಿಯ ವಿಮರ್ಶಕ, ಕವಿ ಅಡ್ಯನಡ್ಕದ ಶ್ರೀ ವಿ.ಗ.ನಾಯಕರು ಓದಿದ್ದರು. ಆ ಕಥಾಗೋಷ್ಠಿಯಲ್ಲಿ ನನ್ನ ಪತ್ನಿ ಸುನಂದಾ ಕೂಡ ಭಾಗವಹಿಸಿದ್ದಳು. ಅಲ್ಲಿಂದ ಆರಂಭವಾದ ನಮ್ಮ ಅಭಿಮಾನ, ಅವರ ಹತ್ತಿರಕ್ಕೆ ಹೋಗಿ ಮಾತಾಡದೇ ಇದ್ದರೂ, ಅಂಥ ಯಾವುದೇ ಮಹತ್ವದ ಪತ್ರವ್ಯವಹಾರಗಳಿಲ್ಲದಿದ್ದಾಗ್ಯೂ, ಅವರ ಅವಿರತ ಬರವಣಿಗೆಯ ಕ್ಷೇತ್ರಗಳಾದ ಕಥೆ, ಕವನ, ಕಾದಂಬರಿಗಳ ಆಸಕ್ತಿಯ ಓದಿನ ಸೇತುವೆಯಲ್ಲಿ ಬೆಸದುಕೊಂಡು ಬಂದಿತ್ತು.

ಅದೇ ಅಕ್ಕರೆ ಪುನಃ ಕೊಂಡಿಯಾದದ್ದು, ಕಳೆದ ವರ್ಷ ನಾನು ಹಾಗೂ ಸುನಂದಾ ಸಂಪಾದಿಸಿದ ಮತ್ತು ಪ್ರಕಾಶಿಸಿದ ಶ್ರೀ ವಿಷ್ಣುನಾಯಕರ ಅರವತ್ತರ ಅಭಿನಂದನಾ ಗ್ರಂಥ 'ಪರಿಮಳದಂಗಳ'ಕ್ಕೆ ಡಾ॥ಮೊಗಸಾಲೆಯವರ ಒಂದು ಲೇಖನ ಕೋರುವುದರ ಮೂಲಕ. ವಿಷ್ಣು ನಾಯ್ಕರ ಅಭಿಮಾನ ಹಾಗೂ ನಮ್ಮ ಮೇಲಿನ ಪ್ರೀತಿಯಿಂದ ಮೊಗಸಾಲೆಯವರು ನಮಗೆ ಯಾವ ಹೆಚ್ಚಿನ ತೊಂದರೆಯನ್ನೂ ನೀಡದೇ, ತಮ್ಮೆಲ್ಲ ಅಪಾರ ಕೆಲಸಕಾರ್ಯಗಳ ಮಧ್ಯೆಯೂ ಉತ್ತಮವಾದಂತಹ ಒಂದು ಲೇಖನ ಬರೆದು ಕಳಿಸಿದ್ದರು. ಮುದ್ರಣ ಪ್ರತಿಷ್ಠಾನದ ಇಪ್ಪತ್ತೈದು ವರ್ಷ ತುಂಬಿದ ಸಂಭ್ರಮದಲ್ಲಿ ಕೂಡ ಅವರು ನಮ್ಮನ್ನು ಆಹ್ವಾನಿಸಿದ್ದರು.

ಕಾಂತಾವರದ ಮುದ್ರಣ ಹಾಗೂ ವರ್ಧಮಾನ ಪುರಸ್ಕಾರಗಳು ಮೊಗಸಾಲೆಯವರ ಹೆಸರಿನ ಸಂಗಡವೇ ನಾಡಿನ ಸಾಹಿತ್ಯವಲಯದಲ್ಲಿ ಪ್ರತಿಷ್ಠಿತ ಸ್ಥಾನ ಪಡೆದುಕೊಂಡಿದೆ. ಕನ್ನಡದ ಪ್ರತಿಭಾವಂತರನ್ನು ಗುರುತಿಸಿ ಪ್ರೋತ್ಸಾಹಿಸುವ ಹೊಣೆ ಹೊತ್ತ ಅವರ ಸೃಜನಶೀಲ ಸಾಹಿತ್ಯ ಅಷ್ಟಾಗಿ ಕನ್ನಡದ ವಿಮರ್ಶೆಯಲ್ಲಿ ನ್ಯಾಯವಾಗಿ ಸಿಗಬೇಕಾದ ಪಾಲನ್ನು ಪಡೆಯದೇ ಇದ್ದದ್ದು ವಿಷಾದನೀಯ.

1995ರ ಸುಮಾರಿಗೆ ಪ್ರಕಟವಾದ 'ಉಪ್ಪು' ಎಂಬ ಶೀರ್ಷಿಕೆಯ ಕಾದಂಬರಿಯಿಂದಲೇ ನನಗವರ ಹೆಸರು ಚಿರಪರಿಚಿತವಾಗಿತ್ತು. ಮೊಗಸಾಲೆ ಎಂದರೆ ನಮ್ಮ ಕಡೆಗೆ ಪಡಸಾಲೆ ಎಂದರ್ಥ. ಅಂದರೆ ಎಲ್ಲಕ್ಕಿಂತ ಮುಖ್ಯವಾದ ಮನೆಯ ಮುಂದಣ ಜೋಲಿ. ಹಾಗಾಗಿ ಈ ಹೆಸರು ಕಿವಿಗೆ ಬಿದ್ದಾಗಿನಿಂದ ನನಗೆ ಏನೋ ಒಂದು ರೀತಿಯ ಆಕರ್ಷಣೆ. ಅದಕ್ಕಿಂತ ಕೆಲ ವರ್ಷಗಳ ಮೊದಲು ಇದೇ ಉಪ್ಪು ಕಾದಂಬರಿ, ತುಷಾರದ ಸ್ಪರ್ಧೆಯೊಂದರಲ್ಲಿ ಬಹುಮಾನ ಪಡೆದ ನೆನಪು. ಆ ಸಮಯದಲ್ಲಿ ಅದು ನನ್ನಿಂದ ಹಲವು ಬಾರಿ ಓದಿಸಿಕೊಂಡ ಅತ್ಯಂತ ಮೆಚ್ಚಿನ ರಾಜಕೀಯ ಹೋರಾಟದ ಕಾದಂಬರಿ. ಈ ಕೃತಿಗಿಂತ ಮೊದಲು ಅವರು ಬರೆದಿದ್ದ 'ಮಣ್ಣಿನ ಮಕ್ಕಳು' ಎಂಬ ಕಾದಂಬರಿ ಸಹ ದೀನ_ದಲಿತರ ಪರ ಜೀವನ ಹೋರಾಟದ ಗಾಥೆಯಾಗಿತ್ತು.

'ಉಪ್ಪು' ಕೃತಿಯ ಪ್ರತಿ ದೃಶ್ಯದಲ್ಲಿ ಬರುವ ವಾಮನರಾವ್ ಅಥವಾ ವಿ.ಆರ್ ಎಂಬ ವ್ಯಕ್ತಿಯ ಜೀವಮಾನದ ಪತ್ರಕರ್ತ ಹಾಗೂ ರಾಜಕೀಯ ಬದುಕಿನ ವೃತ್ತಾಂತಗಳೇ ಈ ಕಾದಂಬರಿಯ ವಸ್ತು. ಹಾಗೂ ವಿ.ಆರ್‌ನ ಸ್ನೇಹಿತನಾದ ಕಾದಂಬರಿಯ ನಿರೂಪಕ, ತನ್ನ ವೈದ್ಯ ವೃತ್ತಿಯ ಮಧ್ಯೆಯೇ ರಾಜಕೀಯದಲ್ಲಿ ತನಗರಿವಿಲ್ಲದ ಹಾಗೆ ನಿರ್ಮಿತವಾದ ಚಕ್ರವ್ಯೂಹದಲ್ಲಿ ಸಿಕ್ಕಿಬೀಳುವ ಈ ಕಥಾನಕ. ಸಾಮಾಜಿಕ ಕಳಕಳಿಯನ್ನು ಕುತೂಹಲವನ್ನು ಓದುಗರೊಟ್ಟಿಗೆ ಹಿಡಿದಿಟ್ಟುಕೊಳ್ಳುವಂಥ ನೈಜ ಕಾದಂಬರಿ. ಇಲ್ಲಿ ಬರುವ ಸಾಲು ಸಾಲು ಕಮ್ಯುನಿಸ್ಟ್ ಮುಖಂಡರು, ಕಾರ್ಖಾನೆಯ ಕೂಲಿಕಾರರ ಸಂಘಟನೆ, ದೌರ್ಜನ್ಯ, ಅಪಘಾತವೋ, ಕೊಲೆಯೋ ಎಂದು ಶಂಕಿಸಲ್ಪಟ್ಟು ಹತರಾಗುವ ನಾಯಕರು ಇವೆಲ್ಲ ಕರುಣಾಜನಕವಾಗಿ ಮೂಡಿನಿಂತಿದೆ.

ವಿ.ಆರ್ ಎಂಬ ವ್ಯಕ್ತಿಯ ಬಾಯಲ್ಲೇ ಕೇಳುವ ಆತ್ಮ ವೃತ್ತಾಂತ, ನಮ್ಮನ್ನು ತೀಕ್ಷ್ಣವಾಗಿ ತಟ್ಟುವಂಥದು. ಕಾದಂಬರಿಯುದ್ದಕ್ಕೂ ಬಳಕೆಯಾಗುವ ಸಿಗರೇಟು ಪ್ಯಾಕುಗಳು ಸಹ ಒಂದು ಪಾತ್ರದಂತೆಯೇ ನಮ್ಮೊಡನೆ ಸಹಜವಾಗಿ ಸ್ಪಂದಿಸಿದ ಅನುಭವ ಕೊಡುತ್ತದೆ. ಕಮ್ಯುನಿಸ್ಟ್ ಆದರ್ಶಗಳ ಬಗ್ಗೆ ಮೊದಲ ಲೇಖನ ಬರೆದು ಪ್ರಕಟಿಸಿ, ಪಳಗಿದ ಪತ್ರಕರ್ತನಾಗಿ ದೇಶದೆತ್ತರಕ್ಕೆ ಬೆಳೆದು ನಿಂತ ವಿ.ಆರ್. ಇಲ್ಲಿ ಹೀರೋನಂತೆ ಕಂಗೊಳಿಸುತ್ತಾನೆ. ಭಾರತದ ಸ್ವಾತಂತ್ರ್ಯ ಪೂರ್ವಕಾಲದ ಕೆಲವರ್ಷಗಳು ಹಾಗೂ ಸ್ವಾತಂತ್ರ್ಯೋತ್ತರದ ಕೆಲ ವರ್ಷಗಳ ರಾಜಕೀಯ ಬೆಳವಣಿಗೆಯ ವಾತಾವರಣದ ಅನುಸೃಷ್ಟಿಯಲ್ಲಿ ಮೊಗಸಾಲೆಯವರು ತಮ್ಮ ಪ್ರಾಮಾಣಿಕ ಗ್ರಹಿಕೆಗಳನ್ನಿಲ್ಲಿ ತಮ್ಮದೇ ಅನುಭವಿಕ ಭಾಷೆಯಲ್ಲಿ ಚಿತ್ರಿಸಿದ್ದಾರೆ.

ಮಧ್ಯಪ್ರದೇಶ, ಕೇರಳ, ಗುಜರಾತ್, ಕರ್ನಾಟಕಗಳ ಕೆಲ ಸನ್ನಿವೇಶಗಳು ಇಡೀ ದೇಶದ ಒಟ್ಟಾರೆ ರಾಜಕೀಯ ಧೋರಣೆಗಳನ್ನು ಪ್ರತಿನಿಧಿಸುತ್ತವೆ. ಕೊಚ್ಚಿನ್, ಭೋಪಾಲ್‌ಗಳಲ್ಲಿಯ ಕಮ್ಯುನಿಸಂ ಚಟುವಟಿಕೆಯಲ್ಲಿ ಭಾಗವಹಿಸಿದ, ಒಪಿನಿಯನ್, ಭೂಮಿತಾಯ್, ಕಾರ್ಮಿಕ್ ಪತ್ರಿಕೆಗಳ ಸಹ ಸಂಪಾದಕನಾಗಿರುವ ಕಾದಂಬರಿಯ ನಾಯಕ ವಿ.ಆರ್ ಎದುರಿಸುವ ಸಂದಿಗ್ಧಗಳು ಕಣ್ಣಿಗೆ ಕಟ್ಟುತ್ತವೆ. 'ಉತ್ತರ ಇಂಡಿಯಾದ ಜನ ದಕ್ಷಿಣದವರಷ್ಟು ಬುದ್ಧಿವಂತರಲ್ಲ' ಎಂಬ ಮಾತು ಕಾದಂಬರಿಯುದ್ದಕ್ಕೂ ಸಾಬೀತಾಗುತ್ತದೆ.

ಪತ್ರಕರ್ತ ವಿ.ಆರ್‌ನ ಸುತ್ತಲೇ ಹೆಣೆದುಕೊಂಡಿರುವ, ಮಲ್ಲಿಕಾ ಮೆನನ್ ಆತ್ಮಹತ್ಯಾ ಪ್ರಕರಣ, ಕೊಲೆ ಆರೋಪ, ನ್ಯಾಯಾಂಗ ತನಿಖೆ, ಚಳುವಳಿ, ದೊಂಬಿ, ಗಲಬೆ, ಲಾಠೀ ಚಾರ್ಜು, ಪ್ರಜಾಪ್ರಭುತ್ವದ ಮೌಲ್ಯಗಳು, ಪಕ್ಷಾಂತರ ಪ್ರಚೋದನೆಯ ಆಮಿಷ, ಟೇಪ್ ಪ್ರಕರಣ, ಭ್ರಷ್ಟಾಚಾರ, ಸ್ವಜನ ಪಕ್ಷಪಾತ, ಬಂದ್, ಜಾಥಾ, ಪಂಜಿನ ಮೆರವಣಿಗೆ, ಸತ್ಯಾಗ್ರಹ, ಬ್ಯಾಂಕ್ ದರೋಡೆ, ಜೀವಹಾನಿ, ಆಡಳಿತ ಪಕ್ಷ_ವಿರೋಧ ಪಕ್ಷ, ರಾಜೀನಾಮೆ, ತುರ್ತು ಪರಿಸ್ಥಿತಿ ಘೋಷಣೆ, ಒಂದೇ ಎರಡೇ ಎಲ್ಲವೂ ಕಾದಂಬರಿಯಲ್ಲಿ ಹೂಬೇ ಹೂಬಾಗಿ ಅಷ್ಟೇ ಸ್ಫುಟವಾಗಿ ಶ್ರೀ ಸಾಮಾನ್ಯನನ್ನು ತಲ್ಲಣಗೊಳಿಸುವಂತೆ ಮೂಡಿ ಬಂದಿದೆ.

ಮಧ್ಯಪ್ರದೇಶದ ರಾಜಕೀಯ ವಿಡಂಬನೆಯ ಜತೆಗೆ ಮೊಗಸಾಲೆಯವರು ಸಮಕಾಲೀನ ರಾಜಕೀಯ ಆಗುಹೋಗುಗಳನ್ನು ಸಹಜವಾಗಿ ಕಂಡುಕೊಂಡಿದ್ದಾರೆ. ಇಡೀ ದೇಶದಲ್ಲಿ ಎರಡೇ ಪಕ್ಷಗಳಿದ್ದರೆ ಮಾತ್ರ ಪ್ರಜಾಪ್ರಭುತ್ವ ಯಶಸ್ವಿಯಾಗಬಹುದೆಂಬ ಇಲ್ಲಿಯ ವಾದ, ಇಂದಿನ ಸಮ್ಮಿಶ್ರ ರಾಜಕೀಯದ ನಾಟಕೀಯ ಷಡ್ಯಂತ್ರಗಳಿಗೆ ಕನ್ನಡಿ ಹಿಡಿವಂತಿದೆ.

ಹಾಗೇ ಅವರ 'ನೆಲದ ನೆರಳು' ಎಂಬ ಕವನ ಸಂಕಲನದಲ್ಲಿ ನನ್ನಿಂದ ಆಗಾಗ ಓದಿಸಿಕೊಳ್ಳುವ ಅಪರೂಪದ ಕವಿತೆಗಳ ಬಗ್ಗೆ ಹೇಳದಿದ್ದರೆ, ನನಗೆ ಸಮಾಧಾನವಾಗಲಿಕ್ಕಿಲ್ಲ.

ಕವಿತೆಯ ಜತೆ ಮೊಂಬತ್ತಿಯಂತೆ ಮೌನವಾಗಿ ಕರಗುತ್ತಲೇ ಕಾಂತಾವರಕ್ಕೊಂದು ಬೆಳಕನಿತ್ತವರು ಮೊಗಸಾಲೆಯವರು. ಕವಿತೆಯೊಂದು ಅನುಭವದ ಚಿಟ್ಟೆ ಎನ್ನುತ್ತಲೇ ಅವರು ತಮ್ಮ ಕಾವ್ಯರೇಖೆಯಲ್ಲೇ ಆಕಾಶದಿಂದ ನೆಲಕ್ಕೂ ನೆಲದಿಂದ ಆಕಾಶಕ್ಕೂ ಕಾಮನಬಿಲ್ಲು ಮೂಡಿಸುವ ಕುಶಲ ಬಲ್ಲವರು.

ಇವರ ಕವಿತೆಗಳಲ್ಲಿ ಒಂದು ಪೆಗ್ ಹಾಕಿದ ಸೂರ್ಯ ನಡುಬೀದಿಯಲ್ಲಿ ಎದುರಾಗುತ್ತಾನೆ. ಮೊಗಸಾಲೆಯೆಂಬ ಅವರ ಹುಟ್ಟೂರಿನ ಹುಲ್ಲುಮನೆ, ಚಳಿಗಾಲದ ಹಚ್ಚಡದಂತೆ, ಬೇಸಿಗೆಯ ಬೀಸಣಿಗೆಯಂತೆ ಅವರಲ್ಲಿ ಕವಿತೆಗಳಾಗಿ ಮತ್ತೆ ಮತ್ತೆ ಹುಟ್ಟುತ್ತದೆ. ಕವಿತೆಯೊಂದನ್ನು ಬರೆದು ಮುಗಿಸಿದ ಗಳಿಗೆ ಸೂರ್ಯೋದಯದ ತತ್‌ಕ್ಷಣದ ಹಾಗೆ ಅನ್ನುವ ಈ ಕವಿ, ಒಂದು ನಗೆ ಹಾಗೂ ಪುಳಕಗೊಳಿಸುವ ಕನಸುಕಂಗಳಲ್ಲೇ ಕಾವ್ಯವನ್ನು ಮುನ್ನಡೆಸುವವರು.

ವೃತ್ತಿಯಿಂದ ವೈದ್ಯರಾಗಿರುವ ಮೊಗಸಾಲೆಯವರ ಬದುಕು ಹಾಗೂ ಬರಹ ಒಂದೇ ಆಗಿರುವುದು ನಮ್ಮ ಪ್ರೀತಿಗೆ ಕಾರಣ. ಮೂರ್‍ನಾಲ್ಕು ವರ್ಷಗಳ ಹಿಂದೆ ಮಾರಾಟವಾಗದೇ ಉಳಿದ ತಮ್ಮ ಕೃತಿಗಳ ಹಂಚಿಕೆಗಾಗಿ ಅವರು ಸ್ವತಃ ಬರೆದ ಒಂದು ಪತ್ರದ ಕೆಲಸಾಲುಗಳು ನಮ್ಮನ್ನು ಹನಿಗಣ್ಣಾಗಿಸಿದ್ದವು. ತಮ್ಮ ಅನೇಕ ತೊಂದರೆಗಳ ನಡುವೆಯೂ ಮೊದಲಿನದೇ ಹುಮ್ಮಸ್ಸಿನಿಂದ ಸಾಹಿತ್ಯ ಸೇವೆ ಹಾಗೂ ಸಂಘಟನೆಯಲ್ಲಿ ತೊಡಗಿದ ಡಾ॥ಮೊಗಸಾಲೆಯವರಿಗೆ ನನ್ನ ಅಂತಃಕರಣದ ವಂದನೆ.

O

# ಅಪರೂಪದ ಮೊಗಸಾಲೆ

ಎಚ್. ಡುಂಡಿರಾಜ್

ನಾ.ಮೊಗಸಾಲೆಯವರು ನವ್ಯದ ಸಂದರ್ಭದಲ್ಲಿ ಪ್ರಸಿದ್ಧಿಗೆ ಬಂದವರು. ಆದರೆ ಒಬ್ಬ ವ್ಯಕ್ತಿಯಾಗಿ ಅವರು ತಮ್ಮ ಸಮಕಾಲೀನ ನವ್ಯ ಸಾಹಿತಿಗಳಿಗಿಂತ ತೀರಾ ಭಿನ್ನರಾಗಿದ್ದಾರೆ. ನವ್ಯ ಸಾಹಿತಿಗಳಲ್ಲಿ ಅನೇಕರು ಬೆಂಗಳೂರು, ಮೈಸೂರು, ಧಾರವಾಡಗಳಂಥ ಪಟ್ಟಣಗಳನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರೆ, ಮೊಗಸಾಲೆ ಆರಂಭದಿಂದಲೂ ಕಾಂತಾವರವೆಂಬ ಪುಟ್ಟ ಹಳ್ಳಿಯಲ್ಲೇ ನೆಲೆಯೂರಿದರು. ಕಾಲೇಜುಗಳಲ್ಲಿ ಕನ್ನಡ ಅಥವಾ ಇಂಗ್ಲಿಷ್ ಬೋಧಿಸುವವರೇ ನವ್ಯಸಾಹಿತ್ಯದ ಕಂತ್ರಾಟು ಪಡೆದುಕೊಂಡಿದ್ದ ಕಾಲದಲ್ಲಿ ಇವರು ಅಕಾಡೆಮಿಕ್ ವಲಯದ ಹೊರಗಿದ್ದು, ತಾವು ಕಲಿತ ಆಯುರ್ವೇದ ವೈದ್ಯ ವೃತ್ತಿಗೆ ನಿಷ್ಠರಾಗಿ ಉಳಿದರು.

ಹಳ್ಳಿಯಲ್ಲಿ ಸಾಮಾನ್ಯರ ನಡುವೆ ಸಾಮಾನ್ಯನಂತೆ ಬದುಕಿದ್ದರಿಂದ ಮೊಗಸಾಲೆಯವರಲ್ಲಿ ಬುದ್ಧಿಜೀವಿಗಳ ಗತ್ತು, ಗಮ್ಮತ್ತು, ಬಿಡಾಫೆ, ಸಿನಿಕತನ ಕಂಡುಬರುವುದಿಲ್ಲ. ಅವರ ನಡೆನುಡಿಗಳಲ್ಲಿ ಈಗಲೂ ಕಂಡುಬರುವುದು ಗ್ರಾಮೀಣ ಜನರ ಮುಗ್ಧತೆ ಹಾಗೂ ಸ್ನೇಹಪರತೆ. ವಿದ್ಯಾವಂತರಲ್ಲದ ಹಳ್ಳಿಯ ಕೃಷಿಕರು, ವ್ಯಾಪಾರಿಗಳು ಮತ್ತು ಮದ್ದಿಗಾಗಿ ತಮ್ಮ ಬಳಿ ಬರುವ ವಿವಿಧ ವರ್ಗದ ಜನಸಾಮಾನ್ಯರನ್ನು ಹತ್ತಿರದಿಂದ ಕಂಡು ಅವರೊಂದಿಗೆ ಬೆರೆಯುವ ಅವಕಾಶ ಮೊಗಸಾಲೆಯವರಿಗೆ ಸಿಕ್ಕಿದೆ. ಇದರಿಂದಾಗಿ ಅವರ ಸಾಹಿತ್ಯಕ್ಕೆ ಮಾತ್ರವಲ್ಲ ವ್ಯಕ್ತಿತ್ವಕ್ಕೂ ಲಾಭವಾಗಿದೆ.

ಉದಯೋನ್ಮುಖ ಲೇಖಕರು ತಮ್ಮ ಪುಸ್ತಕದ ಗೌರವಪ್ರತಿಯನ್ನು ಕಳುಹಿಸಿದರೆ ಉತ್ತರ ಬರೆಯುವ ಪ್ರವೃತ್ತಿ ನವೋದಯ ಸಾಹಿತಿಗಳಲ್ಲಿ ಇತ್ತು. ಆದರೆ ನಂತರದಲ್ಲಿ ಬಹುಪಾಲು ಸಾಹಿತಿಗಳು ಪುಸ್ತಕ ತಲುಪಿದೆ ಎಂದು ತಿಳಿಸುವಷ್ಟು ಸೌಜನ್ಯವನ್ನೂ ತೋರಿಸುವುದಿಲ್ಲ. ಮೊಗಸಾಲೆ ನವ್ಯ ಸಾಹಿತಿಯಾದರೂ ಈ ವಿಚಾರದಲ್ಲಿ ಒಂದು ಅಪವಾದ. ನೀವು ಪುಸ್ತಕ ಕಳುಹಿಸಿದರೆ ಪುಸ್ತಕದ ಬಗ್ಗೆ ತಮ್ಮ ಅನಿಸಿಕೆಗಳನ್ನು ಅವರು ತಪ್ಪದೇ ಬರೆದು ತಿಳಿಸುತ್ತಾರೆ.

ನವ್ಯ ಸಾಹಿತಿಗಳಲ್ಲಿ ಸಾಮಾನ್ಯವಾಗಿದ್ದ ಸಿನಿಕತನ ಮೊಗಸಾಲೆಯವರಲ್ಲಿ ಇಲ್ಲ. ಆದ್ದರಿಂದಲೇ ಅವರಿಗೆ ಕಾಂತಾವರ ಕನ್ನಡ ಸಂಘವನ್ನು ಕಟ್ಟಲು ಸಾಧ್ಯವಾಯಿತು. ಮುದ್ದಣ ಕಾವ್ಯ ಪ್ರಶಸ್ತಿ, ವರ್ಧಮಾನ ಪ್ರಶಸ್ತಿ ಮುಂತಾದವುಗಳಿಗಾಗಿ ದುಡಿಯುವ ಹುಮ್ಮಸ್ಸು ಬಂತು.

ಕೆಲ ಬುದ್ಧಿಜೀವಿಗಳು, ಸೋಗಿನ ಸಾಹಿತಿಗಳು ಬೇಕೋ ಬೇಡವೋ ಎಂಬಂತೆ ಅಳೆದು ತೂಗಿ ಮಾತನಾಡುತ್ತಾರಲ್ಲವೇ? ಮೊಗಸಾಲೆ ಹಾಗಲ್ಲ. ಪಟ್ಟಾಂಗಕ್ಕೆ ಶುರುಮಾಡಿದರೆ ಹಿಂದೆ ಮುಂದೆ ಯೋಚಿಸದೆ, ಯಾವುದನ್ನೂ ಬಚ್ಚಿಟ್ಟುಕೊಳ್ಳದೇ ಎಲ್ಲವನ್ನೂ ಹೇಳಿಬಿಡುತ್ತಾರೆ.

ಮೊಗಸಾಲೆಯವರನ್ನು ನಾನು ಮೊದಲ ಬಾರಿ ಭೇಟಿಯಾದದ್ದು ಕಾಂತಾವರದಲ್ಲಿ ಅಂತ ನೆನಪು. ಸುಮಾರು 25 ವರ್ಷಗಳ ಹಿಂದೆ ಕೈಲಾಸಂ ನಾಟಕಗಳ ಬಗ್ಗೆ ಮಾತನಾಡಲು ನನ್ನನ್ನು ಅವರು ಅಲ್ಲಿಗೆ ಕರೆಸಿದ್ದರು. ಅಂದು ಅವರ ಮಡದಿ ಪ್ರೇಮಕ್ಕ ಮಾಡಿದ ಶಾವಿಗೆ ತಿನ್ನುತ್ತ ಮೊಗಸಾಲೆಯವರ ಮಾತುಗಳನ್ನು ಕೇಳುತ್ತ ಕುಳಿತದ್ದು ಕಣ್ಣಿಗೆ ಕಟ್ಟಿದಂತಿದೆ. ಅಂದು ತಮ್ಮ ಸಾಹಿತ್ಯದ ಸಿಹಿ-ಕಹಿ ನೆನಪುಗಳನ್ನೆಲ್ಲ ಮೊಗಸಾಲೆಯವರು ನನ್ನ ಮುಂದೆ ತೋಡಿಕೊಂಡಿದ್ದರು. ಮೊದಲ ಭೇಟಿಯಲ್ಲೇ ಅವರು ತೋರಿದ ಆತ್ಮೀಯತೆಯನ್ನು ಕಂಡು ನಾನು ದಂಗಾಗಿ ಹೋಗಿದ್ದೆ.

ತಮ್ಮ ಬರೆಹಗಳು ಪ್ರಸಿದ್ಧ ಪತ್ರಿಕೆಗಳಲ್ಲಿ ಆಗಾಗ ಪ್ರಕಟವಾಗಬೇಕು, ವಿಶೇಷಾಂಕಗಳಲ್ಲಿ ಅಚ್ಚಾಗಬೇಕು, ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ ಇತ್ಯಾದಿಗಳು ಬರಬೇಕು ಮುಂತಾದ ಬಯಕೆಗಳು ಎಲ್ಲ ಸಾಹಿತಿಗಳಲ್ಲೂ ಇದ್ದೇ ಇರುತ್ತದೆ. ಆದರೆ ಬಹಳಷ್ಟು ಸಾಹಿತಿಗಳು ಇವುಗಳನ್ನು ತೋರಿಸಿಕೊಳ್ಳುವುದಿಲ್ಲ. ತಮಗೆ ಇಂಥದ್ದರಲ್ಲೆಲ್ಲ ಆಸಕ್ತಿ ಇಲ್ಲ ಎಂಬ ಸೋಗು ಹಾಕುತ್ತ ಒಳಗೊಳಗೇ ಲಾಬಿ ನಡೆಸುತ್ತಾರೆ.

ಮೊಗಸಾಲೆಯವರು ಎಂಥ ಮುಗ್ಧರು ಎಂದರೆ ಎರಡು ವರ್ಷಗಳ ಹಿಂದೆ ಅವರನ್ನು ಭೇಟಿಯಾದಾಗ ಮಾತಿನ ನಡುವೆ 'ವಿಶೇಷಾಂಕಗಳ ಸಂಪಾದಕರ್‍ಯಾರೂ ನನ್ನಿಂದ ಕವನ, ಕತೆ ಕೇಳುವುದೇ ಇಲ್ಲ ಮಾರಾಯ್ರೇ' ಎಂದು ಆ ಬಗ್ಗೆ ಬೇಸರ ವ್ಯಕ್ತಪಡಿಸಿದ್ದರು! ಅವರೊಂದಿಗೆ ಮಾತಿಗಿಳಿದರೆ ಕಾಂತಾವರ ಕನ್ನಡ ಸಂಘದ ಕಾರ್ಯಕ್ರಮಗಳಿಗಾಗಿ ಅವರು ಹಣ ಸಂಗ್ರಹ ಮಾಡಲು ನಡೆಸುವ ಒದ್ದಾಟವನ್ನು ಕಣ್ಣಿಗೆ ಕಟ್ಟುವಂತೆ ಬಣ್ಣಿಸುತ್ತಾರೆ. ಕಾರ್ಯವಾಸಿ ಕತ್ತೆಕಾಲು ಕಟ್ಟಬೇಕಾಗಿ ಬಂದದ್ದನ್ನೂ ಹೇಳುತ್ತಾರೆ.

ಕಳೆದ ವರ್ಷ ಮುದ್ದಣ ಪ್ರಶಸ್ತಿಗೆ 25 ವರ್ಷ ತುಂಬಿದ ಸಂದರ್ಭದಲ್ಲಿ ಕಾಂತಾವರ ಕನ್ನಡ ಸಂಘ ಪ್ರಶಸ್ತಿ ವಿಜೇತರನ್ನು ಕಾಂತಾವರಕ್ಕೆ ಆಹ್ವಾನಿಸಿ ಒಂದು ಕವಿ ಸಮ್ಮೇಳನ ನಡೆಸಿತ್ತು. ಮೊಗಸಾಲೆಯವರ ಕಲ್ಪನೆಯ ಈ ಸಮಾರಂಭ ತುಂಬಾ ಅಚ್ಚುಕಟ್ಟಾಗಿ ನಡೆದಿತ್ತು. ಕವಿಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದ ಚೆನ್ನವೀರ ಕಣವಿಯವರು ತಮ್ಮ ಭಾಷಣದಲ್ಲಿ 'ಕಾಂತಾವರಕ್ಕೆ ಒಮ್ಮೆ ಬಂದರೆ, ಮತ್ತೆ ಮತ್ತೆ ಬರಬೇಕೆನ್ನಿಸುತ್ತದೆ. ಇದು ಕಾಂತಾವರವಲ್ಲ, ಅಯಸ್-ಕಾಂತಾವರ(ಅಯಸ್ಕಾಂತಾವರ)' ಅಂದಿದ್ದರು. ಹೀಗೆ ಕಾಂತಾವರದ ಹೆಸರನ್ನು ಸಾಹಿತ್ಯಲೋಕದಲ್ಲಿ ಮನೆಮಾತಾಗಿಸಿದ ಕೀರ್ತಿ ಮೊಗಸಾಲೆಯವರಿಗೆ ಸಲ್ಲುತ್ತದೆ.

ಈ ಕಾರ್ಯಕ್ರಮದ ಬಗ್ಗೆ ಮತ್ತು ಮೊಗಸಾಲೆಯವರ ಬಗ್ಗೆ ನಾನು 'ಮಾತು-ಕ(ವಿ)ತೆ' ಅಂಕಣದಲ್ಲಿ ಒಂದಿಷ್ಟು ಪ್ರಸ್ತಾಪ ಮಾಡಿದ್ದೆ. ಅದನ್ನು ಓದಿದ ಮೊಗಸಾಲೆಯವರು "ಕಾಂತಾವರದ ಬಗ್ಗೆ ಎಷ್ಟು ಆತ್ಮೀಯವಾಗಿ ಬರೆದಿದ್ದೀರಿ.ನನ್ನ ಬಗೆಗೂ ಕೂಡಾ...ನಿಮ್ಮ ಅಂತಃಕರಣದ ಮುಂದೆ ನಾನು ಸಣ್ಣವ. ನೀವು ಮತ್ತು ನಿಮ್ಮಂಥವರ ಪ್ರೀತಿಯಿಂದ ನಾನು ಬೆಳೆದೆ. ಇದೆಲ್ಲ

ಕೊಡುವ ಪಡೆದುಕೊಳ್ಳುವ ವ್ಯವಹಾರದಾಚೆಗಿನ ಪ್ರೀತಿ ಅಲ್ಲವೇ?"" ಅಂತ ಪತ್ರ ಬರೆದರು.

2004ರಲ್ಲಿ 125 ಮಂದಿಗೆ ರಾಜ್ಯೋತ್ಸವ ಪ್ರಶಸ್ತಿ ನೀಡಲಾಗಿತ್ತು. ಅರ್ಹರಲ್ಲದ ಅನೇಕರು ಪಟ್ಟಿಯಲ್ಲಿದ್ದದ್ದು ವ್ಯಾಪಕ ಟೀಕೆಗೆ ಗುರಿಯಾಗಿತ್ತು. ನಾನು ಈ ಬಗ್ಗೆ ನನ್ನ ಅಂಕಣದಲ್ಲಿ "ಹಾಗೇ ಆಗಬೇಕು. ಅವರಿಗೆ ತಕ್ಕ ಪ್ರಶಸ್ತಿಯಾಯಿತು" ಎಂಬ ಶಿರೋನಾಮೆಯಲ್ಲಿ ವಿಡಂಬನಾತ್ಮಕವಾಗಿ ಬರೆದಿದ್ದೆ. ಆ ವರ್ಷ ಮೊಗಸಾಲೆಯವರಿಗೂ ರಾಜ್ಯೋತ್ಸವ ಪ್ರಶಸ್ತಿ ಬಂದಿತ್ತು. ನನ್ನ ಲೇಖನಕ್ಕೆ ಮೊಗಸಾಲೆಯವರು- " ಪ್ರಶಸ್ತಿಯ ಫಜೀತಿ ನಿಜಕ್ಕೂ ಹೌದು! ಅದನ್ನು ಎಷ್ಟು ಚೆನ್ನಾಗಿ ಹೇಳಿದ್ದೀರಿ! ಓದಿ ಸಂತೋಷಗೊಂಡೆ, ಮುಜುಗರವೂ ಪಟ್ಟೆ" ಅಂತ ಪ್ರತಿಕ್ರಿಯೆ ಬರೆದಿದ್ದರು.

ಮೊಗಸಾಲೆಯವರ ವ್ಯಕ್ತಿತ್ವದಲ್ಲಿನ ಇಂಥ ಅನನ್ಯತೆಯನ್ನು ಕಂಡೇ ನಾನು ಅವರಿಗೆ 50 ತುಂಬಿದಾಗ 'ಅಪರೂಪದ ಮೊಗಸಾಲೆ' ಎಂಬ ಕವನ ಬರೆದಿದ್ದೆ. ಇದೀಗ ಮೊಗಸಾಲೆಯವರಿಗೆ 60 ತುಂಬಿದ್ದರೂ ಅವರ ವ್ಯಕ್ತಿತ್ವದ ಅನನ್ಯತೆ ಹಾಗೇ ಇದೆ. ಆದ್ದರಿಂದ ಆ ಕವನದ ಕೊನೆಯ ಸಾಲುಗಳನ್ನು ಈಗ ಇನ್ನೊಮ್ಮೆ ಉಲ್ಲೇಖಿಸಬಹುದು ಅನ್ನಿಸುತ್ತದೆ. ಅವು ಹೀಗಿವೆ :

ಮೊಗಸಾಲೆ ಎಂದರೆ ಇನ್ನೇನೂ ಅಲ್ಲ
ಎಷ್ಟು ಜನ ಬಂದರೂ ಆರಾಮ ಕೂರಬಲ್ಲ
ವಿಶಾಲ ಹಜಾರ, ಸುಂದರ ಮುಖಮಂಟಪ
ಉಸಿರು ಕಟ್ಟಿಸುವ, ಸಣ್ಣ ಸಣ್ಣ ಕೋಣೆಗಳ
ಈ ಕಾಲದಲ್ಲಿ ಮೊಗಸಾಲೆ ತೀರಾ ಅಪರೂಪ

O

# ಕಾಂತಾವರ ಮತ್ತು ಮೊಗಸಾಲೆ

ವಿ.ಗ.ನಾಯಕ, ಅಡ್ಯನಡ್ಕ.

ಡಾ||ನಾ.ಮೊಗಸಾಲೆ ಮೂಲತಃ ಈಗ ಕಾಸರಗೋಡಿಗೆ ಸೇರಿ ಹೋಗಿರುವ ಮೊಗಸಾಲೆಯವರು. ಸುಮಾರು ಮೂವತ್ತು ವರ್ಷಗಳಿಗೂ ಹಿಂದೆ ವೈದ್ಯರಾಗಿ ಈ ಪುಟ್ಟ ಹಳ್ಳಿಗೆ ಬಂದವರು. ಪ್ರವೃತ್ತಿಯಿಂದ ಕವಿಗಳು, ಕಾದಂಬರಿಕಾರರು. ಹೆಸರೂ ಮಾಡಿದ್ದವರು. ಆದರೆ ಮೊಗಸಾಲೆ ವ್ಯಕ್ತಿತ್ವವೇ ವಿಶಿಷ್ಟವಾದದ್ದು. ಅದರ ಜತೆ ಜತೆಗೇ ಇನ್ನೂ ಏನೇನೆಲ್ಲ ಕೈಗೂಡಿಸಬೇಕು; ಪವಾಡವೇ ಮಾಡಬೇಕು ಎಂದು ಮುನ್ನುಗ್ಗಿದ್ದೇ ಸೈ. ನೆಲೆಕೊಟ್ಟ ಕಾಂತಾವರ. ಇದರಂತೆಯೇ ಹಚ್ಚಿಕೊಂಡ ಸುತ್ತ–ಮುತ್ತಲಿನ ಬೆಳುವಾಯಿ, ಜೋಳ, ಕೆದಿಂಜೆ, ಸಂದಳಿಕೆ ಹೀಗೆ ಪಂಚ ಗ್ರಾಮಗಳನ್ನೊಳಗೊಂಡು ಒಂದು ಸದಭಿರುಚಿಯ ಸಂಘ ಸ್ಥಾಪಿಸುವುದು – ಇದು ಮೊದಲ ಯೋಜನೆ. ತತ್ಫಲವೇ ಎಪ್ರಿಲ್ 10, 1975ರಂದು 'ಕಾಂತಾವರ ಕನ್ನಡ ಸಂಘ' ಸ್ಥಾಪನೆ! ಆಗ ಮೊಗಸಾಲೆಯವರ ಬೆಂಬಲಕ್ಕೆ ನಿಂತವರಲ್ಲಿ ಮುಖ್ಯರು ವಿಟ್ಠಲ ಬೇಲಾಡಿ ಶಾಲೆಯ ಸಂಚಾಲಕ ಕೆ.ಮಾರಣ್ಣ ಮಾಡ ಅವರು.

ಇನ್ನೊಬ್ಬರು ಮುಖ್ಯೋಪಾಧ್ಯಾಯ ವಿಟ್ಠಲ ಬೇಲಾಡಿ ಅವರು. ಇವರೊಟ್ಟಿಗೆ ಇನ್ನೂ ಕೆಲವರು. ಎಲ್ಲರೂ ಶ್ರದ್ಧಾಳುಗಳು.

ಕನ್ನಡ ಸಂಘ ಈಗಾಗಲೇ ಇಪ್ಪತ್ತೈದು ವರ್ಷ ಮುಗಿಸಿದೆ. ಬೆಳ್ಳಿ ಬೆಳಕು ಕಂಡಿದೆ. ಬೆಳ್ಳಿಹಬ್ಬವನ್ನು ಅಭೂತಪೂರ್ವ ರೀತಿಯಲ್ಲಿ ಅನುಭವಿಸಿದೆ. ಈ ಇಪ್ಪತ್ತೈದು ವರ್ಷಗಳಲ್ಲಿ ಕನ್ನಡ ಸಂಘ ಹೇಗೆಲ್ಲ ತೊಡಗಿಕೊಂಡಿದೆ? ನಿಟ್ಟಿಸಿ ನೋಡುವಾಗ ಸಂತೋಷವಾಗುತ್ತದೆ;ಸಂಭ್ರಮವಾಗುತ್ತದೆ. ಇಂದಿಗೂ ಅನೇಕ ಆಧುನಿಕ ಸೌಲಭ್ಯಗಳಿಂದ ವಂಚಿತವಾದ ಒಂದು ಸಣ್ಣ ಗ್ರಾಮದಲ್ಲಿ ಇಷ್ಟೆಲ್ಲಾ ನಡೆಯಿತೇ? ಎಂದು ಆಶ್ಚರ್ಯವೂ ಆಗುತ್ತದೆ. ಏನೆಲ್ಲಾ ಅನುಕೂಲವಿದ್ದೂ ಏನೂ ಮಾಡಲಾಗದ ಪಾಡು ಇನ್ನೊಂದು ಕಡೆ!! ನಾಚಿಕೆ ಆಗುತ್ತದೆ.

ಇದುವರೆಗೆ 23ಕ್ಕೂ ಹೆಚ್ಚು ಗೋಷ್ಠಿಗಳನ್ನು ಕನ್ನಡ ಸಂಘದ ಮೂಲಕ ನಡೆಯಿಸಿಕೊಟ್ಟ ಅದರ ಸ್ಥಾಪಕರೂ, ಕಾರ್ಯಾಧ್ಯಕ್ಷರೂ ಆದ ಡಾ|ನಾ.ಮೊಗಸಾಲೆ ಸಹಜವಾಗಿಯೇ ಹೆಮ್ಮೆ ಪಟ್ಟುಕೊಳ್ಳುತ್ತಾರೆ: " ರಾಷ್ಟ್ರಕವಿ ಗೋವಿಂದ ಪೈಯವರ ಶತಮಾನೋತ್ಸವವನ್ನು ರಾಜ್ಯದಲ್ಲೇ ಮೊದಲಾಗಿ ಪ್ರಾರಂಭಿಸಿದ್ದು ಕಾಂತಾವರ ಕನ್ನಡ ಸಂಘ. ಕಯ್ಯಾರ ಕಿಂಞಣ್ಣ ರೈ, ಯಶವಂತ ಚಿತ್ತಾಲ, ಸೇಡಿಯಾಪು ಕೃಷ್ಣ ಭಟ್, ಸಾಂತ್ಯಾರು ವೆಂಕಟರಾಜ, ಕಡೆಂಗೋಡ್ಲು ಶಂಕರ ಭಟ್,

ಪಾ.ವೆಂ. ಆಚಾರ್ಯರಂಥ ಸಾಹಿತ್ಯ ಸಾಧಕರ ಮೊತ್ತಮೊದಲ ಸಾಹಿತ್ಯ ಗೋಷ್ಠಿಗಳನ್ನು ಸಂಯೋಜಿಸಿದ್ದು ನಾವೇ."

ಅಷ್ಟೇ ಅಲ್ಲ; ಪಂಪ, ರನ್ನರೇ ಮೊದಲಾದ ಹಳೆಯ ಮಹಾಕವಿಗಳ ಕಾವ್ಯಗಳನ್ನು ಪರಿಚಯಿಸುವ ವಿಶೇಷ ಉಪನ್ಯಾಸಗಳು ನಡೆದದ್ದೂ ಇದೇ ಸಂಘದಿಂದಲೇ ಆಗಿದೆ. ನವೋದಯ ಸಾಹಿತ್ಯದ ಕುರಿತು ವಸ್ತುನಿಷ್ಠ ಪ್ರಬಂಧ; ನವ್ಯ ಸಾಹಿತ್ಯದ ಕುರಿತೂ ಅಷ್ಟೇ ತೂಕದ, ಮೋಹಾತೀತವಾದ ಪ್ರಬಂಧ ಮತ್ತು ಚರ್ಚೆ ಎಲ್ಲದಕ್ಕೂ ಇದು ಒಡ್ಡಿಕೊಂಡಿದೆ. ದಲಿತ-ಬಂಡಾಯ ಸಾಹಿತ್ಯದ ಸಾಫಲ್ಯ- ವೈಫಲ್ಯಗಳ ಕುರಿತೂ ಗೋಷ್ಠಿ ನಡೆಯಿಸಿ ಗಂಭೀರವಾಗಿಯೇ ಪ್ರತಿಕ್ರಿಯಿಸಿದೆ. ಮುಸ್ಲಿಮ್ ಲೇಖಕ/ಲೇಖಕಿಯರನ್ನು ಕರೆಯಿಸಿ ನಡೆಯಿಸಿದ ಆತ್ಮೀಯ ಸಂವಾದವಂತೂ ಹಲವರಿಗೆ ಅಪರಿಚಿತವಾದ ಒಂದು ಸಮುದಾಯವನ್ನು ತೀರಾ ಹತ್ತಿರದಿಂದ ಅರ್ಥೈಸಿಕೊಳ್ಳುವಲ್ಲಿ ನೆರವಾದದ್ದೂ ವಿಶೇಷವಾಗಿ ಉಲ್ಲೇಖನೀಯವಾಗಿದೆ.

ಕವಿಗೋಷ್ಠಿಗಳನ್ನು ಕನ್ನಡ ಸಂಘ ಹಮ್ಮಿಕೊಂಡಿದೆ. ಹಿರಿಯ ಕವಿ ಗೋಪಾಲಕೃಷ್ಣ ಅಡಿಗರ ಅಧ್ಯಕ್ಷತೆಯಲ್ಲಿ ನಡೆದ ಕವಿಗೋಷ್ಠಿ ಅಪೂರ್ವವಾದ ಕವಿತೆಗಳಿಂದ ಸಹೃದಯರನ್ನು ಗೆದ್ದುಕೊಂಡದ್ದು ಒಂದು ಹಸುರಾದ ನೆನಪು. ಸಾಕ್ಷರತಾ ಆಂದೋಲನಕ್ಕೆ ಸಂಬಂಧಿಸಿದ ಕವಿಗೋಷ್ಠಿಯೂ ಚಿರಸ್ಮರಣೀಯವಾದದ್ದೇ. 1996ರಲ್ಲಿ ಮುದ್ದಣ ಕವಿ ಪ್ರಶಸ್ತಿ ಪಡೆದ ಒಟ್ಟು ಹದಿನೈದು ಮಂದಿ ಕವಿಗಳನ್ನು ಆಹ್ವಾನಿಸಿ ಏರ್ಪಡಿಸಿದ ಕವಿಗೋಷ್ಠಿಯೂ ಉಣಿಸಿದ್ದು ರಸದೂಟವನ್ನೇ.

'ಮುದ್ದಣ ಕವಿ ಪ್ರಶಸ್ತಿಯಾದರೂ ಎಲ್ಲಿಯದು? ಇದೂ ಕಾಂತಾವರ ಕನ್ನಡ ಸಂಘದ ಕಾಣ್ಕೆಯೇ: ಸ್ವತಃ ಡಾ। ಮೊಗಸಾಲೆ ಸ್ವಂತ ಕೃತಿಯೊಂದಕ್ಕೆ ಪಡೆದ ಸರಕಾರದ ಪ್ರಶಸ್ತಿ ಹಾಗೂ ಸನ್ನಿವೇಶ ಕೊಟ್ಟ ಕಹಿ ಅನುಭವವೇ ಮುದ್ದಣ ಕವಿ ಪ್ರಶಸ್ತಿಗೆ ಪ್ರೇರಣೆ! 1979ರಿಂದ ಪ್ರಶಸ್ತಿ ಪ್ರದಾನ. 'ಕರ್ನಾಟಕದಲ್ಲೇ ಪ್ರಥಮವಾಗಿ ಸರಕಾರೇತರ ನೆಲೆಯಲ್ಲಿ ಸಾಹಿತ್ಯ ಪ್ರಶಸ್ತಿ!' ಇದು ಹಿರಿಮೆ. ವಿಜೇತ ಕವಿಗೆ ಐದು ಸಾವಿರ ರೂಪಾಯಿ ಗೌರವ ಸಂಭಾವನೆ, ಸನ್ಮಾನ ಹಾಗೂ ಪ್ರಶಸ್ತಿ! ಇದುವರೆಗೆ ಒಟ್ಟು 25 ಮಂದಿ ಕವಿಗಳು ಈ ಪ್ರಶಸ್ತಿ ಪಡೆದಿದ್ದಾರೆ. ಈ ಬಾರಿ ಪ್ರಶಸ್ತಿ ಕವಿ ಅಂಶುಮಾಲಿಯವರ ಪಾಲಾಗಿದೆ. ಇವರೀಗ 26ನೆಯ ಕವಿಯಾಗಿದ್ದಾರೆ. ತನ್ನ ಪಾರದರ್ಶಕ ತೀರ್ಪಿನಿಂದಾಗಿ ಮುದ್ದಣ ಕವಿ ಪ್ರಶಸ್ತಿಗಿರುವ ಮಾನ ಬಹುದೊಡ್ಡದೇ ಆಗಿದೆ. ಆದುದರಿಂದಲೇ ಸ್ಪರ್ಧೆಯಲ್ಲಿ ಭಾಗವಹಿಸುವ ಹಿರಿಯ, ಕಿರಿಯ ಕವಿಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಲೇ ಇದೆ.

ನಾಡು_ನುಡಿಗಾಗಿ ದುಡಿದವರನ್ನು ಗುರುತಿಸಿ, ಗೌರವಿಸುವುದನ್ನು ಕನ್ನಡ ಸಂಘ ಕರ್ತವ್ಯವೆಂದೇ ಒಪ್ಪಿಕೊಂಡಿದೆ;ಮುಂದುವರಿಸಿಕೊಂಡು ಬಂದಿದೆ ಕೂಡ. ಸೇಡಿಯಾಪು, ಕಯ್ಯಾರ, ಬನ್ನಂಜೆ ರಾಮಾಚಾರ್ಯ, ಕೆ.ರಾಮು, ಜಸ್ಟಿಸ್ ಕೆ.ಎಸ್.ಹೆಗಡೆ – ಹೀಗೆ ಪಟ್ಟಿ ಬೆಳೆಯುತ್ತದೆ. ಇದುವರೆಗೆ ಒಟ್ಟು 40 ಮಂದಿಗೆ ಸನ್ಮಾನ ನಡೆದಿದೆ!

ಕೃತಿ ಪ್ರಕಟಣೆಯಲ್ಲೂ 'ಕನ್ನಡ ಸಂಘ ' ಆಸಕ್ತಿ ತೋರಿದೆ. ಅತ್ಯಂತ ನಿಷ್ಠೆಯಿಂದಲೇ ಅಲ್ಲಿಯೂ ತನ್ನನ್ನು ಒಡ್ಡಿಕೊಂಡಿದೆ. 'ದಕ್ಷಿಣ ಕನ್ನಡ ಕಾವ್ಯ 1901–1976' ಎಂಬುದು ಕನ್ನಡ ಸಂಘದ ಚೊಚ್ಚಲ ಕೊಡುಗೆ; ಸಹೃದಯರಿಗೆ ಅಚ್ಚುಮೆಚ್ಚಾದ ಹೊತ್ತಗೆ. ದಕ್ಷಿಣ ಕರಾವಳಿಯ 42 ಮಂದಿ ಕನ್ನಡ ಕವಿಗಳ ಒಟ್ಟು 71 ಕವನಗಳನ್ನೊಳಗೊಂಡು, ಸಾಕಷ್ಟು ಪ್ರಬುದ್ಧವಾದ

ಸಮೀಕ್ಷೆಯಿಂದೊಡಗೂಡಿ ಸಂದಿರುವ ಸಾರ್ಥಕ ಪ್ರಯತ್ನ. ಕೇರಳದ ಕಲ್ಲಿಕೋಟೆ ವಿಶ್ವವಿದ್ಯಾನಿಲಯದಲ್ಲಿ ಪಠ್ಯಪುಸ್ತಕದ ಮಾನ್ಯತೆ ಪಡೆದದ್ದೂ ಇದರ ಸತ್ವಕ್ಕೆ ಸಂದ ಪುರಸ್ಕಾರ! ಕನ್ನಡ ಸಂಘಕ್ಕೆ ಪ್ರಾಪ್ತವಾದ ಬಹುಮಾನ! ಹಿರಿಯ ಕವಿಗಳಾದ ಸು.ರಂ.ಎಕ್ಕುಂಡಿಯವರ 'ಬೆಳ್ಳಕ್ಕಿ', ಬನ್ನಂಜೆ ಗೋವಿಂದಾಚಾರ್ಯರ 'ಹೇಳದೇ ಉಳಿದಿದ್ದು' ಇಂಥ ಬೆಲೆಬಾಳುವ ಕವನ ಸಂಕಲನಗಳನ್ನು ಪ್ರಕಟಿಸಿದ್ದೂ ಇದೇ ಕನ್ನಡ ಸಂಘವೇ. ಇದರ ಪ್ರಕಟಣೆಗಳಲ್ಲಿ ಕಿರೀಟಪ್ರಾಯವಾದದ್ದು, ಇದರ ಬೆಳ್ಳಿಹಬ್ಬದ ಸಡಗರದಲ್ಲಿ ಹೊರಬಂದ 'ದಕ್ಷಿಣಕನ್ನಡದ ಶತಮಾನದ ಕಾವ್ಯ 1900–2000'ಎಂಬ ಬೃಹತ್ ಕಾವ್ಯ ಸಂಪುಟ! ಡೆಮ್ಮಿ ಆಕಾರದಲ್ಲಿ ಒಟ್ಟು 464 ಪುಟಗಳು!! ಅವಿಭಜಿತ ದಕ್ಷಿಣಕನ್ನಡ ಜಿಲ್ಲೆ ಹಾಗೂ ಕಾಸರಗೋಡಿನ ಕವಿಗಳನ್ನು ಬಿಡದೇ ಓದಿ, ಅವರ ಸೆಲೆ–ಬೆಲೆ ತೂಗಿ ನೋಡಿ, ನಿರ್ಭಿಡೆಯಿಂದ ಪ್ರತಿಸ್ಪಂದಿಸಿದ್ದು ಇದರ ಘನತೆ. ಇದಕ್ಕಾಗಿ ಒಟ್ಟು 150 ಪುಟಗಳು ಮೀಸಲು! ಎಂದರೆ ಹೊಸ ದಿಕ್ಕಿನಲ್ಲಿ ಕಾವ್ಯ ಮೀಮಾಂಸೆ ಅಥವಾ ಕಾವ್ಯ ಮೀಮಾಂಸೆಗೆ ಹೊಸ ದಿಕ್ಕು – ಇದಿಲ್ಲಿನ ಅನನ್ಯತೆ. ಒಟ್ಟು 117 ಕವಿಗಳಿಲ್ಲಿದ್ದಾರೆ. 180ರಷ್ಟು ಕವನಗಳಿವೆ! ಕವನಗಳ ಆಯ್ಕೆಯಲ್ಲೂ ವಿಮರ್ಶಕನ ಕಟ್ಟೆಚ್ಚರ ತೀಕ್ಷ್ಣವಾಗಿಯೇ ಮಿಡಿದುಕೊಂಡಿದೆ. ನಮ್ಮ ಮುಖ್ಯ ವಿಮರ್ಶಕರಲ್ಲಿ ಒಬ್ಬರಾದ ಜಿ.ಜನಾರ್ದನ ಭಟ್ ಅವರ ಒಟ್ಟೂ ನಿರ್ವಹಣೆ ಇಲ್ಲಿ ಅದ್ಭುತವಾಗಿದೆ. ಸಂಪಾದಕನ ಜವಾಬ್ದಾರಿ ಬಗ್ಗೆ ಇದೊಂದು ಅತ್ಯುತ್ತಮವಾದ ಮಾದರಿ ಆಗಿದೆ. ಇಂಥ ಸಂಪುಟ ವಿಶ್ವವಿದ್ಯಾನಿಲಯದಲ್ಲಿ ಪಠ್ಯಪುಸ್ತಕವಾಗಬೇಕು. ಇದು ಸಾಹಿತ್ಯದ ವಿದ್ಯಾರ್ಥಿಗಳಿಗೆ ಮಾಡುವ ಉಪಕಾರವಾಗುತ್ತದೆ. ಇದೇ ಸಂದರ್ಭದಲ್ಲಿ ಬಿಡುಗಡೆಗೊಂಡದ್ದು 'ಬೆಳ್ಳಿ ಬೆಳಕು' ಸಂಚಿಕೆ. ಇದು ಕನ್ನಡ ಸಂಘವನು ಪಂಚಗ್ರಾಮಗಳನ್ನು ಪರಿಚಯಿಸಿದ ಕೃತಿ. ಒಂದು ಸಂಘಟನೆಯ ಹಿಂದಿನ ಶ್ರದ್ಧೆ, ಶ್ರಮ ಎಲ್ಲವನ್ನೂ ತೆರೆದಿಟ್ಟ ಕೃತಿ.

ಬೆಳ್ಳಿಹಬ್ಬವನ್ನು ಹೀಗೆ ಅಕ್ಷರಗಳಲ್ಲಿ ಶಾಶ್ವತವಾಗಿ ಸ್ಥಾಪಿಸುವ ಕೆಲಸವನ್ನು ನಿಭಾಯಿಸುವುದರೊಟ್ಟಿಗೆ ಕನ್ನಡ ಸಂಘವು ಬೆಳ್ಳಿಹಬ್ಬಕ್ಕೆ ಸಂಬಂಧಿಸಿದ ಸಮ್ಮೇಳನ ಹಾಗೂ ಪೂರ್ವಭಾವೀ ಕಾರ್ಯಕ್ರಮಗಳನ್ನು ಅತ್ಯಂತ ವಿಭಿನ್ನ ಶೈಲಿಯಲ್ಲಿ ಅನಾವರಣಗೊಳಿಸಿದ್ದು ಒಂದು ವಿಶಿಷ್ಟ ಉಪಕ್ರಮವಾಗಿದೆ. ಕನ್ನಡ ಸಂಘವೊಂದು ಕೇವಲ ಸಾಹಿತ್ಯಿಕವಾಗಿ ಮಾತ್ರವಲ್ಲ, ಸಾಂಸ್ಕೃತಿಕವಾಗಿಯೂ ಬಿಚ್ಚಿಕೊಳ್ಳಬೇಕು ಮತ್ತು ಎಲ್ಲದಕ್ಕೂ ಹೊಸ ಅರ್ಥ, ಭಾಷ್ಯ, ಸಂಬಂಧಗಳನ್ನು ಜೋಡಿಸುತ್ತ ಎಲ್ಲರಿಗೂ ಸಲ್ಲುವಂತಾಗಬೇಕು ಎಂಬ ನಿಟ್ಟಿನಲ್ಲಿ ಕನ್ನಡ ಸಂಘ ತೋರಿದ ಕಾಳಜಿ, ಕಂಡ ಸಾಫಲ್ಯ ಈಗ ಇತಿಹಾಸವಾಗಿದೆ.

2001ರ ಸೆಪ್ಟಂಬರ್ ತಿಂಗಳಲ್ಲಿ ಕಾಂತಾವರದಲ್ಲಿಯೇ ಬೆಳ್ಳಿಹಬ್ಬದ ಉದ್ಘಾಟನಾ ಕಾರ್ಯಕ್ರಮ ನಡೆಯಿತು. ಅವೊತ್ತಿನ ಕಾರ್ಯಕ್ರಮದ ವಿಶಿಷ್ಟತೆಯನ್ನು ಪತ್ರಿಕೆಯೊಂದು ಹೀಗೆ ವರದಿ ಮಾಡುತ್ತದೆ: " ಸ್ವಾಗತ ಪ್ರಸ್ತಾವನೆಗಳ ಬಳಿಕ ಕಾರ್ಯಾಧ್ಯಕ್ಷ ಡಾ। ನಾ. ಮೊಗಸಾಲೆ ಅವರು ಬೆಳ್ಳಿತಟ್ಟೆಯಲ್ಲಿ ಹಸಿರು ರುಮಾಲನ್ನಿಟ್ಟು ಸ್ವಾಗತಾಧ್ಯಕ್ಷ ಡಾ। ಜೀವಂಧರ್ ಕುಮಾರ್ ಬಲ್ಲಾಳರಿಗೊಪ್ಪಿಸಿದರು. ಬಲ್ಲಾಳರು ಅದನ್ನು ಉದ್ಘಾಟಕ ಡಿ.ಕೆ.ಚೌಟ ಅವರಿಗೊಪ್ಪಿಸಲು ಅದನ್ನವರು ತಲೆಗೆ ಸುತ್ತಿ ಸಭಾಸ್ಥಾನದ ಹಿಂಭಾಗದಲ್ಲಿರುವ ಶಾರದಾ ಸನ್ನಿಧಿಗೆ ಬಂದರು. ಬಲ್ಲಾಳರು.... ನಂದಾದೀಪದಿಂದ ಏಕಾರತಿ ಹಚ್ಚಿ ಚೌಟರಿಗೊಪ್ಪಿಸಲು ಸಭಿಕರೆಲ್ಲ ಒಬ್ಬರನ್ನೊಬ್ಬರು ಸ್ಪರ್ಶಿಸುತ್ತಿದ್ದಂತೆ, ಸೇಡಿಯಾಪು ಕೃಷ್ಣಭಟ್ಟರ ಕೃತಿ 'ಎಣ್ಣೆ ಹೊಯ್ಯಮ್ಮ ದೀಪಕ್ಕೆ' ಕವನವನ್ನು ನಾದವೈಭವಂ ಗಾಯಕರು ಹಾಡುತ್ತಿದ್ದಂತೆ, ಚೌಟರು ಎತ್ತರದ ಕಾಲುದೀಪವನ್ನು ಬೆಳಗಿದರು. ಮತ್ತು ವೇದಿಕೆಯತ್ತ ಮರಳಿದ ಚೌಟರಿಗೆ

ಬಲ್ಲಾಳರು ಚಂಡೆ ನೀಡಿದರು. 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ನಾಡಗೀತೆ ಹಾಡಾಗಿ ಹೊಮ್ಮುತ್ತಿರುವಂತೆಯೇ ಚೌಟರು ಚಂಡೆ ಬಾರಿಸಿದರು......" ನಿಟ್ಟೆಯಲ್ಲಿ ನಡೆದ ಕಾವ್ಯ ಕಮ್ಮಟವು "ಭಾರತ ಗ್ರಂಥವನ್ನು ವ್ಯಾಸ ಪೀಠದಲ್ಲಿರಿಸಿ ಆರತಿ ಬೆಳಗಿ ನಾಂದಿ ಪದ್ಯಗಳನ್ನು ವಾಚಿಸುವ ಮೂಲಕ ನೆರವೇರಿತು." ಬೋಳದಲ್ಲಿ ಯಕ್ಷಗಾನ, ವಿಚಾರಗೋಷ್ಠಿ, ಪ್ರಾತ್ಯಕ್ಷಿಕೆ; ನಂದಳಿಕೆಯಲ್ಲಿ ಮುದ್ದಣನಿಗೆ ಕಾವ್ಯ ನಮನ, ಬೆಳ್ಮಣ್‌ನಲ್ಲಿ ಕಾವ್ಯವಾಚನ, ಕಮ್ಮಟ ಹಾಗೂ ಸಾಹಿತ್ಯ ಸಂವಾದ – ಇದೆಲ್ಲವೂ ಬೆಳ್ಳಿಹಬ್ಬಕ್ಕೆ ಸಂಬಂಧಿಸಿ ಪಂಚಗ್ರಾಮಗಳಲ್ಲಿ ಯಶಸ್ವಿಯಾದವು. ಇಲ್ಲಿಯೂ ವಿಶಿಷ್ಟತೆಗಳು ಆದ್ಯತೆ ಪಡೆದವು; ಮನೆಮಾತಾದವು!!

ಏಪ್ರಿಲ್ 15, 2001ರಂದು ಕಾಂತಾವರದಲ್ಲಿ ನಡೆದ ರಾಜ್ಯಮಟ್ಟದ ಸಾಹಿತ್ಯ, ಸಾಂಸ್ಕೃತಿಕ ಸಮ್ಮೇಳನವು ಹಿಂದಿಲ್ಲ, ಮುಂದೇನೋ ಎಂಬಂತೆ ಜರುಗಿದ್ದು ಚರಿತ್ರಾರ್ಹವಾದದ್ದು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಸಾಹಿತಿ ವ್ಯಾಸರಾಯ ಬಲ್ಲಾಳ ಸಮ್ಮೇಳನಾಧ್ಯಕ್ಷರಾಗಿ ಅಂದು ಮಾಡಿದ ಭಾಷಣ ಅಪೂರ್ವವಾದದ್ದು. ಹಿರಿಯ ಕವಿ ಕಯ್ಯಾರ ಕಿಂಞಣ್ಣ ರೈ ದೀಪ ಬೆಳಗಿ ಉದ್ಘಾಟಿಸಿ ಕನ್ನಡ ಸಂಘವನ್ನು ಅಭಿನಂದಿಸಿ ಹರಸಿದ್ದು ರೋಮಾಂಚನಕಾರಿಯಾದದ್ದು. ಬಳಿಕ ನಡೆದ ಕವಿಗೋಷ್ಠಿ, ಸಾಹಿತಿಗಳೊಂದಿಗೆ ಸಂವಾದ, ಸಾಧಕರಿಗೆ ಸನ್ಮಾನ, ಸಮಾರೋಪ ಸಭೆ ಒಂದಕ್ಕಿಂತ ಒಂದು ಹೆಚ್ಚು ಅರ್ಥಪೂರ್ಣವಾಗಿ, ಶ್ರೀಮಂತವಾಗಿ ಅನಾವರಣಗೊಂಡು ಮನಸ್ಸನ್ನು ಅರಳಿಸಿತು, ಬುದ್ಧಿಯನ್ನು ಬೆಳಗಿಸಿತು. ಇಲ್ಲಿಯೂ ವೈಶಿಷ್ಟ್ಯ ಮರೆಯದೇ ಉಳಿಯಲಿಲ್ಲ. ಸಮ್ಮೇಳನಾಧ್ಯಕ್ಷ ದಂಪತಿಯನ್ನು ಚಂಡೆ, ತಾಳ, ಛತ್ರಿ ಮೆರವಣಿಗೆಯಲ್ಲಿ ಕಾಂತೇಶ್ವರ ದೇವಳದ ಹೊರ ಆವರಣಕ್ಕೆ ಒಂದು ಸುತ್ತು ತಂದು ವೇದಿಕೆಗೆ ಬರಮಾಡಿಕೊಂಡದ್ದು; ಉದ್ಘಾಟಕರಿಗೆ ಕೆಂಪು ರುಮಾಲು ಸುತ್ತಿ, ಶಾಲು ಹಾಕಿ ಗುಲಾಬಿ ಹೂ ನೀಡಿ ಸತ್ಕರಿಸಿದ್ದು; ಅಧ್ಯಕ್ಷರಿಗೆ ಮೈಸೂರು ಪೇಟ ತೊಡಿಸಿ, ಶಾಲು ಹೊದಿಸಿ, ಪನ್ನೀರು ಎರಚಿ; ಕುಂಕುಮ ಸಹಿತ ವೀಳ್ಯ ಹಸ್ತಾಂತರಿಸಿದ್ದು; ಚಂದ್ರಶೇಖರ ಕೆದಿಲಾಯರು 'ಹಚ್ಚೇವು ಕನ್ನಡದ ದೀಪ' ಹಾಡು ಮೊಳಗಿಸುತ್ತಿದ್ದಂತೆ ಕೆಂಪು ರುಮಾಲಿನ ಕಯ್ಯಾರರು ಸಪ್ತಬತ್ತಿಯ ದೀಪ ಹಚ್ಚಿದ್ದು – ಎಲ್ಲವೂ ಹೊಸ ಲೋಕಕ್ಕೆ ಒಯ್ಯುಂಥವೇ! ಪರಮಾನಂದಕ್ಕೆ ಪಕ್ಕಾಗಿಸಿದಂಥವೇ.

ಕನ್ನಡ ಸಂಘ ತನ್ನ ಹೆಜ್ಜೆಯನ್ನು ಇನ್ನೂ ಮುಂದಕ್ಕಿಟ್ಟಿದೆ. ಮರೆಯಬಾರದ ಸರ್ವೋದಯ ಸಾಹಿತಿಗಳನ್ನು ತರುಣರಿಗೆ ತಲುಪಿಸುವ ನಿಟ್ಟಿನಲ್ಲಿ ಕಳಕಳಿ ಹೊಂದಿದೆ; ರೂಪುರೇಶೆ ಹಾಕಿಕೊಂಡಿದೆ. ಹುರುಳಿ ಭೀಮರಾಯರು, ಪಾಂಡೇಶ್ವರ ಗಣಪತಿರಾಯರು, ಅ.ಗೌ.ಕಿನ್ನಿಗೋಳಿ ಇಂಥವರ ಬದುಕು – ಬರಹಗಳ ತಲಸ್ಪರ್ಶಿ ಅಧ್ಯಯನ–ಶೋಧನೆ–ಮಂಡನೆ ಸಂಘದ ಆಶಯವಾಗಿದೆ.

ಕನ್ನಡ ಸಂಘ ಇದೀಗ ಸಾಹಿತ್ಯೋತ್ಸವದ ಸಿದ್ಧತೆಯಲ್ಲಿದೆ. ಜನವರಿ 28ರಂದು ಅದು 26ನೆಯ ವಾರ್ಷಿಕೋತ್ಸವವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಸಹಯೋಗದಲ್ಲಿ ಅತ್ಯುಪಯುಕ್ತವಾದ ರೀತಿಯಲ್ಲಿ ನಡೆಸಲು ಕಾರ್ಯೋನ್ಮುಖವಾಗಿದೆ. ಇಂಥ ಸಂಘವನ್ನು ಸಮಸ್ತ ಕನ್ನಡಿಗರೂ ಹಾರ್ದಿಕವಾಗಿ ಅಭಿನಂದಿಸಲೇ ಬೇಕಿದೆ. ಅದು ಇನ್ನೂ ಹೆಚ್ಚಿನ ಯಶಸ್ಸುಗಳನ್ನು ಕಾಣುವಂತೆ ಹಾರೈಸಬೇಕಿದೆ.

O

# ನೋವಿನಲ್ಲೂ ನಗು ಕಾಣಬಲ್ಲ ಹಸನ್ಮುಖಿ

**ನಾರಾಯಣ ಮಾಳ್ಕೋಡ್**

ಅಂದು ಭಾನುವಾರ; ನಮ್ಮ ಪ್ರಕಾಶನಕ್ಕೆ ಹೊಸ ಆಯಾಮ ನೀಡಿದ, ಸಹೃದಯ ಲೇಖಕ ಡಾ. ಎಸ್.ಪಿ. ಪದ್ಮಪ್ರಸಾದ್ ಅವರೊಡನೆ ಮುಂದಿನ ಪ್ರಕಟಣೆಯ ಬಗ್ಗೆ ಸಮಾಲೋಚನೆ ನಡೆಸಿದ್ದೆ. ಕೈಯಲ್ಲಿ ಕೆಲವು ಹಸ್ತಪ್ರತಿಗಳಿದ್ದರೂ ಅದು ಸಾರಸ್ವತ ಲೋಕಕ್ಕೆ ಅವಶ್ಯಕ ಎನಿಸಿರಲಿಲ್ಲ. ಹೊಸ ಪ್ರಕಾಶನಕ್ಕೆ ಹಿರಿಯ ಬರಹಗಾರರ ಅಥವಾ ಉತ್ತಮ ಬರಹಗಾರರ ಅಥವಾ ಉತ್ತಮ ಗುಣಮಟ್ಟದ ಹಸ್ತಪ್ರತಿ ಬರುವುದು ದುಸ್ತರ ಎಂಬ ವಿಷಯವೇ ನಮ್ಮ ಸಮಾಲೋಚನೆಯ ಮುಖ್ಯ ಭಾಗ.

ಉತ್ತಮ ಹಸ್ತಪ್ರತಿಗೆ ಪುಸ್ತಕ ರೂಪ ಕೊಟ್ಟು, ಆದಷ್ಟು ಕಡಿಮೆ ಬೆಲೆಗೆ ಜನರ ಕೈಗಿಡುವುದನ್ನೇ (ಬರೇ ದುಡ್ಡು ಮಾಡುವುದಲ್ಲ) ಮುಖ್ಯ ಉದ್ದೇಶವಾಗಿಸಿಕೊಂಡ ನನ್ನಂತಹ ಪ್ರಕಾಶಕ ಆರಂಭದಲ್ಲಿ ಉತ್ತಮ ಹಸ್ತಪ್ರತಿಗಾಗಿ ಪರದಾಡಿದರೆ ಆಶ್ಚರ್ಯವೇನಿಲ್ಲ.

ಈ ಸಂದರ್ಭದಲ್ಲಿ ಪ್ರಸ್ತಾಪವಾದ ಹೆಸರು ನಾಡಿನ ಹಿರಿಯ ಬರಹಗಾರ ಡಾ. ನಾ. ಮೊಗಸಾಲೆ ಅವರದ್ದು. ಅವರಿಂದ ಒಂದು ಹಸ್ತಪ್ರತಿ ಕೊಡಿಸುವ ಭರವಸೆ ಡಾ. ಪದ್ಮಪ್ರಸಾದ್ ಅವರಿಂದ. ನನ್ನಿಂದ ಸಂತೋಷದ ಒಪ್ಪಿಗೆ. ಆದರೆ ಆ ಕ್ಷಣ, ಅವರಿಂದ ಹಸ್ತಪ್ರತಿ ಬರುವ ಭರವಸೆ ಮಾತ್ರ ಶೂನ್ಯ.

ಸುಳ್ಳಾಯಿತು ನನ್ನ ಅನಿಸಿಕೆ. ಕೇವಲ ಎರಡು ತಿಂಗಳಲ್ಲಿ ಅವರ ಕಥೆಗಳ ಹಸ್ತಪ್ರತಿ ನನಗೆ ಬಂತು. ಓದಿದೆ. ಅರ್ಥೈಸಿಕೊಳ್ಳಲು ಯತ್ನಿಸಿದೆ. ಮೊಗಸಾಲೆಯವರ ಬಗ್ಗೆ ಕೇಳಿದ, ಓದಿದ್ದ ವಿಷಯಗಳು ಸುಳ್ಳಲ್ಲ ಎಂಬ ಭಾವನೆಯ ಜನನ. ಆ ಕಥೆಗಳಲ್ಲಿನ ಗಂಭೀರತೆ, ಸೊಗಸಾದ ನಿರೂಪಣೆ. ಗೊಂದಲವಿಲ್ಲದಿರುವಿಕೆ/ ಸ್ಪಷ್ಟತೆ. ಸಂದೇಶ. ಎಲ್ಲವೂ ಮೋಡಿ ಮಾಡುವಂತಹದ್ದು ಎನಿಸಿತು. ಕೂಡಲೇ ಡಾ. ಪದ್ಮಪ್ರಸಾದ್‌ಗೆ 'ಥ್ಯಾಂಕ್ಸ್' ಹೇಳಿದೆ.

ಮತ್ತೆರಡು ತಿಂಗಳೊಳಗೆ ಕಥೆಗಳಿಗೆ 'ಸುಂದರಿಯ ಎರಡನೇ ಅವತಾರ ಮತ್ತು ಇತರ ಕಥೆಗಳು' ಹೆಸರಿನ ಪುಸ್ತಕ ರೂಪ ಬಂತು. ಈ ಸಂದರ್ಭದಲ್ಲೇ ನಾನು ಮೊಗಸಾಲೆಯವರನ್ನು ಮೊದಲ ಬಾರಿಗೆ ನೋಡಿದ್ದು.

ಪ್ರತಿಷ್ಠಿತ ಮುದ್ದಣ ಕಾವ್ಯ ಪ್ರಶಸ್ತಿಗೆ '25' ತುಂಬಿದ ಸಂಭ್ರಮದಲ್ಲೇ ಈ ಕಥಾಸಂಕಲನಕ್ಕೆ

ಬಿಡುಗಡೆಯ ಅವಕಾಶ. ಬೆಂಗಳೂರಿನಿಂದ ಬಹುದೂರದಲ್ಲಿರುವ 'ಕಾಂತಾವರ'ದಂತಹ ಹಳ್ಳಿಯಲ್ಲಿ ಅಷ್ಟೊಂದು ಅಚ್ಚುಕಟ್ಟುತನದ ಕಾರ್ಯಕ್ರಮ ನನ್ನ ಪಾಲಿಗೆ ಅನಿರೀಕ್ಷಿತ. ಸುತ್ತಲಿನವರನ್ನು ಈ ಬಗ್ಗೆ ಕೇಳಿದೆ. ಕಾಂತಾವರದ ಕನ್ನಡ ಸಂಘದ ಶಕ್ತಿ ಮೊಗಸಾಲೆ ಒಬ್ಬರೇ ಎಂದರು. ಅಂತಹ ಹಳ್ಳಿಯಲ್ಲಿ ಕುಳಿತು ಇಷ್ಟೊಂದು ಸಾಹಿತ್ಯ ಸಾಧನೆ ಅವರಿಂದ ಹೇಗೆ ಸಾಧ್ಯವಾಯಿತು ಎಂಬ ಪ್ರಶ್ನೆಗೆ ಈಗಲೂ ನನಗೆ ಉತ್ತರ ಸಿಕ್ಕಿಲ್ಲ.

ಅಂದಿನಿಂದ ಇಂದಿನವರೆಗಿನ ಸುಮಾರು ಒಂದೂವರೆ ವರ್ಷದ ಅವಧಿಯಲ್ಲಿ ನಮ್ಮ ಸಂಬಂಧ ಸಾಕಷ್ಟು ಬಲಗೊಂಡಿದೆ. ಅವರ ಆತ್ಮಚರಿತ್ರೆ 'ಬಯಲಬೆಟ್ಟ'ವೂ ನಮ್ಮ ಪ್ರಕಾಶನದಿಂದಲೇ ಬಯಲಾಗಿದೆ. ಆ ಬೃಹದ್ಗ್ರಂಥದ ಪ್ರಕಟಣೆಯ ಸಂದರ್ಭದಲ್ಲಿ ಅದನ್ನು ಓದುವ ಅವಕಾಶ. ಅದರಿಂದ ಮೊಗಸಾಲೆಯವರ ಬದುಕಿನ ವಿವಿಧ ಮಜಲುಗಳನ್ನು ಅರ್ಥಮಾಡಿಕೊಳ್ಳುವುದು ಸಾಧ್ಯವಾಯಿತು. ನಿಜಕ್ಕೂ ಮೊಗಸಾಲೆ ಬಹು ಕಷ್ಟದ ಪರಿಸ್ಥಿತಿಯಲ್ಲಿ ತಮ್ಮ ಬದುಕು ಆರಂಭಿಸಿ ಸಾಹಿತ್ಯ ಸೇವೆಗೆ ನಿಂತು ಅವರಲ್ಲಿ ಬಹು ಎತ್ತರಕ್ಕೆ ಬೆಳೆದ ವ್ಯಕ್ತಿಯೆನಿಸಿದರು. ಒಂದು ರೀತಿಯಲ್ಲಿ ಬಯಲಿನಂತಿದ್ದ ಅವರ ಬದುಕು ಈಗ ಬೆಟ್ಟದಂತೆ ಬಹು ಎತ್ತರದ ಸ್ಥಾನ ಪಡೆದಿದೆ.

ಇನ್ನೊಂದು ಸಂದರ್ಭದಲ್ಲಿ ನಾನವರ ಮನೆಗೆ ಹೋಗಿದ್ದೆ. ಎರಡು ದಿನ ಅಲ್ಲೇ ವಸತಿ ಹೂಡಿದ್ದೆ. ಆ ಸಂದರ್ಭದಲ್ಲಿ ತಮ್ಮೆಲ್ಲಾ ಕೆಲಸಗಳನ್ನು ಬದಿಗಿಟ್ಟು, ನನ್ನೊಂದಿಗೆ ತಿರುಗಾಡಿ ಬೆಂಬಲಕ್ಕೆ ನಿಂತವರು ಅವರು. ವಿಶೇಷವೆಂದರೆ ಆ ಸಹಕಾರದಲ್ಲಿ ಸ್ವಾರ್ಥವಿರಲಿಲ್ಲ. 'ಹುಡುಗ ಬೆಳೆಯಲಿ' ಎಂಬ ಭಾವವಿತ್ತು.

ನಾನು ಪ್ರಕಟಿಸಿದ ಅವರ ಪುಸ್ತಕಗಳ ಮಾರಾಟದಲ್ಲಿಯೂ ಅವರಿಂದ ಸ್ಪಂದನ. ಬೇರಾವ ಲೇಖಕರಿಂದಲೂ ನಿರೀಕ್ಷಿಸಲು ಅಸಾಧ್ಯ ಎಂಬ ಮಟ್ಟಿಗಿನ ಬೆಂಬಲ. ಪ್ರಕಾಶಕ ಉಳಿದರೆ ಹತ್ತಾರು ಹೊಸ ಲೇಖಕರು ಉಳಿದಾರು. ಬೆಳೆದಾರು ಎಂಬ ಭಾವ. ಮೊಗಸಾಲೆಯವರದ್ದು. ಅದೇ ಒಬ್ಬ ಲೇಖಕನು ಪ್ರಕಾಶಕನಿಗೆ ಕೊಡಬಹುದಾದ 'ಬಹುಮಾನ' ಎಂಬ ಧೋರಣೆ.

ಕೆಲಸದ ವಿಷಯದಲ್ಲಿ ಮೊಗಸಾಲೆ ಬಹು ಅಚ್ಚುಕಟ್ಟು. ಒಬ್ಬ ಉತ್ತಮ ಸಂಘಟಕನ ಎಲ್ಲಾ ಸದ್ಗುಣಗಳು ಅವರಲ್ಲಿವೆ. ಬಹು ಮುಂದಾಲೋಚನೆಯಿಂದ ಕಾರ್ಯಕ್ರಮ ನಿರ್ವಹಣೆಯಲ್ಲಿ ಮೊಗಸಾಲೆ ಗೆಲ್ಲುತ್ತಾರೆ; ಹಲವರಿಗೆ ಮಾದರಿಯಾಗುತ್ತಾರೆ.

ಮೊಗಸಾಲೆ ಬರೇ ಮಾತಾಡುವವರಲ್ಲ; ಹಾಗೆಂದೇ ಮನಸ್ಸಿನಲ್ಲಿ ಏನನ್ನೂ ಹುದುಗಿಸಿಟ್ಟುಕೊಳ್ಳುವವರಲ್ಲ; ಜತೆಗೆ ಮಾತಿಗೆ ತಪ್ಪುವವರೂ ಅಲ್ಲ. ಹಲವು ವಿಷಯಗಳಲ್ಲಿ ಅವರು 'ಮುಗ್ಧ'ತನ ಕಾಯ್ದುಕೊಂಡಿದ್ದಾರೆ. ಇದು ಕೆಲವು ಬಾರಿ ಅವರಿಗೆ ತೊಂದರೆ ಮಾಡಿದ್ದೂ ಇದ್ದಿರಬಹುದು. 'ಮನುಷ್ಯರನ್ನು ನಂಬದಿರಲು ಸಾಧ್ಯವೇ?' ಎಂಬ ಪ್ರಶ್ನೆ ಅವರಲ್ಲಿ ದ್ವಂದ್ವ ಉಂಟು ಮಾಡಿರಲೂಬಹುದು.

'ನನ್ನಿಂದ ನಿಮಗೆ ನಷ್ಟವಾಗಬಾರದು; ನೀವು ಸೋಲಬಾರದು' ಎಂದು ಆಗಾಗ ನನಗೆ ಹೇಳಿದ್ದಾರೆ, ಎಚ್ಚರಿಸಿದ್ದಾರೆ. 'ಜನರನ್ನೇ ನಂಬಿ' ಪುಸ್ತಕ ಪ್ರಕಟಿಸುವ ನನ್ನ ಧೋರಣೆಯನ್ನು

ಅವರು ಬೆಂಬಲಿಸಿದ್ದಾರೆ, ನನ್ನ ಜತೆಗಿದ್ದಾರೆ.

ದುಶ್ಚಟಗಳಿಂದ ದೂರವಿದ್ದು,, ಸುಖೀ ಕುಟುಂಬದ ನೇತಾರರಾಗಿ, ಸಹೃದಯರ ಪರಮಾಪ್ತರಾಗಿ, ಹಲವು ಪ್ರಶಸ್ತಿಗಳಿಂದ ಪುರಸ್ಕೃತರಾಗಿ, ಉತ್ತಮ ಸಂಘಟಕರಾಗಿ, 'ಮಾತನಾಡದ' ಕನ್ನಡ ಸೇವಕರಾಗಿ, ಜನೋಪಯೋಗಿ ವೈದ್ಯರಾಗಿ, ಯುವಕರಿಗೆ ಮಾದರಿಯಾಗಿ, ಜಿಜ್ಞಾಸುಮನದ ಮಿತ್ರರಾಗಿ, ಶತ್ರುವಿನಲ್ಲೂ ಒಳ್ಳೆತನ ಹುಡುಕುವ ಹಸನ್ಮುಖಿಯಾಗಿ, 'ಮೊಗಸಾಲೆ'ಯೇ ಇಲ್ಲದ ಮನೆಯ ಮಾಲೀಕರಾಗಿ, ಕಾದಂಬರಿ - ಕಾವ್ಯ ಲೋಕದ ದಿಗ್ಗಜರಾಗಿ, ಅರವತ್ತರಲ್ಲೂ ಇಪ್ಪತ್ತರ ಚುರುಕುತನ ಉಳಿಸಿಕೊಂಡ ನವಯುವಕರಾಗಿ ಡಾ. ನಾ. ಮೊಗಸಾಲೆ ನನ್ನ ಮುಂದಿರುವ ಬಹುದೊಡ್ಡ ವ್ಯಕ್ತಿ. ಸಾಹಿತ್ಯ ಸಂಸ್ಕೃತಿಯ ಶ್ರೀಮಂತ ಶಕ್ತಿ.

ಅವರ ಅಭಿವೃದ್ಧಿಗೆ ಶುಭ ಹಾರೈಕೆ. ನನ್ನ ಮೇಲಿನ ಪ್ರೀತಿ ಹೀಗೇ ಇರಲಿ ಎಂಬ ಆಶಯ.

O

# ಬಿಸಿಲು ಮಾಗಿ ಬೆಳದಿಂಗಳಾಗುವುದು ಹೀಗೆ

ಬೆಳಗೋಡು ರಮೇಶ ಭಟ್

ಈ ಘಟನೆಗಳೆಲ್ಲ ಯಾವ ಕ್ರಮದಲ್ಲಿ ನಡೆದವು ಎನ್ನುವುದು ನೆನಪಾಗುತ್ತಿಲ್ಲ. ಹೀಗೊಮ್ಮೆ ಆಗಿದ್ದುಂಟು ಎನ್ನುವುದಷ್ಟೇ ಇವತ್ತಿನ ನೆನಪು. ಸುಮಾರು ಇಪ್ಪತ್ತೈದು ವರ್ಷಗಳಿಗೂ ಹಿಂದಿನ ಮಾತಿದು. 'ನನ್ನದಲ್ಲದ್ದು' ಕಾದಂಬರಿಗೆ 1977ರ ಸಾಲಿನ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಬಂದನಂತರ. ಮೊಗಸಾಲೆಯವರು ಜಿ.ವಿ. ಕೆದಿಲಾಯರ ಜೊತೆಗೆ ಕಾರವಾರಕ್ಕೆ ಬಂದಿದ್ದರು. ಟಾಗೋರ್ ರಂಗಮಂದಿರದಲ್ಲೋ ಶರೋನ್ ಹೋಟೆಲ್ಲಿನ ಸಭಾಂಗಣದಲ್ಲೋ ನಡೆದ ಒಂದು ಅಭಿನಂದನಾ ಸಭೆ. ಹುಡುಗುತನದ ಹುಮ್ಮಸ್ಸಿನಲ್ಲಿ 'ಕೌರವರು ಪಾಂಡವರಿಗೆ ಐದು ಹಳ್ಳಿಗಳನ್ನೂ ಯಾಕೆ ಕೊಡುವುದಿಲ್ಲ ಎನ್ನುವುದು ನನಗಿವತ್ತು ಗೊತ್ತಾಯಿತು. ಐದು ಹಳ್ಳಿಗಳಿಂದಲೇ ನಮ್ಮನ್ನು, ನಮ್ಮ ಓದನ್ನು, ನಮ್ಮ ಯುವ ಜನರ ಜೀವನ ಧಾರೆಯನ್ನು ಬದಲಿಸುವುದು ಸಾಧ್ಯ ಎನ್ನುವುದನ್ನು ಸಾರಿ ಹೇಳಿದ, ಸಾಧ್ಯಮಾಡಿದ ಮನುಷ್ಯ ಇವತ್ತು ನಮ್ಮೊಡನಿದ್ದಾರೆ'' ಎಂದೆಲ್ಲ ಮಾತನಾಡಿದ್ದು ನೆನಪು. ಕತ್ತಲು ಸೆರಗು ಹಾಸಿದ ನಂತರದ ಅಪೂರ್ವ ಸಂಜೆಯ ಕಡಲ ಕಿನಾರೆಯಲ್ಲಿ ಕಾವ್ಯದ ಬಗ್ಗೆ ಮಾತನಾಡುತ್ತ ನಾವು ಸಮಯ ಕಳೆದ ದಿನವದು. ನಾವು ಎಂದರೆ, ಮೊಗಸಾಲೆಯ ಜೊತೆ ಜಿ.ವಿ. ಕೆದಿಲಾಯರು, ನನ್ನ ಜೊತೆ ಕನ್ನಡ ಸಾಹಿತ್ಯದ ಗಂಭೀರ ವಿದ್ಯಾರ್ಥಿಗಳಾಗಿದ್ದ ಕಾರವಾರದ ಅಶೋಕ ಹಾಸ್ಯಗಾರ, ಅಗಸೂರು ಮೋಹನ್ ಭಟ್, ಪಾಂಡುರಂಗ ಶೆಣ್ಯೆ ಇದ್ದದ್ದು ನೆನಪು.

ಮೊಗಸಾಲೆ ಅದೇರಾತ್ರಿ ಅಥವಾ ಮರುದಿನ ಕಾಂತಾವರಕ್ಕೆ ಹಿಂದಿರುಗಿದ್ದರು. ಮತ್ತೆ ಬಂದಿಷ್ಟು ದಿನ ನಮ್ಮ ಕಡಲ ಕಿನಾರೆಯ ಸಾಹಿತ್ಯ ಸಭೆಯಲ್ಲಿ ಮೊಗಸಾಲೆಯವರ ಬಗ್ಗೆ, ಅವರ ಸಾಹಿತ್ಯದ ಕೃತಿಗಳ ಬಗ್ಗೆ ಮುಖ್ಯವಾಗಿ ಅವರ ಕವಿತೆಗಳ ಬಗ್ಗೆ ಚರ್ಚೆ ನಡೆಯಿತು. ಅವರ ಗದ್ಯಗಳು ನನಗೆ ಮತ್ತು ಅಶೋಕ್‌ಗೆ ಬರವಣಿಗೆಯ ಹೊಸ ಸಾಧ್ಯತೆಗಳನ್ನು ತೋರಿಸಿಕೊಟ್ಟವು. ಅದೇ ಲಹರಿಯಲ್ಲಿ ಅಶೋಕ್ ಕೆಲವು ಕವಿತೆಗಳನ್ನು ಬರೆದರು ಕೂಡ.

ಕೆಲವು ವರ್ಷಗಳ ಹಿಂದೆಯಷ್ಟೇ ಪ್ರಕಟವಾಗಿದ್ದ ಮೊಗಸಾಲೆಯವರ 'ವರ್ತಮಾನದ ಮುಖಗಳು' ಎಂಬ ಕವನ ಸಂಕಲನದ ಕೆಲವು ಕವಿತೆಗಳನ್ನು ನಾವೆಲ್ಲ ಮೆಚ್ಚಿ ಕೊಂಡಿದ್ದೆವು. ನನ್ನ ವಿಶ್ಲೇಷಣೆಯ ರೀತಿಯನ್ನು ಮೆಚ್ಚಿಕೊಂಡ ಅಶೋಕ್, ಅದನ್ನೇ ಒಂದು ಲೇಖನವನ್ನಾಗಿಸುವ ಸಲಹೆ ಇತ್ತರು. ಲೇಖನ ಉದಯವಾಣಿಯಲ್ಲಿ ಪ್ರಕಟವೂ ಆಯಿತು. ನನಗೆ ಗೊತ್ತಿಲ್ಲದೇ

ನಾನೊಂದು ಹೆಜ್ಜೇನುಗದ ಗೂಡಿಗೆ ಕೈ ಹಾಕಿದ್ದೆ.

ದಕ್ಷಿಣ ಕನ್ನಡ ಜಿಲ್ಲೆ ಮಠ ಮಾನ್ಯಗಳಿಗೆ ಹೇಗೆ ಹೆಸರಾಗಿದೆಯೋ ಹಾಗೆಯೇ ಸಾಹಿತ್ಯದ ಮಠಗಳಿಗೆ, ಸಾಹಿತ್ಯದ ಜಮೀನುದಾರಿಕೆಗೆ ಕೂಡ ಕುಖ್ಯಾತವಾಗಿದೆಯೆಂಬ 'ಸುಳ್ಯ'ದ ಆಸುಪಾಸಿನ ಹಲವು ಬರಹಗಾರರ ಆಪಾದನೆಯನ್ನು ಸತ್ಯಗೊಳಿಸುವ ಒಂದಿಷ್ಟು ಘಟನೆಗಳು ಇದರ ಹಿಂದೆಯೇ ನಡೆದವು. ಜಗದ್ಗುರುಗಳೊಬ್ಬರ ಪಟ್ಟ ಶಿಷ್ಯರಾಗಿದ್ದ ಉಡುಪಿಯ 'ಫ', ಅವರ ತಂದೆ, ಭಾವ, ಭಾವನ ತಮ್ಮ, ಕುಟುಂಬದ ಮಿತ್ರರೊಬ್ಬರು ಅ,ಬ,ಕ,ಡ ಎಂಬ ನಾಲ್ವರು ನನ್ನ ಲೇಖನದ ಬಗ್ಗೆ ಮತ್ತು ಮೊಗಸಾಲೆಯ ಬಗ್ಗೆ ಸಾಹಿತ್ಯದ ವಿನಯವನ್ನೇ ಮರೆತು ಉದಯವಾಣಿಯ ವಾಚಕರ ವಾಣಿಯಲ್ಲಿ ಬರೆದರು. ಇದರ ಹಿಂದಿರುವ ಮನುಷ್ಯರ ಬಗ್ಗೆ, ಈ ಕಾಗದಗಳನ್ನು ಹಿಡಿದುಕೊಂಡು ಪತ್ರಿಕಾ ಕಚೇರಿಗೆ ಬರುತ್ತಿದ್ದ ಮಹಾನುಭಾವನ ಬಗ್ಗೆ ಉದಯವಾಣಿಯ ಉಪ ಸಂಪಾದಕರೊಬ್ಬರು ನನಗೊಂದು ಕಾಗದ ಬರೆದರು. ಸತ್ಯಾಸತ್ಯತೆಯನ್ನು ಪ್ರಶ್ನಿಸಿ ಮಣಿಪಾಲದ ಪುನರ್‌ಪ್ರೆಸ್‌ನ ಜನರಲ್ ಮ್ಯಾನೇಜರ್‌ಗಿಗೆ ನಾನು ಬರೆದ ಪತ್ರಕ್ಕೆ ಅವರು ಉತ್ತರಿಸುತ್ತ 'Unhappiness is not only painful, it is mean and ugly' ಎಂದು ಬರೆದು, ಈ ಘಟನೆಯ ಹಿಂದಿನ ರಾಜಕೀಯವನ್ನು ವಿವರಿಸಿದ್ದರು. ಈ ನಂಜಿನಬಾಣ ನನ್ನ ಕಡೆಗೆ ಹೂಡಲಾಗಿತ್ತಾದರೂ ಅದರ ಗುರಿ ಮೊಗಸಾಲೆ ಎಂದವರು ಹೇಳಿದ್ದರು.

ಈ 'ಪಂಚೆ'ರನ್ನು ಹತ್ತಿರದಿಂದ ನೋಡಬೇಕು ಎಂಬ ಹಂಬಲದಿಂದ ಮುಂದಿನ ನಾಲ್ಕು ವರ್ಷಗಳನ್ನು, ಅವರ ಕರ್ಮಭೂಮಿಯಾಗಿದ್ದ ಸುಳ್ಯ ತಾಲೂಕಿನಲ್ಲಿ ಕಳೆದೆ. ಅಲ್ಲಿನ ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಭಾಗವಹಿಸಿದೆ. ಯಾವ ಕಾರಣಕ್ಕೋ ಅವರು ನನ್ನ ಸಂಪರ್ಕಕ್ಕೆ ಬರುವುದನ್ನು ತಪ್ಪಿಸಿಕೊಂಡರು. ಮುಂದೆ ನಾನು ದೆಹಲಿಯಲ್ಲಿದ್ದಾಗ ನನ್ನ ಸಂಪರ್ಕಕ್ಕೆ ಬಂದ 'ಪ' ಎಂಬ ಮನುಷ್ಯ ತಮ್ಮ ಮಠಾಧಿಪತಿಗಳ ಅಪ್ಪಣೆಯಂತೆ ತನ್ನ ಹೆಸರಿನಲ್ಲಿ ಪತ್ರ ಪ್ರಕಟವಾಯಿತೆಂದು ಹೇಳಿದರು. ತಮ್ಮ ಮಠವು ವಿಭಜನೆಯಾದ ಬಗ್ಗೆ ದುಃಖದಿಂದ ಹೇಳಿಕೊಂಡರು.

ಮೊಗಸಾಲೆಯವರನ್ನು ನಿರುತ್ಸಾಹಗೊಳಿಸುವ, ಕಾರ್ಯಕ್ಷೇತ್ರದಿಂದ ವಿಮುಖರನ್ನಾಗಿಸುವ ಈ ತೆರನಾದ ಘಟನೆಗಳು ಅವರ ಬದುಕಿನಲ್ಲಿ ಮತ್ತೆ ಮತ್ತೆ ನಡೆದಿವೆ. ಅವರು ತೀರಾ ಆಪ್ತರು ಎಂದುಕೊಂಡವರೇ ಅವರಿಗೆ ಮೋಸ ಮಾಡಿದ, ಬೆನ್ನಿಗೆ ಚೂರಿ ಹಾಕಿದ ಘಟನೆಗಳು ನಡೆದಿವೆ. ವಿಶ್ವಾಸ ಪಾತ್ರರೇ ಅಲ್ಲದವರನ್ನು ಕರೆದು ಮನ್ನಿಸಿ, ಗೌರವಿಸಿ ತಾನು ನಿಷ್ಕಳಂಕ ಎಂದು ಸಾಬೀತು ಪಡಿಸಲು ಮೊಗಸಾಲೆ ಪ್ರಯತ್ನ ಪಡುತ್ತಿದ್ದರೋ ಎಂಬ ಸಂಶಯ ಬಂದಾಗ ನಾನವರನ್ನು ಸಿಟ್ಟಿಗೆಬ್ಬಿಸಲು ಪ್ರಯತ್ನಿಸಿದ್ದೆ. 'ದಡ್ಡ ಬ್ರಾಹ್ಮಣ' ಎಂದು ಕರೆದಿದ್ದೆ. ಅವರು ಸಿಟ್ಟಿಗೇಳಲೂ ಇಲ್ಲ. ನಮ್ಮ ಸ್ನೇಹಕ್ಕೆ ಅದರಿಂದ ಅಡ್ಡಿ ಆತಂಕಗಳು ಬರಲೂ ಇಲ್ಲ.

ಮೊಗಸಾಲೆಯವರಲ್ಲಿ ಇವತ್ತಿಗೂ ನಾನು ತುಂಬ ಪ್ರೀತಿಸುತ್ತಿರುವ ಗುಣವೇ ಅದು. ಅವರು ಒಂದು ರೀತಿಯಲ್ಲಿ ನಿರುದ್ವಿಗ್ನ ಮನದವರು. ನಂಜಿನ ಬಾಣಗಳು ಅವರ ಕೂದಲು ಕೊಂಕಿಸಲಿಲ್ಲ. ಅಗ್ನಿದಿವ್ಯವನ್ನು ಹೊಕ್ಕು ಬರುವ ಚಿನ್ನದ ಹಾಗೆ ಅವರು ಪ್ರತಿ ಸಲ ಪುಟಗೊಂಡು

ನನ್ನ ಹೃದಯಕ್ಕೆ ಹತ್ತಿರವಾಗುತ್ತಿದ್ದರು. ನನ್ನ ಉದ್ಯೋಗ ನನಗೆ ಹತ್ತು ಊರು ತಿರುಗುವ, ಸಾವಿರ ಜನರನ್ನು ಹತ್ತಿರದಿಂದ ಅರಿಯುವ ಭಾಗ್ಯ ಕೊಟ್ಟಿತಾದರೂ, ನಾನು ಕಲ್ಪಿಸಿಕೊಂಡ definition ಗೆ ಹೊರತೇ ಆದ ಆಪ್ತತೆಯಿಂದ ಅವರು ನನ್ನನ್ನು ಕುಲುಕುತ್ತಿದ್ದರು.

ಆದರೂ ಅವರನ್ನು ಒಪ್ಪಿಕೊಳ್ಳಲಾಗದೇ ಕಟುವಾಗಿ ಟೀಕಿಸಬೇಕಾದ ಕೆಲವು ಸಂದರ್ಭಗಳು ನಮ್ಮ ನಡುವೆ ಬಂದವು. ಸುಧಾದಲ್ಲಿ ಧಾರಾವಾಹಿಯಾಗಿ ಪ್ರಕಟವಾದ ಅವರ 'ಪ್ರಕೃತಿ' ಕಾದಂಬರಿಯಲ್ಲಿ ಅವರು ನನ್ನ ಮಿತ್ರನೊಬ್ಬನ ಹೆಸರು ಬಳಸಿಕೊಂಡರು. ಅವನ ಉಪನಾಮ ಕೂಡ ಮುಂದೊಂದು ಭಾಗದಲ್ಲಿ ಬದಾಗ ನಾನು ಆಕ್ಷೇಪಿಸಿದ್ದೆ. ವಿನಯದಿಂದಲೇ ತಮ್ಮ ತಪ್ಪನ್ನು ಒಪ್ಪಿಕೊಂಡ ಅವರು, ಮುಂದೆ 1982ರಲ್ಲಿ ಕಾದಂಬರಿ ಪುಸ್ತಕ ರೂಪದಲ್ಲಿ ಪ್ರಕಟವಾಗುವಾಗ ತಪ್ಪು ತಿದ್ದಿಕೊಂಡರು. ಮತ್ತೆ ಕೆಲವು ಸಂದರ್ಭಗಳಲ್ಲಿ ಅವರು ನನ್ನ ಸಲಹೆಯನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಅವರ ವಿಶ್ವಾಸಕ್ಕೆ ತಕ್ಕ ಹಾಗೆ ನಡೆದುಕೊಳ್ಳದ ವಿಧ್ವಂಸಕ ಕೃತ್ಯ ನಡೆಸಿದವರನ್ನು ಪುರಸ್ಕರಿಸುವಾಗಲೂ ನಾನು ಒಪ್ಪಿಕೊಂಡಿರಲಿಲ್ಲ. ಆದರೆ ಒಂದಿಷ್ಟು ಸಮಯದ ನಂತರ ಈ ಎರಡೂ ಘಟನೆಗಳನ್ನು ನೆನಪಿಸಿಕೊಂಡಾಗ, ಮೊಗಸಾಲೆಯವರಲ್ಲಿ ನವೋದಯ ಪೂರ್ವದ ಕವಿಗಳಲ್ಲಷ್ಟೇ ಕಾಣಿಸುತ್ತಿದ್ದ ಸಜ್ಜನಿಕೆಯ ಪರಾಕಾಷ್ಠೆಯನ್ನು ಗುರುತಿಸುವುದು ಸಾಧ್ಯವಾಗುತ್ತಿದೆ.

ನವೋದಯ ಪೂರ್ವದ ಕವಿಗಳ ಸಜ್ಜನಿಕೆಯನ್ನು ಯಾಕೆ ನೆನಪಿಸಿಕೊಳ್ಳುತ್ತಿದ್ದೇನೆಂದರೆ, ಮೊಗಸಾಲೆ ಇತರ ಬರಹಗಾರರನ್ನು ಗುರುತಿಸುವಲ್ಲಿ, ಮೆಚ್ಚಿಕೊಳ್ಳುವಲ್ಲಿ, ಮೆಚ್ಚಿ ಮಾತನಾಡುವಲ್ಲಿ ತಮ್ಮ ಸೌಜನ್ಯವನ್ನು ಮೆರೆದವರು. ಅವರು ಇತರ ಬರಹಗಾರರ ಪುಸ್ತಕಗಳನ್ನು ಪ್ರಕಟಿಸಿದರು. ಬಹುಮಾನಗಳನ್ನು ಕೊಟ್ಟರು. ಒಳ್ಳೆಯ ಪುಸ್ತಕಗಳನ್ನು ಗುರುತಿಸಿದರು. ಮೆಚ್ಚಿ ಮಾತನಾಡಿದರು. ಬರಹಗಾರರಿಗೆ ಪ್ರೋತ್ಸಾಹ ಕೊಟ್ಟರು.

ಇವೆಲ್ಲವನ್ನು ವ್ಯವಹಾರ ಚತುರ ಬರಹಗಾರರೂ ಮಾಡುತ್ತಾರೆ. 'ನಿನ್ನ ಬೆನ್ನನ್ನು ನೀನು ಕರೆ, ನಿನ್ನ ಬೆನ್ನನ್ನು ನಾನು' ಎನ್ನುವ ಸಾಹಿತಿಗಳ ನಡುವೆ ಮೊಗಸಾಲೆ ತಮ್ಮ ದಡ್ಡತನದಿಂದಲೂ ನಮಗೆ ಆಪ್ತರಾಗುತ್ತಾರೆ. ತಮ್ಮನ್ನು ಕಟುವಾಗಿ ಟೀಕಿಸುವವರನ್ನೂ ಮೊಗಸಾಲೆ ಕಾಂತಾವರಕ್ಕೆ ಕರೆದು ಮನ್ನಿಸಿದ್ದಾರೆ. ಅವರಿಂದ ಮನ್ನಿತರಾದವರೇ, ಅವರದೇ ವೇದಿಕೆಯಿಂದ ಅವರನ್ನು ಟೀಸಿದಾಗಲೂ ಮೊಗಸಾಲೆ ಸಿಟ್ಟಿಗೆದ್ದುದನ್ನು ನಾನು ಕಂಡಿಲ್ಲ. ಒಮ್ಮೊಮ್ಮೆ ಇದನ್ನೊಂದು ದೌರ್ಬಲ್ಯವೆಂದು ಗುರಿತಿಸಿ, ಅಗತ್ಯಬಿದ್ದಾಗ ಅವರ ಹತ್ತಿರ ಬಂದು ತಮ್ಮ ಕೆಲಸ ಮುಗಿದೊಡನೆ ದೂರ ಹೋಗುವ, ಮತ್ತೆ ಪುನಃ ಬೇಕೆಂದಾಗ ಹತ್ತಿರ ಬರುವ ವ್ಯವಹಾರ ಚತುರರ ಜೊತೆಗೆ ಕೊಂಚ ಎಚ್ಚರವಹಿಸಿ ಎಂದು ಹೇಳಬೇಕನ್ನಿಸಿದ್ದಿದೆ. "ನಿಮ್ಮ ಸಹನೆ ಈ ಮಣ್ಣು ನೆಲದ್ದಲ್ಲ" ಎಂದು ಹೇಳಿದಾಗೆಲ್ಲ, ನಾನು ಅವರನ್ನು ಟೀಕಿಸಿದನೆ, ಮೆಚ್ಚಿಕೊಂಡೆನೆ ಎನ್ನುವುದು ನನಗೇ ಖಾತ್ರಿಯಾಗದೆ ಉಳಿಯುವುದುಂಟು.

ಕವಿಯಾಗಿ, ಕತೆಗಾರನಾಗಿ, ಸಂಘಟಕನಾಗಿ ನನ್ನ ಬಾಲ್ಯದ ದಿನಗಳಿಂದ ನನಗೆ ಆಪ್ತರೂ ನನ್ನ ಶುಭಾಕಾಂಕ್ಷಿಯೂ ಆಗಿ ಉಳಿದು ಬಂದ ಮೊಗಸಾಲೆಯವರನ್ನು ನಾನು ಅರಿವಿಲ್ಲದೆ ಅನುಕರಣೆ ಮಾಡಿದ್ದನ್ನು ನನ್ನ ನಿಡುಗಾಲದ ಮಿತ್ರರಾದ ಅಶೋಕ ಹಾಸ್ಯಗಾರ,

ಜಯರಾಮ ಕಾರಂತ, ಸುಬ್ರಾಯ ಚೊಕ್ಕಾಡಿ ಆಗಾಗ ಗುರುತಿಸಿದ್ದೂ ಇದೆ. ಇದು ಒಬ್ಬ ಬರಹಗಾರನ ಸಾರ್ಥಕ ಕ್ಷಣ ಎಂದು ನಾನವರ ಬೆನ್ನು ತಟ್ಟಿದ್ದೂ ಇದೆ.

ಮೊಗಸಾಲೆಯವರಲ್ಲಿ ನನಗೆ ತುಂಬ ಆಪ್ತವಾದ ಇನ್ನೊಂದು ಮುಖವೆಂದರೆ ಅವರ ಕನಸುಗಾರಿಕೆ. ಏನೋ ದೊಡ್ಡದನ್ನು ಸಾಧಿಸಬೇಕು ಎಂಬ ಕನಸು. ಬೇರೆಯವರಿಂದ ಇನ್ನಷ್ಟು ಬರೆಸಬೇಕು ಎಂಬ ಕನಸು. ಕಾಂತಾವರ ಕನ್ನಡ ಸಂಘ ಇತರ ಸಾಧಕರ ರಂಗಸ್ಥಳವಾಗಬೇಕೆಂಬ ಕನಸು. ಅವರು ಆ ಕನಸುಗಳನ್ನು ತಮ್ಮ ಆಪ್ತರಲ್ಲಿ ಹಂಚಿಕೊಳ್ಳುವ ಸೊಗಸನ್ನು ಬಲ್ಲವರಷ್ಟೇ ಬಲ್ಲರು.

ಅವರು 'ದಕ್ಷಿಣ ಕನ್ನಡ ಕಾವ್ಯ'ದ ಕನಸು ಕಂಡಾಗ ನಾನವರಿಂದ ದೂರದಲ್ಲಿದ್ದೆ. ನಂತರದ ಅವರ ಹಲವು ಕನಸುಗಳನ್ನೂ, ಅವುಗಳು ನನಸಾಗುವ ಸಾರ್ಥಕ ಕ್ಷಣಗಳನ್ನೂ ನಾನು ಸಾಕ್ಷಿಯಾಗಿ ಕಂಡಿದ್ದೆ. 'ನಾಡು – ನುಡಿ – ನಮನ' ಎಂಬ ಸಾಹಿತ್ಯ ಚಿಂತನ ಗ್ರಂಥಮಾಲೆಯ ಬಗ್ಗೆ ಅವರು ಕಂಡ ಕನಸು, ಅವರ ಯೋಚನೆ ಯೋಜನೆ, ಅದನ್ನವರು ಕಟ್ಟತೊಡಗಿದ ರೀತಿ, ಹಾಗೆ ಕಟ್ಟುವಲ್ಲಿ ಅವರು ತೋರಿದ ಕುಶಲತೆ ಇವೆಲ್ಲ ನನ್ನ ಹಲವು ಮಿತ್ರರನ್ನು ಮರಳುಮಾಡಿದೆ.

ಇದರ ನಡುವೆ ಅವರು ಹಲವು ಸಾಹಿತಿ ಮಿತ್ರರ ಕಷ್ಟಗಳಿಗೆ ಒದಗಿ ಬಂದಿದ್ದಾರೆ. ನಿಷ್ಠುರವಾಗಿ ಮಾತನಾಡಿ ದೂರಸರಿದವರನ್ನು ಹತ್ತಿರ ಕರೆದು ಪ್ರೀತಿಯಿಂದ ಮಾತನಾಡಿಸಿದ್ದಾರೆ. ನೆರವಾಗಿದ್ದಾರೆ. ಒಬ್ಬ ಬರಹಗಾರ ಏನೇನನ್ನು ಮಾಡಬಹುದೆಂದು ನಾವು ಕನಸುತ್ತೇವೋ ಅದಕ್ಕೂ ಕೊಂಚ ವಿಸ್ತೃತವಾದ ಬದುಕು ಬದುಕಲಿಕ್ಕೆ ಪ್ರಯತ್ನಿಸಿದ್ದಾರೆ, ಅದೂ ಪುಟ್ಟ ಹಳ್ಳಿ ಕಾಂತಾವರದ ಹಳ್ಳಿಗಾಡಿನ ಸ್ನಿಗ್ಧತೆಯನ್ನು ತಮ್ಮೊಳಗೆ ಕಾಪಿಟ್ಟುಕೊಂಡು.

ಇವರ ಸಹೃದಯತೆಯ ಇನ್ನೊಂದು ಮುಖವನ್ನು ನಾನು ಕಂಡದ್ದು ಕಳೆದ ವರ್ಷ ನನ್ನ ಕಥಾಸಂಕಲನ 'ಮನುಷ್ಯರನ್ನು ನಂಬಬಹುದು' ಪ್ರಕಟವಾದಾಗ. ನನ್ನ ಕೆಲವು ಕಥೆಗಳನ್ನು ತುಂಬ ಮೆಚ್ಚಿಕೊಂಡು ಫೋನಿನಲ್ಲಿ 32 ನಿಮಿಷ ಮಾತನಾಡಿದರು. ಮೂರು ದಿನಗಳ ನಂತರ 'ಸುಮ್ಮನೆ' ಕಥೆಯ ಬಗ್ಗೆ 17 ನಿಮಿಷ. (ನನ್ನ ಫೋನಿನ ಕಾಲರ್ ಐಡಿಯಲ್ಲಿ ದಾಖಲಾದ ಸಮಯದಂತೆ, ಕು.ಗೋ ಅವರನ್ನು ಬಿಟ್ಟರೆ ಬೇರೆ ಯಾರೊಬ್ಬರೂ ಇಷ್ಟೊಂದು ಹೊತ್ತು ಮಾತನಾಡಿದ್ದಿಲ್ಲ) ಮೊಗಸಾಲೆಯವರು ನನ್ನ ಕಥೆಗಳ ಬಗ್ಗೆ ತಮ್ಮ ಸ್ನೇಹಿತರಲ್ಲಿ ಮೆಚ್ಚಿ ಹೇಳಿದ ಮಾತುಗಳಿಂದ ಪ್ರೇರಿತರಾದ ಕೆಲವರು ನನ್ನ ಪುಸ್ತಕದ ಪ್ರತಿಗಳನ್ನು ಬರೆದು ತರಿಸಿಕೊಂಡರು.

ನನ್ನ ಕಥಾಸಂಕಲನ ಪ್ರಕಟವಾದುದರಿಂದ ಆದ ಅತಿದೊಡ್ಡ ಲಾಭವೆಂದರೆ, ಮೊಗಸಾಲೆಗೆ ಸಣ್ಣಕಥಾ ಮಾಧ್ಯಮದ ಸಾಧ್ಯತೆಗಳ ಬಗ್ಗೆ ಮತ್ತೆ ಕುತೂಹಲ ಮೂಡಿದ್ದು. ಒಂದು ಕಾಲದಲ್ಲಿ ಹಲವು ಪ್ರಾತಿನಿಧಿಕ ಕಥೆಗಳನ್ನು ಬರೆದಿದ್ದ ಮೊಗಸಾಲೆ. ಕಾವ್ಯ ಮತ್ತು ಕಾದಂಬರಿ ಮಾಧ್ಯಮಕ್ಕೆ ಕೊಟ್ಟ ಮಹತ್ವವನ್ನು ಕಥಾಪ್ರಕಾರಕ್ಕೆ ಕೊಟ್ಟಿರಲಿಲ್ಲ. ಸುದೀರ್ಘ ಕಾಲ ಸಣ್ಣಕಥೆಗಳನ್ನು ಬರೆದಿರಲಿಲ್ಲ. ಈಚೆಯ ದಿವಸಗಳಲ್ಲಿ ಸುಮಾರು ಹನ್ನೆರಡು ಕಥೆಗಳನ್ನು ಬರೆದು ತಮ್ಮ ಮುಂದಿನ ಸಂಕಲನಕ್ಕೆ ಸಜ್ಜಾಗಿರುವ ಮೊಗಸಾಲೆಯವರ ಈ ಪ್ರಯತ್ನ ಸಾಹಿತ್ಯ ವಿಮರ್ಶಕರ

ಕುತೂಹಲಕ್ಕೆ ಕಾರಣವಾಗಬಲ್ಲ ಪರಿಕರವನ್ನು ಒದಗಿಸಲಿದೆ.

ನವ್ವೋತ್ತರ ದಿನಗಳಲ್ಲಿ ಬರೆಯುತ್ತಿರುವ ಮೊಗಸಾಲೆಯ ಒಳಗಿನ ನವೋದಯ ಪೂರ್ವ ಕವಿ ಮನಸ್ಸು ನನಗೆ ಆಪ್ತವೂ ಆಹ್ಲಾದಕರವೂ ಆದ ಅನುಭವ ಎಂದೆನಷ್ಟೆ? ಅವರ ಮನೆಯ ಎದುರಿನ ಮರದ ಕಟ್ಟೆಯ ಮೇಲೆ ಕುಳಿತು ಮಾತನಾಡುವಾಗ ಅವರು ದಳದಳ ಬಿಚ್ಚಿಕೊಳ್ಳುತ್ತಾರೆ. ನಮಗೆ ಸಂತೋಷಕೊಡುವ ವಿಚಾರವನ್ನಷ್ಟೇ ನಾವು ಮಾತನಾಡಬೇಕು ಎಂಬ ಅಲಿಖಿತ ಕರಾರಿನನ್ವಯ ನಾವು ಯೋಗದ ಬಗ್ಗೆ ಮಾತನಾಡುತ್ತೇವೆ, ಆರ್ಟ್ ಆಫ್ ಲಿವಿಂಗ್ ಬಗ್ಗೆ ಮಾತನಾಡುತ್ತೇವೆ. ಪ್ರಕೃತಿ ಚಿಕಿತ್ಸೆಯ ಬಗ್ಗೆ ಮಾತನಾಡುತ್ತೇವೆ. ಸಾರ್ಥಕ ಸುಂದರ ಕೃತಿಗಳ ಬಗ್ಗೆ ಮಾತನಾಡುತ್ತೇವೆ. ಮನುಷ್ಯರ ಸಣ್ಣತನದ ಬಗ್ಗೆ ಈಗೀಗ ತಪ್ಪಿಯೂ ಮಾತನಾಡುವುದಿಲ್ಲ.

'ಒಂದು ಜನ್ಮ, ಒಂದೇ ಒಂದು ಮಾನವ ಜನ್ಮ ನಮಗೆ ಲಭ್ಯವಾಗಿದೆ. ಅದನ್ನು ಸಾರ್ಥಕವಾಗಿ ಕಳೆಯಬೇಕು' ಎಂಬ ನನ್ನ ಕಥೆಯೊಂದರ ಪಾತ್ರದ ಮಾತೊಂದನ್ನು ನನಗೆ ಕಲಿಸಲೆಂದೇ ನನ್ನ ಬದುಕಿಗೆ ಒದಗಿಬಂದ ಸನ್ಮಿತ್ರ ಮೊಗಸಾಲೆ ಕಾಂತಾವರದಲ್ಲಿ ಹಚ್ಚಿದ ಹಣತೆ; ಹಣತೆಯಿಂದ ಹಣತೆ ಹಚ್ಚುವ ದೀಪಾವಳಿಯ ಸಂಕೇತ.

o

# ಮಾವ ಮೊಗಸಾಲೆಯವರ ಜೀವನ ಪ್ರೀತಿ



–ಸವಿತಾ ನಿರಂಜನ ಮೊಗಸಾಲೆ

ನನ್ನ ಮಾವ ಡಾ. ನಾ. ಮೊಗಸಾಲೆಯವರ ಹೆಸರನ್ನು ನಾನು ಮದುವೆಯ ಮೊದಲು ಕೇಳಿದ್ದೆನೇ ಹೊರತು ಅವರ ಪುಸ್ತಕಗಳನ್ನು ಓದಿರಲಿಲ್ಲ. ಕಾಂತಾವರದ ಜಯರಾಮ ಕಾರಂತರ ಮೂಲಕ ದೂರದ ಕಳಸದ ಬಳಿಯ ಉದ್ದಿನಮಕ್ಕಿಯ ನಮ್ಮ ಕುಟುಂಬಕ್ಕೂ ಮೊಗಸಾಲೆಯವರ ಕುಟುಂಬಕ್ಕೂ ನಂಟು ಬೆಳೆದದ್ದು. ನಾನು ನಿರಂಜನ ಮೊಗಸಾಲೆಯವರನ್ನು ಮದುವೆಯಾಗಿ ಕಾಂತಾವರಕ್ಕೆ ಬಂದ ಮೇಲೆ ನಮ್ಮ ಹಳ್ಳಿಗಿಂತಲೂ ಕುಗ್ರಾಮವೆನಿಸಿದ ಕಾಂತಾವರದಲ್ಲಿ ವೈದ್ಯರಾಗಿ ಕರ್ತವ್ಯ ನಿರ್ವಹಿಸುತ್ತ ಕನ್ನಡ ಸಂಘದ ಚಟುವಟಿಕೆಗಳನ್ನು ನಡೆಸುತ್ತ ಮೊಗಸಾಲೆಯವರು ಪುಸ್ತಕಗಳನ್ನು ಬರೆಯುತ್ತಿರುವುದು ವಿಶೇಷ ಅನಿಸಿತು. ನಾನು ಅವರ ಕತೆಗಳನ್ನು ಕಾದಂಬರಿಗಳನ್ನು ಓದಲು ಶುರುಮಾಡಿದ್ದು ಆ ಮೇಲೆಯೇ. ಕವನಗಳಲ್ಲಿ ನನಗೆ ಅಷ್ಟೊಂದು ಆಸಕ್ತಿಯಿರಲಿಲ್ಲ.

ಮೊದಲಾಗಿ ನನಗೆ ಇಲ್ಲಿಗೆ ಬಂದ ಮೇಲೆ ಅನಿಸಿದ್ದು, ಇದು ನನ್ನ ತವರುಮನೆಯಿಂದ ಒಂದಿಷ್ಟೂ ಅನ್ಯವೆನಿಸದ ಪರಿಸರ ಅಂತ. ಮಾವನವರಾಗಲಿ ಅತ್ತೆಯವರಾಗಲಿ ನಾನು ಬೇರೆ ಮನೆಯಿಂದ ಬಂದವಳು ಎಂದು ಭಾವಿಸಲೇ ಇಲ್ಲ. ಎಲ್ಲ ವಿಷಯಗಳನ್ನು ಒಟ್ಟಾಗಿ ಕೂತು ನಾವು ಚರ್ಚಿಸುತ್ತಿದ್ದೆವು. ಆದ್ದರಿಂದ ಸ್ವಾಭಾವಿಕವಾಗಿಯೇ ನನಗೆ ಯಾವ ಸಂದರ್ಭದಲ್ಲಿಯೂ ಮುಜುಗರ ಅಂತ ಅನಿಸಲೇ ಇಲ್ಲ. ಮಾವನವರು ಒಂದು ಕತೆಯನ್ನೋ, ಕಾದಂಬರಿಯ ಒಂದು ಅಧ್ಯಾಯವನ್ನೋ ಒಂದೇ ಉಸಿರಿಗೆ ಕೂತು ಬರೆದು ನಮಗೆ ಓದಲು ಕೊಡುವುದುಂಟು. ವಿಮರ್ಶೆ ಮಾಡುವಷ್ಟು ಜ್ಞಾನ ನನ್ನದಲ್ಲವಾದರೂ ಕೆಲವೊಂದು ಅಭಿಪ್ರಾಯಗಳನ್ನು ಅತ್ತೆಯವರ ಜೊತೆಗೆ ನಾನು ಹೇಳುತ್ತಿದ್ದೆ. ಅದನ್ನೆಲ್ಲ ಕೇಳಿ ಮೊಗಸಾಲೆಯವರು ಸೂಕ್ತ ಬದಲಾವಣೆಗಳನ್ನು ಮಾಡುತ್ತಿದ್ದರು.

ನನಗೆ ತುಂಬ ಸಲ ಮಾವನವರ ಬಗ್ಗೆ ಬಹಳ ಮುಗ್ಧರು, ಮಗುವಿನಂತಹ ಸ್ವಭಾವದವರು ಅಂತ ಅನಿಸಿದ್ದುಂಟು. ಅವರ ಮನಸ್ಸಿಗೆ ಒಂದು ಯೋಚನೆ ಬಂತು ಅಂದರೆ ಇಡೀ ದಿನ ಅವರಿಗೆ ಅದೇ ಗುಂಗು. ಮದ್ದಿಗೆ ಬಂದು ಹೋಗುವ ಹಳ್ಳಿಗರನ್ನು ನಡುನಡುವೆ ವಿಚಾರಿಸಿ ಕಳಿಸಿ ಮತ್ತೆ ಅದರ ಬಗ್ಗೆ ಮಾತುಕತೆಯೇ. ಅದರಲ್ಲೂ ಕನ್ನಡ ಸಂಘದ ಚಟುವಟಿಕೆಗಳು ಅಂದರೆ ಪ್ರತಿ ಕ್ಷಣದಲ್ಲಿಯೂ, ಪ್ರತಿ ಹಂತದಲ್ಲಿಯೂ ಮೊಗಸಾಲೆಯವರದ್ದು ತನ್ಮಯತೆ.

ಆಹ್ವಾನ ಪತ್ರಿಕೆಯ ಮುದ್ರಣದಿಂದ ಪ್ರಾರಂಭಿಸಿ ಕಾರ್ಯಕ್ರಮದ ನಂತರ ದೂರದೂರದ ಅತಿಥಿಗಳನ್ನು ಕಳಿಸಿಕೊಡುವವರೆಗೂ ಎಚ್ಚರದ ನಿಗಾ ಇಡುತ್ತಾರೆ. ಆಹ್ವಾನ ಪತ್ರಿಕೆಯನ್ನು ಕಳಿಸುವುದು, ಪುಸ್ತಕಗಳನ್ನು ಜೋಡಿಸುವುದು ಮುಂತಾದ ಕೆಲಸದಲ್ಲಿ ನಾವೆಲ್ಲರೂ ಪಾಲುಗೊಳ್ಳುತ್ತೇವೆ. 'ಕನ್ನಡ ಭವನ'ದ ನಿರ್ಮಾಣದ ಸಮಯದಲ್ಲಿ ಮಾವನವರು ಮನೆಯಲ್ಲಿ ಇದ್ದದ್ದೇ ಕಡಿಮೆಯೆನ್ನಬಹುದು. ತಮ್ಮ ಜತೆಯಲ್ಲಿ ನಾವೆಲ್ಲ ಇದ್ದೇವೆಂದರೆ ನೂರಾನೆಯ ಬಲ ಬಂದ ಹಾಗೆ ಇರುತ್ತಾರೆ.

ಥಕ್ಕನೆ ಎಲ್ಲರನ್ನ ನಂಬಿ ಬಿಡುವ, ಏಕಾಏಕಿಯಾಗಿ ತಮ್ಮಿಂದ ಸಾಧ್ಯವಾದಷ್ಟು ಉಪಕಾರ ಮಾಡಿಬಿಡುವ ಸ್ವಭಾವ ಮಾವನವರದು. ಹೆಚ್ಚಿನ ಸಂದರ್ಭಗಳಲ್ಲಿ ಅವರಿಗೆ ಇದರಿಂದ ನಿರಾಸೆ ಕೂಡಾ ಆಗಿದೆ. ಯಾವುದನ್ನು ಅತಿಯಾಗಿ ಹಚ್ಚಿಕೊಳ್ಳಬೇಡಿ ಅಂತ ಅತ್ತೆಯವರು ಪದೇ ಪದೇ ಮಾವನವರಿಗೆ ಹೇಳುತ್ತಿರುತ್ತಾರೆ.

ನಮ್ಮ ಮನೆಗೆ ಆಗಾಗ ದೊಡ್ಡ ದೊಡ್ಡ ಸಾಹಿತಿಗಳು ಬರುತ್ತಿರುತ್ತಾರೆ. ಅವರ ಜೊತೆಗೆ ಕಾಫಿ ಹೀರುತ್ತಾ ಮಾವನವರು ಮಾತಿಗೆ ತೊಡಗಿದರೆಂದರೆ ಗಂಟೆಗಳಾದರೂ ಏಳುವುದಿಲ್ಲ. ನಾವು ಕೂಡಾ ಏನೂ ಮುಜುಗರವಿಲ್ಲದೆ ಅದರ ಜೊತೆಗೆ ಸೇರಿಕೊಂಡುಬಿಡುತ್ತೇವೆ. ಸಮೀಪದ ಊರುಗಳಲ್ಲಿರುವ ಮಿತ್ರರಿಗೆಲ್ಲ ಫೋನು ಮಾಡಿ, ಅಂತಹ ಸಂದರ್ಭಗಳಲ್ಲಿ ಮನೆಗೆ ಬರ ಹೇಳುತ್ತಾರೆ ಮಾವ. ಅವರೆಲ್ಲ ಬಂದು ಸಾಹಿತ್ಯ ಚರ್ಚೆ ನಡೆಯುತ್ತ ಊಟ ಉಪಚಾರಗಳು ನಡೆಯಬೇಕು! ಇದು ಮಾವನವರ ಅತ್ಯಂತ ಲವಲವಿಕೆಯ ಸಂದರ್ಭಗಳಲ್ಲಿ ಒಂದು. ಇತ್ತೀಚೆಗೆ ಬೆಂಗಳೂರಿನಿಂದ ಹಿರಿಯ ಸಾಹಿತಿಗಳಾದ ಡಾ. ಸುಮತೀಂದ್ರ ನಾಡಿಗರು ಮನೆಗೆ ಬಂದಿದ್ದರು. ಇಡೀ ದಿನ ಈಗಿನ ಕಾವ್ಯ ಸಾಹಿತ್ಯದ ಬೆಳವಣಿಗೆಯ ಚರ್ಚೆಯೇ ನಡೆಯಿತು ನಮ್ಮಲ್ಲಿ!

ದೇವರು ಪೂಜೆ ಪುನಸ್ಕಾರಗಳಲ್ಲಿ ಮಾವನವರಿಗೆ ತುಂಬ ನಂಬಿಕೆಯಿಲ್ಲ. ಹಾಗಂತ ಅವರು ಅಧಾರ್ಮಿಕರಲ್ಲ ದೇವಸ್ಥಾನಗಳಿಗೆ ಹೋಗುತ್ತಾರೆ. ಪೂಜೆಗಳಲ್ಲಿ ಕುಟುಂಬದೊಂದಿಗೆ ಭಾಗವಹಿಸುತ್ತಾರೆ.

ಅವರ ಎಲ್ಲ ಬರಹಗಳನ್ನು ನಾನು ಓದಿಲ್ಲವಾದರೂ, ಇತ್ತೀಚೆಗೆ ಅವರು ಬರೆದ ಅವರ ಆತ್ಮಕತೆ 'ಬಯಲು ಬೆಟ್ಟ' ನನಗೆ ಬಹಳ ಇಷ್ಟವಾಗಿರುವ ಪುಸ್ತಕ. ಅವರ ಬಾಲ್ಯದ ಪರಿಸರದ ವರ್ಣನೆ ಬಹಳ ಚೆನ್ನಾಗಿ ಬಂದಿದೆ ಎಂದು ನನಗೆ ಅನಿಸಿದೆ. ನಾನು ಹುಟ್ಟಿ ಬೆಳೆದ ಪರಿಸರದ ವರ್ಣನೆಯಂತೆಯೇ ನನಗೆ ಅದು ಭಾಸವಾಯಿತು. ಅವರ ಕತೆಗಳನ್ನು ಕೂಡಾ ಓದಿದ್ದೇನೆ. ಆ ಕತೆಗಳಲ್ಲಿ ಬರುವಂತಹ ಪಾತ್ರಗಳನ್ನು ನಮ್ಮ ಊರಿನ ಅನೇಕ ಮಂದಿಯೊಡನೆ ನಾನು ಹೋಲಿಸಿ ನೋಡುವುದುಂಟು. ಮಾವನವರಲ್ಲಿ ಚಿಕಿತ್ಸೆಗೆಂದು ಬರುವ ಎಷ್ಟೋ ಮಂದಿ ತಮ್ಮ ಮನೆಯ ಕಷ್ಟಸುಖಗಳನ್ನು ಅವರೊಂದಿಗೆ ಹೇಳಿಕೊಳ್ಳುತ್ತಾರೆ. ಅವುಗಳನ್ನು ಸಾವಧಾನವಾಗಿ ಮಾವ ಆಲಿಸಿ ಸಲಹೆ ಕೊಡುತ್ತಾರೆ. ಅವರ ಕತೆಗಳ ಎಷ್ಟೋ ಪಾತ್ರಗಳು ಈ ರೀತಿಯಲ್ಲಿ ಸೃಷ್ಟಿಯಾದವು.

ಮಾವನವರಲ್ಲಿ ಒಂದು ವಿಶೇಷಗುಣ ಎಂದರೆ ಅವರಿಗೆ ಪ್ರತಿಯೊಂದರಲ್ಲೂ ಕೂಡ

ಆಸಕ್ತಿ ಇರುವುದು. ನಮ್ಮ ಮನೆಯ ಸುತ್ತಲೂ ಇರುವ ತೋಟ ಮರ ಹೂಗಿಡಗಳ ಬಗ್ಗೆ ಕೂಡ ಕಾಳಜಿ. ದಿನದ ಒಂದಷ್ಟು ಹೊತ್ತನ್ನು ಅವುಗಳ ಸುತ್ತ ತಿರುಗುವುದರಲ್ಲೇ ಕಳೆಯುತ್ತಾರೆ. ಅದೇ ಸಮಯದಲ್ಲಿ ಅವರಿಗೆ ಕವನಗಳ ಸಾಲು ಹೊಳೆಯುವುದಂತೆ! ಕೆಲವು ಸಹಜವಾದ ಸಾಂಸಾರಿಕ ತೊಂದರೆಗಳಿಂದ ಮಾವನವರ ಕ್ರಿಯಾಶೀಲತೆಗೆ ಏನೂ ತೊಂದರೆಯಾಗಿಲ್ಲ. ಬದಲಾಗಿ ಅದು ಇನ್ನಷ್ಟು ಪ್ರಖರವಾಗಿದೆ. ಹೀಗೆಯೇ ಮಾವ ಮೊಗಸಾಲೆಯವರ ನಾಡು ನುಡಿಯ ಸೇವೆ ಮುಂದುವರಿಯಲಿ ಎಂದು ನಾನು ಆಶಿಸುತ್ತೇನೆ.

**(ನಿರೂಪಣೆ: ಬಿ. ಸೀತಾರಾಮ ಭಟ್)**

# ನಗೆಮೊಗದ ಡಾ. ನಾ. ಮೊಗಸಾಲೆ: ನಾ ಕಂಡಂತೆ

ಜಯದೇವಪ್ಪ ಜೈನಕೇರಿ

ಸರಳ ಸಜ್ಜನಿಕೆಯ ಸಾಕಾರ ಮೂರ್ತಿ ಡಾ. ನಾ. ಮೊಗಸಾಲೆ ಅವರ ಪರಿಚಯ ನನಗೆ ಆದದ್ದು, ನಿಯತಕಾಲಿಕೆಗಳಲ್ಲಿ ಪ್ರಕಟವಾಗುತ್ತಿದ್ದ ಅವರ ಕವನಗಳ ಮೂಲಕ, ಮಾತ್ರ ಆಗಾಗ ಕಾಂತಾವರದಲ್ಲಿ ನಡೆಸುತ್ತಿದ್ದ ಸಾಹಿತ್ಯ ಗೋಷ್ಠಿಗಳ ಪತ್ರಿಕಾ ವರದಿಗಳನ್ನು ಓದಿ ಯಾರೀ ನಾ. ಮೊಗಸಾಲೆ? ಎಲ್ಲಿದೆ ಕಾಂತಾವರ? ಎಂದು ಯೋಚಿಸಿದ್ದೂ ಉಂಟು. ಸುಮಾರು ನಾಲ್ಕು ವರ್ಷಗಳ ಹಿಂದೆ, ನಾನು ಶಿವಮೊಗ್ಗ ಕರ್ನಾಟಕ ಸಂಘದ ಗೌರವ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿರುವಾಗ ಅಂದಿನ ಅಂಚೆಯಲ್ಲಿ ಒಂದು ಪತ್ರ ಬಂದಿತ್ತು. ಯಿಂದಾ ಸ್ಥಳದಲ್ಲಿ ಡಾ. ನಾ. ಮೊಗಸಾಲೆ ವಿಳಾಸವಿತ್ತು. ನೋಡಿ ಕುತೂಹಲದಿಂದ ಪತ್ರ ಬಿಡಿಸಿದೆ. ಪುಸ್ತಕ ಬಿಡುಗಡೆ ಸಮಾರಂಭದ ಆಹ್ವಾನಪತ್ರಿಕೆ ಜೊತೆಗೊಂದು ಕಿರುಪರಿಚಯದ ಮನವಿ ಪತ್ರ. ಬಿಡುಗಡೆಗೆ ಮುನ್ನವೇ ಪುಸ್ತಕ ಕೊಂಡರೆ, ರಿಯಾಯಿತಿ ಜೊತೆಗೆ ಅಂಚೆ ವೆಚ್ಚವನ್ನೂ ಭರಿಸಲಾಗುವುದೆಂಬ ಭರವಸೆ ಬೇರೆ. ಅದುವರೆಗೆ ಈ ರೀತಿಯ ಪುಸ್ತಕ ಮಾರಾಟ ತಂತ್ರ ಅರಿಯದ ನನಗೆ ಕುತೂಹಲ ಉಂಟಾಯಿತು. ಮನವಿ ಪತ್ರ ಒಕ್ಕಣಿಕೆಯೂ ಆಕರ್ಷಿಸಿತು. ನೋಡೋಣವೆಂದು ಒಂದು ಪತ್ರ ಬರೆದೆ. ನಿಮ್ಮ ಆಹ್ವಾನ ಪತ್ರಿಕೆ ತಲುಪಿದೆ. ಪುಸ್ತಕ ಬಿಡುಗಡೆ ಸಮಾರಂಭ ಯಶಸ್ವಿಯಾಗಲಿ ಎಂಬ ಶುಭ ಹಾರೈಕೆಯೊಂದಿಗೆ, ಬಿಡುಗಡೆಯಾಗಲಿರುವ ಕೃತಿಗಳನ್ನು ರಿಯಾಯಿತಿ ಬಿಲ್‌ನೊಂದಿಗೆ ಕಳಿಸಿರಿ. ಬಿಲ್ ಹಣವನ್ನು ಎಂ.ಓ ಮೂಲಕ ಕಳಿಸಲಾಗುವುದೆಂದೂ ಬರೆದಂತೆ ನೆನಪು. ನಾಲ್ಕಾರು ದಿನಗಳಲ್ಲೇ ಅಂಚೆ ಮೂಲಕ ಪುಸ್ತಕಗಳು ಬಂದವು. ಅದೇ ದಿನ ಬಿಲ್ ಹಣವನ್ನು ಎಂ.ಓ. ಮೂಲಕ ಕಳಿಸಿದ್ದೂ ಆಯಿತು ತೀವ್ರ ಕುತೂಹಲದಿಂದ ಪುಸ್ತಕಗಳನ್ನು ಓದಿದೆ. ಗ್ರಾಮೀಣ ಪ್ರದೇಶದಲ್ಲಿ ಹುಟ್ಟಿ ಸುಮಾರು ನಾಲ್ಕು ದಶಕಗಳ ಕೆಳಗೆ ಆಯುರ್ವೇದ ವೈದ್ಯರಾಗಿ ಕಾಂತಾವರದಂತಹ ಒಳನಾಡಿನಲ್ಲಿರುವ ಪುಟ್ಟ ಹಳ್ಳಿಯಲ್ಲಿ ನೆಲಸಿ, ಯಶಸ್ವೀ ವೈದ್ಯರಾಗಿ ಕೆಲಸ ಮಾಡುತ್ತಲೇ ಸ್ವಂತ ಪ್ರತಿಭೆಯಿಂದ ಸೃಜನಶೀಲ ಸಾಹಿತ್ಯ ಕೃಷಿಯಲ್ಲಿ ತೊಡಗಿ, ಹಲವಾರು ಪ್ರಶಸ್ತಿ ಪುರಸ್ಕಾರಗಳಿಗೆ ಭಾಜನರಾಗಿರುವ ಡಾ. ನಾ. ಮೊಗಸಾಲೆಯವರ ಸಾಧನೆ ಕುರಿತು ಹೆಮ್ಮೆ ಎನಿಸಿತು. ಸಾಹಿತ್ಯ ಕೃಷಿಯಲ್ಲಿ ಕೃಷಿಯ ಜೊತೆಗೆ ಅವರು ನಡೆಸುತ್ತಾ ಬಂದಿರುವ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳು, 1975ರಷ್ಟು ಹಿಂದೆಯೇ ಅವರು ಸ್ಥಳೀಯರನ್ನು ಸಂಘಟಿಸಿ

ಸ್ಥಾಪಿಸಿರುವ ಕಾಂತಾವರ ಕನ್ನಡ ಸಂಘ ನನ್ನನ್ನು ವಿಶೇಷವಾಗಿ ಆಕರ್ಷಿಸಿದವು. ಕಾಂತಾವರಕ್ಕೊಂದು ಸಾಹಿತ್ಯಿಕ, ಸಾಂಸ್ಕೃತಿಕ ಸ್ಥಾನ ದೊರಕಿಸಿ ಕೊಟ್ಟಿರುವ ಡಾ. ನಾ. ಮೊಗಸಾಲೆಯವರ ವೈಯಕ್ತಿಕ ಪರಿಚಯವಿಲ್ಲದೆಯೂ ಅವರು ತಮ್ಮ ಲೇಖನಗಳ ಮೂಲಕ ನಮ್ಮವರಲ್ಲೊಬ್ಬರಾಗಿ ನನ್ನ ಮನದಲ್ಲಿ ಸ್ಥಾಪಿತರಾದದ್ದು ವಿಶೇಷ. ಸೃಜನಶೀಲ ಸಾಹಿತ್ಯದ ಮುಖ್ಯ ವಾಹಿನಿಗಳಾದ ಕಾದಂಬರಿ ಮತ್ತು ಕಾವ್ಯಗಳ ಜೊತೆಗೆ ಅವರ ವೃತ್ತಿ ಸಂಬಂಧೀ ವೈದ್ಯಕೀಯ ಅಂಕಣ ಬರಹಗಳ ಮೂಲಕ ಕರಾವಳಿ ಪ್ರದೇಶದ ಎಲ್ಲರ ಮನೆ ವೈದ್ಯರಾಗಿ ಜನಪ್ರಿಯತೆ ಪಡೆದ ಡಾ. ನಾ. ಮೊಗಸಾಲೆ ಅವರು ಜನರಲ್ಲಿ ವೈಜ್ಞಾನಿಕ, ವೈಚಾರಿಕ ಮನೋಭಾವವನ್ನು ಬಿತ್ತುವುದರಲ್ಲಿ ಯಶಸ್ವಿಯಾಗಿದ್ದಾರೆಂದು ತಿಳಿದು ವಿಸ್ಮಯವಾಯಿತು.

ಸಾಹಿತ್ಯ ಕೃಷಿಯ ಜೊತೆಗೆ ಕನ್ನಡ ಸಂವರ್ಧನೆಯ ಸಂಘಟಕರಾಗಿ ಡಾ. ನಾ. ಮೊಗಸಾಲೆ ಅವರ ಸೇವೆ ಅನುಪಮವಾದದ್ದು ಅನನ್ಯವಾದದ್ದು. ಕನ್ನಡ ನಾಡಿನ ಖ್ಯಾತನಾಮರನ್ನು, ಹೊರನಾಡು ಕನ್ನಡಿಗರನ್ನು ಪುಟ್ಟ ಹಳ್ಳಿ ಕಾಂತಾವರಕ್ಕೆ ಆಹ್ವಾನಿಸಿ ಉಪನ್ಯಾಸ ಏರ್ಪಡಿಸಿ ಅವರ ಸಾಹಿತ್ಯ ಸೇವೆಯನ್ನು ಪರಿಚಯಿಸಿ, ಪುಟ್ಟ ಹಳ್ಳಿಯ ಜನರಲ್ಲಿ ಕನ್ನಡ ಭಾಷಾಭಿಮಾನವನ್ನು ಉದ್ದೀಪನಗೊಳಿಸಿದ್ದಾರೆ. ಕಾಂತಾವರ ಮತ್ತು ಸುತ್ತಲ ಹಳ್ಳಿಗಳಲ್ಲಿ ಕನ್ನಡದ ಕಂಪನ್ನು ಪಸರಿಸುತ್ತಲೇ ಗ್ರಾಮಾಂತರ ಪ್ರದೇಶದಲ್ಲಿ ದಟ್ಟವಾದ ಕನ್ನಡ ಸಂಸ್ಕೃತಿಯನ್ನು ಬೆಳೆಸಿರುವುದು ನಿಜಕ್ಕೂ ಅಚ್ಚರಿಯ ಸಂಗತಿ. ಕಳೆದ ಮೂವತ್ತು ವರ್ಷಗಳಲ್ಲಿ ವರ್ಧಮಾನ ಪ್ರಶಸ್ತಿ, ಕವಿ ಮುದ್ದಣ ಪ್ರಶಸ್ತಿಗಳ ಹುಟ್ಟಿಗೆ ಕಾರಣರಾಗಿ ಅವುಗಳು ಅರ್ಹರಿಗೆ ದೊರಕಿಸುವುದರಲ್ಲಿ ಡಾ. ಮೊಗಸಾಲೆ ಅವರ ಪಾತ್ರ ಹಿರಿದಾದದ್ದು.



ಡಾ. ನಾ. ಮೊಗಸಾಲೆಯವರನ್ನು ನೋಡಬೇಕೆಂಬ ನನ್ನ ಬಹುದಿನಗಳ ಕನಸು ನನಸಾದದ್ದು ತೀರಾ ಇತ್ತೀಚಿಗೆ. ಮಂಗಳೂರಿನ ಶ್ರೀ ಎಂ.ಜೆ. ರಾವ್ 15 ದಿನಗಳಿಗೊಮ್ಮೆ ಪ್ರಕಟಿಸುವ ಸಮುಸೌರಭ ಪತ್ರಿಕೆಯು ವಾರ್ಷಿಕೋತ್ಸವ ಸಮಾರಂಭ ಮಂಗಳೂರಿನ ಉಡ್‌ಲ್ಯಾಂಡ್ಸ್ ಹೋಟೆಲ್‌ನ ಸಭಾಂಗಣದಲ್ಲಿ ನಡೆದಾಗ, ಆಹ್ವಾನ ಪತ್ರಿಕೆಯಲ್ಲಿ ಅವರ ಹೆಸರನ್ನು ಕಂಡಿದ್ದೆ ಮತ್ತು ಅವರ ಕೃತಿಗಳಲ್ಲಿ ಭಾವ ಚಿತ್ರ ನೋಡಿದ್ದೇನಾಗಿ ಸಮಾರಂಭದಲ್ಲಿ ಅವರನ್ನು ಗುರುತಿಸುವುದು ಕಷ್ಟವಾಗಲಿಲ್ಲ. ಕಣ್ಣರಿಯದಿದ್ದರೂ ಕರುಳರಿತಿತ್ತು ಎಂಬ ಅನುಭಾವಿಗಳ ಮಾತಿನಂತೆ. ಎಷ್ಟೋ ವರ್ಷಗಳಿಂದ ಪರಿಚಯವಿದ್ದವರಂತೆ ಆತ್ಮೀಯವಾಗಿ ನಗುತ್ತಾ ಪ್ರೀತಿಯ ಮಳೆಗರೆದರು. ಸಂಭಾಷಣೆ ನಡೆಸುತ್ತಾ ಕುಳಿತೆವು. ನಾನು ಬೆಳಗಿನ ಉದ್ಘಾಟನಾ ಸಮಾರಂಭದಲ್ಲಿ ಪಾಲ್ಗೊಂಡಿದ್ದೆ ಮಧ್ಯಾನ್ನದ ಕವಿಗೋಷ್ಠಿ ಅಧ್ಯಕ್ಷತೆ ಡಾ. ನಾ. ಮೊಗಸಾಲೆ ಅವರದ್ದು, ಸುಮಾರು 15 ಜನ ವಿವಿಧ ವಯೋಮಾನದ, ವೃತ್ತಿಗಳ ಕವಿಗಳ ಕವಿಗೋಷ್ಠಿ ತುಂಬ ಆದರ್ಶವಾಗಿ ಜರುಗಿತು. ಅಧ್ಯಕ್ಷರಾಗಿ ಶ್ರೀ ಮೊಗಸಾಲೆ ಅವರು ಎಲ್ಲ ಕವಿಗಳ ಕವನಗಳನ್ನು ವಿಮರ್ಶಿಸಿ, ಯುವ ಕವಿಗಳಿಗೆ ಬೆನ್ನು ತಟ್ಟಿ ಪ್ರೋತ್ಸಾಹದ ಮಾತುಗಳನ್ನಾಡಿದರು. ನಂತರ ಕಾವ್ಯ ಮೈದಳೆಯುವ ಸಂದರ್ಭಗಳು, ಸಾಮಾಜಿಕ ಸಂದರ್ಭಗಳಲ್ಲಿ ಸೃಜನ ಶೀಲ ಮನಸ್ಸು ಪ್ರತಿಕ್ರಿಯಿಸುವ ಅಗತ್ಯತೆಗಳನ್ನು ಕುರಿತು ಅರ್ಥಪೂರ್ಣವಾದ ಉದ್ಬೋಧಕ ಭಾಷಣ ನೀಡಿ ಎಲ್ಲರ ಮನ ಗೆದ್ದರು. ಕವಿಗೋಷ್ಠಿ

ನಂತರ ಪುನಃ ವಿಚಾರ ವಿನಿಮಯ ಮಾಡಿದೆವು. ತಾವೊಮ್ಮೆ ಶಿವಮೊಗ್ಗ ಕರ್ನಾಟಕ ಸಂಘಕ್ಕೆ ಬರಬೇಕೆಂಬ ಆಹ್ವಾನ ನೀಡಿದೆ. ಕಾಂತಾವರ ಕನ್ನಡ ಸಂಘದ ಕಾರ್ಯಚಟುವಟಿಕೆಗಳ ಮಾಹಿತಿ ಪಡೆದು ಅಭಿನಂದಿಸಿದೆ.

ಮಂಗಳೂರಿನಲ್ಲಿ ಆಹ್ವಾನಿಸಿದಂತೆ ಡಾ.ಮೊಗಸಾಲೆ ಅವರನ್ನು ದಿ: 11/6/2005 ರಂದು ಶಿವಮೊಗ್ಗ ಕರ್ನಾಟಕ ಸಂಘ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ 'ನನ್ನ ದೃಷ್ಟಿಯಲ್ಲಿ ಕಾವ್ಯ' ವಿಷಯ ಕುರಿತು ಉಪನ್ಯಾಸ ನೀಡಿ, ಸ್ವರಚಿತ ಕವನ ವಾಚನ ಮಾಡುವಂತೆ ನಾನು ನೀಡಿದ ಆಹ್ವಾನಕ್ಕೆ ಸಂತೋಷದಿಂದ ಒಪ್ಪಿಗೆ ನೀಡಿದರು. ಸಮಾರಂಭದ ಏರ್ಪಾಡು ಆಯಿತು. ಆಹ್ವಾನ ಪತ್ರಿಕೆಯೂ ಅಚ್ಚಾಯಿತು. ಆದರೆ ಶ್ರೀ ಮೊಗಸಾಲೆ ಅವರ ಆರೋಗ್ಯದಲ್ಲಿ ವ್ಯತ್ಯಯವಾಗಿ ವೈದ್ಯರ ಸಲಹೆ ಮೇರೆಗೆ ಬರಲಾಗುತ್ತಿಲ್ಲವೆಂದು ದೂರವಾಣಿಯಲ್ಲಿ ತಿಳಿಸಿದರಲ್ಲದೆ ಅದಕ್ಕಾಗಿ ವಿಷಾದವನ್ನು ವ್ಯಕ್ತಪಡಿಸಿ ತಮ್ಮ ಹೃದಯ ವೈಶಾಲ್ಯತೆಯನ್ನು ಮೆರೆದರು. ನಾನು ಸಹ ಅವರಿಗೆ ಬೇಗ ಗುಣ ಮುಖರಾಗಿರೆಂದು ಹಾರೈಸಿದೆನು. ನಂತರ ಡಾ. ಮೊಗಸಾಲೆ ಅವರ ವಿಶಿಷ್ಟ ಆತ್ಮಕಥೆ 'ಬಯಲ ಬೆಟ್ಟ' ಬಿಡುಗಡೆ ಸಂದರ್ಭದಲ್ಲಿಯೂ ಎಂದಿನಂತೆ ಬಿಡುಗಡೆ ಪೂರ್ವ ಮಾರಾಟ ಪತ್ರ ಆಹ್ವಾನ ಪತ್ರಿಕೆಯೊಂದಿಗೇ ಬಂದಿತು. ಪುಸ್ತಕವೂ ಬಂದಿತು. ಓದಿ ಮೆಚ್ಚುಗೆಯ ಪತ್ರವನ್ನೂ ಬರೆದೆನು.

'ಇವನಾರವ, ಇವನಾರವನೆಂದೆನಿಸದಿರಯ್ಯಾ, ಇವ ನಮ್ಮವನೆಂದೆನಿಸಯ್ಯಾ' ಎಂಬ ಶರಣರ ವಾಣಿಯಂತೆ, ಕರ್ನಾಟಕದ ಉದ್ದಗಲಕ್ಕೂ, ಕರ್ನಾಟಕ ಹೊರಗೂ ಅಪಾರ ಅಭಿಮಾನಿಗಳನ್ನು ಹೊಂದಿರುವ ಡಾ. ನಾ. ಮೊಗಸಾಲೆಯವರ ಕರ್ಮಭೂಮಿ ಕಾಂತಾವರವನ್ನು ನೋಡಬೇಕೆಂಬ ಉತ್ಕಟವಾದ ನನ್ನ ಆಸೆ ನೆರವೇರಿದ್ದು ತೀರಾ ಇತ್ತೀಚೆಗೆ ದಿ: 1/5/2006 ರಂದು. ಕಾಂತಾವರ ಕನ್ನಡ ಸಂಘದ ತ್ರಿದಶಮಾನೋತ್ಸವ ಸಂದರ್ಭದಲ್ಲಿ. ಒಂದು ತಿಂಗಳು ಮೊದಲೇ ದೂರವಾಣಿಯುಲ್ಲಿ ಸಂಪರ್ಕಿಸಿ ನನ್ನ ಒಪ್ಪಿಗೆಯನ್ನು ಪಡೆದುಕೊಂಡರು. ಸಮಾರೋಪ ಸಮಾರಂಭದ ಶಿಖರೋಪನ್ಯಾಸ ನೀಡಬೇಕಾಗಿ ಆಹ್ವಾನಿಸಿದರು. ಹಿಂದೆಯೇ ಪತ್ರವೂ ಬಂದಿತು. ಸಾಕಷ್ಟು ಮುಂಚಿತವಾಗಿ ಕಾರ್ಯಕ್ರಮ ಆಹ್ವಾನ ಪತ್ರಿಕೆಯೂ ಬಂದಿತು. ಕಾರ್ಯಕ್ರಮಗಳನ್ನು ಸಂಯೋಜಿಸಿ ಅರ್ಹರನ್ನು ಆಹ್ವಾನಿಸುವುದೂ, ಒಪ್ಪಿಸುವುದೂ ಒಂದು ಕಲೆ. ಈ ಕಲೆ ಮೊಗಸಾಲೆ ಅವರಿಗೆ ಸಿದ್ಧಿಸಿದೆ ಎಂಬುದು ಆಹ್ವಾನ ಪತ್ರಿಕೆ ನೋಡಿದರೆ ಸಾಕು, ತಿಳಿಯುತ್ತದೆ. ಪುನಃ ದೂರವಾಣಿಯಲ್ಲಿ ಸಂಪರ್ಕಿಸಿ, ಆಹ್ವಾನ ಪತ್ರಿಕೆ ತಲುಪಿತೇ ಎಂದು ಕೇಳಿದರು. ಕಾಂತಾವರಕ್ಕೆ ತಲುಪುವ ದಾರಿ, ವಸತಿ, ಆತಿಥ್ಯದ ವ್ಯವಸ್ಥೆ ಕುರಿತು ಮಾಹಿತಿ ನೀಡಿ ಪ್ರೀತಿಯಿಂದ ಮತ್ತೊಮ್ಮೆ ಆಹ್ವಾನಿಸಿದರು.

ಡಾ.ನಾ. ಮೊಗಸಾಲೆ ಅವರ ಆಹ್ವಾನದಂತೆ ದಿ: 1/5/2006ರ ಬೆಳಿಗ್ಗೆ 8 ಗಂಟೆಗೆ ಮೂಲ್ಕಿಗೆ ಬಂದಿಳಿದೆ. ಬಸ್‌ನಿಲ್ದಾಣದ ಪಕ್ಕದಲ್ಲೇ ಇರುವ ಶ್ರೀ ಹರಿಕೃಷ್ಣ ಪುನರೂರು ಅವರ ಹೋಟೆಲ್ ಟೂರಿಸ್ಟ್ ತಲುಪುತ್ತಿದ್ದಂತೆ ವಸತಿ ವ್ಯವಸ್ಥೆಯಾಯಿತು. ಬಿಸಿ ನೀರಿನ ಸ್ನಾನ ರಾತ್ರಿಯಿಡೀ ಪ್ರಯಾಣದ ಆಯಾಸ ಪರಿಹಾರವಾಯಿತು. ನಗೆ ಮೊಗದ ಉಪಚಾರ, ಉಪಹಾರವೂ ಆಯಿತು. ಅಷ್ಟರಲ್ಲಿ ನಮ್ಮನ್ನು ಅಂದರೆ ಡಾ. ಪದ್ಮಪ್ರಸಾದ್, ಡಾ. ಎಚ್.

ಎಸ್. ವೆಂಕಟೇಶ್ ಮೂರ್ತಿ, ಶ್ರೀ ಬಾಕಿನ ಮತ್ತು ನನ್ನನ್ನು ಕಾಂತಾವರಕ್ಕೆ ಕರೆದೊಯ್ಯುವ ವಾಹನವೂ ಬಂದಿತು. ಶ್ರೀ ಪುನರೂರು ಅವರು ಮಧ್ಯಾಹ್ನ ಬರುವುದಾಗಿ ಹೇಳಿ ನಮ್ಮನ್ನು ಬೀಳ್ಕೊಟ್ಟರು. 22 ಕಿ.ಮೀ. ದೂರದ ಕಾಂತಾವರವನ್ನು ಸಮಯಕ್ಕೆ ಸರಿಯಾಗಿ ತಲುಪಿದೆವು. ದಾರಿಯುದ್ದಕ್ಕೂ ಹಸಿರು ವನಸಿರಿ, ಅಲ್ಲಲ್ಲಿ ಮನೆಗಳು, ಅಡಿಕೆ ತೆಂಗು, ಹಲಸಿನ ಮರಗಳು ಅಂಕುಡೊಂಕಾದ ಕಿರು ರಸ್ತೆಯಲ್ಲಿ ಹಿರಿಯ ಕವಿಗಳೊಂದಿಗೆ ಮಾತನಾಡುತ್ತಾ ಪ್ರಕೃತಿ ಸೌಂದರ್ಯ ಸವಿಯುತ್ತಾ ದಾರಿ ಸವೆದದ್ದೇ ಗೊತ್ತಾಗಲಿಲ್ಲ. ಮತ್ತೆ ಅಲ್ಪ ಉಪಾಹಾರ ಟೀ ನಂತರ 10.30ಕ್ಕೆ ಸರಿಯಾಗಿ ಸಭೆ ಪ್ರಾರಂಭ. ಪ್ರಾರ್ಥನೆ, ಪ್ರಸ್ತಾವನೆ, ಉದ್ಘಾಟನೆ ಎಲ್ಲವೂ ಅಚ್ಚುಕಟ್ಟು. ಹಿನ್ನೆಲೆಯಲ್ಲಿ ಮೊಗಸಾಲೆಯವರ ಪರಿಶ್ರಮ, ಕಾರ್ಯದಕ್ಷತೆ ಕಂಡುಬರುತ್ತಿತ್ತು. ಸಂಜೆ ಸಮಾರೋಪ ಭಾಷಣ ಮುಗಿದಾಗಲೂ ನಿಗದಿತ ಸಮಯ; ನಂತರ ನಮ್ಮೆಲ್ಲರನ್ನೂ ಮೂಲ್ಕಿಗೆ ಬೀಳ್ಕೊಟ್ಟರು. ಕಾಂತಾವರದಂತಹ ಗ್ರಾಮಾಂತರ ಪ್ರದೇಶದಲ್ಲಿ 31 ವರ್ಷಗಳ ಕೆಳಗೆ ಕನ್ನಡ ಸಂಘದ ಸಸಿನೆಟ್ಟು ಹೆಮ್ಮರವಾಗಿ ಬೆಳೆಸಿ, ಕನ್ನಡ ಸಂಘಕ್ಕೊಂದು ಅಂದದ ಗುಡಿಯನ್ನು ಕಟ್ಟಿಸಿ (ಕೆ.ಬಿ. ಜನರಾಜ ಹೆಗಡೆ ಜನ್ಮ ಶತಮಾನೋತ್ಸವ ಕನ್ನಡ ಭವನ 2003) ಜೊತೆಗೆ ತಾವೂ ಬೆಳೆದು, ವೃತ್ತಿ ಮತ್ತು ಪ್ರವೃತ್ತಿ ಜೀವನಗಳೆರಡರಲ್ಲಿಯೂ ಯಶಸ್ವಿಯಾದ ಅಪರೂಪದ ವ್ಯಕ್ತಿ ನಗೆಮೊಗದ ಡಾ. ನಾ. ಮೊಗಸಾಲೆ ಅವರು ನೂರ್ಕಾಲ ಬಾಳಲಿ. ಅವರ ಸಾಹಿತ್ಯ ಮತ್ತು ಸಾಮಾಜಿಕ ಸೇವೆಗಳು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಗುರುತಿಸುವಂತಾಗಲಿ. ಅವರ ನಗೆ ಮಾಸದಿರಲಿ.

o



# ಕನ್ನಡಮ್ಮನ ಅಂಗಳದಿ ಅರಳಿದ ಕಾಂತಾವರದ ಸುಮ

ವಿಶ್ವನಾಥ ವಾರಂಬಳ್ಳಿ

*"ಕೊಡುವುದೇನು? ಕೊಂಬುದೇನು?*
*ಒಲವು, ಸ್ನೇಹ, ಪ್ರೇಮ*
*ಹೊರಗೆ ಬಿರುದು, ಒಳಗೆ ಒಲಿದು*
*ಇದ್ದವರಿಗೆ ನೇಮ"*

*– ಬೇಂದ್ರೆ*

ನಮ್ಮ ಊರು ಮೂಲತಃ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿ ತಾಲೂಕು ಬ್ರಹ್ಮಾವರದ ಹತ್ತಿರದ ಸಾಲಿಕೇರಿ ಎಂಬ ಪುಟ್ಟ ಗ್ರಾಮ. ಸಾಲಿಗರ ಕೈಮಗ್ಗದ ಸೀರೆಯ ಭರಾಟೆ, ಬಟಲ್ ಬಟಲ್ ಎಂಬ ನಿರಂತರ ಶಬ್ದ ಕಿವಿಗೆ ಹಿತವೆನ್ನಿಸುತ್ತಿತ್ತು. ಈಗ ಅದರ ಸದ್ದಡಗಿದೆ, ಕಾಲು ನೋವಿಗೆ ಭಿರ್ತಿ ರೈಲ ಕೂಡ ಆಗ ಪ್ರಸಿದ್ಧವಾಗಿತ್ತು. ಆಧುನಿಕ ನಾಗರಿಕತೆ ಬೆಳೆದಂತೆಲ್ಲ ಅವೆಲ್ಲ ಮೂಲೆಗುಂಪಾಗಿವೆ.

1960ರಲ್ಲಿ ನನ್ನ ತಂದೆಯವರು ಕುಂದಾಪುರದಿಂದ ವಲಸೆ ಬಂದವರೆ ಉತ್ತರ ಕರ್ನಾಟಕದ ಆಗಿನ ಧಾರವಾಡ ಜಿಲ್ಲೆಯ ಹಿರೆಕೆರೂರು ತಾಲೂಕಿನ ಹಂಸಭಾವಿಗೆ ಬಂದವರು ಹೋಟೆಲ್ ವ್ಯವಸಾಯ ಕೈಗೊಂಡರು. ನನ್ನ ವಿದ್ಯಾಭ್ಯಾಸ ಈ ಕಡೆಯೂ ಆಯ್ತು. ಹುಬ್ಬಳ್ಳಿಯಲ್ಲಿ ಬಿಎಸ್ಸಿ ಮುಗಿಯಿತು. ನಿರುದ್ಯೋಗದ ಬಾಧೆ ತಂದೆಯವರ ಕೋರ್ಟ್ ಕೇಸ್, ಹೀಗಾಗಿ ಬ್ಯಾಡಗಿಯ ಕ್ಯಾಂಟೀನ್ ಒಂದರಲ್ಲಿ ವ್ಯವಸ್ಥಾಪಕನಾಗಿ ಕೆಲಸ ನಿರ್ವಹಣೆ. ಮೊದಲಿನಿಂದಲೂ ನನಗೆ ಸಾಹಿತ್ಯದೆಡೆ ಒಲವು.

1980ರಲ್ಲಿ ಪೊಲೀಸ್ ಇಲಾಖೆಯ ಶಹಾಬುದ್ದೀನ್ ಕುಮ್ಮಿನಕಟ್ಟೆ ಎಂಬುವರ ಪರಿಚಯವಾಗಿ ಸ್ನೇಹಕ್ಕೆ ತಿರುಗಿತು. ಸ್ವತಃ ಕವಿ, ಸಾಹಿತಿ, ನಾಟಕಕಾರರಾಗಿದ್ದ ಮಿತ್ರ ಕುಮ್ಮಿನಕಟ್ಟೆ ಬಡ ವಿದ್ಯಾವಂತ ಹಾಗೂ ಅವಿದ್ಯಾವಂತ ಮಕ್ಕಳಿಗೆ ಪಾಠ ಹೇಳಿಕೊಡುವುದು ಹಾಡುವುದು ನಾಟಕವಾಡುವುದು. ಮಕ್ಕಳ ಪ್ರತಿಭೆಗೆ ಅವಕಾಶ. ಹಾಗೂ ವೇದಿಕೆ ಕಟ್ಟಿಸುವುದು. ಬಹುಮಾನ ನೀಡಿ ಪ್ರೋತ್ಸಾಹಿಸುವುದು, ತಮ್ಮ ಜೇಬಿನಿಂದಲೇ ಅವರು ಸಾಕಷ್ಟು ಹಣವನ್ನು ಅವರು

ಮಕ್ಕಳಿಗಾಗಿಯೇ ಮೀಸಲಿಡುತ್ತಿದ್ದರು. ಬ್ಯಾಡಗಿಯಲ್ಲಿಯೇ ನಮ್ಮ ಸಾಹಿತ್ಯ ಚಟುವಟಿಕೆಗಳು ಆಗಾಗ ನಡೆಯುತ್ತಲೇ ಇದ್ದವು.

1993-94ರಲ್ಲಿ ಒಂದು ದಿನ ಮಿತ್ರ ಶಹಾಬುದ್ದೀನ್ 'ಕಾಂತಾವರ ಕನ್ನಡ ಸಂಘ' ಪರಿಚಯಿಸುವ ಕಿರು ಪುಸ್ತಿಕೆಯನ್ನು ಓದಲು ತಂದುಕೊಟ್ಟರು. ನಾವೆಲ್ಲ ಆಗ ಪತ್ರಿಕೆಯಲ್ಲಿ ಬರುವ ಹಣ ಸಹಾಯಕ್ಕಾಗಿ ಮನವಿ ಬರುತ್ತಿದ್ದುದು ಗಮನಿಸಿ ನಮ್ಮ ಕೈಲಾದ ಸಹಾಯ ಮಾಡುತ್ತಿದ್ದೆವು. 1994ರ ವರ್ಷಾಂತ್ಯದಲ್ಲಿ ಮಿತ್ರ ಶಹಾಬುದ್ದೀನ್ ಅವರಿಗೆ ತೀವ್ರ ಹೃದಯಬೇನೆ ಕಾಣಿಸಿಕೊಂಡು ವಿಷಮ ಪರಿಸ್ಥಿತಿ ಎದುರಾಯಿತು. ಆದರೂ ಅಂಥ ವಿಷಮ ಪರಿಸ್ಥಿತಿಯಿಂದ, ಪ್ರಾಣಾಪಾಯದಿಂದ ಪಾರಾಗಿ ಮತ್ತೆ ಸೇವೆಗೆ ಮರಳಿದ್ದರು. ಕಾಂತಾವರ ಕನ್ನಡ ಸಂಘಕ್ಕೆ ಅವರೂ ಹಸ್ತಪ್ರತಿ ಕಳಿಸಿದ್ದರಂತೆ, ನಾವೂ ಅಂಥದ್ದೊಂದು ಸಂಘವನ್ನೋ ಯಾ ಸಂಸ್ಥೆಯನ್ನೋ ಸ್ಥಾಪಿಸಬೇಕೆಂಬ ವಿಚಾರ ನಿಧಾನವಾಗಿ ಮೊಳಕೆಯಾಗಿ ಚಿಗುರೊಡೆಯಿತು.

1995ರಲ್ಲಿ ಶಹಬುದ್ದೀನ್ ಹಾವೇರಿಯ ಮಿತ್ರ ಸತೀಶ ಕುಲಕರ್ಣಿಯವರಿಗೆ ಜವಾಬ್ದಾರಿ ವಹಿಸಿದರು. ವಾರಂಬಳ್ಳಿ ಪ್ರತಿಷ್ಠಾನ ಎಂಬ ಸಾಹಿತ್ಯ ಮತ್ತು ಸಾಂಸ್ಕೃತಿಕ ವೇದಿಕೆಯನ್ನು ಸ್ಥಾಪಿಸಿಯೂ ಬಿಟ್ಟೆವು. ಪ್ರತಿವರ್ಷ ಕಾವ್ಯ, ನಂತರ ಸಣ್ಣ ಕಥೆಗಳಿಗೆ ಪ್ರತೀ ವರುಷ ಪ್ರಶಸ್ತಿ ನೀಡುತ್ತ ಬಂದೆವು. 1995ರಲ್ಲಿ ಮಿತ್ರ ಶಹಬುದ್ದೀನ್ ಕಾಲವಾದರು. ಈಗಲೂ ಪ್ರತಿಷ್ಠಾನದ ಚಟುವಟಿಕೆಗಳು ನಡೆಯುತ್ತಲಿವೆ.

ಇದೆಲ್ಲ ಪೂರ್ವ ಪೀಠಿಕೆಗೆ ಕಾರಣ ಡಾ. ನಾ. ಮೊಗಸಾಲೆಯವರು ದೂರದ ಕಾಂತಾವರವೆಂಬ ಸಣ್ಣ ಗ್ರಾಮದಲ್ಲಿದ್ದುಕೊಂಡು ನಮ್ಮ ಪ್ರತಿಷ್ಠಾನದ ಸ್ಥಾಪನೆಗೂ ಪರೋಕ್ಷವಾಗಿ ಕಾರಣರಾದರು. ಅದೂ ಅಲ್ಲದೇ ತಮ್ಮ ಪ್ರತಿಷ್ಠಾನದ ಸ್ಫೂರ್ತಿ ಪಡೆದು ವಿರೂಪಾಕ್ಷ ಹಾವನೂರ ಅವರು ಹಾವನೂರು ಪ್ರತಿಷ್ಠಾನ ಸ್ಥಾಪಿಸಿ ಪ್ರತಿ ವರುಷ ಕಾದಂಬರಿಗೆ ಪ್ರಶಸ್ತಿ ನೀಡುತ್ತ ಬಂದರು.

8ನೇ ವರುಷದ ಕಾದಂಬರಿ ಪ್ರಶಸ್ತಿಗೆ ಡಾ. ನಾ. ಮೊಗಸಾಲೆಯವ 'ಅರ್ಥ' ಕಾದಂಬರಿಗೆ ಲಭಿಸಿದ್ದು ಈಗ ಇತಿಹಾಸ.

ಕಾಂತಾರ ಕನ್ನಡ ಸಂಘ, ನಮ್ಮ ಎರಡೂ ಪ್ರತಿಷ್ಠಾನಗಳಿಗೂ ಪರೋಕ್ಷ ಪ್ರೇರಣೆ ನೀಡಿದ್ದಂತೂ ದಿಟ. 1995-96ರ ಮಾತು ಕಾಂತಾವರ ಕನ್ನಡ ಸಂಘಕ್ಕೆ ನೆರವು ಸಲ್ಲಿಸಬೇಕೆಂಬ ಬಯಕೆಯೊಂದಿಗೆ ಆ ದಿಶೆಯಲ್ಲಿ ನಾನು ಕಾರ್ಯಪ್ರವೃತ್ತನಾಗಿ ಕಿರು ಮೊತ್ತವನ್ನು ಕಳಿಸಿದ್ದೆ. ಅದಕ್ಕೆ ಡಾ. ನಾ. ಮೊಗಸಾಲೆಯವರು ಹೃದಯಕ್ಕೆ ಹತ್ತಿರವಾಗುವ ಒಂದು ದೀರ್ಘ ಪತ್ರವನ್ನು ಬರೆದುದರ ಜೊತೆಗೆ ತಮ್ಮ ಒಂದಿಷ್ಟು ಪುಸ್ತಕಗಳನ್ನು ತಮ್ಮ ಕಾವ್ಯ ಸ್ಪರ್ಧೆಗೆ ತಮ್ಮ ಸ್ವಂತಕ್ಕೆ ಸ್ವಂತಾವತಾರ ಕವಿತೆಯನ್ನು ಕಳಿಸಿದ್ದೂ ಅಲ್ಲದೇ 'ಸಂಘಟನೆಯ ತಾಪತ್ರೆಗಳೆಲ್ಲ ನನಗೆ ಗೊತ್ತು. ತಾವು ಹಣ ಕಳಿಸಬೇಡಿ' ಎಂದು ನಯವಾಗಿ ತಿಳಿಸಿ, ಸಂಘಟನೆಗಾಗಿ ಹಣದ ಅವಶ್ಯಕತೆ ಇದ್ದೇ ಇರುತ್ತದೆ ಎಂಬ ಎಚ್ಚರವನ್ನೂ ನನಗೆ ನೀಡಿದರು.

1996ರಲ್ಲಿ ಅವರ ಮೊದಲ ಮಗ ಶ್ರೀ ನಿರಂಜನರ ಮದುವೆಗೂ ಬರಲು ಆಹ್ವಾನ ನೀಡಿದ್ದರು. ಮದುವೆಗೆ ಹೋಗಲು ಅವಕಾಶವೂ ದೊರಕಿತು. ಮೊದಲ ಭೇಟಿಯಲ್ಲೇ

ಮದುವೆಯ ದಿನದಂದೇ ನಾವೆಲ್ಲ ಆತ್ಮೀಯರಾದೆವು. ಸ್ನೇಹ ಸಿಂಚನವಾಯ್ತು. ಮದುವೆಯ ಸುಗ್ರಾಸ ಭೋಜನವುಂಡು ಮಧುರ ನೆನಪುಗಳೊಡನೆ ಊರಿಗೆ ಪಯಣ. ಮದುವೆಯ ದಿನದಂದು ಮೂಡುಬಿದಿರೆಯ ಕಲ್ಯಾಣಮಂಟಪದಲ್ಲಿ ಕಡು ಕಾಫಿ ಕುಡಿಯುತ್ತ ಬಂದ ನಾ. ಮೊಗಸಾಲೆ ಅವರು ನನ್ನ ಪರಿಚಯಿಸಿಕೊಂಡಾಗ ನಗೆ ಬೀರಿ ಸ್ನೇಹದ ಹಸ್ತ ಚಾಚಿದ್ದು ಮರೆಯುವಂತಿಲ್ಲ. ಆ ನೆಪದಲ್ಲಿ ಮೂಡುಬಿದಿರೆಯ ಇತಿಹಾಸ ಸುಪ್ರಸಿದ್ಧ ಸಹಸ್ರಕಂಬದ ಬಸದಿಯನ್ನು ಮನದಣಿಯೆ ನೋಡಿದ್ದೆ.

2003ರಲ್ಲಿ ಹಾವೇರಿಯಲ್ಲಿ ಹಾವನೂರು ಕಾದಂಬರಿ ಪ್ರಶಸ್ತಿ ಸ್ವೀಕರಿಸಲು ಅವರು ಬಂದಾಗ ಅವರ ಜೊತೆ ಇಡೀ ದಿನ ಅವರ ಸಂಪರ್ಕದಲ್ಲಿಯೇ ಇದ್ದೆ. ಮತ್ತೆ ನಮ್ಮ ಅವರ ಸ್ನೇಹ ಗಾಢವಾಗುತ್ತ ಹೋಯ್ತು. ರಾತ್ರಿ 1.30ರ ನಂತರವೂ ಹಂಸಭಾವಿಯಲ್ಲಿ ನಮ್ಮ ಮನೆಗೆ ಕೆಲಹೊತ್ತು ತಂಗಿ ನಮ್ಮ ಆತಿಥ್ಯ ಸ್ವೀಕರಿಸಿ ರಾತ್ರಿಯೇ ಊರೆಡೆ ಪ್ರಯಾಣಿಸಿದ್ದು, ಮತ್ತೆ ಮತ್ತೆ ನೆನಪಿಗೆ ಬರುತ್ತದೆ.

ಪ್ರೀತಿಗೆ ತಲೆಬಾಗುವ ಈ ಸ್ನೇಹಜೀವಿ ಕಾಂತಾವರದ ಕನ್ನಡ ಭವನದ ರೂವಾರಿ. ಪ್ರಥಮ ಸರಕಾರೇತರ ಸಾಹಿತ್ಯ ಪ್ರಶಸ್ತಿ ನೀಡಲು ಕಾರಣರಾದವರು. ಕವಿ ಮುದ್ದಣನ ಕಾವ್ಯ ಮನೋರಮತೆಗೆ ಕಾರಣ ಹೆಣ್ಣಿನ ಅಂದ. ಇಂಥ ಸರಸಕವಿ ಮುದ್ದಣನ ಹೆಸರಿನಲ್ಲಿ ಕವಿ ಮುದ್ದಣ ಸ್ಮಾರಕ ಕಾವ್ಯ ಪ್ರಶಸ್ತಿಯ ಸ್ಥಾಪನೆ ಕಾಂತಾವರ ಕನ್ನಡ ಸಂಘದ ಹೆಗ್ಗಳಿಕೆ. ಪ್ರಶಸ್ತಿಗೆ ಈಗ 31ರ ಹರೆಯ.

ಸೃಜನಶೀಲ ಮನಸ್ಸಿಗೆ ಎಷ್ಟೊಂದು ಮುಖಗಳಿವೆ. ಎಣಿಸಲಾರೆ, ವೈದ್ಯಕೀಯ ಚಿಕಿತ್ಸೆಯೊಂದಿಗೆ ಸಾಹಿತ್ಯ ಚಿಕಿತ್ಸೆ. ಹೃದಯದ ಭಾಷೆಯಲ್ಲಿನ ಕ್ರಿಯಾಶೀಲ ವ್ಯಕ್ತಿತ್ವದ ಮಗು ಮನಸ್ಸಿನ ತುಂಬು ನಗೆಯ ನಾರಾಯಣ ಮೊಗಸಾಲೆ.

ಮೊಗಸಾಲೆ ಎಂದರೆ ಮನೆ ಮುಂದಿನ ಹಜಾರ. ಮನೆಗೆ ಮೊಗಸಾಲೆ ಇರುವುದು ಭೂಷಣ. ಮನೆಗೆ ಬಂದ ಅತಿಥಿಗಳನ್ನು ಮೊಗಸಾಲೆಯಲ್ಲಿಯೇ ಇದಿರುಗೊಳ್ಳುತ್ತೇವೆ. ಅಲ್ಲಿಯೇ ವೀಳ್ಯದ ತಟ್ಟೆ, ಬಂದವರಿಗೆ ವೀಳ್ಯದ ಸ್ವಾಗತ. ಮಾತುಕತೆ ಬಿಚ್ಚುವುದೂ ಅಲ್ಲಿಯೇ, ಮಾತುಕತೆಗಳು ನಡೆಯುವುದೂ ಅಲ್ಲಿಯೇ, ಮಾತೇ ಕಲೆಗಳಾಗುವುದೂ ಮೊಗಸಾಲೆಯಲ್ಲಿಯೇ. ಸಮಾನ ಮನಸ್ಕರು ಕೂಡಿ ಚಿಂತಿಸುವ, ಚರ್ಚಿಸುವ ಸ್ಥಳವೇ ಮನೆಯ ಮೊಗಸಾಲೆ.

ಕವಿಯಾಗಿ, ಕಥೆಗಾರರಾಗಿ, ಕಾಂತಾವರ ಕನ್ನಡ ಸಂಘದ ಆಜೀವ ಕಾರ್ಯಾಧ್ಯಕ್ಷರಾಗಿ ವರ್ಧಮಾನ ಸಾಹಿತ್ಯ ಪೀಠದ ಪ್ರಧಾನ ನಿರ್ದೇಶಕರಾಗಿ, ಕಾದಂಬರಿಕಾರರಾಗಿ, ವೈದ್ಯರಾಗಿ ನಿಸ್ವಾರ್ಥ ಸಾಹಿತ್ಯ ಹಾಗೂ ವೈದ್ಯಕೀಯ ಸೇವೆ ಸಲ್ಲಿಸಿರುವ ವ್ಯಕ್ತಿ ಮೊಗಸಾಲೆಯವರು.

'ಸುಖೇ ದುಃಖೇಸಮೇ ಕೃತ್ವಾ ಲಾಭಾ ಲಾಭೌ, ಜಯಾ ಜಯೌ' ಎಂದು ಭಗವದ್ಗೀತೆಯಲ್ಲಿ ಹೇಳಿದ್ದಾರೆ. ಸುಖ ಮತ್ತೆ ದುಃಖವನ್ನು ಸಮವಾಗಿ ಹಂಚಿಕೊಂಡವರು. ಸಾಹಿತ್ಯ ಸೇವೆ ಎಂದರೆ (Thankless job) ಕೃತಜ್ಞತೆ ಹೇಳದ ಕೆಲಸ ಎನ್ನುವಂತಾಗಿದೆಯಾದರೂ 31 ವರ್ಷಗಳ ನಂತರವೂ ನಿರಂತರ ಸಾಹಿತ್ಯ ಚಟುವಟಿಕೆಗಳನ್ನು ನಡೆಸುತ್ತ ಬಂದಿರುವುದು

ತಮಾಷೆಯ ಸಂಗತಿಯಲ್ಲ. ಅವರ ಕ್ರಿಯಾಶೀಲತೆ, ಕರ್ತವ್ಯ ಬದ್ಧತೆ – ಸಾಹಿತ್ಯದ ಸೇವೆ ನಿರಂತರಾಗಿ ನಡೆಯುವಂತೆ ಮಾಡಿದೆ. ಅರವತ್ತರ ನಂತರವೂ ಅವರ ಬದುಕು ಅರಳುತ್ತಲೇ ಇದೆ. ಪುಸ್ತಕ ಬಿಡುಗಡೆ ಸಮಾರಂಭಗಳು ನಡೆಯುತ್ತಲೇ ಇವೆ.

ಸಾಹಿತ್ಯ ದಿಗ್ಗಜ ಡಾ. ಹಾ.ಮಾ. ನಾ ಅವರು ಮೊಗಸಾಲೆ ಅವರ ಬಗೆಗೆ 'ಸ್ವಗತ' ಅಂಕಣ (ತರಂಗ ಸಾಪ್ತಾಹಿಕ)ದಲ್ಲಿ ಬರೆದುದನ್ನು ಇಲ್ಲಿ ಪ್ರಸ್ತಾಪಿಸುವುದು ಹೆಚ್ಚು ಸೂಕ್ತ ಎನಿಸುತ್ತದೆ.

"ಸ್ನೇಹ, ಸೌಜನ್ಯ ಹಾಗೂ ಸಹೃದಯದ ಪ್ರತಿ ಮೂರ್ತಿ ಅವರು. ಜನರ ಪ್ರೀತಿ, ಆದರವನ್ನು ಸಾಕಷ್ಟು ಪಡೆದಿದ್ದಾರೆ. ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಅವರನ್ನೂ ಸಹಸದಸ್ಯರನ್ನಾಗಿ ನಾಮಕರಣ ಮಾಡಿದ್ದೆವು. 3 ವರ್ಷದಲ್ಲಿ ಅವರನ್ನೂ, ಅವರ ಸಂಘಟನಾ ಚಾತುರ್ಯವನ್ನೂ ಹತ್ತಿರದಿಂದ ನೋಡುವ ಅವಕಾಶ ನನಗೆ ಒದಗಿತ್ತು. ಅವರಿಗಿಂತ ಕಡಿಮೆ ಕೆಲಸ ಮಾಡಿದವರು ದೊಡ್ಡ ಅವಕಾಶಗಳನ್ನು ಪಡೆದಿದ್ದರೂ ಮೊಗಸಾಲೆ ಮನಸ್ಸನ್ನು ಕಹಿ ಮಾಡಿಕೊಂಡದ್ದಾಗಲೀ, ಸಿನಿಕರಾದದ್ದಾಗಲೀ ನಾನು ಕಂಡಿಲ್ಲ. ಅವರಿಗೆ ಎಲ್ಲ ಶುಭವಿರಲಿ"

ಬಹುಶಃ ಡಾ. ಹಾ.ಮಾ.ನಾ ಅವರ ಬರವಣಿಗೆ ಹರಕೆಯೂ ಹೌದು ಮತ್ತು ಹಾರೈಕೆಯೂ ಹೌದು.

ಡಾ. ನಾ. ಮೊಗಸಾಲೆಯವರ ಕಾವ್ಯ ಹಕ್ಕಿ ಹೀಗೆ :

"ನಾನು ಪ್ರೀತಿಸುತ್ತೇನೆ ಮನುಷ್ಯರನ್ನು
ಅವರು ಕೇವಲ ಮನುಷ್ಯರೆಂದು
ಒಮ್ಮೊಮ್ಮೆ ನನಗೆ ಪ್ರೀತಿಸಲು
ಕಷ್ಟವಾಗುತ್ತದೆ
ಮನುಷ್ಯರು ಮನುಷ್ಯರಾಗಿಲ್ಲವೆಂದು"

ಸ್ನೇಹಪರತೆ, ಸೌಜನ್ಯ ಸಜ್ಜನಿಕೆ, ಪ್ರೀತಿ, ಹೃದಯವಂತಿಕೆ ಬೇರೆಯವರಿಂದ ನಾವು ಅಪೇಕ್ಷಿಸುವಂತೆ ನಮ್ಮ ನಿಲುವುಗಳಲ್ಲಿ ಅಂಥ ಪ್ರಾಮಾಣಿಕತೆ ಇದೆಯೇ ಎನ್ನುವುದನ್ನು ಪ್ರಶ್ನಿಸಿಕೊಂಡಾಗ ನಮ್ಮದೆಲ್ಲ ತಡಬಡಾಯಿಸುವ ಸ್ಥಿತಿ. ಸಾಹಿತ್ಯದ ಸಮಾರಂಭಗಳಲ್ಲಿ ಅವರ ಪ್ರಾಮಾಣಿಕತೆ ಮೆರೆದಿದೆ. ಸಾಹಿತ್ಯದ ಸಂಘಟನೆಗೆ ಯಾವ ಕಳಂಕವೂ ತಗುಲದಂತೆ ಎಚ್ಚರ ವಹಿಸುತ್ತಾರೆ. ಮುದ್ದಣ ಕಾವ್ಯ ಪ್ರಶಸ್ತಿಯ ಬೆಳ್ಳಿಹಬ್ಬದ ಸಮಾರಂಭಕ್ಕೆ ಕಾಂತಾವರಕ್ಕೆ ಹೋಗುವ ಭಾಗ್ಯ ನನ್ನದಾಗಿತ್ತು. ಸಮಾರಂಭದ ಖರ್ಚು ವೆಚ್ಚದ ಪ್ರತಿಯೊಂದನ್ನೂ ನೀಡಿದರು. ಸಮಾರಂಭ ಎಷ್ಟೆಷ್ಟು ಹೊತ್ತಿಗೆ, ಗೋಷ್ಠಿಯ ಸಮಯ ಎಲ್ಲವೂ ನೀಟಾಗಿಯೇ ನಡೆಯುತ್ತಿದ್ದುದು ಕಂಡು ಅಚ್ಚರಿಯು ಜೊತೆಗೆ ಸಂತಸವೂ ಆಗಿತ್ತು. ಮೊಗಸಾಲೆಯವರ ಸಾಹಿತ್ಯದ ಸಮಾರಂಭಗಳಿಗೆ ಒಂದು ಶಿಸ್ತು ಇದೆ. ಇದು ತುಂಬ ಅಪರೂಪ ಮತ್ತು ಅಪೇಕ್ಷಣೀಯ.

ಕಾಂತಾವರದ ಅವರ ಮನೆಯಲ್ಲಿ ಮೊಗಸಾಲೆಯವರ ಧರ್ಮಪತ್ನಿ ಪ್ರೇಮಕ್ಕನದು

ಪ್ರೀತಿ ತುಂಬಿದ ಆತಿಥ್ಯ, ಸೇವೆ. ಅವರ ಪರಿವಾರದ್ದು ನಗುಮೊಗದ ಆತಿಥ್ಯ. ಸೇವೆ ನೀಡುವಲ್ಲಿ ಮುಂದು. Feeling at home ಎನ್ನುವಂತೆ ಎಲ್ಲವೂ ಚೆನ್ನ.

ದಕ್ಷಿಣ ಕನ್ನಡ ಜಿಲ್ಲೆಯ ವಿಶಿಷ್ಟರುಚಿಯ ಅವಲಕ್ಕಿ ಉಪ್ಪುಕರಿಯ ಜೊತೆಗೇನೇ ಧಾರವಾಡದ ಹುರಿದವಲಕ್ಕಿ ಚೂಡ ಚಹ ಸೇವನೆಗಿರಲಿ, ಉತ್ತರ ಕರ್ನಾಟಕ ಮತ್ತು ದ.ಕ. ಮಧ್ಯೆ ಸಾಹಿತ್ಯ ಸೇತುವೆ ಡಾ. ನಾ. ಮೊಗಸಾಲೆ ಒಬ್ಬ ವ್ಯಕ್ತಿಯಾಗಿ ಪ್ರೀತಿಗಾಗಿ ಹಂಬಲಿಸುವ. ಸ್ನೇಹಜೀವಿಯಾಗಿ, ಸರಳತೆ ಮೈಗೂಡಿಸಿಕೊಂಡಿರುವ ಭಾವಜೀವಿಯಾಗಿ ನಮ್ಮ ನೋವುಗಳಿಗೆ ಸ್ಪಂದಿಸುವ ಹೃದಯವಂತ ಗೆಳೆಯನಾಗಿ ಹತ್ತಿರವಾಗುತ್ತಾರೆ. ಅವರ ಬೆಚ್ಚಗಿನ ಸ್ನೇಹ ಎಲ್ಲರಿಗೂ ದೊರೆಯಲಿ ಎಂದು ಮನಸಾರೆ ಹೃದಯದುಂಬಿ ಹಾರೈಸುವೆ.

O

# ಮೊಗಸಾಲೆ ಎಂಬ ಪ್ರೀತಿ ಸರಸ್ಸು......

ರಾಘವೇಂದ್ರ ಪಾಟೀಲ

ಡಾ॥ ನಾ.ಮೊಗಸಾಲೆಯವರು ಮೊಟ್ಟಮೊದಲಿಗೆ ನನಗೆ ಪರಿಚಿತರಾದದ್ದು ಸುಮಾರು 28–30 ವರ್ಷಗಳ ಹಿಂದೆ. ಅದಾಗ ಅವರ ಕಾದಂಬರಿ 'ನನ್ನದಲ್ಲದ್ದು'ಗೆ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಆ ವರ್ಷದ ಪ್ರಶಸ್ತಿ ಲಭ್ಯವಾಗಿತ್ತು. ನಾನು ಹುಬ್ಬಳ್ಳಿಯ ಸಾಹಿತ್ಯ ಭಂಡಾರದಲ್ಲಿ 'ನನ್ನದಲ್ಲದ್ದು' ಖರೀದಿಸಿ ಮಧ್ಯಾಹ್ನ ಎರಡು ಗಂಟೆಯ ಅರಸೀಕೆರೆ ಪ್ಯಾಸೆಂಜರ್ ಟ್ರೇನು ಹತ್ತಿ ಕುಳಿತುಕೊಂಡು 'ನನ್ನದಲ್ಲದ್ದು' ಬಿಚ್ಚಿದೆ. ಚಿಕ್ಕ ಪುಸ್ತಕ. ಬಹುಶಃ 100 ಪುಟಗಳ ಕಾದಂಬರಿ. ಹರಿಹರ ಬರುವಷ್ಟರಲ್ಲಿ ಅದನ್ನು ಬಿಟ್ಟೂ ಬಿಡದೆ ಓದಿ ಮುಗಿಸಿದ್ದೆ. ಹೊಸ ಅನುಭವವೋ ಅಥವಾ ಅನುಭವವನ್ನು ಹೊಸ ರೀತಿಯಲ್ಲಿ ನೋಡುವ ವಿಧಾನವೋ ಏನನ್ನೋ ಕಲಿತಂತೆ ಅನ್ನಿಸಿತ್ತು ಅದಾದ ಮೇಲೆ ತೊಂಭತ್ತರ ದಶಕದಲ್ಲಿ ನಾ.ಮೊಗಸಾಲೆಯವರು ನನ್ನ ಮನಸ್ಸಿಗೆ ಹತ್ತಿರವಾದದ್ದು ವಿಶೇಷವಾಗಿ ಅವರ ಸಾಹಿತ್ಯ ಸಂಘಟನಾತ್ಮಕ ಚಟುವಟಿಕೆಗಳ ಮೂಲಕ. ಕಾಂತಾವರದ ಕನ್ನಡಸಂಘದ ಚಟುವಟಿಕೆಗಳು ನನ್ನಲ್ಲಿ ಮುದವನ್ನುಂಟು ಮಾಡುತ್ತಿದ್ದುವು. ವರ್ಧಮಾನ ಪ್ರಶಸ್ತಿ, ಕಡೆಂಗೋಡ್ಲು ಕಾವ್ಯ ಪ್ರಶಸ್ತಿ ಮುಂತಾದ ಸಾಹಿತ್ಯ ಪೋಷಕ ಕಾರ್ಯಗಳ ಹಿಂದೆ ಇದ್ದ ನಾ.ಮೊಗಸಾಲೆಯವರು ನನಗೆ ಆದರ್ಶರೆನ್ನಿಸಿ ಮನಸೆಳೆದರು. ಆ ಕಾಲದಲ್ಲಿ ನಾನೂ ಸಾಹಿತ್ಯ–ಸಂಘಟನೆಗಳ ಚಟುವಟಿಕೆಗಳ ಬಗ್ಗೆ ವಿಶೇಷ ಉತ್ಸಾಹ ಹೊಂದಿದ್ದೆನಾದ್ದರಿಂದ ಮೊಗಸಾಲೆಯವರು ನನಗೆ ಅತ್ಯಂತ ಆಪ್ತರೆನ್ನಿಸಿದ್ದರು. ದೂರದಲ್ಲಿದ್ದೇ, ಪ್ರತ್ಯಕ್ಷ ಭೇಟಿ ಇಲ್ಲದೇ ಮೊಗಸಾಲೆಯವರು ನನಗೆ ಪ್ರೇರಕ ಶಕ್ತಿಯಾಗಿದ್ದರು. ಮೊಗಸಾಲೆಯವರನ್ನು ಪ್ರತ್ಯಕ್ಷ ನೋಡಿದ್ದು ಬಹುಶಃ 2001–03ರಲ್ಲಿ ಇದ್ದಿರಬೇಕು. ಆ ವರ್ಷ ಮಾಸ್ತಿ ಸಾಹಿತ್ಯ ಪ್ರಶಸ್ತಿ ಹಿರಿಯ ಕವಿ ಪ್ರೊ॥ನಿಸಾರ್ ಅಹಮದ್ ಅವರಿಗೆ ದೊರೆತಿತ್ತು. ಡಾ.ಮಾವಿನಕೆರೆ ರಂಗನಾಥ್ ಅವರು ಬೆಂಗಳೂರಿನಲ್ಲಿ ನಿಸಾರರಿಗೆ ಪ್ರಶಸ್ತಿ ನೀಡುವ ಒಂದು ಅದ್ದೂರಿಯ ಸಮಾರಂಭವನ್ನು ಏರ್ಪಡಿಸಿದ್ದರು. ಅಂದು ಬೆಂಗಳೂರಿನಲ್ಲಿದ್ದ ನಾನು ಗೆಳೆಯ ಎಚ್.ಎಸ್.ವೆಂಕಟೇಶ್ ಮೂರ್ತಿಯವರ ಜೊತೆಗೆ ಆ ಸಮಾರಂಭಕ್ಕೆ ಹೋದೆ. ಸಮಾರಂಭ ಮುಗಿದ ನಂತರ ಭೂರಿಭೋಜನದ ಮೊದಲು ಡಾ.ನಾ.ಮೊಗಸಾಲೆಯವರ ಭೆಟ್ಟಿಯಾಯಿತು. ಅವರೂ ಆ ಸಮಾರಂಭಕ್ಕೆ ಬಂದಿದ್ದರು. ಮೊಗಸಾಲೆಯವರು ನನ್ನ ಬಗ್ಗೆ ಕೊಡಗಟ್ಟಲೆ ಪ್ರೀತಿಯನ್ನು ತುಂಬಿ ಇಟ್ಟುಕೊಂಡಿದ್ದರು. ಬಹುಶಃ 25–30 ವರ್ಷಗಳಿಂದ ನನ್ನ ಬಗೆಗಿನ

ಪ್ರೀತಿಯನ್ನು ಅವರು ಸಂಗ್ರಹಿಸಿ ಹಂಡೆಗಳಲ್ಲಿ ತುಂಬಿಟ್ಟುಕೊಂಡಿದ್ದರೆಂದು ತೋರುತ್ತದೆ! ನಾನು ಸಿಕ್ಕಿದ್ದೇ ತಡ! ನನ್ನನ್ನು ನಿಲ್ಲಿಸಿಕೊಂಡು, ತುಂಬಿಟ್ಟುಕೊಂಡ ಪ್ರೀತಿಯನ್ನು ಮೊಗೆದು ಮೊಗೆದು ಮೀಯಿಸಿದರು! ನಾನು ಸಂಕೋಚದ ಜಳಯಿಂದ ಕುಗ್ಗಿ ಹೋಗಿದ್ದೆ. ಅವರು ನನ್ನ ಸಂಕೋಚದ ಪರಿವೆ ಇಲ್ಲದೇ ಮಜ್ಜನದ ಕಾರ್ಯವನ್ನು ಮುಂದುವರಿಸಿದರು.

ಮೊಗಸಾಲೆ ನನಗೆ ತುಂಬಾ ವಿಶೇಷತರ ಎನ್ನಿಸಿದರು. ಮನಸ್ಸಿನಲ್ಲಿ ಏನನ್ನೂ ಮುಚ್ಚಿಟ್ಟುಕೊಳ್ಳದೆ ನಿರಾಳವಾಗಿ ಮಾತನಾಡಿದರು. ನನ್ನನ್ನು ತುಂಬ ಪ್ರೀತಿಸುವ ಹಿರಿಯಗಳಯರೊಬ್ಬರು ನನಗೆ ಅಂದು ದೊರೆತರು. ಮೊಗಸಾಲೆಯವರ ಪ್ರೀತಿಗೆ ಪಾತ್ರನಾದ ನಾನು ಪ್ರತಿಷ್ಠಿತ ವರ್ಧಮಾನ ಸಾಹಿತ್ಯ ಪ್ರಶಸ್ತಿಯನ್ನು ಪಡೆಯಲು ಕಾಂತಾವರಕ್ಕೆ ಹೋಗಿ ಅವರ ಮನೆಯ ಆತಿಥ್ಯವನ್ನು ಪಡೆದು ಧನ್ಯನಾದೆ. ಮೊಗಸಾಲೆಯವರ ಮನೆಯ ಮುಂದಿ. ಇಡೀ ಮನೆ. ಮನೆಯ ಸುತ್ತಲಿನ ಕಾಡು. ಕಾಡನ್ನು ಭೇದಿಸಿರುವ ಮನೆಗಳ ಗುಂಪುಗಳು.... ಅಲ್ಲಿನ ಜನ ಎಲ್ಲರೂ (ಮೊಗಸಾಲೆಯವರಿಂದಲೇ ಪಡೆದಿರಬೇಕು)ಪ್ರೀತಿ ಸೌಹಾರ್ದಗಳನ್ನು ಹೊತ್ತು ತಿರುಗುತ್ತಿದ್ದರು. ಅರೆ, ಎಷ್ಟೊಂದು ಪ್ರೀತಿ ಇದೆ ಇವರಲ್ಲಿ! ನಾನಿರುವ ಊರಿನ ಜನರು ಅದೇಕೆ ಸೇಡು-ದ್ವೇಷಗಳನ್ನು ಎದೆ ತುಂಬ ತುಂಬಿಕೊಂಡು ತಿರುಗುತ್ತಾರೆ ಎಂದು ಸೋಜಿಗಪಟ್ಟೆ. ಜೀವವನ್ನು ಉಳಿಸುವ ಪ್ರಯತ್ನದ ವೈದ್ಯ ವೃತ್ತಿ ಬಹುಶಃ ಅವರ ಮಾನವ ಪ್ರೀತಿಯ ಪ್ರೇರಕವಾಗಿರಬಹುದು.(ಎಂಥ ವಿಪರ್ಯಾಸ ನೋಡಿ. ಮಾನವ ಪ್ರೀತಿಯು ಮನುಷ್ಯನ ಸಹಜವಾದ ಗುಣವಾಗಿರಬಹುದು ಎನ್ನುವ ಯೋಚನೆಯೇ ಇಂದು ಸಾಧ್ಯವಾಗುತ್ತಿಲ್ಲ.ಅದರ ಮೂಲವನ್ನು ವೃತ್ತಿಯಲ್ಲಿ ಹುಡುಕಹೊರಡುತ್ತೇವೆ!) ಭಾರತೀಯ ಪರಂಪರೆಯ ಆಯುರ್ವೇದ ಶಾಸ್ತ್ರದ ನೆಲೆಯಲ್ಲಿ ಕಟ್ಟಿಕೊಂಡ ವೈದ್ಯವೃತ್ತಿ. ರೋಗಿಗಳ ಕಿಸೆಯನ್ನು ನೋಡುವ ಅಲೋಪತಿಯ ವೈದ್ಯರಲ್ಲ. ಕೈ ಹಿಡಿದು ನಾಡಿಯ ಜೀವಧ್ವನಿಗೆ ಸ್ಪಂದಿಸುವ ವೈದ್ಯ ವೃತ್ತಿ ಮೊಗಸಾಲೆಯವರದು. ಅಂಗ ಅಂಗಗಳೆಲ್ಲವೂ ಒಟ್ಟಂದದಲ್ಲಿ ಪರಸ್ಪರ ಹೊಂದಿಕೊಂಡು ಸಾಧಿಸಿಕೊಳ್ಳುವ ಜೀವದ ಛಂದಸ್ಸನ್ನು ಪರಿಗಣಿಸುವ, ಅದರ ಮಹತ್ವವನ್ನು ಅರಿತ ಜ್ಞಾನದ ತಳಹದಿಯ ಮೇಲೆ ಕಟ್ಟಿಕೊಂಡ ವೈದ್ಯವೃತ್ತಿ ಮೊಗಸಾಲೆಯವರದು. ಮೊಗಸಾಲೆಯವರ ವೈದ್ಯವೃತ್ತಿ ರೋಗಿಯೊಬ್ಬನ ವೈಯಕ್ತಿಕ ರೋಗದ ಚಿಕಿತ್ಸೆಯಲ್ಲಿ ಕೊನೆಗೊಳ್ಳುವುದಿಲ್ಲ. ಅದು ಸಾಮಾಜಿಕ ಸಮಗ್ರತೆಯ ಛಂದಸ್ಸಿನ ಬಗೆಗಿನ ಚಿಕಿತ್ಸೆಗೂ ವಿಸ್ತಾರಗೊಳ್ಳುತ್ತದೆ. ಅವರು ತಮ್ಮ ಮನೆಯ ಮೊಗಸಾಲೆಯನ್ನು ಮೀರಿ ಇಡೀ ಊರಿನ, ಮೂಡಬಿದರೆಯ ನಾಡನ್ನು ಮೀರಿ ಇಡೀ ಕನ್ನಡ ನಾಡಿನ ಸಾಂಸ್ಕೃತಿಕ ಬದುಕಿನಲ್ಲಿನ ಪ್ರೀತಿಯ ಮೊತ್ತವನ್ನು ಹೆಚ್ಚಿಸಿದವರು. ಮೂಡಬಿದಿರೆಯನ್ನು ಕೇಂದ್ರವಾಗಿಟ್ಟುಕೊಂಡು ರಾಜರ್ಷಿ ಡಾ||ವೀರೇಂದ್ರ ಹೆಗ್ಗಡೆ ಮೊದಲಾದ ಗಣ್ಯರನ್ನು ಒಳಗೊಂಡ ವರ್ಧಮಾನ ಪ್ರತಿಷ್ಠಾನವನ್ನು ಸ್ಥಾಪಿಸುವುದರಲ್ಲಿ ಡಾ.ಮೊಗಸಾಲೆಯವರು ಅಪಾರ ಶ್ರಮವಹಿಸಿದ್ದಾರೆ. ಇಂದಿಗೂ ಅದರ ಚಟುವಟಿಕೆಗಳ ಅಧ್ವರ್ಯು ಮೊಗಸಾಲೆಯವರೇ. ವರ್ಧಮಾನ ಪ್ರತಿಷ್ಠಾನವು ಕನ್ನಡದ ಒಬ್ಬ ಉದಯೋನ್ಮುಖಿ ಮತ್ತು ಒಬ್ಬ ಹಿರಿಯ ಲೇಖಕರಿಗೆ ಪ್ರತಿವರ್ಷವೂ ವರ್ಧಮಾನ ಪ್ರಶಸ್ತಿ ನೀಡಿ ಸನ್ಮಾನಿಸುತ್ತದೆ. ಆ ಮೂಲಕ ಸಾಂಸ್ಕೃತಿಕ ಲೋಕದುದ್ದಕ್ಕೂ ತನ್ನ ಸಾಹಿತ್ಯ ಪ್ರೀತಿಯ ಸಂದೇಶವನ್ನು ಹರಡುತ್ತದೆ. ಹಿರಿಯ ಸಾಹಿತಿಗೆ ನೀಡುವ ವರ್ಧಮಾನ ಪ್ರಶಸ್ತಿಯನ್ನು

ಪಡೆದುಕೊಳ್ಳುವ ಸೌಭಾಗ್ಯವು ನನಗೂ ಲಭ್ಯವಾಗಿದೆ. ಮೊಗಸಾಲೆಯವರು ನನ್ನನ್ನು ಮತ್ತು ನನ್ನ ಬಳಗವನ್ನು ಕಾಂತಾವರದ ತಮ್ಮ ಮನೆಯಲ್ಲಿ ಉಳಿಸಿಕೊಂಡು ವಿಧ ವಿಧವಾಗಿ ಉಪಚರಿಸಿ ತಮ್ಮ ಆತಿಥ್ಯದ ಶ್ರೀಮಂತಿಕೆಯನ್ನು ತೋರಿದರು. ತಮ್ಮ ಪ್ರಾಂಜಲ ಪ್ರೀತಿಯ ಮಳೆಗರೆದರು.

ಅಪಾರ ಗೆಳೆಯರ ಬಳಗ ಒಂದಿನಿತೂ ಎಗ್ಗಿಲ್ಲದೆ ಗೆಳೆಯರೊಂದಿಗೆ ಸುತ್ತಲಿನದರ ಜೊತೆಗೆ ಬೆರೆಯುವ ಗುಣ, ಹತ್ತೆಂಟು ಸಮಾಜಮುಖೀ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವಿಕೆ ಹೀಗೆ ಹತ್ತಾರು ದಿಕ್ಕಿನಲ್ಲಿ ಹಂಚಿಕೊಳ್ಳುವ ಮೊಗಸಾಲೆಯವರದು ಬರೀ ಬಹಿರ್ಮುಖೀ ಮನಸ್ಸು ಎಂದು ಭಾವಿಸಿದರೆ ಅದು ತಪ್ಪಾಗಿರುತ್ತದೆ. ಬಹಳ ಬೆರಗಿನ ಸಂಗತಿಯೆಂದರೆ, ಮೊಗಸಾಲೆಯವರು ಹೊರಗೆ ಗಳಿಸಿರುವಷ್ಟು ವಿಸ್ತಾರವನ್ನೇ ಅಂತರಂಗದಲ್ಲಿಯೂ ಸಾಧಿಸಿದ್ದಾರೆ. ಅವರ 'ಇದಲ್ಲ ಇದಲ್ಲ' ಕವಿತಾ ಸಂಕಲನವನ್ನು ನೋಡಿದರೆ ಅವರು ಅಂತರಂಗದಲ್ಲಿ ಸಾಧಿಸಿರುವ ಮೌನದ ಪರಿಮಾಣದ ಕಲ್ಪನೆ ಬರುತ್ತದೆ; ಆ ಬಗ್ಗೆ ಬೆರಗು ಮೂಡುತ್ತದೆ. ಸಂತೆಯೊಳಗಿದ್ದುಕೊಂಡೇ ಏಕಾಂತವನ್ನು ಸಾಧಿಸುವ ಇವರ ರೀತಿ ಅಪರೂಪದ್ದು. ಬಾಹ್ಯವು ಸಹಜವಾಗಿ ಅಂತರಂಗದ ಅನುಭಾವವಾಗುವ ಪ್ರಕ್ರಿಯೆಯನ್ನು ಅವರು 'ಏಕಾಂತದ ಬೆಟ್ಟ' ಕವಿತೆಯಲ್ಲಿ ಹೇಳುತ್ತಾರೆ.

"ಕಣ್ಣೆದುರಿಲ್ಲದಿದ್ದರೂ ಬರುವುದು ಕರೆಯದೇ ಏಕಾಂತದ ಬೆಟ್ಟ;
ಅಲ್ಲಿ ಸದಾ ಹಸಿರುಸಿರು! ಸ್ವಚ್ಛಂದ ಮನೋಪ್ರಾಣಪ್ರಪಂಚ!
ವರ್ಷಪೂರ್ತಿ ಹರಿಯುವ ಜಳ ಜಳ ಹೊಳೆ ಜಲಪಾತ;
ರಾತ್ರಿ ಗಗನಚುಂಬಿ ಮರಗಳ ಮೇಲೆ ಮಿನುಗು ನಕ್ಷತ್ರ!

ಇಂಥ ಜೀವಂತವಾದ ಅನುಭಾವ ಸಾಧ್ಯವಾಗುವುದು ಅಂತರಂಗವು ಮೌನದಿಂದ ಸದೃಢಗೊಂಡಾಗ ಮಾತ್ರ.

ಮೊಗಸಾಲೆಯವರ ಚಹಾ ಎನ್ನುವ ಪದ್ಯದಲ್ಲಿ ಇಂಥವೇ ಅಭಿಪ್ರಾಯವಿದೆ. ಇದು ತಿಳುವಳಿಕೆಯ ಸ್ವರೂಪವನ್ನು ಹೇಳುತ್ತಾದ್ದರಿಂದ ಅದನ್ನು ಇಲ್ಲಿ ಇಡಿಯಾಗಿ ಉದ್ಧರಿಸಬಯಸುವೆ:

**ಚಹಾ**

ಚಹಾ ಕುಡಿಯದವನು ಚಹಾ ಕುಡಿಯುವವನನ್ನು ಕೇಳಿದ
ಕುಡಿವ ಹರ್ಷ ಯಾವುದು?

ಚಹಾ ಗಿಡಗಳ ನಳನಳಿಕೆ
ಸಮುದ್ರವೇ ಮಳೆಯಾಗಿ ಬರುವ ಮಾಗುವಿಕೆ
ಕರುವಿಗಾಗಿಯೇ ತುಂಬುವ ಕೆಚ್ಚಲು
ಕಬ್ಬಿನ ತೋಟವೇ ಸಕ್ಕರೆಯಾಗುವ ಮನಸ್ಸು

*****

ಬಟ್ಟಲಲ್ಲಿ ತುಂಬಿದರೂ ಅಲೆ ಎಬ್ಬಿಸಿದ
ಸಿತಾರದಲ್ಲಿ ಎದ್ದ ಹಾಗೆ ಸ್ವರಗಳು
ಕುಡಿಯುವವನ ಗಂಟಲೊಳಗೆ ಇಳಿದು

ಚಹಾದ ಗಿಡ ಸಮುದ್ರವಾಗುವುದು
ಸಮುದ್ರ ಹಸುವಾಗುವುದು
ಹಸು ಕಬ್ಬಿನ ತೋಟವಾಗುವುದು
ಸಕ್ಕರೆಯೇ ಮನಸ್ಸಾಗುವುದು

ಚಹಾ ಕುಡಿಯುವವ ಹೇಳುತ್ತಾ ಹೋದ
ಬಟ್ಟಲು ತುಂಬಿ ತುಂಬಿ

ಚಹಾ ಕುಡಿಯದವನು
ಬಟ್ಟಲು ಎತ್ತದೇ
ಚಹಾ ಕುಡಿದ ಹಾಗೆ
ತುಂಬಿಕೊಂಡು ಉಕ್ಕಿದ

ಅದ್ವೈತದ ಇಂಥ ತಿಳುವಳಿಕೆಯ ನೆಲೆ ಸಾಧ್ಯವಾಗುವುದು ಅಂತರಂಗ-ಬಹಿರ್ಮುಖತೆ ಪ್ರೀತಿಯ ಜಲದಲ್ಲಿ ಬೆರೆತು ದ್ರವಿಸಿದಾಗ ಮಾತ್ರ. ಮೊಗಸಾಲೆಯವರಿಗೆ ಇದು ಸಾಧ್ಯವಾಗಿದೆ.

O

# ಮೊಗಸಾಲೆ: ಬತ್ತದ ತೊರೆ



ಪ್ರೊ. ಚಂದ್ರಶೇಖರ ಪಾಟೀಲ

ಗೆಳೆಯ ನಾ. ಮೊಗಸಾಲೆ ಅವರ 'ಅರುವತ್ತರ ತೇರು' ನನ್ನೆದುರಿಗೆ ಇದೆ. 1974ರಿಂದ 2003ರ ವರೆಗಿನ ಬೀಸಿನಲ್ಲಿ – ಅಂದರೆ ಅಂದಾಜು ಸುಮಾರು ಮೂರು ದಶಕಗಳ ಅವಧಿಯಲ್ಲಿ – ಅವರಿಂದ ರಚಿತವಾದ ಕವನಗಳ ಸಮಗ್ರ ಸಂಕಲನವಿದು. ಒಬ್ಬ ಕವಿಯ ಬಿಡಿ ಬಿಡಿ ಪದ್ಯಗಳನ್ನು ಅವಾಗಿವಾಗ, ಅಲ್ಲಿ ಇಲ್ಲಿ, ಅವಸರವಸರದಲ್ಲಿ ಓದಿದಾಗಿನ ತುಣುಕು ಅನುಭವಗಳಿಗಿಂತ, ಅವನ ಇಡೀ ಕಾವ್ಯವನ್ನು ಒಂದೇ ಮಟ್ಟಿಗೆ ಆಸ್ವಾದಿಸುವ ಅನುಭವ ವಿಶಿಷ್ಟವಾದುದು. ಇಂಥ ಅನುಭವದುದ್ದಕ್ಕೂ ಕವಿಯ ಒಂದು 'ಚಿತ್ರ' ರೂಪು ತಳೆಯುತ್ತ ಹೋಗುತ್ತದೆ. ಅವನು ವೇದಿಕೆಯ ಮೇಲೆ ಸ್ವಲ್ಪ ಕಾಲ ನಿಂತು ಭಾಷಣ ಬಿಗಿದು ಹೋಗಿಬಿಡುವ 'ಅತಿಥಿ'ಯಾಗಿ ಉಳಿಯದೆ, ನಮ್ಮ ಮಗ್ಗುಲಿಗೇ ಕುಂತು ಸದಾ ಅದು ಇದು ಮಾತನಾಡುತ್ತಲೇ ಇರುವ 'ಸಂಗಾತಿ'ಯಾಗುತ್ತಾನೆ.

ಮೊಗಸಾಲೆಯವರ ಅಭಿವ್ಯಕ್ತಿಯ ರೀತಿಯಂತೂ ಹೀಗೆಯೇ. ಅವರದು ಕಥಾನಕದ ಶೈಲಿ. ಅವರು ಹೇಳಬೇಕು, ನಾವು ಕೇಳಬೇಕು. ಒಮ್ಮೊಮ್ಮೆ ಈ ಆಸಾಮಿ ವಾಚಾಳಿ ಅಂತ ಅನ್ನಿಸಿದರೂ, ಅವನು ಹೆಣೆದ ಮಾತಿನ ಬಲೆಯಲ್ಲಿ ಸಿಕ್ಕಿದ್ದೇವೆ ಅನ್ನಿಸಿದರೂ, ಅದರಿಂದ ಹೊರಗೆ ಹೋಗಬೇಕು ಅಂತ ಯಾಕೆ ಅನ್ನಿಸುವುದಿಲ್ಲ ಅಂದರೆ ಅವನು ಹೇಳುತ್ತಿರುವ ತನ್ನ ಕತೆ ನಮ್ಮ ಕತೆಯೂ ಆಗಿರುತ್ತದೆ. ನಮ್ಮ ಅನುಭವವನ್ನು ಈತ ಎಷ್ಟು ಸ್ವಾರಸ್ಯಕರವಾಗಿ, ಆತ್ಮೀಯವಾಗಿ ಹೇಳುತ್ತಿದ್ದಾನಲ್ಲ – ಎಂಬ ಖುಷಿಯೂ ನಮ್ಮದಾಗುತ್ತದೆ. ಒಮ್ಮೊಮ್ಮೆ ಓದುಗನೇ ಕವಿಯಾಗಿಬಿಟ್ಟು ತನಗಾಗಿ ಮತ್ತೊಬ್ಬ ಓದುಗ/ ಕೇಳುಗನನ್ನು ಹುಡುಕಿಕೊಳ್ಳುವ ಪ್ರಸಂಗವೂ ಬಂದೀತು.

ಇನ್ನೊಂದು ರೀತಿಯ ಅಭಿವ್ಯಕ್ತಿಯಲ್ಲಿ, ಕವಿ ತನ್ನ ಸಾಮ್ರಾಜ್ಯಕ್ಕೆ ತಾನೇ ಪ್ರಭು, ತಾನೇ ಪ್ರಜೆ. ಪಿಸು ಮಾತೋ, ಗೊಣಗೋ – ಅಲ್ಲಿ ಅವನು ತನಗೆ ತಿಳಿದ ಹಾಗೆ ಅನಾವರಣಗೊಳ್ಳುತ್ತಾನೆ. ಅವನ ಮಾತು ಯಾರನ್ನೂ 'ಉದ್ದೇಶಿಸಿ' ಹೇಳಿದ್ದಲ್ಲ. 'ಕೇಳಿದರೆ ಕೇಳು, ಕೇಳದಿರ್ದೊಡೆ ಮಾಣು; ನನ್ನ ಹಾಡು ನಾ ಹಾಡಿವಲ್ಲದೆ ಸೈರಿಸಲಾರೆನಯ್ಯ'– ಎಂಬ ಅಕ್ಕಮಹಾದೇವಿಯ ದಾರಿ ಅದು. ಇಲ್ಲಿ ಕವಿಗೆ ಓದುಗನ ಹಂಗು ಇರದಿದ್ದರೂ, ಓದುಗ ಯಾವುದೋ ಒಂದು ನೆಲೆಯಲ್ಲಿ ಕವಿಯೊಂದಿಗೆ ತನ್ನನ್ನು ಗುರುತಿಸಿಕೊಳ್ಳುವ

ಸಾಧ್ಯತೆ ಇದೆ.

ಅನುಭವವನ್ನು ಕತೆಯನ್ನಾಗಿಯೋ, ಹರಟೆಯನ್ನಾಗಿಯೋ ಓಗ್ಗಿಸಿ ಹೇಳುವ ಚಟವಿರುವ ಮೊಗಸಾಲೆಯ ಕವನಗಳು ಸಾಮಾನ್ಯವಾಗಿ 'ಉದ್ದ' ಅನಿಸುತ್ತವೆ. (ಇಲ್ಲಿ ಸಾಲುಗಳ ಸಂಖ್ಯೆ ಮುಖ್ಯವಲ್ಲ; ಹೇಳುವ ರೀತಿ ಮುಖ್ಯ) ಹೀಗಾಗಿ ಒಮ್ಮೊಮ್ಮೆ ಕೇಳುಗನಿಗೆ ಸಣ್ಣ ಪ್ರಮಾಣದ ನಿದ್ದೆ ತೆಗೆಯುವ ಅವಕಾಶವೂ ಇರುತ್ತದೆ. ಮತ್ತೆ ಎಚ್ಚರವಾದಾಗ ಅದೇ ಕತೆ ಮುಂದುವರಿಯುವುದರಿಂದ ಯಾವ ರಸಭಂಗಕ್ಕೂ ಕಾರಣವಿಲ್ಲ. ಗಾತ್ರದಲ್ಲಿ ಸ್ವಲ್ಪ ಚಿಕ್ಕದಾಗಿರುವ ಕವನಗಳು ಅನುಭವದ ಸಾಂದ್ರತೆ ಹಾಗೂ ಶೈಲಿಯ ಬಿಗಿಯಾದ ಬಂಧದಿಂದ ಗಾಢ ಪರಿಣಾಮ ಬೀರಬಲ್ಲವು. ಅಂಥ ಎರಡು ಕವನಗಳನ್ನು ನಾನೀಗ ಎತ್ತಿಕೊಳ್ಳುತ್ತಿದ್ದೇನೆ: ಒಂದು, 'ನನ್ನ ಕೊಡೆ'; ಇನ್ನೊಂದು 'ಚಹಾ'. ಇವೆರಡರ ನಡುವೆ ಒಂದು ದಶಕದ ಅಂತರವಾದರೂ ಇರಬೇಕು.

### ನನ್ನ ಕೊಡೆ

*ನನ್ನ ಕೊಡೆ ನನ್ನ ಹಾಗಿದೆ*
*ನನ್ನ ಕೊಡೆ ನನ್ನ ಹೆಂಡತಿಯ ಹಾಗಿದೆ*
*ನನ್ನ ಕೊಡೆ ನನ್ನ ಮನೆಯ ಹಾಗಿದೆ*
*ನನ್ನ ಕೊಡೆ ನನ್ನ ಮಕ್ಕಳ ಹಾಗಿದೆ*
*ನನ್ನ ಕೊಡೆ ನನ್ನ ನನ್ನ – ಅದರ ಇದರ ಹಾಗಿದೆ*

*ಆದರೆ ನೀವು*
*ನನಗೆ ಕೊಡೆಯೇ ಇಲ್ಲ*
*ಅನ್ನುತ್ತಿದ್ದೀರಲ್ಲ;*
*ಇರಲೂ ಬಹುದು*

*ಆದರೂ*
*ಇಲ್ಲದ ನನ್ನ ಕೊಡೆಗೆ ಬೇರೆ ಬೇರೆ ಹೋಲಿಕೆ ಕೊಡುವುದಕ್ಕೆ*
*ನಿಮ್ಮ ಪ್ರತಿಭಟನೆ ಯಾಕೆ*
*ನಿಮಗೂ ಕೊಡೆ ಇಲ್ಲವೆಂದೆ?*

ಎಲ್ಲಿ ಎರಡು ಪಾತ್ರಗಳಿವೆ: 'ನಾನು' ಮತ್ತು 'ನೀವು'. ಆದರೆ 'ದ್ವಿತೀಯ' ಪುರುಷನ ಅರಿವು ನಮಗೆ ಅರಿವಾಗುವುದು ಮೊದಲ ಐದು ಸಾಲುಗಳ ನಂತರವೇ. ಈ ಐದು ಸಾಲುಗಳಲ್ಲಿ ಮೊದಲ ಮೂರು ಶಬ್ದಗಳು ಅವೇ ಆವೇ: ನನ್ನ ಕೊಡೆ ನನ್ನ...... ಕೊಡೆಗೆ ಉಪಮಾನವಾಗುವುದು – ನಾನು, ನನ್ನ ಹೆಂಡತಿ, ನನ್ನ ಮನೆ, ನನ್ನ ಮಕ್ಕಳು, ನನ್ನ ಅದು

ಇದು. 'ನಾನು' ಎಂಬುದೇ ತುಂಬಿಕೊಂಡ ಈ ಪುಟ್ಟ ಜಗತ್ತು ಕವರ ಕವರಾಗಿ ಒಂದು 'ವ್ಯಕ್ತಿ'ಯ ಚಿತ್ರ ಮೂಡಿಸುತ್ತಿದ್ದಂತೆಯೇ ಆ ಚಿತ್ರವನ್ನು ಚಿಂದಿ ಚಿಂದಿ ಮಾಡುವ ಇನ್ನೊಂದು ವ್ಯಕ್ತಿ ಧುತ್ತನೆ ಪ್ರತ್ಯಕ್ಷವಾಗುತ್ತಾನೆ. ಮೊದಲ ವ್ಯಕ್ತಿ ಸೃಷ್ಟಿಸಿ (ಕೊಂಡ)ದ್ದು ವಾಸ್ತವವಲ್ಲ, ಭ್ರಮೆ – ಎಂಬುದು ಎರಡನೆಯ ವ್ಯಕ್ತಿಯ ಅಂಬೋಣ. ಈಗ ಸಂಘರ್ಷದ ಪ್ರಾರಂಭಕ್ಕೆ ಒಳ್ಳೆ ಮುಹೂರ್ತ. ಈ ಕುತೂಹಲದ ಕ್ಷಣ – ಒಂದೇ ಕ್ಷಣ. ಎದುರಿನಿಂದ ಬಂದ ಅಸ್ತ್ರಕ್ಕೆ ಪ್ರತಿ ಅಸ್ತ್ರ ಬಿಡಬೇಕು, ಬಿಡುತ್ತಾನೆ ಅಂತ ನಮ್ಮ ನಿರೀಕ್ಷೆ. ಆದರೆ ಅವನು ಅಸ್ತ್ರವನ್ನು ಸ್ವೀಕರಿಸಿಬಿಡುತ್ತಾನೆ. ಅದು ಅಸ್ತ್ರವೇ ಅಲ್ಲ ಎನ್ನುವಂತೆ ಗೌಣಗೊಳಿಸುತ್ತಾನೆ. 'ಕೊಡೆಯೇ ಇಲ್ಲ' – ಎಂಬ ಆರೋಪವನ್ನು ಸತ್ಯವೆಂದು ಒಪ್ಪಿಕೊಂಡು, ತನ್ನದೇ ಆದ ಮತ್ತೊಂದು ಅಸ್ತ್ರ ಅಣಿಗೊಳಿಸುತ್ತಾನೆ. ಹೌದು, ನನಗೆ ಕೊಡೆ ಇಲ್ಲ. ಆದರೆ ಬೇರೆ ಬೇರೆ ಹೋಲಿಕೆ ಕೊಡುವುದು ನನ್ನ ಸ್ವಾತಂತ್ರ್ಯ. ಅದಕ್ಕೆ ನಿನ್ನದೇನು ಪ್ರತಿಭಟನೆ? ತಕರಾರು?

ಈ ಸಂಘರ್ಷ ತಾರಕಕ್ಕೇರುವುದು ಕೊನೆಯ ಸಾಲಿನಲ್ಲಿ"

ನಿಮಗೂ ಕೊಡೆ ಇಲ್ಲವೆಂದೆ?

ಕೊನೆಗೂ ನಮಗೆ ಗೊತ್ತಾಗುವುದು; ಇದು, ಕೊಡೆಯ ಸುತ್ತ ಕೊಡೆಯೇ ಇಲ್ಲದವರ ಜಗಳ. ಕೊಡೆಯ ಬಗ್ಗೆಯಂತೂ ಜಗಳವಲ್ಲ. ನನಗನಿಸುವುದು; ಇಲ್ಲಿ ತಿಕ್ಕಾಟವಿರುವುದು, ಇಲ್ಲದ್ದರ ಬಗ್ಗೆ 'ಯಾಕೆ ಮಾತಾಡಬೇಕು?' ಎಂಬ ವಾಸ್ತವವಾದಿ ಮತ್ತು 'ಯಾಕೆ ಮಾತಾಡಬಾರದು'? ಎಂಬ ಕನಸುಗಾರನ ನಡುವೆ.

ಅಸಂಗತ ನಾಟಕದ ಒಂದು 'ಪ್ರಸಂಗ'ದಂತಿರುವ ಈ ಮೊಗಸಾಲೆ ಕವನ ಅರ್ಥವಂತಿಕೆಯ ಅಥವಾ ಅರ್ಥಹೀನತೆಯ ಅನಂತ ಪದರುಗಳ ಸಾಧ್ಯತೆಯನ್ನು ಹೊಂದಿದೆ.

ಒಂದು ಕಾಲವಿತ್ತು. ಬೆಳ್ಳಿ ಪರದೆಯ ಮೇಲೆ ನಟ ನಟಿಯರು ದಶಕಗಳ ಕಾಲ ನಕ್ಷತ್ರವಾಗಿ ಮಿಂಚುತ್ತಿದ್ದರು. ಈಗಿನವರು ಒಂದೆರಡು ವರ್ಷ ಮಿಂಚಿ, ಅಥವಾ ಮಿಂಚಿದಂತೆ ಮಾಡಿ, ಖಾಯಮ್ಮಾಗಿ ಭೂತದಲ್ಲಿ ಲೀನರಾಗುವವರು. ಕಾವ್ಯಲೋಕದ ಕತೆಯೂ ಅಷ್ಟೇ. ಮೂವತ್ತು ನಲವತ್ತು ವರ್ಷಗಳ ಕಾಲ ನಿರಂತರವಾಗಿ ವಿಕಸನಶೀಲನಾದ ರೀತಿಯಲ್ಲಿ ಮೊಗಸಾಲೆಯವರ ಹಾಗೆ ಬರೆಯುತ್ತಿರುವವರು ಕನ್ನಡದಲ್ಲಿ ಬಹಳ ಕಡಿಮೆ.

ಮೊಗಸಾಲೆ
ಬತ್ತಿದ ಕೆರೆಯಲ್ಲ; ಬತ್ತದ ತೊರೆ
ಈ ತೇರಿಗೆ
ಅರುವತ್ತೆಂಬುದು ಬರೀ ಒಂದು ಗೆರೆ

o

# ಮೊಗಸಾಲೆಯವರ ಕಾವ್ಯದಲ್ಲಿ ಸ್ತ್ರೀಪರ ಕಾಳಜಿ

ಪ್ರೋ. ಎಚ್.ಬಿ. ಕೋಲ್ಕರ, ಬೆಳಗಾವಿ

ಸಮಾಜ ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ಮುಖಾಮುಖಿಗೊಳಿಸಿಕೊಂಡು ಅವುಗಳ ಪುನರ್ ಪರಿಶೀಲನೆಗೆ ತೊಡಗುವುದರ ಮೂಲಕ ಭಾರತದಲ್ಲಿ ಸ್ತ್ರೀವಾದಿ ಚಿಂತನೆಯು (ಪಾಶ್ಚಾತ್ಯ ಸ್ತ್ರೀವಾದಿ ಚಿಂತನೆಯನ್ನೂ ಮೈಗೂಡಿಸಿಕೊಂಡು) ಇತ್ತೀಚಿನ ದಿನಗಳಲ್ಲಿ ಒಂದು ತಾತ್ವಿಕ ನೆಲೆಗಟ್ಟನ್ನು ರೂಪಿಸಿಕೊಳ್ಳುತ್ತಿದೆ. ಇಂಥ ಸಂದರ್ಭದಲ್ಲಿ ತಲೆ ತಲಾಂತರದಿಂದ ಅನೇಕ ವಾದ – ವಿವಾದಗಳಿಗೆ ಶೋಷಣೆಗೆ ದೂಷಣೆಗೆ ಒಳಗಾದ ಮಹಿಳೆಯ ಆಸೆ ಆಕಾಂಕ್ಷೆ, ಸ್ಥಾನ–ಮಾನ, ಘನತೆ – ಗೌರವಗಳನ್ನು ಮುಕ್ತ ಮನಸ್ಸಿನಿಂದ ನಿಷ್ಕರ್ಷಿಸುವ ಸಾಧ್ಯತೆಗಳು ದೇಶಾದ್ಯಂತ ಒದಗುತ್ತಿವೆ. ಈ ಸಾಧ್ಯತೆಗಳಿಗನುಗುಣವಾಗಿ ಮಹಿಳೆಯು ಸಕಾಲಿಕ ಅನುವು, ಅವಕಾಶಗಳನ್ನು ಮಾಡಿಕೊಂಡು ತನ್ನ ಅಸ್ಥಿತ್ವದ ನೆಲೆಗಳನ್ನು ತಾನು ನಡೆದು ಬಂದ ದಾರಿಯೊಳಗೆ ಪುನಃ ಪರಿಶೋಧಿಸಿಕೊಳ್ಳುವುದರ ಮೂಲಕ, ತನ್ನತನ (Identity) ವನ್ನು ಗುರುತಿಸಿಕೊಂಡು ಮುನ್ನಡೆವ ಛಲ–ಬಲಗಳನ್ನು ಈ ಸ್ತ್ರೀವಾದಿ ಚಿಂತನೆಯೊಳಗೆ ತುಂಬಿಕೊಳ್ಳುತ್ತಿರುವ ಒತ್ತಡದ ಸಂದರ್ಭದಲ್ಲಿ ಮತ್ತು ಮೊಗಸಾಲೆಯವರಿಗೆ ಅರುವತ್ತರ ಕಸುವು ತುಂಬಿದ ಖುಷಿಯಲ್ಲಿ ಅವರ ಕಾವ್ಯದಲ್ಲಿನ ಸ್ತ್ರೀಪರ ಕಾಳಜಿಯನ್ನು ಕುರಿತು ನಾಲ್ಕು ಮಾತುಗಳನ್ನು ಲೇಖನ ರೂಪದಲ್ಲಿ ನಿಮ್ಮ ಮುಂದಿಡಲು ನನಗೆ ತುಂಬ ಸಂತೋಷವೆನ್ನಿಸುತ್ತದೆ.

ಡಾ. ನಾ. ಮೊಗಸಾಲೆಯವರು ಕನ್ನಡದಲ್ಲಿ ತುಂಬ ಎಚ್ಚರದಿಂದ ಕಾವ್ಯ ಬರೆದವರು. ತಮ್ಮ ಮೊದಲ ಕವನ ಸಂಕಲನಕ್ಕೆ – 'ವರ್ತಮಾನದ ಮುಖಗಳು' (1974) ಎಂದು ಹೆಸರಿಟ್ಟುದೇ ಇದಕ್ಕೆ ಸಾಕ್ಷಿ.

" ಬರೆಯುವುದೆಂದರೆ ಅಂಜಿಕೆ
ಬರೆಯದಿದ್ದರೆ ಕಾದ ಮಣ್ಣಿನಲ್ಲಿ ಬಿದ್ದ ಬೀಜದ ವೇದನೆ...."

ಇಂತಹ ಎಚ್ಚರ ಮತ್ತು ತಳಮಳಗಳೊಂದಿಗೆ ಕಾವ್ಯ ಬರೆವ ಅವರು –

" ....ನಾನು ಯಾರ ಹಾಗೂ ಆಗದ
ಅನ್ವೇಷಣಾ ವಾಕ್ಯ....."

ಎಂದು ತಮ್ಮದೇ ದಾರಿಯನ್ನು ಕಾವ್ಯದ ಭಾಷೆ ಮತ್ತು ಬರವಣಿಗೆಯಲ್ಲಿ ಕಂಡುಕೊಳ್ಳುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಆಡುಮಾತಿನ ಲಯಗಳನ್ನೊಳಗೊಂಡ ಭಾಷೆಯು

ಸೊಗಡಿನೊಳಗೆ ಅವರು ಮೂಡಿಸುವ ಶಬ್ದ ಚಮತ್ಕಾರಗಳು, ಅರ್ಥದ ಹೊಸ ಹೊಸ ಹೊಳಹುಗಳು, ಬದುಕಿನ ಒಳ ಹೊರಗುಗಳನ್ನೊಳಗೊಂಡ ವಿಷಯ ನಿರೂಪಣಾ ರೀತಿ, ಕಥನ ತಂತ್ರ, ಸಂವಾದ ರೂಪದ ಚಿಂತನ ಮಂಥನಗಳು ಕಾವ್ಯದುದ್ದಕ್ಕೂ ತುಂಬಿ ನಿಂತಿವೆ.

ಮೊಗಸಾಲೆಯರ ಕಾವ್ಯದಲ್ಲಿ ಸ್ತ್ರೀಪರ ಕಾಳಜಿಯು ಬಹುಸೂಕ್ಷ್ಮವಾಗಿ ಅಷ್ಟೇ ಗಂಭೀರ ಚಿಂತನೆಯಾಗಿ ಅಭಿವ್ಯಕ್ತಗೊಂಡಿದೆ. ವಾಸ್ತವವನ್ನು ಮುಲಾಜಿಲ್ಲದೆ ತೆರೆದಿಡುವ ಅವರ ಕಾವ್ಯ ಪರಂಪರೆಯಿಂದ ಪ್ರಸ್ತುತದವರೆಗಿನ ಸ್ತ್ರೀ ಶೋಷಣೆಯ ವಿಭಿನ್ನ ಮುಖಗಳನ್ನು, ಅವಳ ಸ್ಥಿತಿ-ಗತಿಯ ಯಥಾವತ್ತಾದ ಚಿತ್ರಣಗಳನ್ನು ದಟ್ಟವಾಗಿ ತೆರೆದಿಡುತ್ತದೆ.

"..... ಮಣ್ಣಿನ ಮಕ್ಕಳಿಗೆ ಮಣ್ಣಿನ ವಾಸನೆ
ಉಪ್ಪಿನ ರುಚಿ ಕಡಲ ಮತ್ಸ್ಯಗಂಧಿ ಗಾಳಿಯ ಪರಿಚಯವಿಲ್ಲ
ದಿರುತ್ತದೆಯೇ? ಹಾಗೇ ನನಗೂ ಹೆಣ್ಣಿನ ಸಂಗ
ತಿಗಳು ಗೊತ್ತು. ನಾನು ಈ ದೇಶದ ಸಭ್ಯನಾಗರಿಕನೇ....."

– (ನಿರಾಕರಣೆ)

ಎಂಬ ಮೂಲಭೂತ ಪ್ರಶ್ನೆಯನ್ನಿಟ್ಟುಕೊಂಡೇ ಹೊರಡುವ ಮೊಗಸಾಲೆಯವರು ಸ್ತ್ರೀಪರವಾಗಿ ಭಾರತೀಯ ಸಂಸ್ಕೃತಿಯ ಬುಡವನ್ನೇ ಅಲ್ಲಾಡಿಸುವ ರೀತಿಯಲ್ಲಿ ದೃಷ್ಟಿ ಬೀರುತ್ತಾರೆ. ಈ ನಿಶ್ಚಳ ದೃಷ್ಟಿಯಲ್ಲಿ ಅವರಿಗೆ ಬ್ರಾಹ್ಮಣ ಸಂಸ್ಕೃತಿ ಹಾಗೂ ಅದಕ್ಕೆ ಪೂರಕವಾದ ಪುರುಷ ರಾಜಕಾರಣದ ಭಯಂಕರ ಸುಳಿಗಳು, ಕಂದಕಗಳು ಕಾಣುತ್ತವೆ. ಇವುಗಳೊಳಗೆ ಸಿಕ್ಕು ನಲುಗುವ , ನರಳುವ ಹೆಣ್ಣಿನ ಹೀನಾಯ ಸ್ಥಿತಿಗತಿಗಳನ್ನು ಕಂಡು ಮರುಗುತ್ತಾರೆ, ಕೊರಗುತ್ತಾರೆ ರೋಸಿ ಉಮ್ಮಳಿಸಿ –

" ಬೊಜ್ಜು ಬೆಳೆದ ಈ ಬ್ರಾಹ್ಮಣ
ಸಂಸ್ಕೃತಿ
ಮುಷ್ಟಿಮೈಥುನದಲ್ಲಿ ಸಿಕ್ಕಿ ಬಂಜೆ
ಯಾದಂತೆ ನೀವು ಬದುಕುವ ಹಾಗೆ ಬದುಕದೆ
ಬಂದಳಿಕೆ ಬದುಕಿ ಈ ದೇ
ಶವ ಸಕೇಶಿಯಾಗಿ ಮಾಡುತ್ತೀರೊ ಎಂಬ ಭಯ, ಸಂ
ದೇಹ ಜೀವಂತ ನನ್ನದು....."

ಎಂದು ಖಾರವಾಗಿ ಉಗಿದು–

"ನೀವು ಈ ರಾಜಕೀಯದಿಂದ ನಿವೃತ್ತರಾಗಿ
ಇವಳನ್ನು ಇವಳಷ್ಟಕ್ಕೆ ಬಿಟ್ಟು ಬಿಟ್ಟರೆ...."

– (ನಿರಾಕರಣೆ)

ಮೊಗಸಾಲೆಯವರು ಸ್ತ್ರೀಯನ್ನು ಕಾಣುವ ರೀತಿ ವ್ಯಾಖ್ಯಾನಿಸುವ ರೀತಿಯೇ ವಿಶಿಷ್ಟ.

" ನೀರೊಳಗಿದ್ದೂ ನೀರು ನಿಲ್ಲದ ಕಮಲದೆಲೆಯ ಪ್ರಕೃತಿ ನಿನ್ನದು"

" ಮನುಷ್ಯ ಪ್ರೀತಿಗೆ ಮುಖವಾದವಳು....."
" ......... ನೀನು ಹೆಚ್ಚೆಚ್ಚು ಗೊತ್ತಾದ ಹಾಗೆ
ನಿನಗೂ ಬದುಕಿಗೂ ದೂರವಾಗಬೇಕಿದ್ದ ನಾನು
ತೆಪ್ಪಗೆ ಬದುಕನ್ನೂ ನಿನ್ನನ್ನೂ ಒಪ್ಪಿಕೊಂಡಿದ್ದೇನೆ..."

– (ಶ್ಯಾಮಲಾ)

ಎನ್ನುವಲ್ಲಿ ಹೆಣ್ಣು ಗಂಡಿನ ಭೇದವಳಿದ ಸಮರಸ ಬದುಕಿನ ತದಾತ್ಮ್ಯದ ಕನಸನ್ನು ಕನವರಿಸುವ ರೀತಿ ತುಂಬ ಸುಂದರವಾಗುತ್ತದೆ.

ಪುರುಷ ಪ್ರಧಾನ ವ್ಯವಸ್ಥೆಯಲ್ಲಿ 'ಮದುವೆ' ಎಂಬುದೇ ಸ್ತ್ರೀ ಶೋಷಣೆಯ ಮೂಲ ಮತ್ತು ಮುಖ್ಯ ಕೇಂದ್ರವೆನ್ನುವುದನ್ನು ಸ್ತ್ರೀವಾದಿ ಚಿಂತನೆಯು ಈಗಾಗಲೇ ಗುರುತಿಸಿಯಾಗಿದೆ. ಅದು ಮೊಗಸಾಲೆಯವರ ವಿಡಂಬನೆಯ ಮೊನಚಿಗೂ ಸಿಕ್ಕಿದೆ –

" ಇದೆಲ್ಲ ನಮ್ಮನ್ನು ಹಿಡಿದು ಹಾಕಿರುವ ಯೌವ್ವನದ ಹುಲಿ
ಬೋನಿನೊಳಗಿನ ನಾಟಕ...."

– (ಶ್ಯಾಮಲಾ)

ಎನ್ನುವ ಕವಿ ಕುಟುಂಬ ಬದುಕಿನಲ್ಲಿಯೇ ಹೆಣ್ಣನ್ನು ಅಪರಿಚಿತಳನ್ನಾಗಿ, ಅಪವಿತ್ರಳನ್ನಾಗಿ, ಹೀನಳನ್ನಾಗಿ, ಕುಲೀನಳನ್ನಾಗಿ ಕಾಣುವ ಪುರುಷಪ್ರಜ್ಞೆಗೆ –

" ಬಾ 'ಬಯಲಿಗೆ' ನೋಡು ನೀನು ಯಾರು
ನಿನಗೆ ನಾನು ಯಾರು
ಒಬ್ಬರಿಗೊಬ್ಬರು ಇಲ್ಲಿ ಅಪರಿಚಿತರಲ್ಲ...."

– (ಶ್ಯಾಮಲಾ)

ಎಂದು ಹಾಕುವ ಸವಾಲು ಇಡೀ ಪುರುಷಶಾಹಿ ವ್ಯವಸ್ಥೆಯೇ ಆತ್ಮವಿಮರ್ಶೆಗೆ ಮತ್ತೆ ಮತ್ತೆ ತನ್ನನ್ನು ಒಡ್ಡಿಕೊಳ್ಳುವ ಕೆಲಸಕ್ಕೆ ಹಚ್ಚುತ್ತದೆ.

ಇಲ್ಲಿಯ 'ಬಯಲು' ಮನುಷ್ಯ ಪ್ರಜ್ಞೆಯ ಅಥವಾ ಮಾನವೀಯ ಪ್ರಜ್ಞೆಯ ಅರಿವಿನೊಳಗೆ ಮೂಡುವ 'ಸ್ವಾತಂತ್ರ' ರೂಪ. ಇದು ಹೆಣ್ಣು ಗಂಡುಗಳಿಬ್ಬರೂ ಸಮಾನವಾದುದು. ಹಾಗಿದ್ದರೆ ಈ ಅರಿವಿನ ತಕ್ಕಡಿಯೊಳಗೆ ಹೆಣ್ಣಿನ ಸ್ಥಾನ ಮಾನಗಳನ್ನು ಸರಿಯಾಗಿ ತೂಗಬೇಕು. ಹಾಗೆ ತೂಗಿದರೇನೇ ಅವಳು ಅರ್ಘವಾದವಳು! ಇಲ್ಲದೇ ಹೋದರೆ ಪರಿಚಿತರಿದ್ದೂ ಅಪರಿಚಿತರನ್ನಾಗಿಸಿಕೊಂಡು ಬದುಕುವ ಈ ಪ್ರಜ್ಞಾ ಅವಸ್ಥೆಯೊಳಗೆ –

" ನಿನ್ನ ಸೊಂಟದ ಸುಳಿಯಲ್ಲಿ ಎದ್ದು ಬಿದ್ದಷ್ಟು ಸಲ
ಮುಳುಗಲೂ ಇಲ್ಲ ತೇಲಲೂ ಇಲ್ಲ
ಈ ಶತಮಾನದ ಅನುಭವಗಳೆಲ್ಲ ಹೀಗೆಯೇ...."

– (ಶ್ಯಾಮಲಾ)

ಎಂಬ ವ್ಯಥೆ ನಿರಂತರ ಕಾಡುತ್ತದೆ. ಇದು ಪುರುಷ ಪಾಶ್ಚಾತ್ತಾಪದ ದನಿಯಾಗಿ ತಣ್ಣಗೆ ಮೊಗಸಾಲೆಯವರ ಕಾವ್ಯದಲ್ಲಿ ಹರಿಯುತ್ತದೆ.

ಪುರುಷಾಧಿಪತ್ಯದಲ್ಲಿ ಸ್ತ್ರೀ ಶೋಷಣೆಯ ವಿಭಿನ್ನ ಮುಖಗಳನ್ನು ಚಿತ್ರಚಿತ್ರವಾಗಿ ಬಿಡಿಸುವ ಪರಿ ಮೊಗಸಾಲೆಯವರ ಕಾವ್ಯದಲ್ಲಿ ಮತ್ತೆ ಮತ್ತೆ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ. ತನ್ನತನವನೆಲ್ಲ ಇಲ್ಲವಾಗಿಸಿಕೊಂಡು ಅನ್ಯತನದಲ್ಲೇ ತನ್ನ ಅಸ್ತಿತ್ವ ಕಂಡು, ಅಸಹ್ಯವನ್ನೂ ಸಹ್ಯವಾಗಿಸಿಕೊಂಡು ಸಂಯಮಶೀಲಳಾಗಿ ಬದುಕುವ ಹೆಣ್ಣು "ಗೂಟಕ್ಕೆ ಕಟ್ಟಿದ ಕಪಿಲೆ" ಯಂತಾಗಿರುವ ಸ್ಥಿತಿ ಮಾನವತೆಯ ಕರುಳಿರಿಯುವಂತಿದೆ.

" ಅಮ್ಮ ಎಂದಾಗ ನನಗೆ ಗೋವಿನ ಕಥೆಯ ನೆನಪು;
ತಲೆ ತಗ್ಗಿಸಿ ಗೂಟದ ವರ್ತುಲದಲ್ಲೆ ಸುತ್ತುವ ಚಿತ್ರ

..............................................................................

ಅಪ್ಪನ ಖಾಸಗಿ ಮನೆಯೊಳಕ್ಕೆ ಹೆಜ್ಜೆಯ ಮೇಲೆ ಹೆಜ್ಜೆಯ ನಿಟ್ಟು
ಅಡಿಗೆ ಮನೆಯ ಹೊಗೆ ಮಲಗುವ ಕೋಣೆಯ ತಗಣೆ ನುಸಿಗಳ ಮಧ್ಯೆ
ಪರಕೀಯವಾಗಿ ಉಸಿರುಕಟ್ಟಿದರೂ ಅದೇ ಶುದ್ಧಗಾಳಿ ಎಂಬ ಭ್ರಮೆಯಲ್ಲಿ
ಮೈಜಿಡ್ಡು ಬಿದ್ದರೂ ರುಚಿಕೆಡದ ನಾಲಿಗೆಯ ಎಚ್ಚರದಲ್ಲಿ
ಸಾಧ್ಯತೆಗಳನ್ನು ಅರಳಿಸದ ಸಂಕೀರ್ಣತೆಯಲ್ಲಿ ಕೊನೆ
ತನಕ ಅವಳು ಗೂಟದಿಂದ ಹಗ್ಗ ಕಿತ್ತುಕೊಳ್ಳಲು ಯತ್ನಿಸಲಿಲ್ಲ.

..........................................................

ಅಪ್ಪ ಸತ್ತ, ಸತ್ತಂದಿನಿಂದ
ಕಾಲಸರ್ಪಳ ಕ್ಷೀಣಿಸುತ್ತಾ ಬಂದ ಹಾಗೇ ಅಪ್ಪನ ಸಾರ್ವಭೌಮತ್ವದಿಂದ
ಈಕೆ ಪಾರಾಗಬಹುದು ಎಂಬ ಕಲ್ಪನೆ
ಭ್ರಮೆಯಾಗಿ ಹಗ್ಗಬಿಚ್ಚಿಕೊಂಡರೂ ಗೂಟಕ್ಕಂಟಿಕೊಂಡಿರುವುದೇ
ರೂಢಿಯಾಗಿ ಮುನ್ನಿನಂತೆಯೇ – ವೈಧವ್ಯದ ಮುನ್ನಿನಂತೆಯೇ......"

– (ಅಮ್ಮ: ಒಂದು ಅನುಭವ)

ಇಂಥ ಸಂವೇದನೆಗಳು ಹೆಣ್ಣಿನ ಬಗ್ಗೆ ನಮ್ಮ ಭಾವನೆಗಳನ್ನು ಒರೆಗಲ್ಲಿಗೆ ಹಚ್ಚಿ ತಿಕ್ಕುತ್ತಾ ಆಪ್ತಗೊಳಿಸುತ್ತ ಹೋಗುತ್ತವೆ ಕಾವ್ಯದಲ್ಲಿ.

"ನೀನೊಬ್ಬ ಮನುಷ್ಯ ಎಂದುಕೊಂಡಿದ್ದೆ ಆಗ
ಬದಲಾಗಿಯೇ ಹೋದೆಯಲ್ಲ!
ಮೃಗಗಳೂ ಮನುಷ್ಯರಾಗುತ್ತಾವಂತೆ, ಮನುಷ್ಯರೂ ಹೀಗೇ
ಆಗುತ್ತಾರೆನ್ನುವುದಕ್ಕೆ ಉದಾಹರಣೆಯೇ ಸಿಗೋದಿಲ್ಲ!"

– (ಅರಾಷ್ಟ್ರಗೀತೆ)

ಇಂಥ ಹತ್ತಾಸೆಯುಲ್ಲೂ ಮನುಷ್ಯತ್ವದ ಕುರುಹುಗಳನ್ನು ಹುಡುಕುವ ಆಸೆ

ಮೊಗಸಾಲೆಯವರಲ್ಲಿದೆ.

ತಮ್ಮೂರಿನ ಮೊಗಸಾಲೆಯ ನೆನಪುಗಳೂ ಕವಿಗೆ ನೋವಾಗಿ ಕಾಡುವ ವಿಪರ್ಯಾಸವಿದೆ

" ತುಂಡು ಸೀರೆಯ ಅರೆಬೆತ್ತಲೆ ಎದೆಯ ಶೂದ್ರ ಹೆಂಗಸರು
ಶ್ರೀಮಂತರ ಅಡಿಕೆ ತೋಟಗಳಲ್ಲಿ ಬಾಡಿದ ಬಾಳೆಗಿಡಗಳ ಹಾಗೆ
ಮರದ ದಿಮ್ಮಿಗಳಾಗಿ ಮಲಗುತ್ತಾ ಕರಗುತ್ತಾ
ಗೊಬ್ಬರವಾಗುತ್ತಿದ್ದಾರಲ್ಲಾ – ಕೊಬ್ಬಿಗೆ....."

– ( ಮೊಗಸಾಲೆಯ ನೆನಪುಗಳು)

ಎನ್ನುತ್ತ ಅಲ್ಲಿರುವ ದೌರ್ಜನ್ಯ ಕ್ರೌರ್ಯ, ಅನ್ಯಾಯ, ಅತ್ಯಾಚಾರ ಮುಂತಾದ ನೀತಿ ನಡಾವಳಿಗಳನ್ನು ತಪ್ತ ಮನಸ್ಸಿನಿಂದ ಅವಲೋಕಿಸುತ್ತಾರೆ. "ಸಾಮಾಜಿಕ ಸಂದರ್ಭದಲ್ಲಿ ಕ್ರಾಂತಿಯ ಮಾತನ್ನಾಡುವಾಗ" ಅವರೂರೇ ಅವರಿಗೆ ಸವಾಲು ಪ್ರತಿಸವಾಲು ಹಾಕುವ ವಿಪರ್ಯಾಸದ ಸ್ಥಿತಿ ಆ ನೆನಪುಗಳಲ್ಲಿ ತುಂಬಿ ನಿಲ್ಲುತ್ತದೆ. ಹಾಗೆಯೇ– "ನಿತ್ಯ ಸುಮಂಗಲಿಯಾದ ಈ ಮಣ್ಣಿನ ಹೆಣ್ಣಿನ ಜೊತೆ ಮಲಗಿ ತನ್ನ ಪುರುಷತ್ವವನ್ನು ರುಜುಪಡಿಸಿಕೊಂಡು ತಾನು ಈ ಬಸಿರಿನಿಂದ ಬಂದವನೇ ಅಲ್ಲದ ಹಾಗೆ" ವರ್ತಿಸುವ ಹೀನ ಮಾನವನ ನಡೆಗೆ ಹೇಸಿಗೆ ಪಡುತ್ತಾರೆ.

ದಾಂಪತ್ಯ ಬದುಕಿನಲ್ಲಿ ಸಮರಸ ಕಾಣದ ಬದುಕಿನ ತಲ್ಲಣ – ತಳಮಳಗಳನ್ನು ಸ್ವಾನುಭವದ ನೆಲೆಯಲ್ಲಿ ತೋಡಿಕೊಳ್ಳುವ ಮೊಗಸಾಲೆಯವರು –

" ಧಿಕ್ಕರಿಸಿ ಧೀರೋದಾತ್ತ ರಾಜಕುಮಾರರ ದಂಡ
ಅದೆಲ್ಲಕ್ಕಿಂತ ನನ್ನ ಒಳಗಣ್ಣ ಹೊಳಪೇ ಶ್ರೇಷ್ಠ
ವೆನ್ನುತ್ತ ಕನಸು ಕಟ್ಟಿದವಳಲ್ಲ ಈಕೆ, ಈಕೆಯ ಸುತ್ತ'
ನಾನೂ ಕಟ್ಟಿದೆನಲ್ಲ ಕೋಟೆ?"

– ( ಪ್ರೇಮ ಗೀತ)

ಎನ್ನುವ ವಿಡಂಬನೆಯ ವೈಚಾರಿಕ ಒಳಗಣ್ಣಿನಲ್ಲಿ – ಸ್ತ್ರೀಗೆ ಸಂಬಂಧಿಸಿ ಇಡೀ ಪುರುಷಶಾಹೀ ವ್ಯವಸ್ಥೆಯು ಪರಂಪರೆಯಾಗಿ ಕಟ್ಟಿದ ಬಂಧನದ ಕೋಟೆಯನ್ನು ನಮ್ಮ ಕಣ್ಣ ಮುಂದೆ ನಿಲ್ಲಿಸುತ್ತಾರೆ. ಇದರಿಂದ ಅವಳನ್ನು ಹೊರಗೆಳೆವಬಗೆ ಹಳಹಳಿಕೆಯಾಗಿ ಅವರಲ್ಲಿ ಮೂಡುವ ಪರಿಯೂ ವಿಶಿಷ್ಟ.

ಕೊಡಲೇ ಇಲ್ಲವಲ್ಲ – ನಾನವಳ ಕೈಗೆ
ಒಮ್ಮೆಯಾದರು ಅವಳ ಕನಸುಗಳ?
ಆದರೂ ಕನವರಿಸಲಿಲ್ಲ ಆಕೆ ಒಮ್ಮೆಯೂ
ನನ್ನ ಮೀರಿದ ತನ್ನ ಒಳ ಜಗದ ಸ್ವಗತಗಳ – ಎಂದೂ?

– ( ಪ್ರೇಮಗೀತ)

ಮಹಿಳೆಯನ್ನು ಕುಟುಂಬದ ಒಳಗಿನಂತೆ ಹೊರಗೂ ಭಯಂಕರವಾಗಿ ಶೋಷಿಸಲಾಗಿದೆ. ಬಂಜೆ, ವಿಧವೆ ಮತ್ತು ವೇಶ್ಯೆಯ ಬಾಳಿನ ಬೆಲೆಗಳಂತೂ ಬಾಳೆಲೆಯ ಹಾಸುಂಡು ಬೀಸಿ ಒಗೆದ ವಾಸ್ತವ ಇಂದಿಗೂ. ಇಂಥ ಅವಸ್ಥೆಯನ್ನೇ ಎದುರು ನೋಡುತ್ತ ಕುಳಿತುಕೊಳ್ಳುವ ಸಮಾಜದ ಕಾಮುಕ (ಇಣುಕು) ಕಣ್ಣುಗಳು ಬದುಕಿನುದ್ದಕ್ಕೂ ಅವಳ ಮೈ ಮನಗಳನ್ನು ಬೇಟೆಯಾಡುತ್ತಲೇ ಹೋಗುವ ಪರಿ, ಸಂದರ್ಭ – ಸನ್ನಿವೇಶಗಳ ಸಂಧಿಯಲ್ಲಿ ಸಿಲುಕಿ ಅವಳು ನಲುಗುವ ಪರಿ, ಘಾಸಿಗೊಂಡು ಕಾಯ್ದು ಮೈ–ಮನಗಳಲ್ಲಿ ಸ್ಫೋಟಗೊಂಡರೂ ಅವಳ ಉಸಿರು ಧ್ವನಿಯಾಗದೇ ಉನ್ಮತ್ತ ಕೆಂಪುದೀಪದಡಿಯೋ, ದೌರ್ಜನ್ಯದ ಕರಾಳ ಕತ್ತಲೊಳಗೋ ಕರಗುತ್ತ ನಿಶ್ಯಬ್ಧ ಸ್ತಬ್ಧವಾಗುತ್ತ ಹೋಗುವ ಪರಿಯನ್ನು ಮೊಗಸಾಲೆಯವರ ಕಾವ್ಯ ಸ್ಫುಟವಾಗಿ ತೆರೆದಿಡುತ್ತದೆ.

"ಗುಜ್ಜಾನೆ ಮರಿಯ ಹಾಗೆ ಅವಳಿದ್ದಳು!
ಹೇಳುತ್ತಿದ್ದರು ಎಲ್ಲ
ಒಳಗೊಳಗೇ ನಗುತ್ತ ಅವಳನ್ನು ಹಂಚಿಕೊಂಡವರು
.....................
ಬಿದ್ದವಳು ಅವಳು ಬೀದಿಯಾಗಿ ಬೀದಿಗೆ........
.....................
ಸತ್ತಳು ಅವಳು ಮೊನ್ನೆ ಅನಿರೀಕ್ಷಿತವಾಗಿ ಇದ್ದಕಿದ್ದ ಹಾಗೆ
ಹಾ! ಎನ್ನಲು ಇರಲಿಲ್ಲ ಒಂದೂ ಕೊರಳು ಅವಳಿಗೆ......"

– ( ಗುಜ್ಜಾನೆ ಮರಿಯ ಹಾಗೆ ಅವಳಿದ್ದಳು!)

"ಇತ್ತು ಆಸೆ ಅವಳಿಗೆ;
ದೊಡ್ಡ ಪಟ್ಟಣವಾಗಬೇಕು ತಾನೆಂದು
ಆಗಲಿಲ್ಲ
ಯಾವುದೋ ಒಂದು ಪಟ್ಟಣದಲ್ಲಿ
ಹೆಜ್ಜೆಯಾದಳು ಯಾರದೋ!'"

– ( ಇತ್ತು ಆಸೆ ಅವಳಿಗೆ)

ಎಂದು ಹೇಳುತ್ತ ಮುಂಬೈಯಂಥ ನಗರದಲ್ಲಿ ನಿತ್ಯವೂ ಮಹಿಳೆಯ ಮೇಲಾಗುವ ಅನ್ಯಾಯ ಅತ್ಯಾಚಾರಗಳನ್ನು, ಅವಳ ಬಿಸಿಯುಸಿರಿನುದ್ದಕ್ಕೂ ಹರಿವ ಹಾಹಾಕಾರ ತಲ್ಲಣ ತಳಮಳಗಳನ್ನು, ಬಿಕ್ಕುವ ಬಿಕ್ಕಳಿಕೆಗಳನ್ನು ಮೊಗಸಾಲೆಯವರು ವಿಷಾದದ ದನಿಯಲ್ಲಿ ದಾಖಲಿಸುತ್ತಾರೆ –

" .......... ಸಂಜೆಯಾಗುವ ಮೊದಲೇ
ಮುಂಬೈಯಲ್ಲಿ ಸಂಜೆ!

...................................

മാതിഗാഗി ತಹತಹಿಸುವ

ಮಾತಿಲ್ಲದ ಮುಂಬೈಯ ಎಷ್ಟೋ ಮನೆಗಳು
ಪ್ರೇಮಿಸುತ್ತಿದ್ದರೂ ಪ್ರೇಮ ಸಲ್ಲಾಪಕ್ಕೆ ಇಲ್ಲದ ಕ್ಷಣಗಳು
ಇಲ್ಲಿ ದಿಢೀರನೆ ಮನೆಗಳಾಗುತ್ತವೆ, ಮುತ್ತಾಗುತ್ತವೆ
ಮರುಕ್ಷಣ ಮುಕ್ಕಾಗಿ ಮರಳಾಗುತ್ತವೆ ಪಾಪ!
ಈ ನಡುವೆ ನೀರಲ್ಲಿ ಮುಳುಗಿ ಏಳುತ್ತಾ ನಿಂತ
ನಿರ್ಲಿಪ್ತ ಕಪ್ಪು ಬಂಡೆಗಳ ಮೇಲೆ
ಕಾಮಾಟಿಪುರದ ಬಿಕ್ಕಳಿಕೆಯ
ಇಲ್ಲವೇ ಸೊಕ್ಕಿದ ಕ್ರೌರ್ಯದ
ಹಾವಸೆಗಳು ಮೈಚಾಚುತ್ತವೆ!"

– ( ಮುಂಬೈಗೆ – ಬ್ಯಾಂಡ್ ಸ್ಟ್ಯಾಂಡ್ ಬೀಚು)

ಹೀಗೆ ಮಾನವೀಯ ತುಡಿತವಾಗಿ ಮಿಡಿದ ಕವಿ ಮನವು –

" ಈಕೆ ಇರುವಷ್ಟು ಕಾಲ
ಇದ್ದದ್ದೇ ಗೊತ್ತಾಗಲಿಲ್ಲ ನನಗೆ" – ( ನನ್ನ ಕಾಂಜಿ ಪುಟ್ಟತ್ತೆ)

" ಒಮ್ಮೆಯೂ ನನ್ನ ಕನಸಿಗೆ
ಬಾರದೇ ಹೋದಳು!" – ( ಇತ್ತು ಆಸೆ ಅವಳಿಗೆ)

ಎಂಬ ಪಶ್ಚಾತ್ತಾಪದ ಬೇಗುದಿಗೆ ಇಡೀ ಪುರುಷಶಾಹಿ ಪ್ರಜ್ಞೆಯನ್ನು ಅಂತಿಮವಾಗಿ ತಳ್ಳಿಬಿಡುತ್ತದೆ.

ಸ್ತ್ರೀಪರ ಚಿಂತನೆಗೆ ಹಿನ್ನೆಲೆಯಾಗಿ ಅಹಲ್ಯೆ, ದ್ರೌಪದಿ, ಸೀತೆ, ಶಬರಿ, ಆಮ್ರಪಾಲಿ ಮುಂತಾದ ಪಾತ್ರಗಳ ಒಳ–ಹೊರಗುಗಳನ್ನು ಬಿಚ್ಚಿ ಪುರುಷ ದೌರ್ಜನ್ಯದ ಕುರುಹುಗಳನ್ನು ಪಟ್ಟಿ ಮಾಡುವ ಮೊಗಸಾಲೆಯವರು ಬದುಕಿನಲ್ಲಿ ಹೆಣ್ಣಿಗೆ ಸಮಾನ ಸ್ಥಾನ ಮಾನಗಳನ್ನು ನೀಡಬೇಕೆಂಬ ಪ್ರಾಮಾಣಿಕ ಆಶಯವುಳ್ಳವರು. ಅದಕ್ಕಾಗಿ ಅವರು ತಮ್ಮ ಕಾವ್ಯವನ್ನು –

" ಕವಿತೆಯೇ ಹೋಗು
ಮನುಷ್ಯನ ಮಾತಾಗು....." – ( ನನ್ನ ಕವಿತೆಗಳು)

ಎಂದು ಪ್ರಜ್ಞಾವಂತ ಪಾತಳಿಯ ಮೇಲೆ ಮಡಿಸಿಕೊಳ್ಳುತ್ತಾರೆ.

" ನನಗೆ ನಾನಿರುವುದರಿಂದ
ನನ್ನ ಹಾಗೇ ಇರುವವಳೊಬ್ಬಳು ಬೇಕು...."

– ( ನನಗೆ ನಾನಿರುವುದರಿಂದ)

ಎಂದು ಹಾತೊರೆಯುತ್ತಾರೆ.

ಸ್ತ್ರೀ ಸಹಜವಾದ ಪ್ರೀತಿ ಮದುವೆ ವಾತ್ಸಲ್ಯಗಳಿಗೆ ಇನ್ನೊಂದು ಮಗ್ಗುಲವಾಗಿ ತೆರೆದ ದೃಷ್ಟಿ ಮೊಗಸಾಲೆಯವರ ಕಾವ್ಯದಲ್ಲಿದೆ. ಇಲ್ಲಿ ಬರುವ ತಾಯಿ, ತಾಯಿ ಅಂದರೆ.... ನನಗಾಕೆ ದೇವರಲ್ಲ; ತಾಯಿ, ನನ್ನ ಕಾಂಬಿ ಪುಟ್ಟತ್ತೆ, ಹರಿದ್ವರ್ಣದ ಈ ಹುಡುಗಿ, ಕರಾವಳಿಯ ಬೇಸಗೆಯ ಹೊಳೆ, ಶಾಪ ಮುಕ್ತ ಅಹಲ್ಯೆಯ ರಾತ್ರೆ, ವ್ಯಕ್ತಮಧ್ಯ ಮುಂತಾದ ಕವಿತೆಗಳಲ್ಲಿ ಹೆಣ್ಣು ಪುರುಷ ಪ್ರಧಾನ ವ್ಯವಸ್ಥೆಗೆ ಬದ್ಧಳಾಗಿ ಬದುಕಿದ ರೀತಿ ಇದ್ದರೂ, ಅವಳ ನಿಷ್ಕಲ್ಮಶ ಹೃದಯದ ಅಂತಃಕರಣ, ಪ್ರೀತಿ, ಮಮತೆ, ಸಿಟ್ಟು, ಸೆಡವುಗಳಲ್ಲಿ ಮನುಷ್ಯ ಬದುಕು ಸದಾ ಹಸಿರಾಗಿ ಅರಳಿ ನಿಂತಿರುವುದನ್ನು ಕಾಣಬಹುದು.

ಒಟ್ಟಿನಲ್ಲಿ ಮನುಷ್ಯ ಕೇಂದ್ರಿತ ನಿಲುವುಗಳನ್ನಿಟ್ಟುಕೊಂಡು ನಡೆವ ನವ್ಯರು ಎಡವಿ –

*"ಅಡಗಿದ್ದರು ಬಾಟಲಿ ಬಾಯೊಳಗೆ*
*ಹೆಣ್ಣಿನ ನಡಕೆಳಗೆ......"*

– ( ಸಿದ್ದಲಿಂಗ ದೇಸಾಯಿ)

ಎನ್ನುವಂತೆ ಹೆಣ್ಣನ್ನು ಭೋಗದ ವಸ್ತುವಾಗೇ ನೋಡುವ ಪರಂಪರೆಯ ನೀತಿಯನ್ನು ಉಳಿಸಿಕೊಂಡು ಬಂದ ಸಂದರ್ಭದಲ್ಲಿ ಮೊಗಸಾಲೆಯವರು "ಅವರೊಡನಿದ್ದೂ ಅವರಂತಾಗದೆ ಜಗ್ಗಿದ ಕಡೆ ಬಾಗದೆ" ಅದೇ ಮಾರ್ಗದಲ್ಲಿ ಭಿನ್ನವಾಗಿ ನಿಂತು ಸ್ತ್ರೀಪರ ಕಾಳಜಿಯನ್ನು ತೂಕ ತಪ್ಪದ ನಿಲುವಿನಲ್ಲಿ ನಿರ್ವಚಿಸುತ್ತಾರೆ.

ಕೊನೆಯ ಮಾತು, ಮಹಿಳೆ ತಾನು ಅನುಭವಿಸಿ ಬಂದ ಬದುಕಿನೊಳಗೆ ಹೊಸ ನೋಟ, ಗ್ರಹಿಕೆ, ಹೊಸ ದಾರಿ ಮತ್ತು ಸಾಧ್ಯತೆಗಳನ್ನು ಕಂಡುಕೊಂಡು ಜಾಗೃತಳಾಗಿ ಈ ಸ್ವದೇಶಿ ಶೋಷಣೆಯ ತೆಕ್ಕೆಯಿಂದ ಬಿಡಿಸಿಕೊಳ್ಳಲು ಹವಣಿಸುತ್ತಿರುವ ಸಂದರ್ಭದಲ್ಲೇ, ಇಂದು 'ವಿದೇಶಿ ಮುಕ್ತ ಮಾರುಕಟ್ಟೆ'ಯೆಂಬ ಇನ್ನೊಂದು ರೀತಿಯ ಭಯಾನಕ ಸಂಸ್ಕೃತಿಯ ಬಲಿಷ್ಟ ತೋಳುಗಳು ಅವಳನ್ನು ಹಿಡಿದು ಇನ್ನೂ ಭಯಂಕರವಾಗಿ ಶೋಷಿಸಲು ತೊಡಗಿವೆ. ಇಂಥ ಸಂದರ್ಭದಲ್ಲಿ ಮೊಗಸಾಲೆಯವರ ಕಾವ್ಯ ದೇಶೀಯವಾದರೂ ಈ ಚಿಂತನೆಗೆ ತುಂಬ ಆಪ್ತವಾಗಿ ಸಾಕಷ್ಟು ಬಲವನ್ನು ತುಂಬುತ್ತದೆ.

o

# ಮೊಗಸಾಲೆ ಕಾವ್ಯದಲ್ಲಿ 'ಧ್ಯಾನಸ್ಥ ಸ್ಥಿತಿ'

ರವಿ ಉಪಾಧ್ಯ

ನನಗೆ ಡಾ. ನಾ. ಮೊಗಸಾಲೆಯವರ ಪರಿಚಯವಾದದ್ದು ಅವರು ನನ್ನ 'ನಿನ್ನ ರೂಪಿಸಲು ಕೂತಂತೆ' ಕೃತಿಗೆ ಅಭಿಪ್ರಾಯ ವ್ಯಕ್ತಪಡಿಸಿದ ಸಂದರ್ಭದಿಂದ. ಅವರು ಆಗ ಪತ್ರದಲ್ಲಿ ಬರೆದದ್ದು ಇಷ್ಟು:

'ನಾನು ನಿಮ್ಮ ಸಂಗ್ರಹವನ್ನು ಮೆಚ್ಚಿಕೊಳ್ಳಲು ಮುಖ್ಯಕಾರಣ, ನಿಮ್ಮ ಸಾಮಾಜಿಕ ಕಳಕಳಿ ಮತ್ತು ಅದು ತುಂಬ ಪ್ರಾಮಾಣಿಕವಾಗಿ ನಿಮ್ಮ ಕಾವ್ಯದಲ್ಲಿ ಹೊರಹೊಮ್ಮುವ ಬಗ್ಗೆ. ಮಿತ್ರಸಂಹಿತವಾಗಿ (ಕಾಂತಾಸಮ್ಮಿತವಾಗಿ ಅಂತ ಹಿಂದೆ ಇದ್ದ ಹಾಗೆ!) ನೀವು ಹೃದಯಕ್ಕೆ ತಟ್ಟುವ ಹಾಗೆ ಬಿಚ್ಚಿಕೊಳ್ಳುತ್ತೀರಿ. ನಿಮ್ಮ ವ್ಯಂಗ್ಯ ವಕ್ರೋಕ್ತಿ ನಮಗೆ ತಟ್ಟುತ್ತದೆ. ನಾವು ಈ ವ್ಯವಸ್ಥೆಯಲ್ಲಿ ಎಷ್ಟು ಅಸಹಾಯಕರು ಎಂಬುದನ್ನು ನಿಮ್ಮ ಕವನಗಳು ನಮ್ಮ ಭುಜ ಕುಲುಕಿಸಿ ಹೇಳುತ್ತವೆ. ಇದಕ್ಕಾಗಿ ನಿಮಗೆ ಅಭಿನಂದನೆಗಳು.

ಇಂದು ಕಾವ್ಯ ಮಟ್ಟ ಹೊಸಮಜಲುಗಳನ್ನು ಬೇಡುತ್ತದೆ. ಪ್ರತಿಯೊಬ್ಬ ಕವಿಯೂ ಅವನದೇ ಆದ ಮಾರ್ಗ ಮತ್ತು ಗ್ರಹಿಕೆಯನ್ನು ರೂಪಿಸಿಕೊಳ್ಳಬೇಕಾಗುತ್ತದೆ. ಇದಕ್ಕಾಗಿ ನೀವು ಪೇಚಾಡುತ್ತಿಲ್ಲ. ಸಹಜವಾಗಿ ನಿಮ್ಮ ಮಾರ್ಗವನ್ನು ನೀವು ಕಂಡುಕೊಂಡಿದ್ದೀರಿ. ಇದು ದೊಡ್ಡ ಸಾಧನೆ. ಖಂಡಿತ ನೀವು ಈಗ ಹಿಡಿದ ದಾರಿಯಲ್ಲೇ ಮುನ್ನುಗ್ಗಿ ಒಂಟಿ ಸಲಗದ ಹಾಗೆ. ಒಂದು ಒಳ್ಳೆ ಕವನ ಸಂಗ್ರಹವನ್ನು ನೋಡಿದ ಹಾಗಾಗಿದೆ. ಅದಕ್ಕಿಂತ ಹೆಚ್ಚು ನಾನು ಹೇಳಲಾರೆ' (ನಿನ್ನ ರೂಪಿಸಲು ಕೂತಂತೆ. ಪ್ರ – 1998)

ಇದರ ನಂತರ ಬಂದ 'ಸೂರ್ಯ ಕೊಲೆಯಾಗಿದ್ದಾನೆ' ಕುರಿತಾಗಿ ಹೇಳಿದ್ದು ಹೀಗೆ:

'ಖಂಡಿತ ನೀವು ಒಳ್ಳೆಯ ಕವಿ. ಕವನಗಳ ಆಳ ನಿರಾಳ ನಿಮಗೆ ಗೊತ್ತು. ಚೆನ್ನಾಗಿ ಬರೆಯಲೂ ಪಳಗಿದ್ದೀರಿ. ಹೊಸ ಸಾಧ್ಯತೆಗಳನ್ನು ನೀವು ಹುಡುಕಬಲ್ಲಿರಿ' (ಸೂರ್ಯ ಕೊಲೆಯಾಗಿದ್ದಾನೆ, ಪ್ರ – 1990)

ಆಮೇಲೆ 'ದಿಲ್ಲಿ ಮತ್ತು ಪಾರಿವಾಳ'ದ ಬಗ್ಗೆ ತಿಳಿಸಿದ್ದು ಕೇಳುಗನಂತೆ:

'ನಿಜ ಹೇಳಬೇಕೆಂದರೆ ನೀವು ಆರಿಸಿಕೊಂಡ ವಸ್ತುಗಳೆಲ್ಲ ನನಗೆ ತುಂಬ ಆಪ್ತವಾದವು. ನಾನು ಹೇಳುವ ರೀತಿ ಕೂಡ ಇದೇ ಅಥವಾ ಇದಕ್ಕೆ ತೀರಾ ಹತ್ತಿರವಾದವು. ಹಾಗಾಗಿ

ಇದೆಲ್ಲ ಇನ್ನೊಂದು ಅರ್ಥದಲ್ಲಿ ನನ್ನದೇ ಎನ್ನುವಷ್ಟು ಖುಷಿ ನೀಡಿತು. ಅದೃಷ್ಟವಶಾತ್ ನಾನು ನಿಮಗೆ ಪ್ರಭಾವ ಬೀರಿಲ್ಲ. ನೀವು ನನಗೂ ಪ್ರಭಾವ ಬೀರಿಲ್ಲ. ಜಿ.ಎಸ್.ಎಸ್ ಮತ್ತು ಕಣವಿಯವರ ಹಾಗೆ ಪ್ರಾಯಶಃ ನೀವು ಮತ್ತು ನಾನು ಇರಬೇಕು. (ಇದರಲ್ಲಿ ಜಿ.ಎಸ್.ಎಸ್. ಯಾರು ಕಣವಿ ಯಾರು ಎಂಬ ಯೋಚನೆ ಬೇಡ ಸದ್ಯಕ್ಕೆ)

ದಿಲ್ಲಿ ಮತ್ತು ಪಾರಿಳವಾಳ, ಇಲ್ಲಿಯವರೆಗೆ, ವಾಚನಾಲಯ, ಅಂತರ, ರೂಪನೂರ, ಗುಣಕ್ಕೆ ಮತ್ಸರವುಂಟೇ? ಕ್ಲೀನ್ ಬೋಲ್ಡ್, ಚುನಾವಣಾ ಗೋಡೆ, ಭೀಮರಾಯನಿಗೆ ಇತ್ಯಾದಿ ನನಗೆ ತೀರಾ ಖುಷಿ ಕೊಟ್ಟವು. ಅಭಿನಂದನೆಗಳು.

ಉಪಾಧ್ಯರೇ, ಅಪರೂಪಕ್ಕೆ ಒಂದು ಒಳ್ಳೆಯ ಸಂಗ್ರಹ ನೋಡಿದ ಖುಷಿ. ಅಷ್ಟೇ ತೃಪ್ತಿ. ನವ್ಯ ನವ್ಯೋತ್ತರ, ಅಥವಾ ರಮ್ಯ–ಈ ಯಾವ ಪಂಥಕ್ಕೂ ಒಳಗಾಗದೆ ಈ ಎಲ್ಲದರ ಪಕ್ವ ಸತ್ವವನ್ನು ಒಳಗೂಡಿಸಿಕೊಂಡ, ಜನಸಾಮಾನ್ಯರ ಬಳಿಗೆ ಬರುವ, ಸ್ಪಂದಿಸುವ ವರ್ತಮಾನವನ್ನು ಕಟ್ಟಿಕೊಡುವ ಕಟುವಾಸ್ತವದ ಕಾವ್ಯ ಪ್ರಪಂಚವನ್ನು ನಮ್ಮ ಕಣ್ಣೆದುರು ನಿಲ್ಲಿಸಿದ್ದೀರಿ. ಇದು ದೊಡ್ಡ ಸಾಧನೆ. ಸಂತೋಷ. (ದಿಲ್ಲಿ ಮತ್ತು ಪಾರಿವಾಳ, ಪ್ರ– 1992)

ಕವಿಯೊಬ್ಬ, ಮಗದೊಬ್ಬನ ಕಾವ್ಯದ ಬಗ್ಗೆ ಅಭಿಪ್ರಾಯ ಪಡುವ ಸಂದರ್ಭದಲ್ಲೆಲ್ಲ ಬಹುತೇಕ ಪೂರ್ವಾಗ್ರಹ ನೋಟ ಅವನನ್ನು ಆವರಿಸಿಕೊಳ್ಳುವ ಸಾಧ್ಯತೆ ಇರುತ್ತದೆ. ಆದರೆ ಡಾ. ನಾ. ಮೊಗಸಾಲೆಯವರು ಆ ಅಪಾಯದಿಂದ ಮುಕ್ತವಾಗಿ, ತಾವು ವ್ಯಕ್ತಪಡಿಸುವ ಅನಿಸಿಕೆಯಲ್ಲಿ ವಸ್ತುನಿಷ್ಠತೆಯನ್ನು ಮೆರೆಯುತ್ತಾರೆ. ಇದಕ್ಕೆ ಸಾಕ್ಷಿಯಾಗಿ ಅವರ ಮೇಲಿನ ಮಾತುಗಳು ನಿಲ್ಲುತ್ತವೆ.

ನನ್ನ ಕಾವ್ಯದ ಬಗ್ಗೆ ಮೊಗಸಾಲೆಯವರು ಒಳ್ಳೆಯ ಅಭಿಪ್ರಾಯ ಪಟ್ಟಿದ್ದಾರೆಂಬ ಕಾರಣಕ್ಕೆ ಈ ಮಾತನ್ನು ಹೇಳುತ್ತಿಲ್ಲ. ಅವರು ಬೇರೆಯವರ ಕೃತಿಗೆ ಮುನ್ನುಡಿ ರೂಪದಲ್ಲೂ, ಅಭಿಪ್ರಾಯ ರೂಪದಲ್ಲೂ ವ್ಯಕ್ತಪಡಿಸಿದ್ದನ್ನು ಲಕ್ಷ್ಯದಲ್ಲಿರಿಸಿಕೊಂಡೇ ಹೇಳುತ್ತಿರುವುದು.

ಕವಿಯೊಬ್ಬ ವಿಮರ್ಶಕನೂ ಹೌದೆಂಬುದನ್ನು ಮರೆಯಲಾಗದು. ಬೇರೊಬ್ಬರ ಕೃತಿಯನ್ನು ಅವಲೋಕಿಸುವಾಗ, ಕವಿಮನದ ವಿಮರ್ಶಕ ತನ್ನಲ್ಲಿಯ ಕವಿಯ ಕಣ್ಣಿಗೆ ಗಾಂಧಾರತ್ವವನ್ನು ತಂದುಕೊಳ್ಳದೆ ಎದುರು ಕವಿಯ ವಸ್ತು, ಧೋರಣೆ, ಬದ್ಧತೆ ಅಬದ್ಧತೆ ಇತ್ಯಾದಿಗಳನ್ನು ಗ್ರಹಿಸಿಕೊಳ್ಳುವ ಒಬ್ಬ ನಿಷ್ಠಾವಂತ ಅನ್ವೇಷಕನಾಗುತ್ತಾನೆ. ಶಕ್ಯವಿದ್ದಷ್ಟೂ ತಾನು ಕಂಡುಕೊಂಡ ಒಳನೋಟಗಳ ಸೊಬಗನ್ನು ಸೊಗಸನ್ನು ಸಹೃದಯ ಓದುಗನೊಂದಿಗೆ ಹಂಚಿಕೊಳ್ಳ ಬಯಸುತ್ತಾನೆ. ಕಾವ್ಯದ ಚೆಲುವು – ಒಲವಿನ ಲಾಲಬಾಗನ್ನು ಅನಾವರಣಗೊಳಿಸುವುದೇ ಅವನ ಕೆಲಸ. ಆದರೆ ಇಂದು ಇಂಥ ಕೆಲಸ ಆಗುತ್ತಿಲ್ಲವಲ್ಲ ಎಂಬ ಹಳಹಳಿ ನನ್ನಲ್ಲಿದೆ. ಇರಲಿ. ವಿಷಯ ವಿಷಯಾಂತರವಾಗಬಾರದಲ್ಲ?

ಡಾ. ನಾ. ಮೊಗಸಾಲೆಯವರು ನನ್ನ 'ದಿಲ್ಲಿ ಮತ್ತು ಪಾರಿವಾಳ'ದ ಕುರಿತು ಬರೆದದ್ದರಲ್ಲಿ 'ಅದೃಷ್ಟವಶಾತ್ ನಾನು ನಿಮಗೆ ಪ್ರಭಾವ ಬೀರಿಲ್ಲ. ನೀವು ನನಗೂ ಪ್ರಭಾವ ಬೀರಿಲ್ಲ. ಜಿ.ಎಸ್.ಎಸ್. ಮತ್ತು ಕಣವಿಯವರ ಹಾಗೆ ಪಾಯಶಃ ನೀವು ಮತ್ತು ನಾನು ಇರಬೇಕು'...

ಎಂಬ ಮಾತೊಂದನ್ನು ಹರಿ ಬಿಟ್ಟಿದ್ದಾರೆ. ಇಲ್ಲಿ ಅವರ್ಯಾರು ಇವರ್ಯಾರು ಎಂಬುದು ಒಂದು ಕಡೆಗಿರಲಿ. ಮೊಗಸಾಲೆಯವರಲ್ಲಿ ತಮ್ಮತನದ ಅರಿವಿನ ಒಂದು ಬಗೆಯ ಔಚಿತ್ಯ ಒಡಮೂಡಿದಂತಾಗಿದೆಯಲ್ಲ, ಇದು ಅವರ ಗುಣಮಟ್ಟದ ಅಂತಸ್ತಿಕೆಯನ್ನು ತೋರ್ಪಡಿಸುತ್ತದೆ. ಮಾದರಿಯಾಗಿ ಯಾರೋ ಏರಿದ ಎತ್ತರಕ್ಕೆ ತಾನೂ ಏರಬಲ್ಲೆನೆಂಬ ಆತ್ಮೀಕ ಛಲ ಅವರಲ್ಲಿ ಸಂಕಲ್ಪಿತವಾಗಿದ್ದರಿಂದಲೇ ಅವರು ತಮ್ಮನ್ನು ತಾವು ಈ ತೆರನಾಗಿ ಗುರುತಿಸಿಕೊಳ್ಳುವಲ್ಲಿ ಧೈರ್ಯ ತೋರುತ್ತಾರೆ. ಬೇರುಬಿಟ್ಟ ಹೆಜ್ಜೆ ಗುರುತಿಗೆ ಸಂತೋಷಪಡುತ್ತಾರೆ.

ಮೊಗಸಾಲೆಯವರ ಈ ಪರಿಯ ವ್ಯಕ್ತಭಾವಕ್ಕೆ, ಅದರಲ್ಲೂ ನೇರವಾಗಿ ಅವರು ಎತ್ತಿಕೊಳ್ಳುವ ಹೆಸರುಗಳ ಉದಾಹರಣಕ್ಕೆ ಯಾರಾದರೂ ತಬ್ಬಿಬ್ಬಾಗದಿಲ್ಲ. ಅಹಮಿಕೆಯ ಪರಮಾವಧಿ ಅನ್ನದಿಲ್ಲ. ಆದರೆ ಮೊಗಸಾಲೆಯವರಿಗೆ ಸ್ವಂತಕ್ಕೇ ಗೊತ್ತಿದೆ-ತಾನು ಯಾರ್ಯಾರ ಪ್ರಭಾವಕ್ಕೊಳಗಾಗಿದ್ದೇನೆಂಬುದು, ಮತ್ತು ಯಾರ ಮಾರ್ಗದಲ್ಲಿ ಸಾಗುತ್ತಿದ್ದೇನೆಂಬುದು.

ಯಾವ ಕವಿಯೂ ಪ್ರಭಾವ ಮುಕ್ತನಲ್ಲ. ಆರಂಭಿಕ ದಿಸೆಯಲ್ಲಿ ಆತ ಯಾರೊಬ್ಬರ ಪ್ರಭಾವಕ್ಕೋ, ಯಾರ್ಯಾರ ಪ್ರಭಾವಕ್ಕೋ ಒಳಗಾಗುವ ಸಾಧ್ಯತೆ ಇದ್ದೇ ಇರುತ್ತದೆ. ಕ್ರಮೇಣ ಆತ ತನ್ನ ದಾರಿಯನ್ನು ಕಂಡುಕೊಳ್ಳುತ್ತಾನೆ. ತನ್ನದೇ ಆದ ಅಸ್ತಿತ್ವದ ಅನ್ವೇಷಣೆಯ ಹಂತದಲ್ಲಿ ಆತ ತನ್ನನ್ನು ಅವರೊಂದಿಗೋ ಇವರೊಂದಿಗೋ ಸಮೀಕರಿಸಿಕೊಳ್ಳುವ, ಹೌದು ಹೌದು ಅವರಂತೆಯೇ ತಾನು ಎಂದು ಪುಳಕಗೊಳ್ಳುವ ಅವಸ್ಥೆಯಲ್ಲಿರುತ್ತಾನೆ.

ಈ ಒಂದು ಮನಸ್ಥಿತಿಯಲ್ಲಿ ಮೊಗಸಾಲೆಯವರಿದ್ದಾಗ ಅವರ ಕೈಗೆ ನನ್ನ 'ದಿಲ್ಲಿ ಮತ್ತು ಪಾರಿವಾಳ' ಸಿಕ್ಕಿದ್ದರಿಂದ ಅವರು ಈ ರವಿ ಉಪಾಧ್ಯ ಹೆಚ್ಚೂ ಕಮ್ಮಿ ನನ್ನಂತೆಯೇ ಬರೆಯುತ್ತಾರಲ್ಲ ಅನ್ನುವ ಸಾಕ್ಷ್ಯಾಧಾರ ಲಭ್ಯವಾಗಿದ್ದರಿಂದ, ಮೊಗಸಾಲೆಯವರು ತಮ್ಮನ್ನೂ ನನ್ನನ್ನೂ ಜಿ.ಎಸ್.ಎಸ್. ಮತ್ತು ಕಣವಿ ಅವರುಗಳಿಗೆ ಹೋಲಿಸಿ ನೋಡಬೇಕೆಂಬ ವಿಚಾರಕ್ಕೆ ಬಂದದ್ದೆಂದು ಕಾಣುತ್ತದೆ. ಆದರೆ ಅವರಿಗೆ ಯಾರು ಯಾರು ಎಂಬ ಬಗ್ಗೆ ಧೈರ್ಯ ಸಾಲದ್ದರಿಂದ ಅದನ್ನಾಗ ನಿರೀಕ್ಷೆಯ ಗರ್ಭಕ್ಕೆ ಬಿಟ್ಟು ಬಿಟ್ಟರು.

ಮೊಗಸಾಲೆಯವರದು ನಿಜಕ್ಕೂ ದೊಡ್ಡ ಗುಣ. ಈವರೆವಿಗೂ ನಾನವರನ್ನು ಸಮಕ್ಷಮ ನೋಡಿದ್ದಿಲ್ಲ. ಆದರೂ ನಮ್ಮಿಬ್ಬರಲ್ಲಿ ಆಗಾಗಿನ ಪತ್ರ ಸಂಪರ್ಕವಿಲ್ಲದಿಲ್ಲ. ದೀಪಾವಳಿ ಸಂಚಿಕೆಯ ಸಂದರ್ಭದಲ್ಲಿ ನಾನು ಅಪೇಕ್ಷಿಸಿದಾಗೆಲ್ಲ ಅವರು ಕವಿತೆಗಳನ್ನು ತಪ್ಪದೇ ಕಳಿಸಿದ್ದಾರೆ. ಯೋಗಕ್ಷೇಮ ವಿಚಾರಿಸಿದ್ದಾರೆ. ಮೊಗಸಾಲೆ ಪಡಸಾಲೆಯನ್ನು ಹೇಗೆ ಮರೆತೀತು?

ಮೊಗಸಾಲೆಯವರ ಕಾವ್ಯ ಲೌಕಿಕತೆಯಿಂದ ಅಲೌಕಿಕತೆಯೆಡೆಗೆ ಪಯಣಿಸಿದ ಕಾವ್ಯ. ಕವಿಯ ಆಪ್ತವಾದ ಪಾರಮಾರ್ಥಿಕ ಸ್ಪರ್ಶವನ್ನು ಅಲ್ಲಲ್ಲಿ ಕಾಣಬಹುದಾಗಿದ್ದು, ಇದಕ್ಕೆ 'ಮಂತ್ರ'ವೆಂಬುದು ಉತ್ತಮ ಉದಾರಣೆ. ಅದಿರುವುದು ಹೀಗೆ:

'ಬಿದಿರ ಹಿಂಡು ಧ್ಯಾನ ಬಿಟ್ಟೆದ್ದ ಹಾಗೆ ನಿಂತಿದೆ
ತಾನೇ ಸೃಷ್ಟಿಸಿದ ಮಂತ್ರಗಳಿಂದ ಹೊರಬಂದು

ಮೌನವಾಗಿದ್ದ ಕೊಳಲು ಮರಳಿ ಅದರ ಕಡೆಗೆ ಸರಿದು

ಜಿಂಕೆ ಕಣ್ಣುಗಳಲ್ಲಿರುವ ಆ ವನದ ಹಸುರೆಲೆಗಳು
ಬಿಸಿಲೆ ಹುಲಿಯೆಂದು ಕಂಪಿಸಿ ಕಾಲೆತ್ತಿವೆ
ಗಾಳಿಯಲ್ಲಿ ಆನೆ ಘೀಳಿಟ್ಟ ಸದ್ದು
ಬಿದಿರ ಗಂಟುಗಳನ್ನು ಮುರಿಯದೆ ಮುರಿದಂತೆ ಬಾಗಿಸುತ್ತಿದೆ.

ಕಾಡಿನೊಳಗಿರುವ ಮೌನ ಬಾಗಿಲು ತೆರೆದು ಮಲಗಿದೆ
ಆಕಾಶ ಮರದ ಮೇಲೆ ಹೆಬ್ಬಾವಾಗಿ ಹರಿಯುತ್ತಿದೆ
ಗಾಳಿ ಹೂವಿನ ಮುಖದಲ್ಲಿರುವ ಚಿಟ್ಟೆಯ ಹೆಜ್ಜೆಯನ್ನೊರಸಲು
ಹೊರಟಿದೆ
ಮುಂಜಾನೆಯ ಹಾರಿ ಹೋದ ರಭಸಕ್ಕೆ ಗಿಡಗಳು ಬಳಕುತ್ತಿವೆ.

ಮಂತ್ರ ಹಿಡಿದಿಟ್ಟಿತೇ ಇವುಗಳನ್ನು ಇಷ್ಟು ಹೊತ್ತು?
ಅಥವಾ ಇವೆಲ್ಲ ಆ ಮಂತ್ರದ ಅಕ್ಷರಗಳೇ ಒಂದೊಂದು?

– ('ಅರವತ್ತರ ತೇರು', 'ಮಂತ್ರ' ಪುಟ452)

ಕಾಡಿನ ಒಂದು ಕ್ಷಣದ ಚಿತ್ರಣ ಇಲ್ಲಿ ಅತ್ಯಂತ ಮನಮೋಹಕವಾಗಿದ್ದು, ಸೃಷ್ಟಿಲಯದ ಮುಂದೆ ಸ್ಥಾವರಕ್ಕೆಲ್ಲಿಯ ನಿಡುಗಾಲದ ಧೈರ್ಯ? ಎಂದು ಪ್ರಶ್ನಿಸಿದಂತಿದೆ. ಮಂತ್ರದ ಪಾರಮಾರ್ಥಿಕ ಪರವಶತೆಗೆ ನಮ್ಮನ್ನು ಕೊಂಡೊಯ್ಯುತ್ತದೆ. ಅಸ್ಥಿರ ಅನರ್ಥತೆಯಲ್ಲೇ ಅರ್ಥ ಕಂಡುಕೊಳ್ಳಬೇಕೆಂಬುದು ಈ ಕವಿಯ ಆಶಯ.

ಮೊಗಸಾಲೆಯವರ ಕಾವ್ಯ ಲೌಕಿಕ ಸ್ಪರ್ಶಕ್ಕಿಂತ ಅಲೌಕಿಕ ಸ್ಪರ್ಶವನ್ನೇ ಹೆಚ್ಚೆಚ್ಚು ಬಯಸುತ್ತದೆ. ಹಾಗಾಗಿ ಬುದ್ಧನ ಬಗ್ಗೆ ಬದ್ಧವಾಗಿ ಅವರು ಹೇಳುವುದು ಹೀಗೆ:

'ಹೂವನ್ನು ಮರ ಅರಿತಿದೆ
ಮರವನ್ನೂ ಹೂ ಅರಿತಿದೆ
ನಿಮಗೂ ಇದು ತಿಳಿದಿದೆ
ಆದರೆ ತಿಳಿದಿದೆ ಎಂಬ ಅರಿವಿಲ್ಲ ಅಷ್ಟೆ'

– ( 'ಅರುವತ್ತರ ತೇರು', 'ಇದಲ್ಲ ಇದಲ್ಲ' ಪುಟ 454)

ಬುದ್ಧನೆಂದು ಅಂದುಕೊಂಡ ಮಾತ್ರಕ್ಕೆ, ಬುದ್ಧನಂತೆ ಹೇಳಿದ ಮಾತ್ರಕ್ಕೆ ತಾನು ಬುದ್ಧನೇ ಹೇಗಾದೇನು ಎಂಬ ಮಾನವ ಪ್ರಜ್ಞೆಯಲ್ಲಿ ಆ ಒಂದು ಅವಸ್ಥೆಗಾಗಿ ಹಾತೊರೆಯುತ್ತಿರುವಾಗ, ಅವರು –

" ಕುಳಿತುಕೊಳ್ಳುವೆ ದಿನಾ ಯಾವುದಾದರೊಂದು ಮರದ ಕೆಳಗೆ

ಆಗ ಆಗುತ್ತದೆ ಅದು ಬೋಧಿ ವೃಕ್ಷ
ನಾನಲ್ಲ ಬುದ್ಧನೆಂದು ಹೇಳಬೇಕನಿಸುತ್ತದೆ ಮರುಕ್ಷಣ
ಮರ ಬುದ್ಧನಿಗಿಂತಲೂ ದೊಡ್ಡದಾಗಿ ಕಾಣುತ್ತದೆ ಮನಸ್ಸಿಗೆ'

– ('ಅರುವತ್ತರ ತೇರು', 'ಮರ', ಪುಟ 490)

ಎಂದೆನ್ನುವಲ್ಲಿ ತಾನು ಇಲ್ಲೂ ಅವನಲ್ಲವೆಂದು ಅರಿವು ಮೂಡುವುದರ ಜೊತೆಗೆ, ಬುದ್ಧನೂ ಒಂದು ಹಂತದಲ್ಲಿ ಸಿದ್ಧಾರ್ಥ ಎಂಬ ಪ್ರಜಾರಾಜನಾಗಿದ್ದನೆಂಬುದನ್ನು ಜ್ಞಾಪಿಸಿಕೊಳ್ಳುತ್ತ, ತನ್ನ ಸಾಮಾನ್ಯತೆಯ ಅವಸ್ಥೆಯನ್ನು ಸಮರ್ಥಿಸಿಕೊಳ್ಳುತ್ತಾರೆ. ಹಾಗೆಯೇ ಮಾನವನಿಗಿಂತ ಮರವೇ ಶ್ರೇಷ್ಠವೆಂಬುದನ್ನು ಪ್ರತಿಪಾದಿಸುತ್ತಾರೆ. ಇಲ್ಲಿ ಇನ್ನೂ ಒಂದು ಸತ್ಯ ಅಡಗಿಲ್ಲದಿಲ್ಲ. ಅದು–ಮಾನವಾವಸ್ಥೆಯಿಂದಲೇ ದೇವರು ಎಂಬ ಸತ್ಯ.

ಈ ಸತ್ಯದ ಸ್ಪಷ್ಟ ಅರಿವಿನಲ್ಲಿ ಮೊಗಸಾಲೆಯವರು ತನ್ನ ದೇವರು ಹೇಗಿರಬೇಕೆಂಬುದನ್ನು ನಮ್ಮ ತಿಳಿವಿಗೆ ತರುವುದು ಹೀಗೆ:

ನನ್ನ ದೇವರು ನನಗೆ ಹೇಗೋ
ಹಾಗೇ ನಿಮಗೂ ಒಪ್ಪಿಗೆ
ಇದ್ದರವನಿಗೆ ಕೈಗಳೆರಡು
ನಮ್ಮ ಕಣ್ಣೀರೊರಸಲು

ಮೂಡಲಿ ಅವನಿಗೆ ನಮ್ಮ ಕಿವಿಗಳು
ಕೇಳಲು ಎಲ್ಲವನ್ನು ಕಲಿಯಲು
ಹುಟ್ಟಲಿ ಹೊಟ್ಟೆ ತುಸುವಾದರೂ ಸಣ್ಣದು
ನಮಗಿಂತ ಕಡಿಮೆ ತಿನ್ನಲು

ಸಾಕು ಒಂದೇ ಒಂದು ತಲೆ ಅವನಿಗೆ
ಬೇಡ ಕಂಪ್ಯೂಟರ್ ಮಿದುಳು
ರಾಜಕಾರಣಿಗಳ ಮೀಸೆ ಕಿಸೆ ತೀಟೆ
ಗಳು ಬಾರದಿರಲಿ ಕನಸಿನಲ್ಲೂ

ಗಾಳಿಯಾಗಿ ಬೆರೆಯಲಿ ಎಲ್ಲರೊಂದಿಗೆ ಆತ
ಇದ್ದರೂ ಇಲ್ಲದಿದ್ದರೂ ಅಂಗಿ ಲುಂಗಿ
ಬಯಸದಿರಲಿ ಪೂಜೆ ಕೀರ್ತನೆ ಪ್ರಾರ್ಥನೆ
ನೈವೇದ್ಯ ತೇರು ಅಡ್ಡಪಲ್ಲಕ್ಕಿ

ಬೇಕಾದಾಗ ಬರಲಿ ನಾವಿದ್ದಲ್ಲಿಗೆ

ಕ್ಯಾನ್ಸರು ಏಡ್ಸ್ ಕೊಡದಿರಲಿ
ನಿರೋಧ ಆಗಿ ಸಂಭೋಗದೊಳಗೆ
ಇದ್ದರೂ ಇಲ್ಲದವನಾಗಿರಲಿ

ಅಜ್ಜನಾಗುವುದು ಬೇಡ ಅಥವಾ
ಮೊಮ್ಮಗನಾಗುವುದೂ ಅನಗತ್ಯ
ಚಿರಂಜೀವಿಯಾಗಿ ಬಾಳಲು ಬಾಳೆ
ಆಗಲಿ ಅವನಿಗೆ ಆದರ್ಶ



ಶೂನ್ಯವೂ ಶೂನ್ಯವೂ ಅವನದ್ದಾಗಲಿ
ಯಾರು ಸತ್ತರೂ ಅವನಳಲಿ
ಸತ್ತ ಮೇಲೆ ದಫನವೂ ದಹನವೂ
ಒಂದೇ ಎಂದು ಆತನೊಪ್ಪಲಿ



– ('ಅರುವತ್ತರ ತೇರು', 'ನನ್ನ ದೇವರು' ಪುಟ 296)

ಮೊಗಸಾಲೆಯವರು ಕಲ್ಪಿಸಿಕೊಂಡಿರುವ ನಿಜ ದೇವರ ಸ್ವರೂಪ– ಸ್ವಭಾವ ಲಕ್ಷಣಗಳು, ಅವರು ಬಯಸಿದಂತೆ ತಾರತಮ್ಯವಿಲ್ಲದ, ಸಮಾನತಾ ಭಾವದ, ಮುಖ್ಯವಾಗಿ ಉಗ್ರ ಅಕ್ರಾಳವಲ್ಲದ, ಪಶುಬಲಿಗೆ ಹಪಾಪಿಸದ ಕಾಂತ ನಿರ್ಮೋಹಿ ಪುರುಷೋತ್ತಮನದು. ವಾಸ್ತವದಲ್ಲಿ ಇದಕ್ಕೆ ವ್ಯತಿರಿಕ್ತ ದೇವರುಗಳ ಆರ್ಭಟವಿರುವುದಕ್ಕೆ ರೋಸಿಹೋದ ಅವರು ಸಹಜವಾಗಿಯೇ ತಮ್ಮದೇ ಆದ ದೇವರ ಸೃಷ್ಟಿಕ್ರಿಯೆಯ ಅಭಿವ್ಯಕ್ತಿಗೆ ಬಾಯಿ ಕೊಟ್ಟದ್ದಾರೆ. ಅವರ ಅಪೇಕ್ಷಿತ, ನಿರೀಕ್ಷಿತ ದೇವರು ಅದಾರಿಗೆ ಬೇಡಾದಾನು?

ಮೊಗಸಾಲೆಯವರ ಈ 'ನನ್ನ ದೇವರು' ತೀರಾ ಸರಳ ರಚನೆಯಲ್ಲಿದ್ದರೂ ಚಿಂತನಾರ್ಹವಾಗಿದೆ. 'ಬೇಕಾದಾಗ ಬರಲಿ ನಾವಿದ್ದಲ್ಲಿಗೆ./ಕ್ಯಾನ್ಸರು ಏಡ್ಸ್ ಕೊಡದಿರಲಿ/ ನಿರೋಧ ಆಗಿ ಸಂಭೋಗದೊಳಗೆ/ ಇದ್ದರೂ ಇಲ್ಲದವನಾಗಿರಲಿ' ಎನ್ನುವ ಈ ಸಾಲುಗಳಲ್ಲಿ ' ಸಂಕಟ ಬಂದಾಗ ವೆಂಕಟರಮಣ' ಅನ್ನುತ್ತ, ದೇವಸ್ಥಾನಕ್ಕೆ ಹೋಗುವ ಬದಲು, ಭಕ್ತ ನಿದ್ದಲ್ಲಿಗೇ ದೇವರು ಬರಲೆಂಬ ಹಟ ತಾಳಬೇಕೆಂಬ ಸೂಚನೆ ಇದ್ದು, ಕವಿ ಬಡವ, ಅನಾಥರ ಪರ ವಹಿಸುತ್ತಾನೆ. ಇದೇ ಸಂದರ್ಭದಲ್ಲಿ ಆಶ್ಚರ್ಯವೆಂದರೆ, ದೇವರ ಬಗ್ಗೆಯೇ ಎಚ್ಚರಿಸುತ್ತಾ ಅವನನ್ನೂ ಪರೀಕ್ಷಿಸಬೇಕೆನ್ನುತ್ತಾನೆ! ಅವನು ರೋಗಿಷ್ಟನಾಗಿದ್ದರೆ ಮುಂದೇನು ಗತಿ? ಅನ್ನುತ್ತಾನೆ. ಇಲ್ಲಿ ಸ್ವಲ್ಪ ಬಿಡಿಸಿ ಹೇಳುವ ಅವಶ್ಯಕತೆಯಿದ್ದು, ಕವಿ ನಮ್ಮನ್ನು ಸವದತ್ತಿ, ತಿರುಪತಿ.... ಹೀಗೆ ಎಲ್ಲೆಲ್ಲಿ ಆ ಸ್ಥಾನಗಳು ದೇವರ ಹೆಸರಲ್ಲಿ ರೋಗ ಗ್ರಸ್ತವಾಗಿದೆಯೋ ಅತ್ತ ಕರೆದೊಯ್ದು, ತಪ್ಪಿಯೂ ಕೂಡ ಮೌಢ್ಯಕ್ಕೆ ಒಳಗಾಗಬಾರದೆನ್ನುತ್ತಾನೆ. ಕವಿಗೆ ಅನೀತಿಗಿಂತ ನೀತಿ, ಅಸ್ವಾಸ್ಥ್ಯಕ್ಕಿಂತ ಸ್ವಾಸ್ಥ್ಯ ಮುಖ್ಯವಾಗುವುದರಿಂದ 'ಆರೋಗ್ಯವೇ ಭಾಗ್ಯ' ವೆನ್ನುವ ಸಂದೇಶಕ್ಕೆ 'ನಿರೋಧ ಆಗಿ ಸಂಭೋಗದೊಳಗೆ/ ಇದ್ದರೂ ಇಲ್ಲದವನಾಗಿರಲಿ' ಎಂಬ

ಅಸ್ಪೃಶ್ಯ ಲೈಂಗಿಕ ಕ್ರಿಯಾರೂಪಕವನ್ನು ಬಿಂದಾಸ್ ಕೊಡುತ್ತಾನೆ. ದೇವರ ಸಾನ್ನಿಧ್ಯಕ್ಕೆ ಅಪವಿತ್ರತೆಯ ಸ್ಥಾನಸೂಚಿ ಎಂಬುದಾಗಿ ಇಲ್ಲಿ ಕಂಡರೂ, ಸೂಕ್ಷ್ಮಗ್ರಾಹಿಗೆ ಅದು ತಪ್ಪಾಗಿ ಕಾಣದು.

ಅಲೌಕಿಕತೆಗೇರಿಸುವ ಈ ಕವಿತೆ ಲೌಕಿಕತೆಯ ನಿಜದ ನೆಲೆಯನ್ನೂ ತೋರಿಸುತ್ತ, ಕವಿಯ ವೈಚಾರಿಕತೆಯ ಹರವಿನ ವ್ಯಾಪ್ತಿಗೆ ತಲೆದೂಗಿಸುವಂತಾಗಿಸುತ್ತದೆ.

ಮೊಗಸಾಲೆಯವರು ದೇವರ ಬಗ್ಗೆ ಇಷ್ಟಕ್ಕೇ ಸುಮ್ಮನಿಲ್ಲ. ತಮ್ಮ ಕಲ್ಪಿತ ದೇವರ ಕುರಿತು ವಿವರಿಸುವ ಅವರು ದೇವರನ್ನು ಮತ್ತೂ ಕಾಣುವುದು ಹೀಗೆ:

'ನಿಜವಾದ ದೇವರು ಕಲ್ಲಿನ ಹಾಗೆ.

ನನ್ನ ಮೇಜಿನ ಮೇಲಿನ ಪೇಪರುವೈಟು
ಕಲ್ಲು
ಎಂದರೆ ನಿಜವಾದ ದೇವರು ಯಾವಾಗಲೂ ಅನಾಥ
ನಾದ್ದರಿಂದ ನಾನು ಅವನನ್ನು
ಅವನು ನನ್ನನ್ನು ಪ್ರೀತಿಸುವುದು ಪರಸ್ಪರ:

ಕಲ್ಲು ಕಲ್ಲನ್ನು ಪ್ರೀತಿಸಿದ ಹಾಗೆ
ಅಥವಾ, ನೀವೇ ಹೇಳಿ: ಹೇಗೆ?'

– ('ಅರುವತ್ತರ ತೇರು', 'ನಾನು ದೇವರನ್ನು ಪ್ರೀತಿಸುತ್ತೇನೆ. ಪುಟ 175)

ಅನಾಥವಾದರೂ ದ್ವೇಷಾಸೂಯೆ ಇರದ ಕಲ್ಲಿನಂತೆ, ಅದುವೇ ದೇವರೆಂಬ ವಿಶ್ವಾಸದಲ್ಲಿ ನಾವಿರಬೇಕು. ಅಂದಾಗ ಮಾತ್ರ ಅದು ನಮ್ಮಲ್ಲಿಯ ಅನಾಥತೆಯನ್ನು ಹೋಗಲಾಡಿಸುತ್ತದೆ. ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಇದರರ್ಥ– 'ಮೌನಿಗೆ ಮೌನಿ ಯೋಗ್ಯ ಮಿತ್ರ' ಎಂಬ ಒಳಾರ್ಥ ಈ ಕವಿತೆಯದು.

ನಾನು ಹೇಳಿಕೇಳಿ ನಾಸ್ತಿಕ. ಮೊಗಸಾಲೆಯವರಂತೆ ನಾನು ದೇವರ ಚಿಂತನೆಯಲ್ಲಿ, ನಿರೀಕ್ಷೆಯಲ್ಲಿ ಇದ್ದವನಲ್ಲ. ಆದಾಗ್ಯೂ ನನಗೆ ಮೊಗಸಾಲೆಯವರು ಪ್ರಿಯವಾಗುತ್ತಾರೆ. ಯಾಕೆಂದರೆ ಅವರು ನಾನು ಅಂದುಕೊಂಡಿರುವಂತೆ, ವೇದಾಧ್ಯಯನ, ಶಾಸ್ತ್ರಾಧ್ಯಯನ ಮಾಡಿಕೊಂಡವರಾಗಿದ್ದರೂ, ಅವುಗಳಿಗೇ ಜೋತುಬಿದ್ದವರಲ್ಲ. ಅವರಿಗೆ ಧರ್ಮ ಬೇರೆ, ಅಧ್ಯಾತ್ಮ ಬೇರೆ. ಧರ್ಮ ಶಾಸ್ತ್ರ ವಿದ್ಯೆಯನ್ನು ಸಾರುತ್ತದೆ. ಅಧ್ಯಾತ್ಮ ಅದನ್ನು ಜಿಜ್ಞಾಸೆಗೆ ಒಳಪಡಿಸುತ್ತದೆ. ಧರ್ಮ ನಿಂತ ನೀರು. ಅಧ್ಯಾತ್ಮ ಹರಿಯುವ ನದಿ.

ಮೊಗಸಾಲೆಯವರು ದೇವರು ಧರ್ಮ ಇತ್ಯಾದಿಗಳನ್ನು ವೈಚಾರಿಕ ನೆಲೆಯಲ್ಲಿ ಒರೆಗೆ ಹಚ್ಚುತ್ತ, ಸಕಾಲಿಕ ಕಾಲಪ್ರಜ್ಞೆಯನ್ನು ಮೆರೆಯುತ್ತಾರೆ. ಹಾಗೆಯೇ ಕೋಮು ಗಲಭೆ ತಪ್ಪದ ಈ ದೇಶದಲ್ಲಿ, ಆ ಹಿನ್ನೆಲೆಯ ಕವಿತೆಯೊಂದನ್ನು ಸಾದರಪಡಿಸುವುದು ಹೀಗೆ:

ಮಂದಿರ ಮತ್ತು ಮಸೀದಿಯ ನಡುವೆ
ನೂರಡಿ ರಸ್ತೆ, ಕತ್ತಲ ಬಟ್ಟೆ ಬಿಚ್ಚುವ ಹೊತ್ತು
ಹಸಿದ ಹೊಟ್ಟೆಯ ಮಗುವೊಂದು ಮನೆಗೆ
ಮರಳುತಿತ್ತು, ಬಾನಾಡಿ ಮನಸ್ಸು

ಡುರುಕಿ ಹೊಡೆಯುತ್ತ ರಸ್ತೆಯಾಗಿದ್ದ ಗೂಳಿ
ಗಿದು ತಮಾಷೆ ಕಂಡು
ಕಾಲು ಕೆದರಿ ಧೂಳೆಬ್ಬಿಸಿ ಹಾದು
ಮಗುವನ್ನು ಕೆಡಹಿತು ಕುರುಡು ಕಣ್ಣು
ರಕ್ತಸಿಕ್ತ ಮಗು ಬೇಯಲಿದ್ದ ಅಕ್ಕಿ ಬೇಳೆಕಾಳು
ರಸ್ತೆಯಲ್ಲಿ ಎಲ್ಲ ನಡಿಗೆಗಳೂ ವೇಗ ಹೆಚ್ಚಿಸಿಕೊಂಡವು
ಮಂದಿರ ಮಸೀದಿಗಳ ಪೂಜೆ ಪ್ರಾರ್ಥನೆ
ಒರಸಕುಕ್ಕ ಬಿಕ್ಕುತ್ತಿದ್ದ ರಸ್ತೆಯ ಕೆಂಪು ಕೆನ್ನೆ

ಆ ದಾರಿಯಾಗಿದ್ದ ಭಿಕ್ಷುವೊಬ್ಬ ನೋಡಿ ಆ ಮಗು
ವನ್ನು ಎತ್ತಿದ ಮೂಸಿದ ಎದೆಗವಚಿಕೊಂಡ
ಕಣ್ಣು ಬಿಟ್ಟ ಮಗು ಗೂಳಿಯ ನೆನೆದು ಚೀರಿತು
ತತ್‌ಕ್ಷಣ ಇಡೀ ರಸ್ತೆ "ಹಿಡಿಯಿರಿ ! ಹಿರಿಯಿರಿ" ಎಂದು ಮೇಳೆದ್ದಿತು.

ರಾತ್ರೆ ಲಾಕಪ್ಪಿನಲ್ಲಿ ಭಿಕ್ಷು ಬಿಕ್ಕುತ್ತಿದ್ದ
ಬೆಳಗ್ಗೆ ಬುದ್ಧನಾದ
ಉಣ್ಣದೆ ಮಲಗಿದ್ದ ಮಗು ಮರುದಿನ ಯಾರ್ಯಾರದೋ ಕೈಯಲ್ಲಿ
ಗುಲಾಬಿಯಾಯಿತು
ರಸ್ತೆಯಲ್ಲಿ ಬಿದ್ದ ಮಗುವಿನ ರಕ್ತ

ಮುದುಕನ ಕಣ್ಣೀರು
ಪುಸ್ತಕವ ಸೇರಿತ್ತು!
ಗೂಳಿಯ ಚಿತ್ರ ಎಲ್ಲ ದಿನಪತ್ರಿಕೆಗಳ
ಮುಖಪುಟದಲ್ಲಿ ಅಚ್ಚಾಗಿತ್ತು.

– ( 'ಅರುವತ್ತರ ತೇರು', 'ಮಂದಿರ ಮಸೀದಿ ನಡುವೆ' ಪುಟ 295)

ವೇಷವೇ ಶಾಪವಾಗಿ ಕನಿಕರ ಪಡುವ ಕೈಗಳಿಗೇ ಕೋಳ ತೊಡಿಸಲಾಗುವ ವಿಪರ್ಯಾಸ ಈ ದೇಶದಲ್ಲಿ ಸರ್ವೇಸಾಮಾನ್ಯ ಎಂಬ ಸತ್ಯವನ್ನು ಈ ಕವಿತೆ ಹೃದಯವಿದ್ರಾವಕವಾಗಿ

ಬಿಂಬಿಸುತ್ತದೆ. ಇನ್ನೂ ವಿಚಿತ್ರವೆಂದರೆ, ದರ್ಪಶಾಹಿ ಗೂಳಿಗೇ ಇಲ್ಲಿ ಮಣೆ ಹಾಕುವ ಕೆಟ್ಟ ಸಂಪ್ರದಾಯ ತಪ್ಪುತ್ತಿಲ್ಲವೆಂಬುದರ ಬಗ್ಗೆ ಕವಿಗೆ ಎಲ್ಲಿಲ್ಲದ ವಿಷಾದವಿದೆ.

ಈ ಕವಿತೆಗೆ ಪೂರಕವಾಗಿಯೆ ಇನ್ನೊಂದು ಕವಿತೆಯ ಈ ಸಾಲುಗಳು:

'96ರ ದಶಂಬರ ಆರರ ಸಂಜೆ
ಮೀಸೆ ನೀವುತ್ತಾ ಕನ್ನಡಿಯ ಇದಿರಿದ್ದರೆ
ಬೊಗಸೆಯೊಳಗೆ ತುಂಬಿ ತನ್ನ ಮುಖಕಮಲ
ಬಿಕ್ಕುತ್ತಿದ್ದಾನೆ ಚಂದ್ರ
ಇಡೀ ಆಕಾಶದುದ್ದ.

ಹಿಡಿದ ಕೈ ನಡುಗಿತು
ಬಿದ್ದು ಕನ್ನಡಿ ಒಡೆಯಿತು
ಚೂರುಗಳನ್ನು ಒಂದುಗೂಡಿಸಿದೆ
ಕೈಗಳಾದವು ರಕ್ತಸಿಕ್ತ

ಮರುದಿನ ತಂದ ಹೊಸ ಕನ್ನಡಿ
ಯಾರನ್ನೂ ಪ್ರತಿಬಿಂಬಿಸಲಿಲ್ಲ ತನ್ನಲ್ಲಿ
ಕೇಳಿದರೆ ತಂದ ಅಂಗಡಿಯಲ್ಲಿ
ಮೌನ ಉತ್ತರದ ದಿಲ್ಲಿ!'

–('ಅರುವತ್ತರ ತೇರು', 'ಅಯೋಧ್ಯೆಯ ಚಂದ್ರ', ಪುಟ 298)

ಇದರಲ್ಲಿ ಬಾಬ್ರಿ ಮಸೀದಿ ಧ್ವಂಸ ಪ್ರಕರಣ ಮಿಳಿತಗೊಂಡಿದ್ದು, ಘಟಿಸಿದ ಆ ದಿನದಂದು ಕ್ರೂರ ಕರಾಳತೆಯ ಗರ್ಭಕ್ಕೆ ಚಂದ್ರ ಬಲಿಯಾಗುವ ಅನಿರೀಕ್ಷಿತತೆ ಒದಗಿದ್ದರಿಂದ, ಚಂದ್ರ ಚಂದ್ರನಾಗಿ ಉಳಿಯುವಂತಾಗಲಿಲ್ಲವೆಂಬುದನ್ನು ಕವಿ ಅಭಿವ್ಯಕ್ತಿಸುವುದು ಹೀಗೆ:

"ಬೆಳೆದ ಹಾಗೆ ನಮ್ಮೊಂದಿಗೆ
'ಮನೆಯ ಕನ್ನಡಿ ಚಿಕ್ಕದಾಗುತ್ತದೆ!'
ಎಂದು ಆಕಾಶಕ್ಕೆ ಹಾರಿದ
ಸೂರ್ಯ ಬಿಂಬವನ್ನೇ ನುಂಗಿದ!
ಹೀಗಿದ್ದೂ ಯಾವಾಗಲಾದರೂ ಈತ
ಪ್ರತಿ ಹುಣ್ಣಿಮೆಯ ದಿನ ನಮ್ಮ ಅಂಗಳದ
ಅಮ್ಮನ ಕಣ್ಣುಗಳಲ್ಲಿ ಆಡುತ್ತಿದ್ದ
ನನ್ನನ್ನಪ್ಪಿ ಹಿಡಿಯುತ್ತಿದ್ದ"

– (ಅರುವತ್ತರ ತೇರು', 'ಅಯೋಧ್ಯೆಯ ಚಂದ್ರ, ಪು–298)

ಚಂದ್ರಸಖ್ಯದಿಂದ ವಂಚಿತಗೊಂಡ ಅಯೋಧ್ಯೆಯ ಬಗ್ಗೆಯೂ, ಘೋರಕೃತ್ಯದ ಪರಿಣಾಮದಿಂದ ಸ್ವತಃ ಚಂದ್ರನೇ ಚೂರು ಚೂರಾದ ಬಗ್ಗೆಯೂ, ಕವಿಗೆ ತೀವ್ರ ದುಃಖವಾಗಿದೆ. ಕನ್ನಡಿಯಲ್ಲಿ, ಬೊಗಸೆಯಲ್ಲಿ ಮಗದೊಮ್ಮೆ ಹಿಡಿಯಬಹುದಲ್ಲ ಎಂಬ ವಿಚಾರದಿಂದ ಬೇರೊಂದು ಹೊಸ ಕನ್ನಡಿಯನ್ನು ತಂದರೂ ಕೂಡ, ಚಂದ್ರ ಪ್ರತಿಬಿಂಬಿಸದೇ ಹೋಗಿ, ಉತ್ತರಕ್ಕಾಗಿ ದಿಲ್ಲಿಯತ್ತ ಕಣ್ಣಾದರೆ, ಅದೂ ಮ್ಲಾನಮೌನಿಯಾದಾಗ ಕವಿಯ ಕಸಿವಿಸಿ ಹೇಳತೀರದು.

ಮೊಗಸಾಲೆಯುವರು ಆಂತರಿಕವಾಗಿ ಆಧ್ಯಾತ್ಮಿಕ ದೀಪ್ತಿಯ ಸಂಚಾರವನ್ನು ಪಡೆದವರಾದ್ದರಿಂದ, ವಾಸ್ತವದ ಎಷ್ಟೇ ಭಯಾನಕತೆಗೆ ತೃಪ್ತಗೊಂಡರೂ, ಬದುಕಿನ ಸ್ಥಿತಿಸ್ಥಾಪಕತ್ವದ ಸಹಜತೆಗೆ ಮರಳುತ್ತಾರೆ. ಮತ್ತದೇ ಸೃಜನಸೃಷ್ಟಿಯ ಧ್ಯಾನಸ್ಥ ಸ್ಥಿತಿಯಲ್ಲಿ 'ಕವಿ ಸಮಯದ' ಕುಂಟು ನೆಪವನ್ನು ಮುಂದೊಡ್ಡದೆ, ಕಾವ್ಯ ಕನ್ನಿಕೆಯ ಸೆರಗನ್ನು ಹಿಡಿಯುತ್ತಾರೆ. ಆಗ ಅನುಭವನದ ಚಿಟ್ಟೆಯಾಗಿ ಕವಿತೆ ರೂಪುಪಡೆಯುವುದು ಹೀಗೆ:

'ಕವಿತೆ: ಅನುಭವದ ಚಿಟ್ಟೆ
ತಗೋ ಖಾಲಿ ಹಾಳೆ ಹಿಡಿ ಪೆನ್ನು ಇಲ್ಲವೆ ಪೆನ್ಸಿಲು
ಬರೆ ನಾಲ್ಕು ಸಾಲು
ಅಂದರೆ ಅಲ್ಲ!

ಸಾಸಿವೆ ಗಾತ್ರದ ಬಿಳಿ ಮೊಟ್ಟೆ ಒಡೆದು
ಹುಳುವಾಗಿ ಮನುಷ್ಯ ಬೆರಳಿನಷ್ಟು ಗುಂಡು ಗುಂಡಾಗಿ
ಮುಕ್ಕಿ ಹಿಪ್ಪೇನೇರಳೆ ಎಲೆ
ಮುತ್ತುವ ಇರುವೆಗಳ ಕಕ್ಕುವ ಹಕ್ಕಿಗಳ ಗೆದ್ದು
ಕಟ್ಟಿಗೂಡು ತನಗೆ ತಾನೇ ಸೃಷ್ಟಿಸಿ
ಕೋಶಾವಸ್ಥೆ ಅವಸ್ಥೆ.

ಆಮೇಲೆ ಈ ವ್ಯವಸ್ಥೆಯ ವಿರುದ್ಧ
ನಿಧಾನ ಎದ್ದು ತಾನು ತಿಂದ
ಹಸುರೆಲೆಗಳ ನೂಲಿನಿಂದ ನೆಯ್ದ ಗೂಡು ಹರಿದು
ಹೊರಬರುವಾಗ ಅಹಾ! ಎಂಥ ರೆಕ್ಕೆ
ಸ್ವತಃ ಅದಕ್ಕೆ ಅದೇ ಅಪರಿಚಿತ
ನೆಲಬಾನನೊಂದಾಗಿಸುವ ವಿಮಾನಯಾನ
ಆಮೇಲೆ ಹೂವು ಯಾವುದು ಚಿಟ್ಟೆಯಾವುದು
ಎಂದು ತಿಳಿಯದ ಹಾಗೆ
ಹೂವಿಂದ ಹೂವಿಗೆ ಹೂವೇ ಹಾರುವ ಹಾಗೆ

ಹಾರಿ ಮಕರಂದ ಹೀರಿ
ಮುಟ್ಟಿದವರ ಕೈಯಲ್ಲಿ
ರಂಗೋಲಿ ಚೆಲ್ಲಿ
ಮುಟ್ಟದವರ ಕಣ್ಣಲ್ಲಿ
ಆಕಾಶದಿಂದ ನೆಲ್ಲಕ್ಕೆ ನೆಲದಿಂದ ಆಕಾಶಕ್ಕೆ
ಮೂಡುವ ಕಾಮನ ಬಿಲ್ಲು;

– ('ಅರುವತ್ತರ ತೇರು', 'ಕವಿತೆ ಅನುಭವದ ಚಿಟ್ಟೆ, ಪು. 370)

ನಾವು ನಮ್ಮ ಸಂರಕ್ಷಣೆಗಾಗಿ ನಿರ್ಮಿಸಿಕೊಂಡ ವ್ಯವಸ್ಥೆಯೇ ಮುಂದೊಂದು ಹಂತದಲ್ಲಿ ಕೊರಳಿಗೆ ಉರುವಾಗವಂತಿದ್ದರೆ ಅದನ್ನೊದ್ದು ಹೊರಬಂದು ಪುರುಷತೇಜವನ್ನು ಮೆರೆಯಬೇಕೆಂಬ ಸಂದೇಶ ಈ ಕವಿತೆಯಲ್ಲಿದೆ. 'ಹದ್ದಿನಂತೆ ನೂರು ವರ್ಷ ಬದುಕುವ ಬದಲು ಪಾತರಗಿತ್ತಿಯಂತೆ ಕ್ಷಣಕಾಲ ಬದುಕುವುದೇ ಲೇಸು' ಎಂದು ಜೀವನ ಮರ್ಮವನ್ನು ಚಿಟ್ಟೆಯ ಪ್ರತೀಕದೊಂದಿಗೆ ದಟ್ಟೈಸುತ್ತಾನೆ, ಇಲ್ಲಿಯ ಸೌಂದರ್ಯರಾಧಕ ಕವಿ. ಕಲಾವಂತಿಕೆಯ ಐಸಿರಿಗೆ ಈ ಕವಿತೆ ಸಾಕ್ಷಿ.

ಚಿಟ್ಟೆಯ ಸುತ್ತ ಸುತ್ತಿಸುವ ಕವಿತೆಯಿಂದ ಅಗಲುವ ಈ ಕವಿಗೆ ಯಾಕೋ ಮನಸ್ಸು ವ್ಯಗ್ರಗೊಂಡಾಗ –

'ಊರು ಇದ್ದರೂ ಹತ್ತಿರ, ಮರಗಳಿಲ್ಲದ್ದರಿಂದ ದೂರ
ಹಕ್ಕಿಗೆ ಆಗಲಿಲ್ಲ ನಮ್ಮ ಮನಸ್ಸು ಕಾಡು
ಹೂವು ಮಾವಿಗೆ ಕೂಡಾ ನಾನು ದಿನೇ ದಿನೇ ಪರಕೀಯ
ಮನುಷ್ಯನಾಗಿ ಹುಟ್ಟಿದ್ದು ಈ ನಿಸರ್ಗದ ದೊಡ್ಡ ಕ್ರೌರ್ಯ'

ಎನ್ನುವ ಸ್ವಗತದಲ್ಲಿ, ತಾನು ತನ್ನ ತಪ್ಪಿನಿಂದಾಗಿ ಪ್ರಕೃತಿ ಮಾತೆಯ ಮಡಿಲ ವಂಚಿತನಾದೆನಲ್ಲ, ನಾಡಿಗನೆನ್ನಿಸಿಕೊಳ್ಳುವಲ್ಲಿ ಯಾವ ಅರ್ಥವೂ ಇಲ್ಲವಲ್ಲ ಎಂದು ವ್ಯಥೆ ಪಡುತ್ತಾನೆ. ಕವಿ ಮನದ ಯಾರಿಗೇ ಆಗಲಿ ಈ ವಿವ್ಹಲತೆ ಸಾಮಾನ್ಯವೇನೋ? ಆದರೆ ಈ ಅವಸ್ಥೆಯೇ ಹೊಸ ಹೊಸ ಹುಟ್ಟಿಗೆ ಸ್ಫೂರ್ತವಾಗುವುದೆಂದರೆ ಆಶ್ಚರ್ಯವಲ್ಲವೇ?

ಈ ಕವಿಯ ಕಲ್ಪನೆ ಎಷ್ಟು ಸೊಗಸಾದದ್ದು, ಎಷ್ಟು ಅದ್ಭುತವಾದದ್ದು ಹಾಗೇ ಅದೆಷ್ಟು ಕೌತುಕಮಯವಾದದ್ದು ಎಂಬುದಕ್ಕೆ 'ಹಲ್ಲು ಮತ್ತು ದವಡೆ' ಒಂದು ಉತ್ತಮ ಉದಾಹರಣೆ.

'ಹಲ್ಲಿಗೆ ಕಚ್ಚಲು ಗೊತ್ತು
ಅದು ಮಹಾ ಕ್ರೂರಿ
ಬಿಳಿಯಾದರೂ ಅದರ ಚರಿತ್ರೆ ರಕ್ತರಂಜಿತ
ಹಲ್ಲಿಲ್ಲದಿದ್ದರೆ ಈ ಜಗತ್ತಿನಲ್ಲಿ ಪ್ರಾಣಿವಧೆ
ಖಂಡಿತ ತಪ್ಪುತ್ತಿತ್ತು.

ಹಲ್ಲು ಬಂಡಾಯದ ಸಂಕೇತ

ಹಲ್ಲಿಲ್ಲದಿದ್ದರೆ ಪ್ರತಿಯೊಬ್ಬರೂ ಆಗುತ್ತಿದ್ದರು
ಹೆಬ್ಬಾವು
ಮತ್ತು ಒಬ್ಬರನ್ನೊಬ್ಬರು ನುಂಗುತ್ತಿದ್ದರು ಯಾವಾಗಲೂ
ಅದಕ್ಕೇ ಹಲ್ಲು ಬೇಕೇ ಬೇಕು
ಹೀಗೆ ಹಲ್ಲಿನ ಬಗ್ಗೆ ವಾದ ಪ್ರತಿವಾದ
ಹೂಡಬಹುದು ತಾಕತ್ತಿದ್ದವರು

ಆದರೆ ಹಲ್ಲಿಗೆ ಆಶ್ರಯವಿತ್ತ ದವಡೆಯ ಬಗ್ಗೆ
ಚಕಾರ ಎತ್ತುವುದಿಲ್ಲ ನಮ್ಮಲ್ಲಿ
ಹಲ್ಲು ಹೋದ ಮೇಲೆ ದವಡೆಯನ್ನು
ಯಾರು ಕೇಳುತ್ತಾರೆ? (ಅಥವಾ
ಹಲ್ಲಿನ ಮೇಲಿನ ಸಿಟ್ಟಿಗೆ ಬಾರಿಸುವುದು
ದವಡೆಗೆ!)




ಆದರೂ ಹಲ್ಲು ದವಡೆಯನ್ನು
ದವಡೆ ಹಲ್ಲನ್ನು ಆರೋಪಿಸುವುದು ಬಿಡಿ,
ಒಂದನ್ನೊಂದು ಅಗಲುವಾಗ ಎಷ್ಟು
ದುಃಖಿಸುತ್ತವೆ ಪಾಪ!

– ('ಅರುವತ್ತರ ತೇರು', 'ಹಲ್ಲು ಮತ್ತು ದವಡೆ' ಪು. 178)

ಹಲ್ಲು ಮತ್ತು ದವಡೆ ಎಂಬ ಸಂಕೇತಗಳ ಮೂಲಕ ದಲಿತ ಬಂಡಾಯದ ಪರಿಕಲ್ಪನೆಯನ್ನು ಒಂದು ಮತ್ತೊಂದರ ಮೇಲೆ (ದವಡೆಯ ಮೇಲೆ ಹಲ್ಲು) ಎರಗುವ ಪರಿಯನ್ನು ಈ ಕವಿತೆ ಕಟ್ಟಿಕೊಡುತ್ತದೆ. ಎರಡರಲ್ಲೂ ವಿರಸವೇ ತುಂಬಿದ್ದರೂ ಒಂದನ್ನೊಂದು ಅಗಲುವಾಗ ಅವು ಮಮ್ಮಲ ಪರಿತಪಿಸುವ ಬಗ್ಗೆ ಕವಿಗೆ ಎಲ್ಲಿಲ್ಲದ ವಿಸ್ಮಯ. ಅವುಗಳಿಂದ ಅನ್ಯೋನ್ಯ ಸಾಂಸಾರಿಕ ಪಾಠವನ್ನು ನಾವು ಕಲಿತುಕೊಳ್ಳಬೇಕಿದೆ ಎಂಬ ಆಶಯವನ್ನು ಕವಿತೆ ಇಲ್ಲಿ ಹೊತ್ತಿದೆ.

ಈ ಅರಿವನ್ನು ತನಗೂ ಅನ್ವಯಿಸಿಕೊಳ್ಳುತ್ತ ಮನೆಯೊಳಗಿನ ತನ್ನ ಪುರುಷ ಪ್ರಾಧಾನ್ಯತೆಯ ಬಗ್ಗೆಯೂ ಕವಿ ಅಸಮಾಧಾನ ಪಡುವುದು ಹೀಗೆ:

ಕೊಡಲೇ ಇಲ್ಲವಲ್ಲ – ನಾನವಳ ಕೈಗೆ
ಒಮ್ಮೆಯಾದರೂ ಅವಳ ಕನಸುಗಳ?
ಆದರೂ ಕನವರಿಸಲಿಲ್ಲವಲ್ಲ ಆಕೆ ಒಮ್ಮೆಯೂ
ನನ್ನ ಮೀರಿದ ತನ್ನ ಒಳ ಜಗಳ ಸ್ವಗತಗಳ?

– ( 'ಅರುವತ್ತರ ತೇರು', 'ಪ್ರೇಮ ಗೀತೆ', 232)

ಮೊಗಸಾಲೆಯವರು ಕಣ್ಣ ಕ್ಷಿತಿಜಕ್ಕೆ ದಕ್ಕುವ ವಸ್ತುಗಳನ್ನಷ್ಟೇ ತಮ್ಮ ಕಾವ್ಯಾಭಿವ್ಯಕ್ತಿಗೆ ಒಳಪಡಿಸಿದೆ. ಕಾಣದ, ಆದರೆ ಸಮಾನ ಮನೋಧರ್ಮದ, ಅದರಲ್ಲೂ ಕಡಲಾಚೆಯ

ಬಂಡಾಯ ಚೈತನ್ಯಸ್ವರೂಪಿಯೊಬ್ಬ ಸೆರೆಯಾಳು ನೆಲ್ಸನ್ ಮಂಡೇಲಾನ ಬಿಡುಗಡೆಗಾಗಿ, ತನ್ನ ಕೊರಳನ್ನೇ ನೇಣುಗಂಬಕ್ಕೆ ಕೊಟ್ಟದ್ದನ್ನು ಸ್ಮರಿಸಿಕೊಳ್ಳುವತ್ತ ಸ್ಪಂದಿಸುವುದು ಹೀಗೆ:

ಆದರೂ ವಿಧವೆಯ ಎದೆಯ ಸ್ವಗತಗಳಂಥ ಕವಿತೆಗಳ
ಇವೆಲ್ಲವನು ಮೀರಿ ಇದಿರಾಗುವುದಲ್ಲವೆ ಪ್ರತಿ ರಾತ್ರಿ
ನಿನ್ನಂತೆ ಬೆಂಜಮಿನ್! ಕ್ರಾಂತಿಗಳೆಲ್ಲ ಕವಿತೆಗಳಾಗಿ
ಹೊನ್ನ ಶಿಲುಬೆಯ ಮೇಲೆ – ನಾ ನೋಡಲಾರೆ!
ನನ್ನೆದೆಯ ಮುಂಜಾನೆ ಸೂರ್ಯ ಕಿರಣಗಳನ್ನೆ
ನಿನ್ನ ಗೋರಿಗೆ ಬಣ್ಣ ಕೊಡಲಾನು ಬರಲೆ?

– ('ಅರುವತ್ತರ ತೇರು', 'ಬೆಂಜಮಿನ್ ಮೊಲಾಯಿಸ್' 226)

ಕವಿಗೆ ವಸ್ತುವಿನ ಯಾವ ಗಡಿ ಮಿತಿಗಳು ಇರುವುದಿಲ್ಲವೆಂಬುದನ್ನು ಸಾರಲು ಈ ಇಂಥ ಮಾನವೀಯ ತುಡಿತ ಸಾಕು.

ಮೊಗಸಾಲೆಯವರು ಕಾವ್ಯದ ಬಗ್ಗೆಯೇ ಬರೆಯಲಿ, ನಿಸರ್ಗದ ಬಗ್ಗೆಯೇ ಬರೆಯಲಿ, ವಾಸ್ತವದ ಬಗ್ಗೆಯೇ ಬರೆಯಲಿ, ಎಲ್ಲೂ ಧ್ಯಾನಸ್ಥ ಸ್ಥಿತಿಯ ಅವಗಣನೆಯಾಗುವುದಿಲ್ಲ. ಇದಕ್ಕೆ ದೃಷ್ಟಾಂತವಾಗಿ ಅವರ ಮೊದಲ ಸಂಗ್ರಹ 'ವರ್ತಮಾನದ ಮುಖಗಳು' (1974) ಎಂಬಲ್ಲಿಯ ಮೊದಲ ಕವಿತೆಯಾದ 'ಅನ್ವೇಷಣೆ'ಯನ್ನು ನೋಡಬಹುದು.

'ನಾನು ಬರೆಯಲು ಪ್ರಾರಭಿಸಿದಾಗಿನ ನನ್ನ ಪದ್ಯಗಳು:
ಕರಾವಳಿ ಕಡಲ ಪಕ್ಕದಲ್ಲಿ ಉದ್ದಕ್ಕೂ ಮಲಗಿದ ಹಾಗೆ
ಬಿಚ್ಚಿಕೊಳ್ಳಬೇಕು ತನ್ನಿಂತಾನೆ ತನ್ನ
ಸ್ವರೂಪಕ್ಕೆ ಮಾತ್ರ ಸೀಮೆ ಪಶ್ಚಿಮ ಘಟ್ಟ ಹಾಗೂ ಕಡಲು
ಎದುರು ಬದುರು ಇದಿರು
ಇರಬಾರದೆಂಬ ಸಿದ್ಧಾಂತ ಬದ್ಧ ವ್ಯಾಕರಣ
ದಲ್ಲಿ ಬಯಲು ಸೀಮೆಯ ಜನ
ಕರಾವಳಿ ನೋಡದೆ ಮಾಡಿದ ವರ್ಣನೆಯಂತೆ'

ಕವಿತೆಗಳು ತಮ್ಮಷ್ಟಕ್ಕೆ ತಾವೇ ಬಿಚ್ಚಿಕೊಳ್ಳಬೇಕೇ ಹೊರತು ಪ್ರಯಾಸಪೂರ್ವಕ ವಾಗಿರಬಾರದೆಂಬ ಉದ್ದೇಶ ಕವಿಯದು. ಮುಂದೆ ಇದೇ ಕವಿತೆಯಲ್ಲಿ ಲೈಂಗಿಕ ಪ್ರತಿಮೆಗಳ ಮೂಲಕ ಸೃಷ್ಟಿಕ್ರಿಯೆಯು ಕಾವ್ಯದಲ್ಲಿ ಹೇಗೋ ಹಾಗೆಯೇ ಪುನರುತ್ಪತ್ತಿಯಲ್ಲಿ ಸಹ ನಿಜ ಎಂಬುದನ್ನು ಗಟ್ಟಿಯಾಗಿಸುತ್ತ, ಕವಿ ನಂತರ ಹೇಳುವ ಈ ಸಾಲುಗಳು ಗಮನಾರ್ಹ:

'ಭಾಷೆ ವ್ಯಾಕರಣಗಳ ಕತ್ತು ಹಿಚುಕಿಯಾದರೂ ಸ್ವಂತ
ದ್ದನ್ನು ಹೇಳುವ ಛಲಕ್ಕೆ
ಬದ್ಧನಾದರೂ ಪ್ರಬುದ್ಧನಲ್ಲ ಇದು ನನ್ನದಲ್ಲ
ಯಾಯಾತಿಯ ವೀರ್ಯವೇ ಎಂಬ ಅತೃಪ್ತಿಯ

ಅಕ್ಷರಗಳಲ್ಲಿ ತಲ್ಲೀನ'

ಕವಿಯ ಮೊದಲ ಹೆಜ್ಜೆಯ ಈ ಮಾತುಗಳು ನಿಜಕ್ಕೂ ಮನನೀಯವಾದವುಗಳು. ಮಾತ್ರಾಗಣವಿಲ್ಲದ ಮುಕ್ತಛಂದದ ಚಾಲ್ತೀ ಸಂದರ್ಭದಲ್ಲಿ 'ಭಾಷೆ ವ್ಯಾಕರಣಗಳ ಕತ್ತು ಹಿಚುಕಿಯಾದರೂ' ಸ್ವಂತದ್ದನ್ನು ರಚಿಸಬೇಕೆಂಬ ಛಲ ಕವಿಗಿದೆ. ಹಾಗೆಯೇ ಈ ಛಲಕ್ಕೆ ಕಟ್ಟು ಬಿದ್ದಾಗ 'ಪ್ರಬುದ್ಧತೆ' ಇಲ್ಲವಾದರೆ ಕಾವ್ಯವಾಗಲಾರದು ಎಂಬ ಎಚ್ಚರವೂ ಇದೆ. ಹಾಗಾಗಿಯೇ 'ಯಯಾತಿಯ ವೀರ್ಯ' ಎಂಬ ಪ್ರತೀಕ ಎರವಲದ್ದಾಗಿ ನಿಷ್ಪ್ರಯೋಜಕವೆನಿಸಿದೆ. ಬರೆಯುವ ಕ್ರಿಯೆಯ ಬಗ್ಗೆಯೇ ಇಷ್ಟೊಂದು ಗಂಭೀರ ಯೋಚಿಸುವ ಮೊಗಸಾಲೆಯವರು ಮುಂದುವರಿಯುತ್ತ,

'ಬರೆಯುವುದೆಂದರೆ ಅಂಜಿಕೆ
ಬರೆಯದಿದ್ದರೆ ಕಾದ ಮಣ್ಣಿನಲ್ಲಿ ಬಿದ್ದ ಬೀಜದ ವೇದನೆ'

ಎಂದು ಹೇಳುವಲ್ಲಿ ತಮ್ಮ ಮನದ ತಾಕಲಾಟವನ್ನು ತೋರ್ಪಡಿಸಿದ್ದಾರೆ. ಹಾಗೆಯೇ ಕೊನೆಯಲ್ಲಿ

'...... ನಾನು ಯಾರ ಹಾಗೂ ಆಗದ
ಅನ್ವೇಷಣ ವಾಕ್ಯ'

ಎಂದು ಕವಿತೆಯನ್ನು ಮುಗಿಸುತ್ತಾರೆ.

ಅನ್ವೇಷಣ ವಾಕ್ಯಕ್ಕೆ ಪೂರ್ಣವಿರಾಮ ಹೇಗೆ ಸಿಕ್ಕೀತು? ಅದು 'ಅಸಂಗತ'ದಲ್ಲಿ ಸುಸಂಗತವಾಗುವ ಮೂಲಕ, ಹೊಂಗೆಯಲ್ಲಿ ಕತ್ತಲು ಬೆಳಕಾಗುವ ಮೂಲಕ, 'ವಾಲ್ಮೀಕಿ'ಯಲ್ಲಿ ಬೇಡ ಕವಿಯಾಗುವ ಮೂಲಕ ಹೀಗೆ ಹೀಗೇ ಕವಿಯ ಅರಸುವಿಕೆಯ ಪಯಣ ನಿರಂತರವಾದದ್ದು. ಎಲ್ಲಿ ಕಂದಮಯವಾಗುತ್ತದೆ, ಎಲ್ಲಿ ರಗಳೆಮಯವಾಗುತ್ತದೆ, ಎಲ್ಲಿ ಸುನೀತಮಯವಾಗುತ್ತದೆ, ಅದಕ್ಕೆ ಸಂಪ್ರದಾಯದ ನಿಯತಗತಿಯ ಹಂಗಿಲ್ಲ. ವೇದೋಪನಿಷತ್ತುಗಳ ಸಂಸ್ಕೃತದ ಭಾರವಿಲ್ಲ. ಆದರ್ಶವಾದದಿಂದ ಮಣ್ಣಿನ ವಾಸನೆಗೆ, ಮಣ್ಣಿನ ವಾಸನೆಯಿಂದ ವೈಚಾರಿಕತೆಯ ದೀಪ್ತ ಮಜಲನ್ನು ಕಂಡುಕೊಳ್ಳುತ್ತದೆ. ಇಷ್ಟಾಗಿಯೂ ಎಲ್ಲೂ ತಂತ್ರವ್ಯಾಧಿಯಲ್ಲಿ ಗಂಗಾಜಲಮಂತ್ರಕ್ಕೆ ವೃದ್ಧನಾಗುವುದಿಲ್ಲ.

ಮೊಗಸಾಲೆಯವ ಕಾವ್ಯನದಿ ಹರಿಯುತ್ತಲೇ ಇದೆ. ಅದನ್ನು ಯಾರೋ ಗಾಂಧೀಜಿಯ ಹಾಗೆ ಎಂದಿರಬಹುದು. ಮತ್ಯಾರೋ ಗುಲಾಬಿಯ ಹಾಗೆ ಎಂದಿರಬಹುದು. ಆದರೆ ಸ್ವತಃ ಕವಿ ತನ್ನ ಕವಿತೆಯನ್ನು ಯಾವುದಕ್ಕೂ ಹೋಲಿಸಲು ಇಷ್ಟಪಡುವುದಿಲ್ಲ. ಈ ಕಾರಣಕ್ಕೇ ಆತ ಹೇಳುವುದು ಹೀಗೆ:

'ನನ್ನ ಕವಿತೆಗೆ ಹೀಗೇ ಎಂದು ಯಾವುದಕ್ಕೂ ಹೋಲಿಸಲು
ಅಸಮರ್ಥ ಯಾಕೆಂದರೆ
ನಾನೀಗ ಒಂದು ನಾಟಕ ಕಂಪನಿಯ ಅತಿಥಿ ನಟ
ನಾದ್ದರಿಂದ ದಿನಾ ಸಂಜೆ ಅದರ ರಿಹರ್ಸಲ್ ನಡೆಯುತ್ತಲೇ ಇದೆ

ಯಾವಾಗ ರಂಗ ಪ್ರಯೋಗ ಅನ್ನಬಹುದು ನೀವು
ಇನ್ನೂ ದಿನ ನಿಶ್ಚಯವಾಗಿಲ್ಲ ಅನ್ನುತ್ತಾ ಬಂದಿದ್ದಾರೆ
ವ್ಯವಸ್ಥಾಪಕರು'

– ('ಅರುವತ್ತರ ತೇರು', 'ನನ್ನ ಕವಿತೆಗಳು', 107)

ಮೊಗಸಾಲೆಯವರ ಕಾವ್ಯ ತುರ್ತು ಪರಿಸ್ಥಿತಿಯಲ್ಲಿ ಗುರುತು ಸಿಗದ ಹಾಗೆ ಎಲ್ಲೋ ಗವಿಯಲ್ಲಿ ಅವಿತು ಕೂಡಲಿಲ್ಲ. ಅಭಿವ್ಯಕ್ತಿ ಸ್ವಾತಂತ್ರ್ಯವನ್ನುಳಿಸಿಕೊಂಡ ಅವರು 'ಮೂಗು', 'ಒಂದು ಜಾಹೀರಾತು: ಕಳೆದುಹೋಗಿದೆ ಬಾಯಿ' ಎಂಬಂಥ ಕವಿತೆಗಳನ್ನು ಬರೆದು ಬಿಟ್ಟರು.

ಮೊಗಸಾಲೆಯವರಿಗೆ ಯಾವ ನಿಟ್ಟಿನಲ್ಲೂ ವಸ್ತುವೇ ಆಗಲೀ, ವಿದ್ಯಮಾನವೇ ಆಗಲೀ ಅದನ್ನು ಕಾವ್ಯವಾಗಿಸುವ ಕೌಶಲ್ಯ ಕರಗತವಾಗಿದೆ. ಅವರ ಕಾವ್ಯ ಕೆಲವೆಡೆ ತೀರಾ ಗದ್ಯಮಯವಾಗಿ ವಾಚಾಳಿತನಕ್ಕೆ ಇಳಿದರೂ ಒಟ್ಟಾರೆ ಪರಿಣಾಮದಲ್ಲಿ ಗದ್ಯಗಂಧಿತ್ವವನ್ನು ಸೂಸುತ್ತದೆ.

ಮೊಗಸಾಲೆಯವರು, ಬದುಕೇ ಕೊಡುವ ಅರ್ಥಗಳನ್ನು ಸಂಯಮಶೀಲತೆಯಲ್ಲಿ ಸ್ವೀಕರಿಸುತ್ತ, ಅಷ್ಟೇ ಸಂಯಮಶೀಲತೆಯಲ್ಲಿ ಬುದ್ಧಿ ಭಾವಗಳಿಗೆ ಕಲ್ಪನೆಯ ಹೊಂಗಿರಣ ಸ್ಪರ್ಶ ಕೊಡುತ್ತ, ಕಾವ್ಯಕನ್ನಿಕೆಗೆ ಮೂರ್ತರೂಪ ದಯಪಾಲಿಸುತ್ತಾರೆ. ಆಕೆ ಎಲ್ಲಿ ಭಾರತೀಯ ನಾರಿಯಾದರೆ ಇನ್ನೆಲ್ಲಿ ಕಣ್ಣು ಕೋರೈಸುವ ಇಂದಿನ ರೂಪದರ್ಶಿಯಾಗುತ್ತಾಳೆ.

ಮೊಗಸಾಲೆಯವರ ಧ್ಯಾನಸ್ಥ ಕಾವ್ಯದಲ್ಲಿ ಪ್ರಯೋಗಾತ್ಮಕತೆ ಇದ್ದರೂ ಅದು ಹೆಚ್ಚಾಗಿ ಹರಿಹರನ ರಗಳೆಯ ಪರಿಧಿಯಲ್ಲೇ ಓಡಾಡುತ್ತದೆ. ಮೂಲತಃ ರಮ್ಯ ಪ್ರಭಾವದ ನವ್ಯ ಕವಿಯಾಗಿರುವುದರಿಂದ ಮಣ್ಣಿನ ವಾಸನೆಗೆ ಒತ್ತುಕೊಡುತ್ತ, ದಟ್ಟ ರಾಜಕೀಯ ಪ್ರಜ್ಞೆಯಿಂದ ದೂರ ಸರಿಯುತ್ತದೆ. ಜನಪರ ನಿಲುವಿನ ಜನಕಾವ್ಯವೆನ್ನುವಂತಿದ್ದರೂ ಪ್ರಸ್ತುತ ಸಮಾಜಮುಖಿ ಕಾವ್ಯವಿದಲ್ಲ. ಆದಾಗ್ಯೂ ಒಂದು ಗುಣಾತ್ಮಕ ಅಂಶವೆಂದರೆ ಮೊಗಸಾಲೆಯವರು ಅಡಿಗೋತ್ತರ ಕವಿಯಾಗಿದ್ದರೂ 'ಮಡಿ'ಯೋತ್ತರ ಕವಿಯಾಗಿಲ್ಲವಲ್ಲ ಎನ್ನುವ ಬಗ್ಗೆ ನನಗೆ ಹೆಮ್ಮೆ.

ಜಾಗತೀಕರಣದ ಪಟ್ಟಿಗೆ ಮೊಗಸಾಲೆಯವರೂ ಒಳಗಾಗಿದ್ದಾರೆ. ಹಾಗಾಗಿಯೇ ಅವರು ತೀರಾ ಸ್ವಾಭಾವಿಕವಾಗಿ ತಮ್ಮ ಮೊಗಸಾಲೆಯನ್ನು ನೆನೆಯುತ್ತಾ ನಗರವನ್ನು ಧಿಕ್ಕರಿಸುತ್ತ,

'..... ಇಲ್ಲಿ ಕುದಿಯುವ ರಸ್ತೆಯಲ್ಲಿ ನನ್ನ
ಹೆಜ್ಜೆ ಮೂಡುವುದಿಲ್ಲ: ಅಲ್ಲಾದರೆ ಕಾಲಿಟ್ಟಲೆಲ್ಲ ನನ್ನ ಪುಟ್ಟ ಹೆಜ್ಜೆಯ
ಒಳ್ಳೆ
ಎಷ್ಟೊಂದು ಸ್ಪಷ್ಟವಾಗಿ ಕಾಣುತ್ತಿದ್ದವು.
(ಇನ್ನೊಬ್ಬರು ಆ ಸ್ಥಳವನ್ನು ಮೆಟ್ಟುವ ತನಕ)

ಎನ್ನುವ ಮತ್ತು

'...... ಸಾಮಾಜಿಕ ಸಂದರ್ಭದಲ್ಲಿ ಕ್ರಾಂತಿಯ ಮಾತನ್ನಾಡುವಾಗ
ನನ್ನೂರು ನನಗೆ
ಸವಾಲು ಮತ್ತು ಪ್ರತಿಸವಾಲು ಹಾಕುತ್ತಿದ್ದರೆ, ಅದಕ್ಕೆ

ನಾನಲ್ಲಿ ಹುಟ್ಟಿದ್ದು ತಪ್ಪೇ?'

– ('ಅರುವತ್ತರ ತೇರು', 'ಮೊಗಸಾಲೆಯ ನೆನಪುಗಳು, 147)

ಎಂದು ಪ್ರಶ್ನಿಸುವ ಮೂಲಕ, ಗ್ರಾಮ ಸೆಳೆತದ ಮರ್ಮವನ್ನು ತೆರೆದಿಡುತ್ತಾರೆ.

ಮೊಗಸಾಲೆಯವರ ಸಾಲಿಗೆ ನೆನಪು ಭೂತವಲ್ಲ, ವರ್ತಮಾನ. ಅವರು ನೆನಪೆಂಬ ಭೂತವನ್ನು ವರ್ತಮಾನದಲ್ಲಿಟ್ಟು ಪರೀಕ್ಷಿಸುತ್ತಲೇ, ಅದಕ್ಕೆ ಭವಿಷ್ಯದ ದರ್ಶನ ಮಾಡಬಯಸುತ್ತಾರೆ. ನಿಜವಾದ ಕವಿಯ ಕರ್ಮವಿದು.

ಮೊಗಸಾಲೆಯವರ ಪ್ರಥಮ ಸಂಗ್ರಹದ ಹೆಸರೇ 'ವರ್ತಮಾನದ ಮುಖಗಳು'. ಪ್ರಾರಂಭದ ಮೊದಲ ಹೆಜ್ಜೆಯಲ್ಲೇ ಈ ತೆರನಾದ ಅರಿವು, ಪ್ರಜ್ಞೆಯೆಂದರೆ, ಯಾರು ಶಭಾಷ್ ಅನ್ನದೇ ಇದ್ದಾರು?

ಅಂತೂ ಮೊಗಸಾಲೆಯವರು 'ಅರುವತ್ತರ ತೇರು' ಹತ್ತಿ ಆಗಿದೆ. ಯಾರ್‍ಯಾರೋ ಅಭಿನಂದಿಸುತ್ತಿರುವಾಗ ನಾನು ಸುಮ್ಮನೆ ಇರುವುದೇ? ಅದರಲ್ಲೂ ಪಡಸಾಲೆಯೇ ನಾನಾಗಿರುವಾಗ ಮೊಗಸಾಲೆ ಸೆಟಗೊಳ್ಳದೆ ಇದ್ದೀತೆ?

ಭಾರತೀಯ ಸಂಸ್ಕೃತಿಯ ಔನ್ನತ್ಯವನ್ನು ಬಿಂಬಿಸುವ ಅರುವತ್ತರ ತೇರಿಗಿದೋ ನನ್ನ ನಮನ.

o

# ಅಂತಃಪುರ ಮತ್ತು ಮೊಗಸಾಲೆ

ಡಾ॥ಶ್ರೀಧರ ಬಳಗಾರ

"ಈ ಪ್ರಪಂಚವನ್ನು ಕಾಣುವ ರೀತಿಗೆ ಕಾವ್ಯ ಮುಖ್ಯವೆನಿಸುವಂತೆ ಬರೆಯುತ್ತಿದ್ದೀರಿ" ಎಂದು ಮೊಗಸಾಲೆಯವರ 'ಇದಲ್ಲ ಇದಲ್ಲ' ಕವನ ಸಂಕಲನಕ್ಕೆ ಡಾ.ಯು.ಆರ್.ಅನಂತಮೂರ್ತಿಯವರು ಪ್ರತಿಕ್ರಿಯಿಸಿದ್ದಾರೆ. ನೋಡುವವನಿಗೆ ಪ್ರಪಂಚ ಕೇವಲ ದೃಶ್ಯಾವಳಿಯಾಗಿ ಪ್ರಕಟವಾಗುತ್ತದೆ;ಕಾಣುವವನಿಗೆ ಅದೊಂದು ಸತ್ಯದರ್ಶನದ ಅನುಭವವಾಗಿ ಗೋಚರಿಸುತ್ತದೆ. ಇಂಥದ್ದೊಂದು ದರ್ಶನವಾಗಿ ಜಗತ್ತನ್ನು ಅರಿಯುವುದು ಕಾವ್ಯದ ಮೂಲಕ ಸಾಧ್ಯವೆಂದು ಶ್ರದ್ಧೆಯಿಂದ ಬರೆಯುತ್ತಿರುವವರು ಮೊಗಸಾಲೆಯವರು. ಜೀವನದ ಅವಸ್ಥೆಗಳು ಬದಲಾದಂತೆಯೇ ಜಗತ್ತನ್ನು ಕಾಣುವ, ಅಲ್ಲಿ ಆಯುವ ಚಿತ್ರಗಳೂ ಭಿನ್ನವಾಗುತ್ತ ಹೋಗುತ್ತವೆ. ಬಾಲ್ಯ,ಯೌವನದ ಕಾಲಘಟ್ಟಗಳಲ್ಲಿ ಜೀವನವನ್ನು ಗ್ರಹಿಸುವ ರೀತಿಗೂ ಇಂಥ ಅನುರಕ್ತ ಜೀವನದ ಅನುಭವವನ್ನು ಮಾಗಿದ ಕಾಲಘಟ್ಟದಲ್ಲಿ ದೂರದಲ್ಲಿ ತಟಸ್ಥ ನಿಂತು ಧ್ಯಾನಿಸುವುದಕ್ಕೂ ಗುಣಾತ್ಮಕ ವ್ಯತ್ಯಾಸವಿದೆ. 'ಇದಲ್ಲ ಇದಲ್ಲ'- ಕವಿಯ ಜೀವನದ ಉತ್ತರಾರ್ಧದ ಒಲವು ನಿಲುವುಗಳನ್ನು ದಾಖಲಿಸುವ ಸಂಕಲನ. ನೆನಪು ಹಳಹಳಿಕೆಯಾಗದೆ, ಪಾರಮಾರ್ಥಿಕ ಚಿಂತನೆ ನಿರ್ಭಾವುಕವೂ ಅಮೂರ್ತವೂ ಆಗದಂತೆ ಪ್ರತಿಕ್ಷಣದ ಹೊಸತನವನ್ನು ನಿರಾಕರಿಸದೆ ಪ್ರಸನ್ನತೆಯಿಂದ ಬರೆಯುವುದು ಇವರ ಕಾವ್ಯಗುಣವಾಗಿದೆ.

ಈ ಪ್ರಸನ್ನತೆಗೆ ಸಾಂಪ್ರದಾಯಿಕವಾದ, ಧಾರ್ಮಿಕ ಗಂಧವಿಲ್ಲ; ಇಳಿಜಿಸಿಲ ಉದ್ದುದ್ದ ನೆರಳಿನ ಮುಸ್ಸಂಜೆಯ ದಣಿವೂ ಇಲ್ಲ; ಪದಾರ್ಥ ಪ್ರಪಂಚದ ಪ್ರೀತಿ ಮೋಹವಾಗದೆ ಪರಾರ್ಥ ಜಿಜ್ಞಾಸೆ, ಒಣ ಪಾಂಡಿತ್ಯ ಪ್ರದರ್ಶನವಾಗದೆ ಸಂಸಾರವನ್ನು ಸಾರ್ಥಕ ಸಂತೃಪ್ತಿಯಿಂದ ಸಾಗಿಸಿದ ಧನ್ಯತೆ ಇಲ್ಲಿದೆ. ಅನುದಿನದ ಸಂಜೆ ಬಾಡಿ ಬೀಳುವ ಹೂವಿನಂತಾಗಬಾರದು ಜೀವನ ಎಂಬ ತುಡಿತ ಕವಿಯದು. 'ತೀರ್ಥಮಂಟಪದ ಬಾಗಿಲ ಬಳಿಯ ಗಿಳಿ ಅಪ್ರತಿಮ ಕೆತ್ತನೆಯಿಂದ ಜೀವಪಡೆಯುವ ಹಾಗೆ ಕಾವ್ಯ ಮುಕ್ತವಾದದ್ದು. ಅದು ಸುಂದರ ದೇವಾಲಯದಿಂದ ದೇವರನ್ನು ಹುಡುಕುತ್ತ, ಹಾರಿಹೋಗುವ ಜೀವನ್ಮುಕ್ತ ಪಕ್ಷಿಯ ಹಾಗೆ ಹುದುಗಿದ್ದ ಬಾನಾಡಿ ಗುಡಿಯ ಒಳಗಿನ ಸರಪಳಿಗೆ ಬಂಧಿಯಾಗುವಂಥಾದ್ದಲ್ಲ.

ಕೇವಲ ಪದಾರ್ಥ ಪ್ರಪಂಚದ ಬಣ್ಣ, ಗಂಧ, ಬೆಳಕನ್ನು ತೊಟ್ಟುಕೊಳ್ಳುವ ಕಾವ್ಯ

ಉತ್ಸವ ಮೂರ್ತಿಯಾಗಿಬಿಡಬಹುದು. ಪರಾರ್ಥಕ್ಕೆ ಕೈ ಚಾಚುವ ಕಾವ್ಯ ಕತ್ತಲಲ್ಲಿ ಕರಗುವ ಮೂಲವಿಗ್ರಹವಾಗಿಬಿಡಬಹುದು. ಇವೆರಡನ್ನು ಮೇಳೈಸಿಕೊಂಡ ಮನಸ್ಸು ಮಾತ್ರ 'ಹೂವಿನ ಮುಖದಲ್ಲಿರುವ ಚಿಟ್ಟೆಯ ಹೆಜ್ಜೆಯನ್ನೊರಸುವ ಗಾಳಿಯನ್ನು ಧರ್ಮರಾಯನಂತೆ ತನ್ನ ಜತೆಗೆ ನೆಲವನ್ನು ಕರೆದೊಯ್ಯುವ ಭಾವವನ್ನು ಕಾಣಲು ಸಾಧ್ಯ. ಮನಸು ಮರವಾಗಿ ಅದು ಕೊಡಬೇಕು ನೆರಳ ಬಲಿಚಕ್ರವರ್ತಿಯ ಹಾಗೆ. ನೆಲವನ್ನು ಆಳಿದರೂ ಅದಕ್ಕೆ ಅಂಟಿಕೊಳ್ಳದ ಧನ್ಯತೆ ಇದು. ಹೂಗಳನ್ನು ಹೆತ್ತರೂ ಇವು ತನ್ನವಲ್ಲ ಹೊರಗಿನವು ಎಂದು ತಿಳಿದ ಮರದ ವಿವೇಕ ಸತ್ಯವೋ, ಮರ ಮತ್ತು ಹೂವು ಬೇರೆ ಬೇರೆ ಅಲ್ಲವೆಂದು ಅರಿತ ಬುದ್ಧನ ಜ್ಞಾನ ಸತ್ಯವೋ ಎಂಬುದು ಕವಿಗೆ ಮುಖ್ಯವಾಗುವುದಿಲ್ಲ. ಇವೆರಡನ್ನೂ ಒಟ್ಟಿಗಿಟ್ಟು ನೋಡುವ, ಆ ಮೂಲಕ ಪ್ರತಿಕ್ಷಣಕ್ಕೂ ಹೊಸತನ್ನು ಸಾಕ್ಷಾತ್ಕರಿಸಿಕೊಳ್ಳುವ ಕವಿಯ ಯತ್ನ ಸವಾಲಿನದು.

ಬೆಳ್ಳಕ್ಕಿಗಳ ಬಗ್ಗೆ ಮಾತಾಡುತ್ತ, ಪ್ರೀತಿಸಿ ಮದುವೆಯಾದ ದಂಪತಿಗಳು ತಮ್ಮ ಮನೆಯೊಳಗೆ ಹೊಲದ ಬೆಳದಿಂಗಳನ್ನು ತಂದು ಹಾಕಿದ್ದಾರೆ. ಕನಸಿನ ತೇರಿನಲ್ಲಿ ಅವರು ಅರ್ಧನಾರೀಶ್ವರರು. ಆಕಾಶಕ್ಕೆ ತೊಟ್ಟಿಲು ಕಟ್ಟಿ ನೆಲಕ್ಕೆ ಹೆಜ್ಜೆ ಇರಿಸಿ ಕುಣಿಯುತ್ತ ಸಂಸಾರ ಸಾಗಿಸಿದವರು. ಅಂಗಳದ ಕೊಳದಲ್ಲಿ ಈಜಿದ ಯೌವ್ವನದ ಬಾತುಗಳ ಸಲ್ಲಾಪವನ್ನು, ಅವು ಎಬ್ಬಿಸಿದ ಸುಖದುಃಖದ ಅತಿಗಳನ್ನು ನೆನಪಿಸುತ್ತ ಮೊಗಸಾಲೆಯಲ್ಲಿ ಕುಳಿತವರು. ಹಣೆಯಲ್ಲಿ ಸೂರ್ಯ, ತುಟಿಯಲ್ಲಿ ಚಂದ್ರನನ್ನಿಟ್ಟುಕೊಂಡು ಹಪ್ಪಳ ಮಾಡಿದ ತಾಯಿಯ ನೆನಪಿದೆ. ಅವಳ ಕಣ್ಣಂಚಿನಲ್ಲಿ 'ಕಟಾವು ಮುಗಿದ ಕಬ್ಬಿನ ಗದ್ದೆಯಿದೆ'; ಅವನ 'ಕಣ್ಣೊಳಗೆ ಹೊಲದ ಬದಿಯ, ಆಕಾಶದೆತ್ತರಕ್ಕೆ ಬೆಳೆದೂ ವಿನಯದಿಂದ ಬಾಗಿದ ತೆಂಗಿನ ಮರವಿದೆ.' ಕಟಾವು ಮುಗಿದ ಕಬ್ಬಿನ ಗದ್ದೆ ಮತ್ತು ಆಕಾಶದೆತ್ತರ ಬೆಳೆದ ತೆಂಗಿನಮರ ಎರಡೂ ಸಂಸಾರದ ಸಾರ್ಥಕತೆಯನ್ನು ಸಾರುವ ಪ್ರತಿಮೆಗಳು. ಕಟಾವು ಮುಗಿದ ಗದ್ದೆಯ ಬಯಲಿನಲ್ಲಿ ಆಡಿದ ಮನಸು, ಮನೆಯೊಳಗೆ ಬಂದ ಸಮೃದ್ಧ ಬೆಳೆಯ ಭರವಸೆಯಲ್ಲಿದೆ. ಆಲೆಮನೆಯ ಕೊಪ್ಪರಿಗೆಯಲ್ಲಿ ಕುದಿವ ಬೆಲ್ಲದ ಪಾಕದ ನಿರೀಕ್ಷೆಯಲ್ಲಿದೆ. ಸಾಧನೆಗೈಯುತ್ತ ಆಕಾಶದೆತ್ತರಕ್ಕೆ ಬೆಳೆದ ತೆಂಗಿನ ಮರದಂಥ ಮನಸ್ಸು ವಿನಯವನ್ನು ಬಿಟ್ಟಿಲ್ಲ.

ವೈಯಕ್ತಿಕ ನೆಲೆಯಲ್ಲಿ ಜೀವನದಲ್ಲಿ ಸಾರ್ಥಕ ಹಿನ್ನೋಟವನ್ನು ಪಡೆದ ಕಾವ್ಯ ನಿರೂಪಕ ತನ್ನ ಸುತ್ತಲಿನ ಜಗತ್ತಿನಲ್ಲಿ ಕಾಣುವ ದೃಶ್ಯ ವಿಷಾದಪೂರ್ಣವಾದದ್ದು. ಶಾಪಗ್ರಸ್ತ ಅಹಲ್ಯೆ, ಯೌವ್ವನವನ್ನು ಕಲ್ಲಾಗಿ ಕಳೆದು ಶಾಪ ಮುಕ್ತಳಾಗಿ ಆಶ್ರಮಕ್ಕೆ ಮರಳಿದಾಗ ಗೌತಮ ಮುಳುಗುವ ಸೂರ್ಯನಂತಾಗಿದ್ದಾನೆ; ಕಮ್ಮಾರನ ಸಾಲೆಯಲ್ಲಿರುವ ಕನಸುಗಣ್ಣಿನ ಹುಡುಗಿ ಆಕಾಶಕ್ಕೆ ಪುಟಿಯಲು ಸಿದ್ಧವಾಗಿರುವ ಗಾಳಿಪಟದಂತೆ ಹಾರಿಹೋಗಲು ಕಾಯುತ್ತಿದ್ದಾಳೆಂದು ಅವಳ ತಂದೆ ದುಃಖಿತನಾಗಿದ್ದಾನೆ. ಕಾವ್ಯ ನಿರೂಪಕ ಭೇಟಿಯಾದ ನಿವೃತ್ತ ಶಿಕ್ಷಕರ ಒಬ್ಬ ಮಗ ಯೋಧನಾಗಿ ಯುದ್ಧದಲ್ಲಿ ಮಡಿದಿದ್ದಾನೆ;ಮತ್ತೊಬ್ಬ ನಡುರಾತ್ರಿಯಲ್ಲಿ ಎದ್ದುಹೋದ ಬುದ್ಧನಂತೆ ಹೊರಟುಹೋಗಿದ್ದಾನೆ. ಈ ನತದೃಷ್ಟ ವೃದ್ಧ ತನ್ನಾವರಿಸಿದ ಸಂಧ್ಯಾಕಾಲದ ಶೂನ್ಯವನ್ನು ಕವಿಯ ಮಗನ ಮೂಲಕ ತುಂಬಿಕೊಳ್ಳುತ್ತಿದ್ದಾನೆ. ಕಾರಂತರ 'ಬೆಟ್ಟದ ಜೀವ'ದ ಗೋಪಾಲಯ್ಯ ಅಮೇರಿಕಾದಲ್ಲಿ ಕಳೆದುಹೋದ ತನ್ನ ಮಗನನ್ನು ಹುಡುಕಲು ಹೇಳಿದ್ದಾರೆ.

ರಾಮನ ನಿರೀಕ್ಷೆಯಲ್ಲಿರುವ ಶಬರಿಯಂತೆ ವೆಂಕಜ್ಜಿ ಬಯಲಾಟದ ಪ್ರಸಂಗವನ್ನು ನೋಡುತ್ತ ಹೊರಟುಹೋದ ಮೊಮ್ಮಗನನ್ನು ಕಾಯುತ್ತಿದ್ದಾಳೆ. ಒಲಿದವನ ಜೊತೆ ದಾಟಿಹೋಗುವ ಹೆತ್ತಮಗಳನ್ನು ತನ್ನ ದೋಣಿಯಲ್ಲಿ ಯಾತ್ರೆ ಹೊರಟ ಪಯಣಿಗರಲ್ಲಿ ಕಾಣುವ ಅಂಬಿಗನಿದ್ದಾನೆ.

ಹೀಗೆ ವೃದ್ಧಾಪ್ಯದಲ್ಲಿ ಎದೆಒಡೆವ ದಾರುಣ ಕತೆಯನ್ನು ಇಲ್ಲಿಯ ಅನೇಕ ಕವನಗಳು ನೀಡುತ್ತವೆ. ಮಕ್ಕಳು ಅನಿವಾರ್ಯವಾಗಿ ದೂರ ಸರಿದು ಶೋಕತಪ್ತರಾದ ವೃದ್ಧರು ತಮಗೊದಗಿದ ದುರ್ವಿಧಿಯಿಂದ ಪಾರಾಗಲು, ಪರರ ಆಶ್ರಯದಲ್ಲಿ ಸಾಂತ್ವನ ಪಡೆಯಲು ಯತ್ನಿಸುತ್ತಾರೆ. ಆದರೆ ಕವಿ ಈ ವಿಷಯದಲ್ಲಿ ಭಾಗ್ಯವಂತ. ಇಂಥ ದೌರ್ಭಾಗ್ಯಕ್ಕೆ ಗುರಿಯಾಗದ ಕಾರಣಕ್ಕೆ ದುಃಖಿತರ ನೋವನ್ನು ಹಂಚಿಕೊಳ್ಳುವ ಮೂಲಕ ದೊರೆತ ಜೀವನದ ಸಫಲತೆಯೇ ಕವಿಗೆ ವೃದ್ಧಾಪ್ಯದ ನಂತರದ ಜೀವನದ ಇಹಪರಗಳೆರಡರಲ್ಲೂ ತೃಪ್ತಿಯಿದೆ.

ಮರ ತಿಳಿದುಕೊಳ್ಳ ಬಯಸಲಿಲ್ಲ
ಹೂವು ಅರಳುವುದೇಕೆ?
ಹೂವು ಮರವನ್ನು ಪ್ರಶ್ನಿಸಲಿಲ್ಲ
ಕ್ಷಣಭಂಗುರದ ತನ್ನನ್ನೇಕೆ
ಮರ ಸೃಷ್ಟಿಸುತ್ತಿದೆ ಹೇಗೆ?

ಈ ಪ್ರಶ್ನೆಗಳಿಗೆ ಬುದ್ಧನ ಮೌನದಿಂದ ಎತ್ತಿಕೊಂಡ ಉತ್ತರ ಕವಿಯದೂ ಹೌದು.

ಹೂವನ್ನು ಮರ ಅರಿತಿದೆ
ಮರವನ್ನು ಹೂವು ಅರಿತಿದೆ
ನಿಮಗೂ ಇದರ ತಿಳಿವಿದೆ
ಆದರೆ ತಿಳಿದಿದೆ ಎಂಬ ಅರಿವಿಲ್ಲ, ಅಷ್ಟೆ!

# ಡಾ.ಮೊಗಸಾಲೆ ಕಾವ್ಯದಲ್ಲಿ "ಗ್ರಾಮೀಣ ಸಂವೇದನೆ"

ಡಾ.ಅಶೋಕ ನರೋಡೆ

"ಸ್ಪಷ್ಟ ಹಾಗೂ ನೇರವಾಗಿರುವ ಗ್ರಾಮೀಣರ ಬದುಕು ಭಾವನೆಗಳು ಸಮಷ್ಟೀ ಪ್ರಜ್ಞೆಯನ್ನು ರೂಪಿಸಿದವು. ಈ ಸಮಷ್ಟಿ ಪ್ರಜ್ಞೆಯ ಧ್ರುವೀಕರಣ, ಗ್ರಾಮೀಣ ಬದುಕಿಗೆ ಒಂದು ಬಗೆಯ ತಾದಾತ್ಮ್ಯತೆಯನ್ನು ತಂದುಕೊಟ್ಟಿದೆ. ನವೋದಯ ಘಟ್ಟದ ಬಹಳಷ್ಟು ಲೇಖಕರು ಇಂಥ ಗ್ರಾಮೀಣ ಪ್ರದೇಶದಿಂದ ಬಂದವರಾದ್ದರಿಂದ ಅಲ್ಲಿಯ ಎಲ್ಲಾ ಬಗೆಯ ಮೌಲಿಕ ಸಾಧ್ಯತೆಗಳನ್ನು ದಕ್ಕಿಸಿಕೊಂಡು ಆ ಕಾಲದ ಸಾಹಿತ್ಯದ ಆಶೋತ್ತರಗಳನ್ನು ಸಾಕಾರಗೊಳಿಸಿದರು. ಇಂದಿಗೂ ಈ ಗ್ರಾಮೀಣ ಸಂವೇದನೆಗಳು ವಿವಿಧ ನೆಲೆಯಲ್ಲಿ ಚೆಲ್ಲುವರೆದಿವೆ"



–ಡಾ.ಶ್ರೀರಾಮ ಇಟ್ಟಣ್ಣವರ, 'ಗ್ರಾಮೀಣ ಸಂವೇದನೆ' ಬ್ಲರ್ಬ್

"ಗ್ರಾಮೀಣ ಬದುಕಿನ ಮಹತ್ವದ ಅಂಶವೆಂದರೆ ಅವರ ಅಚಲವಾದ ಜೀವನಶ್ರದ್ಧೆ ಮತ್ತು ಕಷ್ಟ ಸಹಿಷ್ಣುತೆ. ಅದು ಅವರ ಜೀವನದ ಭಾಗವೇ ಆಗಿರುತ್ತದೆ. ಎಂತಹ ಕಠಿಣ ಸಂದರ್ಭದಲ್ಲೂ ಅವರು ಬದುಕಿಗೆ ಬೆನ್ನು ತೋರುವುದಿಲ್ಲ. ತಮ್ಮ ಆತ್ಮಗೌರವವನ್ನು ಬಲಿಗೊಡಲು ಸಿದ್ಧರಾಗುವುದಿಲ್ಲ. ಗ್ರಾಮೀಣ ಜೀವನವನ್ನು ಚಿತ್ರಿಸುವ ಸಾಹಿತಿಯು ನಿರಾಶಾವಾದಿಯಲ್ಲ. ಆತ ಹೆಚ್ಚು ವಾಸ್ತವವಾದಿಯಾಗಿದ್ದಾನೆ. ಕಡುಕಿನ ಗರ್ಭದಿಂದಲೇ ಒಳ್ಳೆಯದು ಹುಟ್ಟಿಬರುತ್ತದೆಂಬುದು ಆತನ ಜೀವನ ದರ್ಶನವಾಗಿದೆ".

– ಡಾ. ಮಹದೇವ ಕಣವಿ "ಗ್ರಾಮೀಣ ಸಂವೇದನೆ" (ಪುಟ:5)

ಈ ಮೇಲಿನ ಎರಡೂ ಹೇಳಿಕೆಗಳು ಗ್ರಾಮೀಣ ಸಂವೇದನೆಯ ಕಲ್ಪನೆಯನ್ನು ಕಟ್ಟಿಕೊಳ್ಳುವಲ್ಲಿ ನೆರವಿಗೆ ಬರುತ್ತವೆ. ಇದನ್ನೇ ಇನ್ನಷ್ಟು ವಿಸ್ತರಿಸುವುದಾದರೆ – ಗ್ರಾಮೀಣರು ಪ್ರಕೃತಿ ಪರಿಸರವನ್ನು ಪ್ರೀತಿಸುತ್ತಾರೆ, ಪೂಜಿಸುತ್ತಾರೆ, ಆರಾಧಿಸುತ್ತಾರೆ. ಗ್ರಾಮೀಣರಿಗೆ ದೇವರು, ದೆವ್ವ, ಜ್ಯೋತಿಷ್ಯಗಳಲ್ಲಿ ಅಪಾರ ನಂಬಿಕೆ. ಆ ಸಾಹಿತ್ಯದಲ್ಲಿ ಔಚಿತ್ಯ–ಅನೌಚಿತ್ಯದ ಪ್ರಶ್ನೆಗಳಿರುವುದಿಲ್ಲ. ಪ್ರಕೃತಿಗೆ ಸಮೀಪವಾಗಿ ಬಾಳುತ್ತಾರೆ. ಹಳ್ಳಿಗರಲ್ಲಿ ಸಾಮರಸ್ಯ ಹೆಚ್ಚು. ಪ್ರೀತಿ, ವಿಶ್ವಾಸಕ್ಕೆ ಕೊರತೆಯಿಲ್ಲ. ಕನ್ನಡದ ಬಹುಪಾಲು ಲೇಖಕರು ಗ್ರಾಮೀಣ ನೆಲೆಗಳಿಂದಲೇ ಬಂದಿರುವುದರಿಂದ ಅವರಲ್ಲಿ ಜೀವಸೆಲೆ, ಬದುಕಿನ ಬಗ್ಗೆ ಪ್ರೀತಿಯಿದೆ. ಅವರ ಸಾಹಿತ್ಯದಲ್ಲಿ ಬಾಲ್ಯ, ಗ್ರಾಮೀಣ ಪರಿಸರದ ಜೀವನಾನುಭವಗಳು ಮತ್ತೆ ಮತ್ತೆ ಪ್ರತಿಪಾದನೆಯಾಗುತ್ತವೆ. ಈ ಹಿನ್ನೆಲೆಯಲ್ಲಿ ಡಾ॥ನಾ.ಮೊಗಸಾಲೆ ಅವರ ಕಾವ್ಯದಲ್ಲಿ 'ಗ್ರಾಮೀಣ ಸಂವೇದನೆ'ಯನ್ನು ಗುರುತಿಸುವುದು

ಪ್ರಸ್ತುತ ಲೇಖನದ ಆಶಯವಾಗಿದೆ.

ಡಾ॥ನಾ.ಮೊಗಸಾಲೆ ಅವರು ಕಳೆದ ನಾಲ್ಕು ದಶಕಗಳಿಂದ ಕಾವ್ಯದ ಕೃಷಿಗೈಯುತ್ತ ಬಂದಿದ್ದಾರೆ. ವರ್ತಮಾನದ ಮುಖಗಳು, ಪಲ್ಲವಿ, ಮೊಗಸಾಲೆಯ ನೆನಪುಗಳು, ಪ್ರಭವ, ಸ್ವಂತಕ್ಕೆ ಸ್ವಂತಾವತಾರ, ನೆಲದ ನೆರಳು, ಇದಲ್ಲ ಇದಲ್ಲ ಮುಂತಾದ ಏಳು ಕವನ ಸಂಕಲನಗಳನ್ನು ಸಾರಸ್ವತ ಲೋಕಕ್ಕೆ ಕೊಡುಗೆಯಾಗಿ ನೀಡಿದ್ದಾರೆ. ವಸ್ತು-ವಿಷಯಗಳಲ್ಲಿ ಅಪಾರ ವೈವಿಧ್ಯತೆಯಿದೆ. ಅಖಂಡ ಅರ್ಧ ಶತಮಾನದ ಜೀವನಾನುಭವ ಮಡುಗಟ್ಟಿದೆ. 'ಗ್ರಾಮೀಣ ಸಂವೇದನೆ'ಗೆ ಸಂಬಂಧಿಸಿದ ಕೆಲವು ಮಾದರಿಗಳನ್ನು ನಾನಿಲ್ಲಿ ಎತ್ತಿಕೊಳ್ಳುತ್ತಿದ್ದೇನೆ.

" ಮೊಗಸಾಲೆ ನಾ ಹುಟ್ಟಿದ ಮನೆ

-------------------

ಆಗುತ್ತದೆ ನೆನಪು;ನಾಚಿಕೆ ಮುಳ್ಳಿನ ಚಿಗುರು
ಮುಟ್ಟಿದಾಗ ಮುಚ್ಚಿ,ಅರಳುವ ರೀತಿ
ಬಿಸಿಲಿಗೆ ಹಿಡಿದ ಹಾಗೆ ಕೊಡೆ ತಾಯಿ ಮಗುವಿಗೆ
ಅಲ್ಲಿನ ಮರಗಳ ನೆರಳಿದೆ ಇನ್ನೂ ನನ್ನ ಬಳಿ"

(ಮೊಗಸಾಲೆ-ನಾ ಹುಟ್ಟಿದ ಮನೆ, ಪುಟ-279)

ಹುಟ್ಟಿದ ಮನೆ ಪ್ರತಿಯೊಬ್ಬರಿಗೂ ನೆನಪಾಗುತ್ತದೆ. ಯಾವುದೋ ರೀತಿಯಲ್ಲಿ ಮತ್ತೆ ಮತ್ತೆ ಕಾಡುತ್ತದೆ. ಭೌತಿಕವಾಗಿ ದೂರವಿದ್ದಾಗ ಅದರ ಸೆಳೆತ ಮತ್ತೂ ಹೆಚ್ಚಾಗಿರುತ್ತದೆ. ಕವಿ ಆ ನೆನಪನ್ನು ಮುಟ್ಟಿದರೆ ಮುನಿ (ನಾಚಿಕೆ ಮುಳ್ಳು)ಗೆ ಹೋಲಿಸಿರುವುದು ಅರ್ಥಪೂರ್ಣ. ತಾಯಿ ಮಗುವಿಗೆ ಕೊಡೆ ಹಿಡಿಯುವ ಹೋಲಿಕೆ ತುಂಬ ಚೇತೋಹಾರಿಯಾಗಿದೆ. ಕರುಳಬಳ್ಳಿಯ ಸಂಬಂಧವನ್ನು ಸೂಚಿಸುತ್ತದೆ.

"ಕೋಳ್ಯೂರು ನಾ ಹುಟ್ಟಿದೊಂದು ಹಳ್ಳಿ
ನೆನದಾಗ ಹೊಳೆಯುವುದು ಮನಸ್ಸು ಮಿಂಚುಳ್ಳಿ
ಘನಶ್ಯಾಮ ನೀರೆ ಮಿಂಚಿನ ಮುಖವ ಮೀರಿ
ನಕ್ಕಂತೆ ಇರುಳ ಹೊಳೆಸುವುದದರ ದಾರಿ"

(ಕೋಳ್ಯೂರು, ಪುಟ : 246)

ತನ್ನೂರಿನ ಚಿತ್ರಣ, ಅಲ್ಲಿಯ ಸಂತೆ, ಜಾತ್ರೆ, ರಾತ್ರಿಯುತ್ಸವ, ಭೂರಿಭೋಜನ, ತಾಳಮದ್ದಳೆಯ ಚೋದ್ಯ ಮುಂತಾದವುಗಳಿದರಲ್ಲಿ ದಾಖಲುಗೊಂಡಿವೆ. "ಇಲ್ಲೇ ತಾನೇ ನನ್ನ ಪ್ರಪ್ರಥಮ ಕವಿತೆ ಪಲ್ಲವಿಸಿ ಜೊತೆಯಾಗಿ ಮನೆಗೆ ಬಂದಂತೆ", "ಹೆಸರು ಪಾಯಸ ಸಂತೆಗಿಂತೆಗಳ ಬಯಕೆ ಇವಕೆಂದೆ ತಾನೆ ದೇವರು-ಜಾತ್ರೆ-ಹರಕೆ? ಆದರೂ ಕರೆಯುತಿದೆ ಕೋಳ್ಯೂರ ಜಾತ್ರೆ ಬಾಲ್ಯ ಸಖಿಯಂತೆ ನಿತ್ಯವೂ ಹಗಲು ರಾತ್ರಿ" ಎಂದು ತಮ್ಮ ಬದುಕಿನ ಸಾರವತ್ತಾದ, ಕಾವ್ಯರಚನೆಗೆ ಶ್ರೀಕಾರ ಹಾಕಿದ ಗಳಿಗೆಗಳನ್ನು ಕವಿ ಮೆಲುಕು ಹಾಕಿದ್ದಾರೆ.

'ಒಂದು ಹಳ್ಳಿಯ ವರ್ತಮಾನ' ಕವಿತೆಯಲ್ಲಿ ಬರುವ ಚಿತ್ರಣ ಗ್ರಾಮೀಣ ಸಂವೇದನೆ, ಗ್ರಾಮೀಣ ಗ್ರಹಿಕೆಗೆ ಶ್ರೇಷ್ಠ ನಿದರ್ಶನವಾಗಿದೆ.

"ಬರೇ ಎರಡೋ ಮೂರೋ ಅಂಗಡಿಗಳು
ಮೂರೋ ನಾಲ್ಕೋ ಮನೆ ಬಾಗಿಲುಗಳು
ಮರಳದಂಡೆಯಲ್ಲಿ ಬಿಸಿಲು
ಕಾಯಿಸುವ ಮೊಸಳೆಬಾಯಿ ಪೇಟೆ
ತೆರೆದಿವೆ ರಾತ್ರಿಯೂ ಹಗಲೂ
ಹೀಗೆಂದರೆ ಇದು ಈ ಹಳ್ಳಿಯ ರಥಬೀದಿ ಎಂದ ಹಾಗಾಯ್ತು".

ಎಂದು ಆರಂಭವಾಗುತ್ತದೆ. 'ನೀವು ಹೊಸಬರೋ ಈ ಊರಿಗೆ, ಹಾಗಾದರೆ ಬಾಯಿತೆರೆದಿರುವ ಈ ಕಟ್ಟೋಣಗಳಲ್ಲಿ ಅಂಗಡಿ ಯಾವುದು-ವ್ಯಾಪಾರಕ್ಕ ಮನೆ ಯಾವುದು ವಾಸಕ್ಕೆ ಎಂದು ನಿಂತು ವಿಚಾರಿಸಬೇಕಾದೀತು. ಯಾಕೆಂದರೆ ಅಂಗಡಿ ಅಥವಾ ಮನೆಗೆ ಒಳಗೂ ಹೊರಗೂ ವ್ಯತ್ಯಾಸ ಇಲ್ಲ. ಈ ಹಳ್ಳಿಯಲ್ಲಿ ಏನೇನು ಸಿಗುತ್ತವೋ ಅವೆಲ್ಲ ಮತ್ತು ಈ ಹಳ್ಳಿಗೆ ಹೊರಗಿನಿಂದ ಏನೇನು ಬರುತ್ತವೋ ಅವೂ ಕೂಡಾ ಈ ರಥದ ಬೀದಿಯ ಯಾವುದೋ ಕಟ್ಟಡದಲ್ಲಿ ವಿಕ್ರಯವಾಗುತ್ತವೆ" ಎಂದು ವಿವರಿಸಿ,

"ಹೊಸಬರು ಬಂದರೆ ಈ ಊರಿನವರು ಎಸ್ಕಿಮೋ ಜನರ ಹಾಗೆ
ತಾವೇ ಕಟ್ಟಿಕೊಂಡ ಗುಡಿಸಿಲುಗಳಿಂದ ಹೊರಬಂದು
ಕುತೂಹಲಿಗಳಾಗುತ್ತಾರೆ;ನಿಮ್ಮ ಅಂಗಿಯ ಕಾಲರ್, ಕಾಲಿನ ಶೂಸು
ವಿದೇಶೀ ವಾಚು, ಹೇರ್ ಸ್ಟೈಲ್, ಸ್ವಂತ ಉಚ್ಚಾರದ ನಿಮ್ಮ ಇಂಗ್ಲೀಷ್
ಇಲ್ಲಿನವರ ಗುಳಿಬಿದ್ದ ಕಣ್ಣುಗಳಲ್ಲಿ ಕಂತುತ್ತವೆ;ಸೂರ್ಯನ ಹಾಗೆ"

ಹಳ್ಳಿಗೆ ಮೂಲಭೂತ ಅವಶ್ಯಕತೆಗಳಿಲ್ಲದಿರುವುದನ್ನು ಪಟ್ಟಿಮಾಡುತ್ತಾರೆ.ರಾಜಕಾರಣಿಗಳ ಆಶ್ವಾಸನೆ, ಚುನಾವಣೆ ಭರಾಟೆ, ಹಳ್ಳಿ ದಿಲ್ಲಿಯಾಗುವ ಕನಸು, ಎಲ್ಲವೂ ಹೂಬೆ-ಹೂಬೆಯಾಗಿ ಬಂದಿವೆ. ಏನೂ ಆಗದೆ, ಈ ದೇಶದ ಲಕ್ಷಾಂತರ ಹಳ್ಳಿಗಳಂತೆ ಇದೂ ಬಿದ್ದುಕೊಳ್ಳುತ್ತದೆ. ರಸ್ತೆ, ಒಳಚರಂಡಿ, ವಿದ್ಯುತ್ ದೀಪ, ಆಸ್ಪತ್ರೆ, ಶಾಲೆ, ಕಾಲೇಜು, ಶೌಚಾಲಯ, ಗ್ರಂಥಾಲಯ ಹೀಗೆ ಇಲ್ಲದಿರುವುದನ್ನು ಪಟ್ಟಿ ಮಾಡುತ್ತಾರೆ. 'ಬಸ್ ಸರ್ವಿಸ್' ಕೂಡ ಇಲ್ಲದಿರುವುದನ್ನು ದಾಖಲಿಸಿ - " ಹಳ್ಳಿಯೇ, ಓ ನನ್ನ ಹಳ್ಳಿಯೇ ಯಾಕೆ ನೀನು ಸಿಡಿಯುವುದಿಲ್ಲ? ಒಮ್ಮೆ, ಒಂದು ಕ್ಷಣ, ಎತ್ತು ನಿನ್ನ ಎಡಗಾಲ ಝಾಡಿಸಿ ಒದೆ" (ಪುಟ – 153) ಎಂದು ಪ್ರಚೋದಿಸುತ್ತಾರೆ. ಸಾತ್ವಿಕ ಸಿಟ್ಟು ಹೀಗೆ ಮಾತನಾಡಿಸಿದೆ. ಇದು ಕೇವಲ ಒಂದು ಹಳ್ಳಿಯ ಕಥೆಯಲ್ಲ, ಈ ದೇಶದ ಲಕ್ಷ-ಲಕ್ಷ ಹಳ್ಳಿಗಳ ದುಃಸ್ಥಿತಿಯಾಗಿದೆ. ಹೀಗೆ ಕಾವ್ಯ ವ್ಯಷ್ಟಿಯಿಂದ ಹೊರಟು, ಸಮಷ್ಟಿ ನೆಲೆಗೆ ತಲುಪಿದ್ದು ಅದರ ಹೆಗ್ಗಳಿಕೆಯಾಗಿದೆ.

ತಮ್ಮ ಹಳ್ಳಿಯ ಆಟದ ವಿಶೇಷತೆಯನ್ನು, ಬಾಲ್ಯದ ನೆನಪಿನಿಂದ, ಗ್ರಾಮೀಣ ಪರಿಸರವನ್ನು

‘ಒಂದು ವಿಚಿತ್ರ ಬಗೆಯ ಆಟ’ದಲ್ಲಿ ಕಟ್ಟಿಕೊಟ್ಟಿದ್ದಾರೆ.

" ಹೂವರಳು, ಹೂವರಳು ಎಂಬ ಆಟಕ್ಕೆ
ಬರೇ ಇಬ್ಬರು ಬೇಕೂ ಸಾಕು
ಒಬ್ಬ ಎರಡೂ ಅಂಗೈಗಳನ್ನು ಸೇರಿಸಿ
ಹುಲಿಬಾಯಿ ಬಿಟ್ಟಹಾಗೆ ಗೋಲಾಕೃತಿಯಾಗಿ ಹಿಡಿಯೋದು
ಇನ್ನೊಬ್ಬ ಆ ಹತ್ತು ಬೆರಳುಗಳನ್ನು ಮುಟ್ಟುತ್ತಾ
ಒಂದು ಎರಡು ಮೂರು...... ಹತ್ತು ಎಂದು ಲೆಕ್ಕ ಹಾಕುತ್ತ
ಹತ್ತೂ ಬೆರಳುಗಳ ತಲೆ ನೀವಾಳಿಸಿ
ಎಲ್ಲಾ ಸುಳಿದು ಸುಳಿದು ಸುಳಿದು ಗುಂಡಿಗೆ ಹಾಕಿದೆ’ (ಪುಟ : 121)

ಎಂದು, ಮೂರು ಸಲ ಆನೆಯ ಸೊಂಡಿಲಿನ ಹಾಗೆ ನನ್ನ ಬಲಗೈಯ ಬೆರಳು ಮಡಚಿ ಅರಳಿಸಿಟ್ಟ ಇನ್ನೊಬ್ಬ ಅಂದರೆ ಮೊದಲನೆಯವನ ಬೆರಳ ಬಾಯಿಗೆ ತುರುಕುವುದು ಇಷ್ಟು ಪೀಠಿಕೆ; ನಿಜವಾದ ಆಟ ಶುರುವಾಗೋದೇ ಆಮೇಲೆ" ಎಂದು ಆಟದ ವಿಶೇಷತೆಯ ಎಳೆಗಳನ್ನು ಒಂದೊಂದಾಗಿ ಬಿಡಿ_ಬಿಡಿಸಿ ಇಟ್ಟಿದ್ದಾರೆ. ಗ್ರಾಮೀಣ ಕ್ರೀಡೆಯ ವೈಶಿಷ್ಟ್ಯ ಇದರಲ್ಲಿದೆ. ‘ಆಟ ಇಷ್ಟೇ; ಮಧ್ಯ ಮೊಸಳೆ ಹಿಡಿಯಿತೋ ಮನುಷ್ಯ ಪಡ್ಚ. ಸನ್ಯಾಸಿ ಆಗುತ್ತೇನೆಂದರೆ ಬಿಡುತ್ತದಂತಪ್ಪ ಮೊಸಳೆ. ಇಂಥ ಆಟ ನಮ್ಮೂರಲ್ಲಿ ಪ್ರಸಿದ್ಧ. ಆದರೆ ಮಕ್ಕಳೇ ಪ್ರಧಾನವಾಗಿ ಆಡುವ ಈ ಆಟವನ್ನು ಮೊದಲು ದೊಡ್ಡವರೇ ಮಾಡಿ ತೋರಿಸುತ್ತಾರೆ’ ಎಂಬ ವಿವರಣೆಯಿದೆ. ಇನ್ನೂ ವಿಶೇಷತೆಯೇನೆಂಬುದನ್ನು ವಿವರಿಸಿದ್ದಾರೆ, ಓದಿಯೇ ಆಸ್ವಾದಿಸಬೇಕು.

ನನ್ನೂರಿನಲ್ಲಿ ದಿನಾ ಸಂಜೆ
ಯಾಗುವುದಕ್ಕೆ ಕಾರಣಗಳಿದ್ದಂತೆ ಬೆಳಗಿಗೂ ಇದೆ
ಯೆಂಬ ನಂಬಿಕೆ ದೇವರಪೂಜೆಗೆ ಶಂಖ ಜಾಗಟೆ
ಸತ್ತವರಿಗೆ ಸಮಾರಾಧನೆ ಆರದ್ರೆಯಲಿ ವಿಪರೀತ ಮಳೆ
ಗುಡ್ಡಬೆಟ್ಟಗಳಿಂದ ಇಳಿದು ಬರುತ್ತಿರುವ ಹೊಳೆ
ಗೆ ಮಧ್ಯೆ ಮಧ್ಯೆ ಅಣೆಕಟ್ಟು ಇತ್ಯಾದಿ ಕಟ್ಟುಕಟ್ಟಳೆ
ಗಳಿಗೂ ನನಗೂ ಹಗಲು ರಾತ್ರಿಯ ಸಂಬಂಧ ಮತ್ತು
ರಾತ್ರಿ ಹಗಲಿನ ಮಧ್ಯೆ ಬೇರ್ಪಡಿಸಲಾಗದ ನನ್ನ ಹೊತ್ತು
ಕೊಂಡು ನನ್ನೂರು ಪಡೆದ ಧನ್ಯತೆ" (ಪುಟ: 49)

ಪ್ರಸ್ತುತ ರಚನೆಯಲ್ಲಿಯೂ ಕೂಡ ತಮ್ಮೂರಿನ ಬಗ್ಗೆ ಕವಿ ಉತ್ಸುಕರಾಗಿ ಬರೆಯುತ್ತಾರೆ. ಪ್ರಕೃತಿ, ಮಾನವ ನಿರ್ಮಿತ ಆಣೆಕಟ್ಟುಗಳ ಚಿತ್ರಣವಿದೆ. ತಾವು ಬರೆಯಲು ಪ್ರಾರಂಭಿಸಿದಾಗಿನ ಪದ್ಯಗಳು ಹೇಗಿದ್ದವೆಂಬುದನ್ನು ವಿವರಿಸುತ್ತಾರೆ.

"ಕರಾವಳಿ ಕಡಲ ಪಕ್ಕದಲ್ಲಿ ಉದ್ದಕೂ ಮಲಗಿದ ಹಾಗೆ
ಬಿಚ್ಚಿಕೊಳ್ಳಬೇಕು ತನ್ನಿಂತಾನೆ ತನ್ನ
ಸ್ವರೂಪಕ್ಕೆ ಮಾತ್ರ ಸೀಮೆ ಪಶ್ಚಿಮ ಘಟ್ಟ ಹಾಗೂ ಕಡಲು
ಎದುರು ಬದುರು ಇದಿರು" (ಪುಟ : 47)

ಎಂದು ಹೇಳಿರುವಲ್ಲಿಯೂ ಪ್ರಾದೇಶಿಕ ಚಿತ್ರಣ ತುಂಬ ಗಾಢವಾಗಿದೆ.

'ಕುಪ್ಪಣ'ವೆಂಬ ಕವಿತೆಯಲ್ಲಿ ಬರುವ ವ್ಯಕ್ತಿ, ಅಪ್ಪಟ ಗ್ರಾಮೀಣ ಪರಿಸರದಲ್ಲಿ ಆಡಿ ಬೆಳೆದಾತ. ಗ್ರಾಮೀಣ ಜನಾಂಗದ ನಂಬಿಗೆ, ಆಚಾರ, ವಿಚಾರ, ಸಂಪ್ರದಾಯ, ಪರಂಪರೆಯ ಪ್ರತೀಕವಾಗಿದ್ದಾನೆ. ವಾಮನ ಮಾಸ್ತ್ರು ಕೂಡ ಗ್ರಾಮೀಣ ಪರಿಸರದ ಪ್ರತಿನಿಧಿಯಾಗಿ, ಗ್ರಾಮೀಣ ಪ್ರತಿಭೆಯ ಮುಗ್ಧತೆ ಹಾಗೂ ಅಪ್ಪಟ ಪ್ರೀತಿ_ದಯೆ_ಕರುಣೆ ಮೂರ್ತಿವೆತ್ತ ಶಿಕ್ಷಕನ ಪ್ರತಿಮೆಯಾಗಿದೆ. ಒಂದು ಕಾಲದ ಗ್ರಾಮೀಣ ಜನಾಂಗದ ಜೀವನದ ಆಗು-ಹೋಗುಗಳು ಸೊಗಸಾಗಿ ಪುನರ್ ಸೃಷ್ಟಿಯಾಗಿವೆ. ಮಾಪಣ್ಣ ಭಾವ, ಮಾರಣ್ಣ ಮಾಡ ಇತ್ಯಾದಿಗಳೂ ಕೂಡ ಆಕರ್ಷಕವಾಗಿವೆ.

ಮಾರಣ್ಣ ಮಾಡ ನೀವು ನೋಡದೆ ಇರುವ ಊರ
ಯಜಮಾನ; ನನ್ನಂತರಂಗದ ಆಪ್ತ, ಬೇಕಿದ್ದವರು
ಕೆತ್ತಬಲ್ಲಂಥ ಮೂರ್ತಿಯಲ್ಲ; ಹೋಲಿಕೆಗೆ ದಕ್ಕದೆ ಉಳಿವ
ವ್ಯಕ್ತಿತ್ವ, ಚಿಕ್ಕಂದಿನಿಂದಲೇ ಸಾಕಿ
ಮೈಯೆಲ್ಲ ತಡವಿ ಹಾಕಿ ಹಿಂಡಿ ಮೇವು ಕರೆವ ಕರಾವು
ಕುಳಿತಲ್ಲೇ ಧ್ಯಾನಿಸಿದಲ್ಲಿ ಪಕ್ಕನೆ ಚಿತ್ತ ಭಿತ್ತಿಯಲಿ
ಕಾವುಕೊಡುವ ಕರಿ-ಬಿಳಿ ಚಿತ್ರ, ಸದಾ ಶ್ವೇತಧಾರಿ
ಕೈಯಲ್ಲಿ ನಸ್ಯ, ದುಂಡುಗಿನ ಮುಖದಲ್ಲಿ ಮೌನಮಾತು
ಅವಕಾಶ ತೆರೆದಾಗ ಆಗಬೋಟಿಯ ತೇಲುನಗೆ, ಎಪ್ಪತ್ತು
ತುಂಬಿದರು ಬೆನ್ನುಬಾಗದ ಕಣ್ಣುಮಂಜಾಗಲೊಲ್ಲದ ದಾರ್ಢ್ಯ" (ಪುಟ : 234)

ಮಾರಣ್ಣ ಮಾಡ ಗ್ರಾಮೀಣ ಪರಿಸರದ ತಾಜಾ ವ್ಯಕ್ತಿ. "ಅದೂ ಇದೂ ಊರು ಕೇರಿಯ ಆಗು-ಹೋಗು। ದೇಶ ರಾಜ್ಯ ಸಮಸ್ಯೆ ಗಲಭೆ ಗೊಂದಲಕ್ಕೆಲ್ಲ ಸ್ಪಂದಿಸುವ ಜೀವನೋತ್ಸಾಹದ ಹೊಕ್ಕಳು-ಬಳ್ಳಿ"ಯಾತ.

ನಿಮ್ಮ ರಸ್ತೆಯ ಸ್ವಗತ, ಪುತ್ತೂರು-ಮಂಜೇಶ್ವರ ರಸ್ತೆಯಲ್ಲಿ, ಯಾಕೆ ಹೋದವೋ, ಯಕ್ಷಗಾನದ ಕಿರೀಟಧಾರಿಗೆ ಹಾಸ್ಯಗಾರನ ಅಹವಾಲು, ಸಮುದ್ರವೇ। ಸಮುದ್ರವೇ! ಎಷ್ಟು ಸೆಖೆ! ಇವೇ ಮೊದಲಾದ ರಚನೆಗಳಲ್ಲಿ ಪ್ರಾದೇಶಿಕತೆ ಕಣ್ಣಿಗೆ ಎದ್ದು ಕಾಣಿಸುವಷ್ಟು ಢಾಳಾಗಿದೆ.

ಕಾಂತಾವರ ಈ ಕವಿಯನ್ನು ಮತ್ತೆ ಮತ್ತೆ ಕಾಡುತ್ತದೆ. ಕಾವ್ಯವಾಗಿ ಮೂಡಿ ಬರುತ್ತದೆ.

"ನನ್ನ ಕಾಂತಾವರದ ಮಳೆ ಅರೆ! ಕೊಡೆಗಳೇ ಮಕ್ಕಳಾದರೆ ಹೇಗೆ? ಅಥವಾ ಸ್ವಾತಂತ್ರ್ಯೋತ್ಸವಕ್ಕೆ ಶಾಲಾಮಕ್ಕಳು ಹೊರಟ ಹಾಗೆ ಮೆರವಣಿಗೆ"ಯಂತೆ ಕಾಣಿಸುತ್ತದೆ. ಪ್ರಕೃತಿ "ಲಂಗ ಚಿಚ್ಚಿ ಸ್ನಾನಕ್ಕೆ ಇಳಿದ ಕಿಶೋರಿ ತನ್ನ ಎದೆ ಬೆಟ್ಟಗಳ ಮೋಡಿಗೆ ನಡುಮಧ್ಯಾಹ್ನ ಕಣ್ಣು ಹೊಡೆಯುವ ಸೂರ್ಯನನ್ನು ನೋಡಿ ನಾಚಿ ನೀರಾದಳು ನೀರಲ್ಲಿ" ಎಂದು ಚಿತ್ರಿಸಿದ್ದಾರೆ. ಅಷ್ಟರಲ್ಲಿ ಬಂದರೇನಾದರೂ ಗಾಳಿ –

"ಕಂಬಳದ ಮಂಜೊಟ್ಟಿಯನ್ನು ಮೀರಿ
ಮುನ್ನುಗ್ಗುತ್ತಿರುವ ಕೋಣಗಳನ್ನು
ತಡೆಯಬೇಕಾಗಿದ್ದ ಪಡ್ಡೆಹುಡುಗರು
ಹೆದರಿ ಕಿತ್ತ ಹಾಗೆ ಕಾಲು
ಅಲ್ಲಿ ಇಲ್ಲಿ ಚದರಿದ ಮರಗಳು
ನೆಲಕಚ್ಚುವುವು – ಅಯ್ಯೋ! (ಪುಟ : 387)

ಈ ಕವಿತೆಯಲ್ಲಿ ನಾಟಿಗದ್ದೆ, ನೇಜಿ ತೊಟ್ಟಲು, ಕಂಬಳದ ಕೋಣ, ಮಂಜೊಟ್ಟಿ, ನೀರಲ್ಲಿ ತೊಯ್ದ ಮನುಷ್ಯರು ಮುಂತಾದವುಗಳು ಸಹಜವಾಗಿ "ಕರೆಯದೆ ಬಂದುವು ಕಾವ್ಯಕ್ಕೆ ಆಹಾ! ಕಾಂತಾವರದ ಮಳೆಗೆ!" ಎಂದಿರುವುದು ಆಪ್ಯಾಯಮಾನವಾಗಿದೆ.

"ಕಾಂತಾವರದ ನನ್ನ ಒಂದು ಬೆಳಗು
ಇದೇ ತಾನೇ ಅಂಬೆಗಾಲಿಡಲು ಕಲಿಯುವ

ಮೊಮ್ಮಗು" (ಪುಟ : 388)ವಿನ ಹಾಗೆ ಕಾಣುತ್ತದೆ. 'ಕತ್ತಲು ಇನ್ನೂ ಇರುವಾಗಲೇ ' ಎದ್ದಿರುವ ಮಗು, ಅಂಗಳಕ್ಕೆ ಬಂದು ಹೊಯ್ದರೆ 'ಬಂಗಾರದ ನೀರು ಅಂಗಳ ತುಂಬ' . ಇಷ್ಟಾದರೂ, "ಎದ್ದಿರದ ಹಕ್ಕಿಪಕ್ಕಿಗಳು, ಹೊಲಗದ್ದೆಗಳ ಗೋಧಿನಾಗರ ಪೈರು ಹೆಣ್ಣು, ಆಲ ಅಶ್ವತ್ಥ,ಸುರಗಿ ಹೊನ್ನೆಗಳ ಎಲೆಗಳು ನಿಶ್ಯಬ್ದ ನಕ್ಕಾಗ, ಪಕ್ಕದ ಮಾವಿನಮರದ ಹಣ್ಣು ಮುತ್ತು ನೀಡಿತು; ಇಬ್ಬನಿಯ ಆನಂದ ಬಾಷ್ಪದೊಂದಿಗೆ ಕಾಂತಾವರಕ್ಕೆ!" ಎಂದು ಕಾಂತಾವರ ಬೆಳಗನ್ನು ಸ್ತಬ್ಧ ಚಿತ್ರಗಳಲ್ಲಿ ಸೆರೆಹಿಡಿದಿದ್ದಾರೆ.

ಕರಾವಳಿಯ ಮಳೆಗಾಲದ ಮುಂಜಾನೆ "ಬೀಡಿ ಕಟ್ಟುವ ಹುಡುಗಿ ಸ್ಮಿತಾ ಎದ್ದಿಗ್ದಾಳೆ ಮುಂಜಾನೆಗೆ ಮೊದಲೇ! ಕುಡುಕ ಅಪ್ಪ ಮಳೆಗಾಲದ ಹಾಗೆ ಇದ್ದರೆ ಕೈಯಲ್ಲಿ ದುಡ್ಡು ಇಡೀ ಬಾಟಲಿ ಎತ್ತಿ ಧಾರಾಕಾರ! ಇಲ್ಲದಿದ್ದರೆ ಚಿಕ್ಕಾಸು ಮಳೆಗಾಗಿ ಕಾದ ಬಟಾಬಯಲು ಮುಖದ ಕುರುಚಲು ಗಡ್ಡಮೀಸೆಗಳಲ್ಲಿ ಕ್ರೋಧ!" ತುಂಬಿದ ವ್ಯಕ್ತಿಯಾಗಿ ಕಾಣಿಸುತ್ತಾನೆ. ಪ್ರಕೃತಿ ಮತ್ತು ಮನುಷ್ಯರನ್ನು ಬೆರೆಸಿದ ರಚನೆಯಿದು. 'ಕರಾವಳಿ ಮುಂಗಾರು'ವಿನಲ್ಲಿ 'ವಿಶ್ವಾಮಿತ್ರ–ಮೇನಕೆ'ಯ ಸಮಾಗಮದ ಚಿತ್ರ ನವುರಾಗಿ ಅರಳಿದೆ.

"ಛೇ! ಎಷ್ಟು ಆತಂಕ ಆಕಾಶ ತುಂಬ
ತಪೋಭಂಗದ ಸಿಟ್ಟು ಸಿಡಿಲು

ಮೈಮನದ ಬಯಕೆಯ ಗುಡುಗುಡುಗುಡು
ಒಳಗೊಳಗೆ ಜುಮುಗುಟ್ಟುವ ಬೆಳ್ಮುಗಿಲ ವಿರಹ
ಕಾಡುವ ಕಾಡಿನ ಗುಪ್ತಸ್ಥಳಗಳ
ನೋಡುವ ಕುತೂಹಲ ಕಣ್ಣು_ಕೋಲ್ಮಿಂಚು
ಒಮ್ಮೊಮ್ಮೆ ಸಿಕ್ಕಿದ್ದನ್ನು ಅಪ್ಪಿ ಮುದ್ದಾಡಲು
ಮುನ್ನುಗ್ಗುವ ಗಾಳಿಬಾಹು" (ಪುಟ : 402)
ಎದೆ ಶಿಖರ ಬಯಲ ನಿತಂಬಗಳ ಪುಲಕಿಸಿ ಹೊಳೆ ನದಿಗಳಲ್ಲಿ
ತಿಕ್ಕಿ ತಿಕ್ಕಿ ಮೈಯಿಡೀ ಹಾವಾಗಿ ಹರಿವ ಪರಿಗೆ ಒಳಗೊಳಗೇ ಅರಳುವ
ಮೈನಗೆಯ ನೆರಳು ಇಷ್ಟಾದರೂ ನೆಲದ ನಡೆನುಡಿಗಳಲ್ಲಿ ನಾಕುತಂತು!"

ಇಡೀ ಕವಿತೆ ಪ್ರಕೃತಿಯೊಡನೆ ಬೇಟೆಯಾಡುವ ರೀತಿಯಲ್ಲಿ ಸಾಗುತ್ತದೆ. ನಾಲ್ಕು ತಿಂಗಳ ವರ್ಷಕಾಲ ಕರಗಿ ಹೋಗುತ್ತವೆ. "ಕೊನೆಗೂ ಸಡಿಲಾದ ಬಾಹು ಬಂಧನಗಳಲ್ಲಿ ಇಬ್ಬರೂ ಕಳೆದ ನಾಲ್ಕಾರು ತಿಂಗಳು ಒಳಗೊಳಗೇ ಕರಗಿ ಪರಸ್ಪರ ಅರಳಿ ಬೀಜ ಬೀಜಗಳಲ್ಲಿ ಹುಟ್ಟಿ ಹಸಿರು ಮುಖ ಎದ್ದು ಬಿದ್ದು ನಗಲು ಸೂರ್ಯೋದಯದ ಕೈಯಲ್ಲಿ ಕಣ್ವರ ಅಂಗಳ ತೊಟ್ಟಿಲು" (ಪುಟ : 403) ಹೀಗೆ ಪ್ರಕೃತಿ ಪುರುಷರ ಸಮ್ಮಿಲನ. ವಿಶ್ವಾಮಿತ್ರ_ಮೇನಕೆಯರ ಸಮಾಗಮವಾಗಿ, ಶಾಕುಂತಲೆ ಜನನ, ಕಣ್ವ ಮಹರ್ಷಿಗಳ ಆಶ್ರಮ ಇತ್ಯಾದಿಗಳು ಸುಂದರವಾಗಿ ನಿರೂಪಣೆಗೊಂಡಿವೆ. ಕರಾವಳಿ ಮುಂಗಾರು ಪ್ರಾದೇಶಿಕತೆಯನ್ನು ಸೊಗಸಾಗಿ ಅನಾವರಣಗೊಂಡಿದೆ.

"ಮಳೆ ಅಂದರೆ ಗದ್ಯದ ಹಾಗೆ ಅನ್ನುತ್ತಾಳೆ ಇವಳು, ಅಲ್ಲ ಕಾವ್ಯದ ಹಾಗೆ ಅನ್ನಬೇಕು ಎನ್ನಲು ನನಗೂ ಮನಸುಂಟು ಆದರೆ ಮಳೆಗಾಗಿ ಜಗಳ ಬಿಟ್ಟು ನಮ್ಮ ನಮ್ಮ ಇಷ್ಟದ ಹಾಗೆ" ಎಂದು ಮಳೆಯ ಕುರಿತಾದ ರಚನೆಯಿದೆ. 'ಹರಿದ್ವರ್ಣದ ಈ ಹುಡುಗಿ' ಕವಿತೆಯಲ್ಲಿ ಭೂಮಿಯನ್ನು ಚಿತ್ರಿಸಲಾಗಿದೆ. 'ಕರಾವಳಿಯ ಮಳೆಗಾಲದ ನದಿಗಳು ಥೇಟು ಕಾಲೇಜು ಹುಡುಗರಂತೆ' ಕವಿಗೆ ಕಂಡಿದ್ದಾರೆ. ಕರಾವಳಿ ಪರಿಸರ, ಜಡಿಮಳೆ, ಬಿರುಗಾಳಿ, ಮೋಡ ಮುಂತಾದ ಪ್ರಾದೇಶಿಕ ಅಂಶಗಳನ್ನು ಕಾಲೇಜು ಹುಡುಗರೊಂದಿಗೆ ಸಮೀಕರಿಸಿದ್ದು ವಿಶೇಷವಾಗಿದೆ.(ಪುಟ : 409–410). "ಕರಾವಳಿಯ ಬೇಸಿಗೆಯ ಹೊಳೆ: ಸಂಕೋಚದಲ್ಲೇ ದಾರಿ ಮಾಡಿಕೊಳ್ಳುತ್ತಿರುವ ಕಾವ್ಯ_ಮುತ್ತೈದೆ" (ಪುಟ:411)ಯಾಗಿ ಕಾಣಿಸುತ್ತದೆ. ಮೇ ತಿಂಗಳ ಸಂಜೆ, ಸಂಜೆ ಇಳಿಯಿತು, ಕಾಮನಬಿಲ್ಲು ಕಣ್ಣುಗಳ ಯುಗಾದಿ ಮಗು, ದೀಪಾವಳಿ, ಹಪ್ಪಳ, ಕಡಲಿಗೊಂದು ದಡ ಇವೇ ಮೊದಲಾದ ಕವಿತೆಗಳಲ್ಲಿ ನಿಸರ್ಗ ಚಿತ್ರಣ ದಟ್ಟವಾಗಿದೆ. ಇಲ್ಲೆಲ್ಲ ಗ್ರಾಮೀಣ ಸಂವೇದನೆ ತಾನೇ ತಾನಾಗಿ ಮೈವೆತ್ತಿದೆ.

ಮೊಗಸಾಲೆಯ ನೆನಪುಗಳು (ಪುಟ:142), ನೆನಪಾದರೆ ಬೇಸಿಗೆಯಲ್ಲಿ ಮೊಗಸಾಲೆ(ಪುಟ:372), ಮೊಗಸಾಲೆ ನಾ ಹುಟ್ಟಿದ ಮನೆ(ಪುಟ:379) ಹಾಗೂ ಮೊಗಸಾಲೆಗೆ

ವಿದಾಯ(ಪುಟ:351) ಹೀಗೆ ಮೊಗಸಾಲೆ ಕುರಿತಾಗಿ ನಾಲ್ಕು ಕವಿತೆಗಳಿವೆ. ಇಲ್ಲೆಲ್ಲ ಗ್ರಾಮೀಣ ಸಂವೇದನೆ ತೀವ್ರತರವಾಗಿದೆ. "ಸಾಹಿತ್ಯಕ್ಕೆ ನಿರ್ಮಲ ಮನಸ್ಸಿನಿಂದ ಪ್ರತಿಕ್ರಿಯಿಸುವ ಎಷ್ಟೇ ಸರಳವಾದ ಅಭಿಪ್ರಾಯಗಳಿದ್ದರೂ ಅವು ಸ್ವಾಗತಾರ್ಹವೇ. ಹಾಗೆಯೇ ಕವಿ ಸಮಯದಲ್ಲಿ ಮುಗ್ಧನಾಗಿ ತನ್ನ ಸುತ್ತಲಿನ ಪ್ರಕೃತಿಗೆ, ಜೀವನಕ್ಕೆ ಮತ್ತು ಬಾಳಿಗೆ ಪ್ರತಿಕ್ರಿಯಿಸುವ ಕವಿಯ ಭಾವನೆಗಳೂ ಅಷ್ಟೇ ಮಹತ್ವದವುಗಳು. ಬಂಧ, ರಚನೆ, ವಸ್ತು, ಸಡಿಲ, ಬಿಗಿ ಇವು ನಂತರದ ವಿಷಯಗಳು. ಹೃದಯದಿಂದ ಹೃದಯಕ್ಕೆ ಹರಿದುಬಂದ ಕವಿತೆಗಳು ಇಲ್ಲಿವೆ" ಎಂದು ಹೇಳಿರುವ ಮೈಸೂರಿನ ಮಾಧವ ಕುಲಕರ್ಣಿಯವರ ಮಾತುಗಳು ಮೌಲಿಕವಾಗಿವೆ. ಡಾ।ಮೊಗಸಾಲೆಯವರ ಸಮಗ್ರ ಕಾವ್ಯದ ಗಂಭೀರ ಅಧ್ಯಯನವಾಗಬೇಕಾಗಿದೆ. ಹಾಗಾದಾಗ ಮಾತ್ರ ಅವರ ಕಾವ್ಯ ನೆಲೆ, ಪ್ರೇರಣೆ-ಧೋರಣೆಗಳು ಪ್ರಮುಖ ಆಶಯಗಳು, ವಿವಿಧ ಒಳನೋಟಗಳು ಓದುಗರಿಗೆ ದಕ್ಕುತ್ತವೆ. ಪ್ರಸ್ತುತ 'ಗ್ರಾಮೀಣ ಸಂವೇದನೆ' ಪುಟ್ಟ ಪ್ರಯತ್ನವಾಗಿದೆ.

o

# ಹೊರಳುದಾರಿಯಲ್ಲಿ ಮೊಗಸಾಲೆಯವರ ಕಾವ್ಯ

ಮಾಧವ ಕುಲಕರ್ಣಿ

1994ರಲ್ಲಿ ಲಾವ್‌ತ್ಸು ವಿರಚಿತ ದಾವ್ ದ ಜಿಂಗ್ (ಪಥ ಧರ್ಮ ಸೂತ್ರ)ವನ್ನು ಡಾ. ಯು.ಆರ್. ಅನಂತಮೂರ್ತಿಯವರು ಅನುವಾದಿಸಿದ್ದನ್ನು ಅಕ್ಷರ ಪ್ರಕಾಶನದವರು ಪ್ರಕಟಿಸಿದ್ದಾರೆ. ಅದನ್ನು ಓದಿ ಪ್ರಭಾವಿತರಾಗಿ ತಮ್ಮ ಕಾವ್ಯಪಥವನ್ನು ಬದಲಿಸಿದವರಲ್ಲಿ ನಾ. ಮೊಗಸಾಲೆಯವರೂ ಒಬ್ಬರಿರಬಹುದು. ಮೊಗಸಾಲೆಯವರ 'ಇದಲ್ಲ-ಇದಲ್ಲ' ಕವನ ಸಂಕಲನವು 2003ರಲ್ಲಿ ಪ್ರಕಟವಾಗಿದೆ. ಇದು ಅವರ ಸಮಗ್ರ-ಕಾವ್ಯ 'ಅರುವತ್ತರ ತೇರು'ನಲ್ಲಿಯ ಕೊನೆಯ ಕವನ ಸಂಕಲನ. 2006ರಲ್ಲಿ ಅವರ ಮತ್ತೊಂದು ಕವನ ಸಂಕಲನ "ಇಹಪರದ ಕೊಳ" ಪ್ರಕಟವಾಗಿದೆ. 'ಅರುವತ್ತರ ತೇರು'ಗೆ ನಾನು ಮುನ್ನುಡಿ ಬರೆದಾಗ ಅನಂತಮೂರ್ತಿಯವರ ದಾವ್ ದ ಜಿಂಗ್‌ದ ಭಾಷಾಂತರನ್ನು ನಾನಿನ್ನೂ ಓದಿರಲಿಲ್ಲ. ಆದರೆ ಅದನ್ನು ಮತ್ತು 'ಇದಲ್ಲ ಇದಲ್ಲ' ಕವನ ಸಂಕಲನಗಳನ್ನು ಗಮನಿಸಿದ ನಂತರ ನಾನು ನನ್ನ ಮುನ್ನುಡಿಯನ್ನೇ, ಇನ್ನೊಮ್ಮೆ ಪರಿಶೀಲಿಸಿದೆ. ಅದರಲ್ಲಿ 'ಇದಲ್ಲ ಇದಲ್ಲ' ಕಾವ್ಯ ಸಂಕಲನದಲ್ಲಿ ಆಧ್ಯಾತ್ಮದ ಸ್ಪರ್ಶವಿರುವುದನ್ನು ನಾನು ಗುರುತಿಸಿದ್ದನ್ನು ಕಂಡು ನನಗೆ ಸಂತೊಷವಾಯಿತಲ್ಲದೆ ಈ ಆಧ್ಯಾತ್ಮದ ಸ್ವರೂಪವನ್ನು ಕುರಿತು ಮತ್ತೊಮ್ಮೆ ಯೋಚಿಸುವಂತಾಯಿತು. ಅದಕ್ಕೇ ಈಗ 'ಇದಲ್ಲ ಇದಲ್ಲ' ಮತ್ತು 'ಇಹಪರದ ಕೊಳ' ಕುರಿತು ಈ ಲೇಖನ ಬರೆಯಬೇಕಾಗಿದೆ. ಈ ಅರ್ಥದಲ್ಲಿ ಮೊಗಸಾಲೆಯವರ ಕಾವ್ಯದಲ್ಲಿ ಉಂಟಾದ ಈ ಹೊಸ ತಿರುವನ್ನು ಕುರಿತು ಅರ್ಥ ಮಾಡಿಕೊಳ್ಳುವ ಪ್ರಯತ್ನ ಕೂಡ ಇದು.

ಮೊಗಸಾಲೆಯವರ ಮೊದಲಿನ ಕವನಸಂಕಲನಗಳಲ್ಲಿ ಸಮುದ್ರ, ಕಾಂತಾವರದ ಬೆಳಗು, ಕಮ್ಮಾರ ಶಾಲೆಯಲ್ಲಿಯ ತಿದಿ, ಬಿಟ್ಟು ಬಂದ ಊರು ಮೊಗಸಾಲೆ, ತನ್ನದನ್ನಾಗಿ ಮಾಡಿಕೊಂಡ ಕಾಂತಾವರ, ಮುಂತಾದುವುಗಳೆಲ್ಲ ಕಾವ್ಯವಸ್ತುಗಳಾಗಿ ಮೂಡಿಬಂದಿವೆ. ಹಾಗೆಯೇ ಸೃಷ್ಟಿಯೊಡನೆಯ ಕವಿಯ ಸಂಬಂಧ ಕೂಡ ಅವರ ಕಾವ್ಯವಸ್ತುವಿನ ಮಹತ್ವದ ಅಂಗವಾಗಿ ತೆರೆದುಕೊಂಡಿದೆ. "ಇದಲ್ಲ ಇದಲ್ಲ" ಕವನ ಸಂಕಲನದಲ್ಲಿ ಕೂಡ ಅವರ ಈ ಮೊದಲಿನ ಇಂಥ ಕಾವ್ಯದನಿಗಳು ಅಭಿವ್ಯಕ್ತಿಯನ್ನು ಪಡೆಯುತ್ತವೆ. ಅದರೊಡನೆಯೇ ತಾವು ಕೂಡ ಆಧ್ಯಾತ್ಮ ಅಥವ ಜಗತ್ತನ್ನು ಹೊಸ ದೃಷ್ಟಿಕೋನದಿಂದ ನೋಡುವ ಒಂದು ಆಯಾಮವೂ ಬಂದು ಸೇರಿಕೊಳ್ಳುತ್ತದೆ. ಈ ಹೊಸ ದೃಷ್ಟಿಕೋನವನ್ನು "ಇದಲ್ಲ ಇದಲ್ಲ" ಕವನವೇ

ಚೆನ್ನಾಗಿ ಪ್ರತಿಬಿಂಬಿಸುತ್ತದೆ.

ಇದು ತನ್ನದಲ್ಲ ಹೊರಗಿನದ್ದು ಎಂದು
ತಿಳಿದುಕೊಂಡಂತೆ– ಮರ ಹೂಗಳನ್ನು
ಇದಲ್ಲ ಇದಲ್ಲ ತಿಳಿವು
ಎಂದು ಬುದ್ಧ ಎದ್ದ

ಮರವು ಹೂವುಗಳು ತನ್ನವಲ್ಲ ಎಂದು ತಿಳಿದುಕೊಳ್ಳಲು ಕಾರಣ ಅವುಗಳ ಅಲ್ಪ ಆಯುಷ್ಯ. ಮರವೂ ಶಾಶ್ವತವಲ್ಲ. ಆದರೆ ಹೂವುಗಳಿಗೆ ಹೋಲಿಸಿದರೆ ಹೆಚ್ಚುಕಾಲ ಬಾಳುತ್ತದೆ. ಆದರೆ ಮರಕ್ಕೆ ಇಷ್ಟೆಲ್ಲ ಅರಿವಿಲ್ಲ! 'ಬಾಡಿಬಿದ್ದ ಹೂವುಗಳೆಲ್ಲ' ಕೊಳೆತು ನೆಲಸೇರಿ ಅದೇ ಮರಕ್ಕೆ ಜೀವಸೆಲೆಯಾಗಿ ಮತ್ತದೇ ಮರದಲ್ಲಿ ಹೂವಾಗುತ್ತವೆ. ಇದನ್ನು ಬುದ್ಧ ಅರಿತ. ಅರಿವಿನ ಪ್ರಥಮ ಮೆಟ್ಟಲಿದು ಕವನದಲ್ಲಿ. ಹೀಗೆಯೇ ಎಲೆಗಳು ಕೂಡ.ನೆರಳಿತ್ತ ಎಲೆಗಳು ಉದುರಿ ಹೊಸ ಎಲೆಗಳು ಹುಟ್ಟಿದವು. ಮರಕ್ಕೆ ಹೂವು ಅರಳುವುದೇಕೆ ಎಂದು ತಿಳಿದುಕೊಳ್ಳುವ ಬಯಕೆ ಇಲ್ಲ, ಹೂವು ಕೂಡ 'ಕ್ಷಣ ಭಂಗುರ'ದ ತನ್ನನ್ನು ಮರವೇಕೆ ಸೃಷ್ಟಿಸುತ್ತಿದೆ ಎಂದು ಪ್ರಶ್ನಿಸುವುದಿಲ್ಲ.

ಮರದಡಿಯಿಂದ ಬುದ್ಧ ಎದ್ದ
ಮರದ ಹಾಗೆ
ಮರ ಬೇರೆ ಅಲ್ಲ ಹೂವೇ ಬೇರೆ ಅಲ್ಲ
ಎಂದಂತೆ

ಹೀಗೆ ಎದ್ದ ಬುದ್ಧನನ್ನು ಋತುಗಳು ಸ್ವಾಗತಿಸುತ್ತವೆ ಮತ್ತು ಅದು ಅವನು ಮರಳಿ ಬರುವ ದಾರಿಯೂ ಆಯಿತು. ಮರಕ್ಕೂ, ಹೂವಿಗೂ ಇರುವ ಅವಿನಾಭಾವ ಸಂಬಂಧ ಮತ್ತು ಅದರ ಅರಿವು ಹೂ–ಮರಗಳಿಗಿರುವಂತೆ– ಬುದ್ಧನಿಗೂ ಇದೆ. ಕೊನೆಗೆ 'ತಿಳಿವು' ಮತ್ತು 'ಅರಿವಿನ' ಮಧ್ಯದ ವ್ಯತ್ಯಾಸವನ್ನು ಕವಿ ಹೀಗೆ ಗುರುತಿಸುತ್ತಾರೆ:

ಹೂವನ್ನು ಮರ ಅರಿತಿದೆ
ಮರವನ್ನು ಹೂ ಅರಿತಿದೆ
ನಿಮಗೂ ಇದರ ತಿಳಿವಿದೆ
ಆದರೆ ತಿಳಿವಿದೆ ಎಂಬ ಅರಿವಿಲ್ಲ ಅಷ್ಟೆ

'ತಿಳಿವಳಿಕೆ' ಮತ್ತು 'ಅರಿವು' ಪ್ರಜ್ಞೆಯ ಎರಡು ವಿಭಿನ್ನ ಪಾತಳಿಗಳು. ತಿಳಿವಳಿಕೆಯಲ್ಲಿ 'ಮಾಹಿತಿ' ಇದೆ, 'ಅರಿವಿ'ನಲ್ಲಿ ಅನುಭವವಿದೆ. ಈ ಮಾಹಿತಿ ಮತ್ತು ಅನುಭವದ ವ್ಯತ್ಯಾಸಗಳೇ ಬುದ್ಧನನ್ನು ಇತರರಿಗಿಂತ ಭಿನ್ನವಾಗಿಸಿದೆ. ಅಂದರೆ ಕವಿಯು 'ಮಾಹಿತಿ ಆಧಾರಿತ ಜ್ಞಾನ' ಮತ್ತು 'ಅನುಭವ ಜನ್ಯ ಅರಿವಿನ' ಬಗೆಗೆ ಬಹು ತೀವ್ರವಾಗಿ ಈ ಕವನ ಸಂಕಲನದ ಕಾಲದಲ್ಲಿ ಬಿಂಬಿಸಿದ್ದಾರೆ ಎಂದು ಗೊತ್ತಾಗುತ್ತದೆ. ಮೊಗಸಾಲೆಯವರಿಗೆ 'ಕೊಳಲು' ಕಾವ್ಯವಸ್ತುವಾಗಿ ಬಹುವಾಗಿ ಕಾಡಿದೆ ಮತ್ತು ವ್ಯಾಪಿಸಿದೆ. 'ಕೊಳಲು' ಎಂಬ ಕವನದಲ್ಲಿ ಬಿದಿರಿನಿಂದ ಉತ್ಪನ್ನವಾದ ಕೊಳಲು ಹೊರಡಿಸುವ ಸಂಗೀತಕ್ಕೆ ಕೈಬೆರಳುಗಳ ಅವಶ್ಯಕತೆ

ಇದೆ ಎಂಬ ಅರಿವಿದೆ. ಆದರೆ ಅದರಿಂದ ಹೊರಡುವ ಸ್ವರಗಳಿಗಿಂತ 'ಕೊಳಲಿನ' ಕಲ್ಪನೆಯೇ ಅದ್ಭುತ ಎನ್ನುತ್ತಾರೆ. ಸೃಷ್ಟಿಯಿಂದ ಪಡೆದ ತುಂಡೊಂದು ಸಂಗೀತ ವಾದ್ಯವಾಗಿ ಮಾರ್ಪಾಡಾಗುವ ಪರಿಯಲ್ಲಿಯ ಕಲ್ಪನೆ, ಕೊಳಲು ಹೊರಡಿಸುವ ಸಂಗೀತಕ್ಕಿಂತ ದೊಡ್ಡದು. ಹೀಗೆ ಸೃಷ್ಟಿಯಲ್ಲಿ ನಡೆಯುವ ಕ್ರಿಯೆಯಲ್ಲಿಯೇ 'ಲೀಲೆ' ಇದೆ ಎಂಬ ಚಿಂತನೆ 'ಇದಲ್ಲ ಇದಲ್ಲ' ಸಂಕಲನದಲ್ಲಿ ಪ್ರಾರಂಭವಾಗುತ್ತದೆ.

ಈ ಸಂಕಲನದಲ್ಲಿಯ 'ಕಾರಂತರು' ಮತ್ತು 'ಪಿ. ಲಂಕೇಶ್' 'ವೃತ್ತ ಮಧ್ಯ' 'ಹೊಳೆ' ಮುಂತಾದ ಕವನಗಳು, ಕಥನ ಕವನದ ಹಲವಾರು ಒಳ್ಳೆಯ ಅಂಶಗಳನ್ನು ಪಡೆದುಕೊಂಡಿವೆ. ಈ ದೃಷ್ಟಿಯಿಂದ ನೋಡಿದಾಗ ಈ ಘಟ್ಟದಲ್ಲಿ ಮೊಗಸಾಲೆಯವರು ಒಟ್ಟು ಮೂರು ಮಾರ್ಗಗಳನ್ನು ತಮ್ಮೆದುರು ಇಟ್ಟುಕೊಂಡಿದ್ದಾರೆ. ಮೊದಲನೆಯದು ತಮ್ಮ ಈ ಮೊದಲಿನ ಕಾವ್ಯದ, ಪ್ರಕೃತಿ ಮತ್ತು ವ್ಯಕ್ತಿಯ ಮಧ್ಯದ ಅವಿನಾಭಾವ ಸಂಬಂಧಗಳ ಶೋಧನೆಯ ಮಾರ್ಗ, ಎರಡನೇಯದು ಕಥನ ಕವನದ ಮಾರ್ಗ ಮತ್ತು ಮೂರನೇಯದು ತಾವು ಹೊಸದಾಗಿ ಪಡೆದುಕೊಂಡ ಆಧ್ಯಾತ್ಮ ಪಥದ ಅಭಿವ್ಯಕ್ತಿ ಮಾರ್ಗ. "ಇದಲ್ಲ, ಇದಲ್ಲ" ಕವನ ಸಂಕಲನವು ಪ್ರಕಟವಾದದ್ದು 2002ರಲ್ಲಿ ಮತ್ತು ನಂತರದ "ಇಹಪರದ ಕೊಳ" ಸಂಕಲನವು ಪ್ರಕಟವಾದದ್ದು 2006ರಲ್ಲಿ. ಈ ಮಧ್ಯದ ನಾಲ್ಕು ವರ್ಷದ ಅವಧಿಯಲ್ಲಿ ಮೊಗಸಾಲೆಯವರು ಆಧ್ಯಾತ್ಮಪಥದ ಮಾರ್ಗವನ್ನೇ ತಮ್ಮ "ಇಹಪರದ ಕೊಳ" ಕಾವ್ಯ ಸಂಕಲನಕ್ಕೆ ಕಾವ್ಯವಸ್ತುವನ್ನಾಗಿ ಆರಿಸಿಕೊಂಡಿದ್ದಾರೆ. ಇದು ಅವರ ಮಟ್ಟಿಗೆ ಹೊಸ ಕಾವ್ಯಮಾರ್ಗವಾದರೂ ಈ ವೇಳೆಗಾಗಲೇ ಕನ್ನಡ ಕಾವ್ಯ ಲೋಕವು ಇದೇ ಕಾವ್ಯವಸ್ತುವಿನ ವಿವಿಧ ಆಯಾಮಗಳಿಗೆ ಸ್ಪಂದಿಸತೊಡಗಿದ್ದು ಮತ್ತು ನವ್ಯ, ನವ್ಯೋತ್ತರ ಕಾವ್ಯ ಮಾರ್ಗಗಳಿಂದ ದೂರ ಸರಿದು ಹೊಸದೊಂದು ಕಾವ್ಯ ಮಾರ್ಗಗಳಿಂದ ದೂರ ಸರಿದು ಹೊಸದೊಂದು ಕಾವ್ಯಮಾರ್ಗವನ್ನು ಅರಸುತ್ತಿರುವುದರ ಸ್ಪಷ್ಟ ಸೂಚನೆಗಳಿವೆ. ಇದರ ಒಂದು ಪ್ರಯತ್ನವಾಗಿ ಕೆ.ಎಸ್. ನರಸಿಂಹಸ್ವಾಮಿ ಮತ್ತು ಪು.ತಿ. ನರಸಿಂಹಾಚಾರ್ಯರ ಕಾವ್ಯದ ಪುನರ್‌ಮೌಲ್ಯಮಾಪನದ ಪ್ರಯತ್ನಗಳೂ ನಡೆದಿವೆ. "ಇಹಪರದ ಕೊಳ" ಕವನ ಸಂಕಲನದ ಆಧ್ಯಾತ್ಮಿಕ ಆಯಾಮಗಳನ್ನು ಕುರಿತು ಬರೆಯುವಾಗ ಸಧ್ಯದ ಈ ಕಾವ್ಯ ಸಂದರ್ಭದ ಸೂಚನೆ ಅವಶ್ಯಕವಾಗಿದೆ. ಈ ತರಹದ ಪುನರ್‌ಮೌಲ್ಯಮಾಪನ ಮತ್ತು 'ಆದಿಮ' ಎನ್ನಬಹುದಾದನ್ನು ಕುರಿತ ಚರ್ಚೆಯ ಹಿನ್ನೆಲೆಯಲ್ಲಿ "ಇಹಪರದ ಕೊಳ"ದ ಪದ್ಯಗಳು ಮೂಡಿಬಂದಿವೆ. ಈ ದೃಷ್ಟಿಯಿಂದ ಈ ಕಾವ್ಯವು ಸಮಕಾಲೀನ ಕಾವ್ಯಧೋರಣೆಗಳನ್ನು ಮೈಗೂಡಿಸಿಕೊಂಡೇ ಮುಂದುವರಿದಿದೆ.

ಮೊಗಸಾಲೆಯವರ ಈ ಹೊಸ ಕಾವ್ಯದ ಆಯಾಮವನ್ನು "ಇದಲ್ಲ ಇದಲ್ಲ" ಕವನ ಸಂಕಲನದ ಒಂದು ಪದ್ಯ ಮತ್ತು "ಇಹಪರದ ಕೊಳ" ಸಂಕಲನ ಒಂದು ಪದ್ಯದ ವಿಶ್ಲೇಷಣೆಗಳ ಮೂಲಕ ವಿವರಿಸಲು ಪ್ರಯತ್ನಿಸುತ್ತೇನೆ.

"ಇದಲ್ಲ ಇದಲ್ಲ" ಸಂಕಲನದಲ್ಲಿ "ಕೊಳಲು" ಎಂಬ ಕವನವಿದೆ. "ಇಹಪರದ ಕೊಳ"ದಲ್ಲಿ "ಒಪ್ಪಿಕೊಳ್ಳುವುದು" ಎಂಬ ಪದ್ಯವಿದೆ. ಎರಡೂ ಕವನದ ಕಾವ್ಯವಸ್ತು 'ಕೊಳಲು.' ಆದರೆ ಮೊದಲಿನ ಕೊಳಲಿಗೂ, ನಂತರದ ಕೊಳಲಿಗೂ ಇರುವ ವ್ಯತ್ಯಾಸವೇ ಮೊಗಸಾಲೆಯವರ

ಕಾವ್ಯದಲ್ಲಾದ ವ್ಯತ್ಯಾಸವನ್ನು ಸೂಚಿಸುತ್ತದೆ. ಮೊದಲಿನ ಪದ್ಯ "ಕೊಳಲಿ"ನ ಈ ಸಾಲುಗಳನ್ನು ಗಮನಿಸಬೇಕು:

ದೇವರೇ ಇರಬಹುದೇ ಈ ಸ್ವರಗಳು
ನನ್ನ ಬೆರಳುಗಳಿಂದ ಪುನರ್ ಸೃಷ್ಟಿಗೊಂಡು?
ನುಡಿಸುತ್ತಿರಬಹುದೇ ದೇವರೆಂಬುವನು ಇದ್ದರೆ
ನನ್ನ ತುಟಿಗಳ ನಡುವೆ ಉಸಿರಲ್ಲಿ ನಿಂತು?

ಸಂಗೀತವು ಮಾನವನನ್ನು ಮೀರಿದ್ದು. ಅದು ತನ್ನ ಮತ್ತು ಕೊಳಲಿನ ಮಧ್ಯದ ಉಸಿರಿನಲ್ಲಿ ದೇವರನ್ನು ಸ್ಥಾಪಿಸುವುದು ಇತ್ಯಾದಿ ವಿವರಗಳು, ದೇವರನ್ನು ಬೇರೆ ರೂಪದಲ್ಲಿ ನೋಡಲು ಇಷ್ಟಪಡುತ್ತಿರುವುದಕ್ಕೆ ಉದಾಹರಣೆಯಾಗಿದೆ. ಪದ್ಯ ಕೊನೆಯಾಗುವುದನ್ನು ನೋಡಿ:

ಸ್ವರಗಳಿಗಿಂತಲೂ ಅದ್ಭುತವಾದ
ಕಲ್ಪನೆ ಅಲ್ಲವೇ ಕೊಳಲು?
ಸಂಗೀತ ಅಂದರೆ ಇನ್ನೇನಿದೆ?
ಅಥವ ಹೀಗೆ ಇರಬಾರದೇಕೆ?

ಬಿದಿರು ಕೊಳಲಾಗುವ ಪ್ರಕ್ರಿಯೆಯೇ ಸಂಗೀತವಾಗುವುದು ಸಂಗೀತಕ್ಕಿಂತ ದೊಡ್ಡದಾಗುವುದು ಮತ್ತು ಅವರಲ್ಲಿ ದೈವತ್ವವನ್ನು ಕಾಣವುದು ಇಲ್ಲಿಯ ಮೂಲ ಆಶಯ. ದೇವಸ್ಥಾನದ ದೇವರಿಂದ ದೂರ ಸರಿದು, ನಾಸ್ತಿಕನಾಗದೆ, ದೇವರನ್ನು ಹುಡುಕುವ ಆಕಾಂಕ್ಷೆ ಈ ಕವನದ ಹಿಂದೆ ಕೆಲಸ ಮಾಡಿದೆ. ಇನ್ನು "ಇಹಪರದ ಕೊಳ", "ಒಪ್ಪಿಕೊಳ್ಳುವುದು" ಪದ್ಯದಲ್ಲಿಯ ಕೊಳಲು,

ಕಾಡೇ ಕರುಣೆಯಿಂದ ಕಳುಹಿಸಿದ ಹಾಗಿರುವ
ಈ ಬಿದಿರು ತುಂಡು
ನಾಡಿಗೆ ಬಂದು ಕೊಳಲಾಗಿದೆ.

ಮೊದಲಿನ ಕೊಳಲಿನಲ್ಲಿ ಸ್ವರಗಳು ದೇವರಾಗುತ್ತವೆ. ಉಸಿರನ್ನು ನಿಯಂತ್ರಿಸುವವನೂ ದೇವರಾಗುತ್ತಾನೆ. ಕೊಳಲಿನ ಕಲ್ಪನೆಯೂ ಸಂಗೀತವಾಗುತ್ತದೆ. ಎರಡನೆಯ ಕೊಳಲಿನಲ್ಲಿ 'ಕಾಡು ಕಳುಹಿಸಿದ' ಬಿದಿರ ತುಂಡು ನಾಡಿಗೆ ಬಂದು ಕೊಳಲಾಗಿದೆ. ಮೊದಲಿನ ಕೊಳಲು, ಕೊಳಲಾಗಿ ಮಾರ್ಪಡುವುದು ಸಂಗೀತ. ಎರಡನೇಯ "ಕೊಳಲು" ನಾಡಿನಿಂದಾಗಿ ಕೊಳಲಾಗಿದೆ. ಎರಡನೇಯ ಕೊಳಲಿನ ಸ್ವರಗಳು 'ಕೋಗಿಲೆ' 'ನವಿಲು' ಮತ್ತು 'ಕಾಡಿನ ಹೂವು' ಗಳಂತೆ ತೋರುತ್ತವೆ. ನಾಡಿಗೆ ಬಂದು ಕೊಳಲಾದ ಮತ್ತು ಕಾಡೇ ಕರುಣಿಸಿದ ಕೊಳಲು ಮತ್ತೆ ಬಿದಿರ ತುಂಡಾಗುವುದು ಸಾಧ್ಯವಿಲ್ಲ. ಕಲೆಯು ತನ್ನ ಮೂಲಸ್ಥಾನಕ್ಕೆ ಹೋಗಿ ತನ್ನನ್ನು ನಿರ್ಮಿಸಿದ ಘನವಸ್ತುವಾಗಲಾರದು. ಇದು ದುರಂತವಲ್ಲ. ವಸ್ತು ಸ್ಥಿತಿ ಮಾತ್ರ. ಕೊಳಲಿನ ಹುಟ್ಟಿನ ಬಗ್ಗೆ ಯೋಚಿಸಿದ ಕವಿ ಇಲ್ಲಿ ಕೊಳಲಿನ ಅಸ್ತಿತ್ವದ ನಂತರದ ಸ್ಥಿತಿಯ ಬಗ್ಗೆ ತಟಸ್ಥ ಮನಸ್ಥಿತಿಯಿಂದ ಯೋಚಿಸುತ್ತಾರೆ. ಈ ತಟಸ್ಥ ಸ್ಥಿತಿಯೇ "ಇಹಪರದ ಕೊಳ" ಕವನ ಸಂಗ್ರಹವನ್ನು ನಿಯಂತ್ರಿಸುತ್ತದೆ.

ಇನ್ನು "ಇಹಪರದ ಕೊಳ" ಪದ್ಯವೇ 'ಇಹ' ಮತ್ತು 'ಪರ'ಕ್ಕೆ ವ್ಯಾಖ್ಯೆ ಒದಗಿಸಲು ಪ್ರಯತ್ನಿಸುತ್ತದೆ. 'ಇಳಿವುದು' ಮತ್ತು 'ಏರುವುದು' ಇಲ್ಲಿಯ ಸ್ಥಾಯಿಭಾವದ ಘಟನೆಗಳು.

ಸಂಭ್ರಮಿಸಿ ತೆರೆಗಳನ್ನು ಎಬ್ಬಿಸಿದೆ ಆ ಕೊಳ
ದಡದಿಂದ ಕೆಳಗಿಳಿದಾಗ ಬಾತುಗಳು
ಕೊಳದಲ್ಲಿ ಅರಳಿದ್ದ ಕಮಲಗಳಿಗೆ ಕನಸು;
ಬಾತುಗಳೊಂದಿಗೆ ಏರಬಹುದು ತಾವೂ ದಡವನ್ನು

'ಬಾತುಗಳು ಯಾವುವು, ಕಮಲಗಳು ಯಾವುವು' ಎಂದು ತಿಳಿದಂತೆ ಕೊಳ ಮೌನವಾಗುತ್ತದೆ. ಒಂದು ಇನ್ನೊಂದಾಗ ಬಯಸುವುದು ಕವನದಲ್ಲಿ ಮೂಡಿ ಬರುತ್ತದೆ. ಬಿಳಿಯ ಬಾತುಗಳಿಂದಾಗಿ ಇಡಿಯ ಕೊಳದಲ್ಲಿ ಬೆಳದಿಂಗಳೇ ಮೂಡಿದಂತಾಗಿದೆ. ಬಾಡುವ ಕಮಲಗಳೊಡನೆ ಬಾತುಗಳ ಕನಸು ಕೂಡ ಬಾಡುತ್ತವೆ. ಇಲ್ಲಿ ಬಾತುಗಳ ಕನಸು ಏನು? ಎಂಬ ಪ್ರಶ್ನೆ ಮೂಡುತ್ತದೆ. ಕಮಲಗಳಿಗೇನೊ ಬಾತುಗಳೊಂದಿಗೆ ಮೇಲೇರಬೇಕೆಂಬ ಕನಸಿದೆ. ಬಾತುಗಳ ಕನಸು ಕೂಡ ಕಮಲದಂತಾಗಬೇಕೆಂದೇ ಇರಬಹುದು. 'ಚಂದ್ರನ ಮುಖವ ನೇವರಿಸುವ ನೆಲದ ಗರಿಕೆ' ಎಂಬ ಸಾಲಿನೊಡನೆ ಕವನ ಕೊನೆಗೊಳ್ಳುತ್ತದೆ. ಚಂದ್ರ ಆಕಾಶದಲ್ಲಿ, ಗರಿಕೆ ನೆಲದಲ್ಲಿ, ಬಾತುಗಳು ಇಳಿಯುವುದು ದಂಡೆಯಿಂದ, ಕಮಲಗಳಿರುವುದು ದಂಡೆಯ ಕೆಳಗಿನ ಕೊಳದಲ್ಲಿ. ಒಂದಕ್ಕೆ ಇನ್ನೊಂದರ ಆಸೆ. ಆಗಲಾರದ ಸ್ನಿಗ್ಧ ಮೌನ. 'ಬಿಂಬ ಪ್ರತಿಬಿಂಬವಾಗಿ ಒಂದು ಇನ್ನೊಂದಕ್ಕೆ 'ಬಿಂಬ ಪ್ರತಿಬಿಂಬವಾಗಿ ಒಂದು ಇನ್ನೊಂದಕ್ಕೆ' ಎಂಬ ಸಾಲು ಮಧ್ಯದ ನುಡಿಯಲ್ಲಿ ಬರುತ್ತದೆ. 'ಒಂದು ಇನ್ನೊಂದಕ್ಕೆ 'ಬಿಂಬ ಪ್ರತಿಬಿಂಬ' ಇಂಥ ಪದ ಪ್ರಯೋಗಗಳು 'ಇದ್ದೂ ಇಲ್ಲದಂತೆ' 'ಕಂಡೂ ಕಾಣದಂತೆ' 'ವ್ಯಕ್ತವಾಗಿಯೂ ಅವ್ಯಕ್ತವಾಗಿರುವಂತೆ' ಮುಂತಾದ ಭಾವನೆಗಳನ್ನು ಮೂಡಿಸುತ್ತವೆ. ಇದು ಒಂದು ಅರ್ಥದಲ್ಲಿ ಕಾಣುವ ಜಗತ್ತಿನಲ್ಲೇ ಅದ್ವೈತವನ್ನು ಕಾಣುವ ಪರಿಯಂತೆ ತೋರುತ್ತದೆ. ಬದಲಾದದ್ದು ಮತ್ತೆ ಯಥಾಸ್ಥಿತಿಗೆ ಬಂದು ಮತ್ತೆ ಮರುದಿನ ಕ್ಷಣಕಾಲ ಬದಲಾಗುವ ಈ ಜಗದ ಸೋಜಿಗ ಮತ್ತು ಯಾವುದೂ ಸ್ಥಿರವಲ್ಲದ್ದು ಎಂಬ ಭಾವನೆ ಈ ಕವನದಲ್ಲಿ ಆಶ್ಚರ್ಯ ಹುಟ್ಟಿಸುವಂತೆ ಮೂಡಿ ಬರುತ್ತದೆ.

ಇದೇ ಜಾಡಿನಲ್ಲಿ ಬಂದ ಇನ್ನೊಂದು ಪದ್ಯ "ಬೆಟ್ಟ"ವನ್ನು ನೋಡಬಹುದು:

ಬೆಟ್ಟದ ಮೇಲೆ ಸುರಿಯುವ ಮಳೆ
ಕೆಳಗೆ ಹೊಳೆಯಿದೆ ಎಂದು ಸುರಿಯುವುದಿಲ್ಲ
ಕ್ಷುಲ್ಲಕ ಹುಲ್ಲೂ ಹುಟ್ಟಿ ಬೆಟ್ಟದಲ್ಲಿ
ಬೆಟ್ಟದ ಮೇಲಿದ್ದೇನೆಂದು ಬೀಗುವುದಿಲ್ಲ

ನಾನು ಈ ಲೇಖನದ ಪ್ರಾರಂಭದಲ್ಲಿಯೇ ನಮೂದಿಸಿದ "ದಾವ್ ದ ಜಿಂಗ್"ನಲ್ಲಿ ಒಂದು ಮಾತು ಹೀಗೆ ಬರುತ್ತದೆ "ತಾನು ಘನವಾಗಿದ್ದೇನೆಂದು ಗೊತ್ತಿಲ್ಲದಿರುವುದರಿಂದಲೇ ಘನವಾದದ್ದು ಘನವಾಗಿದೆ". ಸುರಿಯುವ ಮಳೆಗೆ ಕೆಳಗೆ ಹರಿಯುವ ನದಿಗೆ ತನ್ನಿಂದಲೇ ಒದಗುವುದು ನೀರು ಎಂಬ ಅರಿವಿಲ್ಲ. 'ಕ್ಷುಲ್ಲಕ' ಹುಲ್ಲಿಗೆ ಕೂಡ ತಾನು ಬೆಟ್ಟದ ಮೇಲಿರುವ ಅರಿವಿಲ್ಲ. ಈ ಅರಿವು ಮತ್ತು ತಿಳಿವಳಿಕೆಗಳು ಒಂದು ರೀತಿಯಲ್ಲಿ 'ಕಲಿಕೆ'ಯ ಮೆಟ್ಟಿಲುಗಳು.

ಕಲಿಕೆಯು ಮಾನವನ ಆದಿಮ ಅಂತರಂಗವನ್ನು ನಾಶಪಡಿಸಿಬಿಟ್ಟಿದೆ. ಆದರೆ ಆ ಕಲಿಕೆ ರಹಿತ 'ಬದುಕು' ಇನ್ನೂ ಆದಿಮಕ್ಕೂ ಆದಿಮವಾದ ಸೃಷ್ಟಿಯಲ್ಲಿದೆ. ಅದಕ್ಕೆ 'ಬೆಟ್ಟ' ಕವನ ಹೀಗೆ ಕೊನೆಗೊಳ್ಳುತ್ತದೆ:

ತಿಳಿಯದಂತೆ ನಿಂತಿರುವುದು ಬೆಟ್ಟ ತನ್ನನ್ನು
ಆದರೆ ನಾವು ನೋಡಬೇಕೆನ್ನುವಂತೆ– ಅದನ್ನು
ತಿಳಿದುಕೊಂಡಷ್ಟೂ ನಾವು ಅದು ಎತ್ತರಕ್ಕೇರುವುದು
ಇಳಿಯುತ್ತೇವೆ ನಾವು ಅದರಿಂದ ಎಂದುಕೊಂಡು

'ಏರುವುದು' 'ಇಳಿಯುವುದು' 'ತಿಳಿಯುವುದು' 'ಅರಿಯುವುದು' ಇವು ಮೊಗಸಾಲೆಯವರನ್ನು ತೀವ್ರವಾಗಿ ಕಾಡುತ್ತಿರುವ ಸಮಸ್ಯೆಗಳು. "ಇದಲ್ಲ ಇದಲ್ಲ" ಕವನದಲ್ಲಿ ಬುದ್ಧನ ಅರಿವು, ಮರದ ಅರಿವು ಇವು ಕಾವ್ಯವಸ್ತುಗಳಾದರೆ ಇಲ್ಲಿ "ಬೆಟ್ಟ" ಪದ್ಯದಲ್ಲಿ 'ಬೆಟ್ಟ ತನ್ನನ್ನೇ ತಿಳಿಯದಂತೆ' ನಿಂತಿದೆ.

ಮೊಗಸಾಲೆಯವರ ಮೊದಲಿನ ಕವನ ಸಂಕಲನಗಳಿಗೂ ಮತ್ತು ಕೊನೆಯ ಎರಡು ಸಂಕಲನದಲ್ಲಿ ಬಂದಿರುವ ಪದ್ಯಗಳಿಗೂ ಸಾಕಷ್ಟು ವ್ಯತ್ಯಾಸಗಳಿವೆ. "ದಾವ್ ದ ಜಿಂಗ್" ಪಥದ ಪ್ರಭಾವವನ್ನು ಕೊನೆಯ ಎರಡು ಸಂಕಲನದಲ್ಲಿ ಕಾಣಬಹುದೇ ಹೊರತು ಅವರು ತಮ್ಮ ಮೂಲ ಕಾವ್ಯ ಸೆಲೆಗಳಿಂದ ದೂರವಾಗಿಲ್ಲ. ಏಕೆಂದರೆ ದಾವ್ ಪಥವು ಒಂದು ರೀತಿಯ ತಟಸ್ಥ ಮನಸ್ಥಿತಿಯನ್ನು ಮತ್ತು ಮನಸ್ಸಿನ ಹೊಯ್ದಾಟಕ್ಕೆ ಕಡಿವಾಣ ಹಾಕುವ ಸೂತ್ರಗಳನ್ನು ಬೋಧಿಸುತ್ತದೆ. ಮೊಗಸಾಲೆಯವರ ಕಾವ್ಯ ಆ ತಟಸ್ಥ ಅಥವ ಧ್ಯಾನಸ್ಥ ಸ್ಥಿತಿಯನ್ನು ಮಾತ್ರ ತನ್ನದಾಗಿಸಿಕೊಂಡು ತನ್ನ ಸುತ್ತಲಿನ ಸ್ವಲ್ಪ ಮತ್ತು ಬದುಕನ್ನು ಒಂದು ಕಡೆ ಮತ್ತು ಮನುಷ್ಯ ಮತ್ತು ಕಲೆಯನ್ನು ಇನ್ನೊಂದು ಕಡೆ ತನ್ನ ಶೋಧನೆಯ ವಸ್ತುವನ್ನಾಗಿಸಿಕೊಳ್ಳತೊಡಗಿದೆ. ಇದು ಸಧ್ಯದ ಕಾವ್ಯ ಸಂದರ್ಭಕ್ಕೆ ಒದಗಿ ಬಂದ ಹೊಸ ಆಯಾಮವೆಂದೇ ನನ್ನ ಭಾವನೆ. ನವ್ಯರ ಕಾಲದಲ್ಲಿ ಬದುಕಿದ ನವ್ಯೋತ್ತರ ಕವಿಗಳ ಪ್ರಯೋಗಗಳನ್ನು ಅವಲೋಕಿಸುವುದರಲ್ಲಿ ಮತ್ತು ಅವರ ನಿರ್ಲಕ್ಷಿತ ಉತ್ತಮ ಕಾವ್ಯಗುಣಗಳನ್ನು ಪುನರುಜ್ಜೀವನಗೊಳಿಸುವುದರಲ್ಲಿ ತಪ್ಪೇನಿಲ್ಲ. ಆದರೆ ಅವರ ಪದ್ಯಪ್ರಕ್ರಿಯೆಗಳು ನವ್ಯ ಮತ್ತು ನವ್ಯಾನಂತರ ಏಕೆ ನಿರಾಕರಿಸಲ್ಪಟ್ಟವು ಎಂಬ ಪ್ರಶ್ನೆಗಳಿಗೆ ಉತ್ತರಗಳನ್ನು ಮತ್ತು ಅವುಗಳನ್ನು ನಿರಾಕರಿಸುವುದರಿಂದ ಕನ್ನಡ ಕಾವ್ಯ ದಕ್ಕಿಸಿಕೊಂಡ ಅಂಶಗಳನ್ನು ಹುಡುಕಬೇಕು ಮತ್ತು ಉತ್ತರಿಸಬೇಕು. ಇಲ್ಲವಾದರೆ ಪ್ರಾಸ, ಲಯಗಳನ್ನು ಹಿಡಿದ 'ಛಂದಸ್ಸು ಪ್ರಜ್ಞೆ'ಯ, ಲೋಲುಪ್ತತೆಯ ಕಾವ್ಯ ಇನ್ನೊಂದಿಷ್ಟು ವರ್ಷ ಕನ್ನಡ ಕಾವ್ಯಲೋಕವನ್ನು ಆಳಬಹುದೆಂಬ ಭೀತಿ ನನಗಿದೆ. ಮೊಗಸಾಲೆಯವರ "ಇದಲ್ಲ ಇದಲ್ಲ" ಮತ್ತು "ಇಹಪರದ ಕೊಳ" ಕವನ ಸಂಕಲನಗಳು ಹೊಸ ಮಾರ್ಗವನ್ನು ಅವುಗಳ ತಾಟಸ್ಥ್ಯ ಧೋರಣೆಯಿಂದಾಗಿಯೇ ತುಳಿಯುತ್ತವೆ. ಆದರೆ ತಮ್ಮ ಕಾವ್ಯದ ಮೂಲ ಸೆಲೆಗಳನ್ನು ಬಿಟ್ಟುಕೊಡದೆ ಮೊಗಸಾಲೆಯವರು ಈ ಧೋರಣೆಯನ್ನು ಹೊಂದಿರುವುದರಿಂದ ಅವರೊಬ್ಬ ಮಹತ್ವದ ಕವಿಯಾಗಿ ಕಾಣುತ್ತಿದ್ದಾರೆ.

O

# ಜೀವನ ಸಂತೋಷದ ಕವಿ : ನಾ.ಮೊಗಸಾಲೆ

ಎಸ್. ಮಂಜುನಾಥ್.

ನಾ.ಮೊಗಸಾಲೆಯೆಂದರೆ ನನ್ನ ಮನಸ್ಸಲ್ಲಿ ಮೂಡುವುದು ಬಾಲಕನ ಉತ್ಸಾಹದ ಅವರ ವ್ಯಕ್ತಿತ್ವ. ಈ ಉತ್ಸಾಹದಿಂದಾಗಿ ಅವರ ಊರು ಮತ್ತು ಜಿಲ್ಲೆಯಲ್ಲಿ ಅವರು ಎಷ್ಟೊಂದು ಸಾಹಿತ್ಯಕ ಕೆಲಸಗಳನ್ನು ಮಾಡಿದ್ದಾರೆ. ಸ್ವತಃ ಬರೆಯುವುದಷ್ಟೇ ಮುಖ್ಯ ಎಂದು ತಿಳಿಯುವವರ ನಡುವೆ ಅವರು ಭಿನ್ನರಾದವರು. ಒಂದು ರೀತಿಯಲ್ಲಿ ಈ ಎಲ್ಲ ಬಹು ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕವೂ ಅವರು ತಮ್ಮ ಸೃಜನಶೀಲ ಚೈತನ್ಯವನ್ನೇ ಪೋಷಿಸಿಕೊಳ್ಳುತ್ತ ಬಂದಿದ್ದಾರೆ.

ಅವರನ್ನು ನಾನು ಸಂಧಿಸಿದ ಮೊದಲ ಬಾರಿಯಿಂದಲೆ ಅವರು ನನ್ನನ್ನು ಬಹುಕಾಲದ ಆತ್ಮೀಯನೆನ್ನುವಂತೆ ನಡೆಸಿಕೊಂಡಿರುವುದಕ್ಕೆ ನನಗೆ ತೋಚುವ ಕಾರಣವೆಂದರೆ ಕವಿತೆಯ ಬಗ್ಗೆ ಅವರಿಗಿರುವ ಪ್ರೀತಿಗಿಂತಲೂ ಮಿಗಿಲೆನಿಸುವ ವ್ಯಾಮೋಹ. ಅವರ ಕವಿತೆಗಳಲ್ಲಿ ಈ ವ್ಯಾಮೋಹ ಮೈದುಂಬಿದೆ. ಈ ವ್ಯಾಮೋಹದ ದೆಸೆಯಿಂದಾಗಿಯೋ ಅವರ ಹಲವು ಕವಿತೆಗಳಲ್ಲಿನ ಅನುಭವ ದಡಮೀರಿ ಉಕ್ಕುತ್ತದೆ; ತಕ್ಕ ಪಾತ್ರವನ್ನು ಕಂಡುಕೊಳ್ಳದೆ ಹರಡಿಕೊಳ್ಳುತ್ತದೆ. ಆದರೂ ಅವರು ಬರೆಯುವ ಪ್ರತೀ ಶಬ್ದದಲ್ಲೂ ಜೀವ ಪುಟಿಯುತ್ತಿರುತ್ತದೆ. ಅಂತಲೇ ಅವರು ಜೀವನ ಸಂತೋಷದ ಕವಿಯಾಗಿ ನನಗೆ ಕಾಣುತ್ತಾರೆ.

ಅವರ ಕವಿತೆಗಳಲ್ಲಿ ಓದುಗರಿಗೆ ಅತ್ಯಂತ ಪ್ರಿಯವೆನಿಸುವ ಗುಣವೆಂದರೆ ಪರಿಸರದೊಂದಿಗಿನ ಅವುಗಳ ಆಪ್ತತೆ. ಅದು ಪ್ರಾಕೃತಿಕ ಪರಿಸರವಿರಬಹುದು ಅಥವಾ ಅವರ ಸುತ್ತಲಿನ ಸಮಾಜವಿರಬಹುದು – ಮೊಗಸಾಲೆಯವರ ಕವಿತೆಗಳಿಗೆ ಅವುಗಳೊಂದಿಗೆ ಸ್ನೇಹಪೂರ್ಣ ಸಂಬಂಧವಿರುತ್ತದೆ. ಒಬ್ಬ ಕವಿ ಹಾಗೆ ತನ್ನ ಸುತ್ತಲ ಊರು ಕೇರಿ, ಗುಡ್ಡ, ಮಳೆ, ಹೊಳೆ, ಜನಗಳಿಂದ ತನ್ನ ಜೀವಸತ್ವಗಳನ್ನು ಪಡೆದುಕೊಳ್ಳುವುದು ಬಹಳ ಸಹಜ ಮತ್ತು ನೈಜವಾದುದು– ಎಲೆಗಳಿಂದ ಬೆಳಕು ಮತ್ತು ಬೇರುಗಳಿಂದ ಮಣ್ಣಿನ ಸಾರವನ್ನು ಮರ ಪಡೆದುಕೊಳ್ಳುವಂತೆ.ಕವಿತೆ ಇದರಿಂದ 'ನೈಸರ್ಗಿಕ'ವೆನಿಸಿಕೊಳ್ಳುತ್ತದೆ, ಮತ್ತು ಅದು ಪರಿಭಾವಿಸಬಹುದಾದ ಯಾವುದೇ ಆಧ್ಯಾತ್ಮಿಕತೆಯೂ ಹುಸಿಯೆನಿಸತೊಡಗುತ್ತದೆ. ಮೊಗಸಾಲೆಯವರ ಬಹುಪಾಲು ಪದ್ಯಗಳು ಅವರ ಕೈಯಳತೆಯ ದೂರದಲ್ಲಿರುವ ಸಂಗತಿಗಳ ಬಗ್ಗೆ ಇದ್ದು ಅವರದ್ದೇ ಆದ ಒಂದು ಕಾವ್ಯಲೋಕವನ್ನು ನಿರ್ಮಿಸುತ್ತವೆ. ಹೀಗೆ ಒಬ್ಬ ಕವಿಗೆ ಅವನದ್ದೇ ಆದ ಒಂದು ಲೋಕವಿರುವುದು

ಆ ಕವಿಯ ಬಗ್ಗೆ ನಮ್ಮ ನಂಬಿಕೆಯನ್ನು ದೃಢಗೊಳಿಸುವಂಥದು.

ಯಾಕೆಂದರೆ, ಕವಿತೆಯೆನ್ನುವುದು ಮನಸ್ಸಿನ ಭ್ರಮೆ ಅಥವಾ ಊಹಾತಿರೇಕವಲ್ಲ. ಅದರ ಸುತ್ತಲ ಸಂಚಾರ ಬದುಕಿನ ಗಟ್ಟಿನೆಲದ ಮೇಲೇ ನೆಲೆಯಾದಂಥದು. ಅಸಾಧಾರಣವಾದ ಕಾಣ್ಕೆಯೆನ್ನುವುದು ಮಹಾಕವಿಗೆ ಅಪರೂಪಕ್ಕೆ ದಕ್ಕುವಂಥದೇ ಹೊರತು ಅದು ಹುಸಿ ಕಲ್ಪನಾಜೀವಿಗಳ ಸುಲಭದ ತುತ್ತಲ್ಲ. ಈ ದೃಷ್ಟಿಯಿಂದ ಮೊಗಸಾಲೆಯವರ ಕವನಗಳು ಒಳ್ಳೆಯವಾಗಬಹುದು ಅಥವಾ ಹಾಗಲ್ಲದಿರಬಹುದು, ಆದರೆ ಹುಸಿಭಂಗಿಯನ್ನು ತಳೆದು ನಮ್ಮನ್ನು ಮೋಸಗೊಳಿಸುವುದಿಲ್ಲ.

ಹೀಗೆನ್ನುವಾಗ ಮೊಗಸಾಲೆ ಬಹಳ ಸ್ವೋಪಜ್ಞ ಕವಿಯೆಂದೇನೂ ನಾನು ತಿಳಿಯುತ್ತಿಲ್ಲ. ಸ್ವೋಪಜ್ಞತೆಯೆಂಬುದು ಮೊಗಸಾಲೆಯವರ ಕವಿ ಸ್ವಭಾವದ ಮುಖ್ಯ ಲಕ್ಷಣವೇನೂ ಅಲ್ಲ. ಹಾಗೆ ನೋಡಿದರೆ ಅವರ ಕವಿತೆಗಳು ಮೊದಲಿನಿಂದಲೂ ನಾನಾ ರೀತಿಯ-ಆಯಾ ಕಾಲದ ಸಾಹಿತ್ಯಕ ವಿಚಾರ ವಿನ್ಯಾಸಗಳು ಅಥವಾ ಕೆಲವು ಪ್ರಮುಖ ಕವಿಗಳ ಶೈಲಿ- ಹೀಗೆ ಪ್ರಭಾವಗಳಿಗೆ ಪಕ್ಕಾಗುತ್ತಲೇ-ತಮ್ಮನ್ನು ತಾವು ತೆರವಾಗಿಟ್ಟುಕೊಳ್ಳುತ್ತಲೇ ತಮ್ಮ ಜಾಡನ್ನು ಅರಸಿದಂಥವು. ಗೋಪಾಲಕೃಷ್ಣ ಅಡಿಗ, ತಿರುಮಲೇಶ ಇವರ ಪ್ರಭಾವ ಮೊಗಸಾಲೆಯವರ ಮೇಲೆ ಗರಿಷ್ಠ ಪ್ರಮಾಣದಲ್ಲಿದೆ. ಅಂದರೆ, ಅವರ ಅನೇಕ ಕವಿತೆಗಳು ಅಡಿಗರ ಕವಿತೆಗಳೊಂದಿಗೆ, ತಿರುಮಲೇಶರ ಗ್ರಹಿಕೆಯ ರೀತಿಯೊಂದಿಗೆ ಸಂವಹಿಸುತ್ತವೆ. ಕೆಲವು ಸಾರಿ ಇಂಥ ಪ್ರಭಾವಗಳಿಗೆ ಮೊಗಸಾಲೆಯವರು ಸುಲಭವಾಗಿ ಈಡಾಗುತ್ತಾರೆ ಎನ್ನಿಸಿದರೂ, ಇದು ಕೊನೆಗೂ ಮೊಗಸಾಲೆಯವರ ಸಂವೇದನೆಯ ಜೀವಂತಿಕೆಗೆ ಇಂಬುಕೊಡುವಂತೆಯೇ ನಡೆದುಬಂದಿರು ವುದನ್ನು ಗುರುತಿಸಬಹುದು.

ಈ ಹಾದಿಯಲ್ಲಿ ಮೊಗಸಾಲೆಯವರ ಈಚಿನ ಎರಡು ಸಂಕಲನಗಳು 'ನೆಲದ ನೆರಳು' ಮತ್ತು 'ಇದಲ್ಲ ಇದಲ್ಲ' ಇನ್ನೂ ಭಿನ್ನವಾದ ರೀತಿಯಲ್ಲಿರುವುದನ್ನು ಕಾಣಬಹುದು. ಒಬ್ಬ ಕವಿ ತನ್ನ ಕಾವ್ಯರಚನೆ ಮಾಡುತ್ತ ಆಯಾ ಕಾಲಘಟ್ಟದ ಕವಿತೆಯ ತಿರುವುಗಳನ್ನು ತನ್ನೊಳಗೆ ಅಭಿನಯಿಸಿಕೊಂಡುಬರುವುದು ಮೊಗಸಾಲೆಯವರಲ್ಲಿ ಅರ್ಥಪೂರ್ಣವಾಗಿ ನಡೆಯುವುದು ವಿಶೇಷವಾಗಿದೆ ಎಂದು ನಾನು ತಿಳಿಯುತ್ತೇನೆ. ಈಚಿನ ಸಂಕಲನಗಳಲ್ಲಿ ಮೊಗಸಾಲೆಯವರ ಕಾವ್ಯ ಹೊಸಬಗೆಯಲ್ಲಿ ತೆರೆದುಕೊಂಡಿರುವಿಕೆಯಲ್ಲಿ ಗಮನ ಸೆಳೆಯುತ್ತದೆ. ಭಾವದ ಮತ್ತು ಅಭಿವ್ಯಕ್ತಿಯ ವಿಶದತೆ ಮತ್ತು ಸಹಜತೆಗಳಿಂದ ಅವರ ಈಗಿನ ಕಾವ್ಯ ಮನಸ್ಸನ್ನು ಆವರಿಸಿಕೊಳ್ಳುತ್ತದೆ. ಇದು ಶುದ್ಧವಾದ ಕವಿತೆಯ ಪರಿಣಾಮವೆನಿಸುತ್ತದೆ. ಕವಿತೆಯಲ್ಲಿ ಅಂತಿಮವಾಗಿ ನಿಲ್ಲಬೇಕಾದ್ದು ಈ ಪರಿಣಾಮವೇ ಹೊರತು ಬೌದ್ಧಿಕ ತತ್ವವಲ್ಲ. ಅಥವಾ ಕವಿತೆಯೆಂದರೆ ರೂಪಕ, ಚಿತ್ರ ಇಂಥ ಅಲಾಯದ ಅಂಗಗಳ ನಿರ್ಮಿತಿ ಅಷ್ಟೇ ಅಲ್ಲ, ಅದು ಇಡಿಯಾದ ಒಂದು ಹಾಜರಿ ಎಂಬುದರತ್ತ ಅವರ ಈ ಹಂತದ ಕವಿತೆಗಳು ತುಡಿದಿವೆ.

ಮೊಗಸಾಲೆಯವರ ಅಷ್ಟು ಕವಿತೆಗಳಲ್ಲಿ ನನಗೆ ಅತ್ಯಂತ ಸಾರ್ಥಕವೆನಿಸುವ ಒಂದು ಕವಿತೆಯನ್ನು ಹೆಕ್ಕಿ ತೆಗೆಯುವುದಾದರೆ ಅದು ಅವರ 'ನೆಲದ ನೆರಳು' ಸಂಕಲನದಲ್ಲಿರುವ 'ಮೊಗಸಾಲೆ ನಾ ಹುಟ್ಟಿದ ಮನೆ' ಎಂಬುದು:

ಮೊಗಸಾಲೆ ನಾ ಹುಟ್ಟಿದ ಮನೆ
ಈಗ ಭೌತಿಕವಾಗಿ ದೂರ
ಅಲ್ಲೂ ಇಲ್ಲೂ ಒಟ್ಟೊಟ್ಟಿಗೇ ಸೂರ್ಯೋದಯ ಅಸ್ತಮಾನ
ಆದರೂ ವ್ಯತ್ಯಾಸ ಇರುವಂತೆ ಆತಂಕ

ಆಗುತ್ತದೆ ನೆನಪು; ನಾಚಿಕೆ ಮುಳ್ಳಿನ ಚಿಗುರು
ಮುಟ್ಟಿದಾಗ ಮುಚ್ಚಿ ಅರಳುವ ರೀತಿ
ಬಿಸಿಲಿಗೆ ಹಿಡಿದ ಹಾಗೆ ಕೊಡೆ ತಾಯಿ ಮಗುವಿಗೆ
ಅಲ್ಲಿನ ಮರಗಳ ನೆರಳಿದೆ ಇನ್ನೂ ನನ್ನ ಬಳಿ

ಬಲೆಗೆ ಬಿದ್ದ ಮೀನು ಬಲೆಯ ಹೊರಗಿರುವುದನ್ನು
ದಿಟ್ಟಿಸುವ ಹಾಗೆ ನಿಂತ ಅಲ್ಲಿನ ಕೊಳಗಳು!
ಕೈ ಹಿಡಿದು ನಿಲ್ಲಿಸಿ ನಿಲ್ಲೆಂದು ಕಾಲೆಳೆದು
ಮಾತಾಡಲಿಕ್ಕೆ ಆಗದೆ ಬಾಯಿ ಬಿಡುವ ಮಣ್ಣು!



ಚಳಿಗಾಲದಲ್ಲಿ ಹಚ್ಚಡದ ಹಾಗೆ, ಬೇಸಗೆಯಲ್ಲಿ
ಬೀಸಣಿಗೆಯ ಹಾಗೆ ಇದ್ದ ಆ ಮುಳಿಹುಲ್ಲಿನ ಮನೆ
ಇಲ್ಲಿ ಸುಡುವ ಕಾಂಕ್ರೀಟ್ ಆಕಾಶದ ಕೆಳಗೆ
ನಿದ್ದೆ ಇಲ್ಲದಾಗ ಬಂದು ನೋಡುತ್ತದೆ ನಿಂತು ಹೊರಗೆ



ನಿಜ; ನಾನಲ್ಲಿ ಇದ್ದರೆ ಖಂಡಿತ ಈಗ
ಕಾಡುತ್ತಿರಲಿಲ್ಲ ಮೊಗಸಾಲೆ ಹೀಗೆ
ಮತ್ತೆ ಇಲ್ಲಿಂದ ಅಲ್ಲಿಗೆ ಹೋದರೆ ಇದೂ ಅಷ್ಟೆ
ಹೊಟ್ಟೆಯೊಳಗಿನ ಮಗುವ ಮುಟ್ಟ ಹೊರಟಂತೆ

ಕವಿಗೆ ತಾನು ಹುಟ್ಟಿದ ಮೊಗಸಾಲೆ ಮನೆ ಬೇರೊಂದೇ ಥರದ ಜೀವನ ಸ್ಥಿತಿಗೆ ಸಂಕೇತವಾಗುತ್ತದೆ. ಸರಳತೆ, ಮುಗ್ಧತೆ, ಅಂತಃಕರಣ ಆ ಬಾಳಿನ ಗುಣಗಳು. ಅಂಥ ಬದುಕಿನಿಂದ ದೂರನಿಲ್ಲುವುದರ ಅನಿವಾರ್ಯತೆಯ ವಾಸ್ತವ ತಿಳಿವೂ ಕವಿತೆಗಿದೆ. ಅಥವಾ ತಾನಿರುವ ಈಗಿನ ಸ್ಥಿತಿಯಲ್ಲೇ 'ಆ ಸ್ಥಿತಿ'ಯನ್ನು ಕಾಣಬಹುದಾದ್ದಕ್ಕೆ ಇರುವ ಅಡ್ಡಿಯೇನೆಂದರೆ ಅದು ಬದುಕಿನ ನಿಜಕ್ಕೇ ಸಂಬಂಧಪಟ್ಟಂಥದು. ಜರುಗುತ್ತಿರುವ ನಿಮಿಷದಲ್ಲಿ ವರ್ತಮಾನವನ್ನು ಗ್ರಹಿಸುವುದೆಂದರೆ, 'ಹೊಟ್ಟೆಯೊಳಗಿನ ಮಗುವ ಮುಟ್ಟ ಹೊರಟಂತೆ'.

ಭಾವನೆಯಲ್ಲಿ ಮಾತ್ರ ಈ ಲೋಕ ನಿಜವಾಗುವಂಥದು. ಹೊರತು ನೇರವಾಗಿ ತಾಗುವ ವಾಸ್ತವವೆನ್ನುವುದು ಅನುಭವದ ಕಚ್ಚಾ ಸರಕಷ್ಟೇ ಹೊರತು ಸಂವೇದನೆಯಲ್ಲಿ ಪಡೆಯುವ

ನಿಜವಲ್ಲ. ಹೀಗೆ ಸಂವೇದನೆಯಲ್ಲಿ ಸ್ವೀಕರಿಸಲು ಆಗತ್ಯವಾದುದು ಒಂದು ದೂರ ಮತ್ತು ಒಂದು ಮಾನಸಿಕ ಪರಿಭಾವನೆ. ಲೋಕದ ಅನುಭವವೆನ್ನುವುದು ಮನಸ್ಸೊಳಗೆ ಬಿಟ್ಟು ಮತ್ತೆ ಪುಟದೆದ್ದು ಬಂದಾಗಲಷ್ಟೇ ಮೌಲಿಕವೆನಿಸುತ್ತದೆ.

ಎಂದರೆ ಮೌಲಿಕತೆ ಎನ್ನುವುದು ಮನಸ್ಸಿನ ಸ್ವಂತ ಗುಣವೇ ಹೊರತು ಅದು ವಸ್ತುನಿಷ್ಠವಾದುದಲ್ಲ. ಮೊಗಸಾಲೆ ಎನ್ನುವುದು ಎಲ್ಲ ಊರಿನಂತೆಯೇ. ಅಲ್ಲೂ ಸೂರ್ಯೋದಯ ಸೂರ್ಯಾಸ್ತ ಎಲ್ಲ ಕಡೆಯಂತೆಯೇ. ಆದರೂ ಅಲ್ಲೊಂದು ವ್ಯತ್ಯಾಸವಿದೆ, ಇಲ್ಲಿನದಕ್ಕಿಂತ ಅಲ್ಲಿನದು ಹೆಚ್ಚು ಅರ್ಥಪೂರ್ಣವೆನ್ನುವ ಸಣ್ಣ ಆತಂಕವಾಗುತ್ತದೆ. ಯಾಕೆಂದರೆ, ಅಲ್ಲಿನ ದಿವಸಗಳಂತೆಯೇ ಅಲ್ಲಿನ ಮರದ ನೆರಳು, ನೀರು, ಮಣ್ಣು, ಗುಡಿಸಲು – ಎಲ್ಲವೂ ವಿಶಿಷ್ಟವಾದ ನಿಜಗಳೆಂಬಂತೆ ಈಗ ತೋರುವುದಕ್ಕೆ ಕಾರಣ ಅದರ ಬಗ್ಗೆ ಒಂದು 'ಮಾನಸಿಕ ಪರಿಭಾವನೆ' ಸಾಧ್ಯವಾಗಿರುವುದೇ.

ಇದೊಂದು ಕವಿತೆಯನ್ನು ನಾನು ಹೀಗೆ ಹೆಕ್ಕಿ ತೆಗೆದಿರುವುದಕ್ಕೆ ಕಾರಣ, ಕವಿ ಮೊಗಸಾಲೆಯವರ ಈಗಿನ ಮನಃಸ್ಥಿತಿಗೆ, ಕವಿತೆಯ ಕುರಿತಾದ ಅವರ ಪರಿಕಲ್ಪನೆಗೆ ಸಂಬಂಧಿಸಿದಂತೆ ಇದು ಪ್ರಾತಿನಿಧಿಕವೆನಿಸುತ್ತದೆ ಎಂದು. ಕವಿತೆಯ ಮೂಲಕ ಆಗುವುದು ವಿಚಾರದ ಸಂವಹನ ಅಲ್ಲ, ಅರಿವಿನ ಅನಾವರಣ ಎಂಬುದು ಕವಿ ಈಗ ತಲುಪಿರುವ ನೆಲೆ ಎಂದು ನನಗೆ ಕಾಣುತ್ತದೆ. 'ನೆಲದ ನೆರಳು' ಮತ್ತು ಇತ್ತೀಚಿನ 'ಇದಲ್ಲ ಇದಲ್ಲ' ಸಂಕಲನದ ಎಲ್ಲ ಕವನಗಳೂ ಇಂಥದೇ ಪರಿಣಾಮ ಹೊಂದಿವೆ.

ಮೊಗಸಾಲೆ ನಿರಂತರ ಹುಡುಕಾಟದ ಕವಿ. ಒಂದು ವಿಚಾರಕ್ಕೆ, ಒಂದು ನೆಲೆಗೆ ಬದ್ಧವಾಗಬೇಕೆನ್ನುವಂಥವರಲ್ಲ. ಬದುಕು ಹರಿಯುವ ಝರಿ ಇದ್ದ ಹಾಗೆ. ಅದರ ಓಟ ತಿರುವುಗಳಿಗೆ ನಿಷ್ಠವಾಗಿರುವುದಷ್ಟೇ ಮುಖ್ಯ. ಇಂಥ ಚಲನಶೀಲತೆಯನ್ನು Inconsistency ಎನ್ನಲು ಬರುವುದಿಲ್ಲ. ಕವಿಯಾಗಿ ಮೊಗಸಾಲೆಯವರ ವಿಕಾಸ ಈ ಬಗೆಯದು ಎಂದು ನನ್ನ ನಂಬಿಕೆ.

# ಮಾತಿನಿಂದ ಮೌನದ ಕಡೆಗೆ: ಮೊಗಸಾಲೆಯವರ ಕಾವ್ಯ

ಡಾ. ಎಚ್. ಎಸ್. ರಾಘವೇಂದ್ರ ರಾವ್

"ಒಡೆದದ್ದನ್ನೆಲ್ಲ ಇಡಿಯಾಗಿಸುವ
ಹುಚ್ಚು ನನಗೆ
ಇಡಿ ಇದ್ದುದನ್ನೆಲ್ಲ ಒಡೆದುಕೊಡುವ
ಇಚ್ಛೆ ನಿಮಗೆ!"
(ಹುಚ್ಚನೊಡನೆ ಮಾತು, ಕತೆ!–ಇಹಪರದ ಕೊಳ)

ಕರಾವಳಿ ಕರ್ನಾಟಕದ ಕಾವ್ಯದಲ್ಲಿ ಮತ್ತು ಅದು ಎದುರಿಸಿದ ಬಿಕ್ಕಟ್ಟುಗಳಲ್ಲಿ ಆಸಕ್ತನಾದ ನನಗೆ, ಡಾ. ನಾ. ಮೊಗಸಾಲೆಯವರ ಕಾವ್ಯದ ಪರಿಶೀಲನೆಯು ಹೊಸ ಅವಕಾಶವನ್ನು ಒದಗಿಸಿದೆ. ಕಾವ್ಯದ ಅಮೂರ್ತತೆ, ಅಲ್ಲಿ ಬಳಕೆಯಾಗುವ ವಿವರಗಳ ನಿರ್ದಿಷ್ಟತೆ ಮತ್ತು ಕಾವ್ಯಭಾಷೆಯ ನಿರ್ಲಿಪ್ತತೆಯು ಅದರ ಸಂವಹನಶೀಲತೆಯನ್ನು ಹೆಚ್ಚಿಸುತ್ತದೆ. ಹಾಗಾದಾಗ, ತಾನು ಹುಟ್ಟುವ ನೆಲದ ಚರಿತ್ರೆ, ಭೂಗೋಳಗಳನ್ನು ಒಳಗೊಳ್ಳಲು, ಕವಿತೆಯು ತನ್ನದೇ ಆದ ಬೇರೆ ಉಪಾಯಗಳನ್ನು ಕಂಡುಕೊಳ್ಳಬೇಕಾಗುತ್ತದೆ. ಬೇಂದ್ರೆ ಮತ್ತು ಕಂಬಾರರು, ಶಿಷ್ಟಭಾಷೆಯ ಹಿಂಸೆಯನ್ನು ಮೀರಲು, ಅಂತೆಯೇ ಅದು ನೀಡುವ ಸವಲತ್ತುಗಳನ್ನು ಬಳಸಿಕೊಳ್ಳಲು, ಹೂಡಿದ ಹುನ್ನಾರಗಳು ನಮಗೆ ಗೊತ್ತು. ಕಳೆದ ಎರಡು ದಶಕಗಳಲ್ಲಿ ಪ್ರಾದೇಶಿಕ ವಿವರಗಳನ್ನು ಬಳಸುವ ಸಣ್ಣಕತೆಗಳು ಕೇಂದ್ರಕ್ಕೆ ಬಂದು, ನಿಯತಲಯ ಮತ್ತು ಗೇಯತೆಗಳಿಗೆ ವಿದಾಯ ಹೇಳಿದ ಕಾವ್ಯವು ಬದಿಗೆ ಸರಿದ ವಿದ್ಯಮಾನವೂ ನಮಗೆ ಗೊತ್ತು. ಇಂಥ ಸನ್ನಿವೇಶವನ್ನು ಕಾವ್ಯ ಮತ್ತು ಕಥಾಸಾಹಿತ್ಯಗಳೆರಡರಲ್ಲೂ ಕೆಲಸಮಾಡಿರುವ ಮೊಗಸಾಲೆಯವರು ತಮ್ಮದೇ ಆದ ರೀತಿಯಲ್ಲಿ ಯಶಸ್ವಿಯಾಗಿ ನಿರ್ವಹಿಸಿದ್ದಾರೆ.

ಈಗ, ಮೂರು ಜಿಲ್ಲೆಗಳ ಸಮುಚ್ಚಯವಾಗಿರುವ ಕರಾವಳಿ ಪ್ರದೇಶವು ಹಲವು ಅರ್ಥಗಳಲ್ಲಿ ಕರ್ನಾಟಕದ ಸಂಧಿಭೂಮಿ. ಈ ಮೂರು ಜಿಲ್ಲೆಗಳ ಸಂಗಡವೇ, ಕಾಸರಗೋಡು ಜಿಲ್ಲೆಯಿಂದ ವಲಸೆ ಬಂದು, ಬಾರದೆ, ಕನ್ನಡದಲ್ಲಿ ಕೆಲಸ ಮಾಡುತ್ತಿರುವ ಲೇಖಕ/ವಿದ್ವಾಂಸರ ಸಮುದಾಯವೂ ಇದೆ. ಭಾಷೆಯ ನೆಲೆಯಲ್ಲಿ ಕನ್ನಡ, ತುಳು, ಕೊಂಕಣಿ, ಉರ್ದು ಮತ್ತು ಮಲೆಯಾಳಂ ಭಾಷೆಗಳ ಪಾರಸ್ಪರಿಕ ಪ್ರಭಾವಗಳು ಕುತೂಹಲಕಾರಿಯಾದವು. ಇಲ್ಲಿರುವ ಅರಮನೆಗಳು, ಗುರುಮನೆಗಳು ಹಾಗೂ ಗುತ್ತಿನ ಮನೆಗಳು ಸಂಸ್ಕೃತಿನಿಯಂತ್ರಣ ಮತ್ತು

ಸಂಸ್ಕೃತಿಪ್ರಸಾರವನ್ನು ತಮ್ಮದೇ ಆದ ಬಗೆಯಲ್ಲಿ ಮಾಡಿವೆ. ಇಲ್ಲಿ, ತೌಳವಸಂಸ್ಕೃತಿಯ 'ಶೂದ್ರ' ನೆಲೆಗಳಿಗೂ ವೈದಿಕ ಸಂಸ್ಕೃತಿಯ 'ಶಿಷ್ಟ' ನೆಲೆಗಳಿಗೂ ಇರುವ ಸಂಘರ್ಷವೂ ಸುಪ್ತ ಜ್ವಾಲಾಮುಖಿಯಂತೆ ಸದಾ ಪ್ರವೃತ್ತವಾಗಿದೆ. ಈ ಜಿಲ್ಲೆಗಳ ರಾಜಕೀಯದಲ್ಲಿ ಎಡಪಂಥೀಯ ಮತ್ತು ಬಲಪಂಥೀಯ ನೆಲೆಗಳ ನಡುವಿನ ತಾಕಲಾಟಗಳನ್ನು ಎಚ್ಚರಿಕೆಯಿಂದ ಅರಸಬೇಕಾಗುತ್ತದೆ. ಯಕ್ಷಗಾನದ ಆಂಗಿಕವೈಭವ ಮತ್ತು ತಾಳೆಮದ್ದಳೆಯ ವಾಚಿಕವೈಭವಗಳ ಸಂಯೋಜನೆಯು ಗೋಪಾಲಕೃಷ್ಣ ಅಡಿಗರೂ ಸೇರಿದಂತೆ ಈ ಪ್ರದೇಶದ ಯಾವ ಕವಿಯನ್ನೂ ಬಿಟ್ಟಿಲ್ಲ. (ತಿರುಮಲೇಶರು ವಾತನ್ನು ಬಳಸಿದ ಬಗೆಯು ಕೊಂಚ ಬೇರೆ ಬಗೆಯದು) ಪಂಡಿತಪರಂಪರೆಯ ಸೃಜನಶಿಖರಗಳಾದ ಪಂಜೆ, ಗೋವಿಂದಪೈ, ಸೇಡಿಯಾಪು ಮತ್ತು ಕಡೆಂಗೊಡ್ಲು ಅವರಿಂದ ಹಿಡಿದು ನೆನ್ನೆ ಮೊನ್ನೆಯ–ರಾಧಾಕೃಷ್ಣ ಬೆಳ್ಳೂರು ಮತ್ತು ಕವಿತಾ ರೈ ಅವರವರೆಗೂ ಹರಡಿರುವ ಕವಿತೆಯು, ಕನ್ನಡದ ಸಾಹಿತ್ಯಕ ಚಳವಳಿಗಳಿಗೆ ಸಮಾನಾಂತರವಾಗಿ, ಕೆಲವು ಸಲ ಅದರ ತೆಕ್ಕೆಯೊಳಗೆ ಸೇರಿಹೋಗಿ ಮೂಡಿಬಂದಿದೆ. ನನಗೆ ತೋರುವಂತೆ, ಪೂರ್ವಯೌವನ ಹಾಗೂ ತಾರುಣ್ಯಗಳಲ್ಲಿ ಸಾಕಷ್ಟು ಪ್ರತಿಭೆ, ಭರವಸೆಗಳನ್ನು ತೋರಿಸಿ, ಕ್ರಮೇಣ ಮುಂಜಾನೆಯ ಮಂಜಿನಂತೆ ಕರಗಿಹೋಗುವ ಕವಿಗಳ ಸಂಖ್ಯೆ ಈ ಪ್ರದೇಶದಲ್ಲಿ ವಿಪುಲವಾಗಿದೆ.

ಇಂಥ ಸಂದರ್ಭದಲ್ಲಿ ನಾ. ಮೊಗಸಾಲೆಯವರು, ಸುಮಾರು ಮೂರು ದಶಕಗಳಿಂದ ಬರೆಯುತ್ತಾ, ಬೆಳೆಯುತ್ತಾ, ಬದಲಾಗುತ್ತಾ ಬಂದಿದ್ದಾರೆ. ಅವರ ಜೀವನ ಮತ್ತು ಕಾವ್ಯಜೀವನಗಳು ಘಟ್ಟದ ಮೇಲಿನ ಜಗತ್ತಿನೊಂದಿಗೆ ಹೊರಚಾಚುಗಳನ್ನು ಪಡೆವಾಗಲೂ, ಕಾಸರಗೋಡನ್ನು ಮರೆಯದೆ, ಕಾಂತಾವರದ ನೆಲದಲ್ಲಿ ಬೇರುಬಿಟ್ಟಿದೆ. ನೆಲವೆಂದರೆ ಬರಿ ನೆಲವಲ್ಲ. ಅಲ್ಲಿನ ಕಷ್ಟಕಾರ್ಪಣ್ಯಗಳು, ಅಲ್ಲಿನ ಜನರ ದೊಡ್ಡತನ, ಸಣ್ಣತನಗಳು, ಅವು ಕಲಿಸುವ ಜೀವನಪಾಠಗಳು, ಅಲ್ಲಿನ ನಿಸರ್ಗದ ಅಲೌಕಿಕತೆ, ಅದನ್ನು ಸರಕಾಗಿ ಬದಲಾಯಿಸುವ ಆ ಜನರ ಚಾಣಾಕ್ಷತೆ ಇವೆಲ್ಲವೂ ಅವರಿಗೆ ಮುಖೋದ್ಗತವಾಗಿದೆ. ಮುಖ್ಯವಾದ ಮಾತೆಂದರೆ, ಕಾಂತಾವರವು ಮೊಗಸಾಲೆಯವರಿಗೆ ಸ್ವಸ್ವರೂಪ ದರ್ಶನದ ಕನ್ನಡಿಯೂ ಆಗಿದೆ. **ಅವರ ಕಥೆ ಕಾದಂಬರಿಗಳು ಅನ್ಯರ ಲೋಕಕ್ಕೆ ಕಿಟಕಿಗಳಾದರೆ, ಕವಿತೆಗಳು ಅವರದ್ದೇ ಅಂತರಂಗಕ್ಕೆ ರೂಪಿಸಿರುವ ಬೆಳಕಿಂಡಿಗಳು.** ಕವಿತೆಯ ಒಳಗೆ ಮತ್ತು ಹೊರಗೆ ಮಾತಿನ ಮಳೆ ಕರೆಯುವ ಈ ಮೊಗಸಾಲೆಯವರಲ್ಲಿ, ಮುಗ್ಧತೆ/ಕನಸುಗಾರಿಕೆ/ಹುಂಬತನಗಳ ಒಂದು ಝಲಕ್ ಇರದೆ ಹೋಗಿದ್ದರೆ, ಇವರು ಕವಿಯಾಗುತ್ತಿರಲಿಲ್ಲ. ಕಾಂತಾವರದಲ್ಲಿ ಸಂಸ್ಕೃತಿ ಕೇಂದ್ರವನ್ನು ಕಟ್ಟುತ್ತಲೂ ಇರಲಿಲ್ಲ. ಅದರ ಜೊತೆಗೆ, ಅವರು ಹೊಸಗನ್ನಡ ಕಾವ್ಯವು, ಗದ್ಯಲಯಗಳ ಮೂಲಕವೇ ಒಳಗೊಳ್ಳಬಹುದಾದ ಸಾಧ್ಯತೆಗಳನ್ನು ಬಹಳ ಚೆನ್ನಾಗಿ ಬಳಸಿಕೊಂಡಿದ್ದಾರೆ. ಅವರು ದೇವಸ್ಥಾನಗಳ ನಾಡಿನಲ್ಲಿ ಇರುವಾಗಲೂ ನಾಸ್ತಿಕತೆಯ ಸಂಗಡ ಸರಸವಾಡಿದ್ದಾರೆ. ಹಾಗೆಂದು, ಧರ್ಮಕಾರಣಗಳ ವೈರವನ್ನೂ ಕಟ್ಟಿಕೊಂಡಿಲ್ಲ. ಇಂಥ ಹಲವು ಲಕ್ಷಣಗಳ ವಿಶಿಷ್ಟ ಸಂಯೋಜನೆಯು ಅವರ ಕಾವ್ಯದ ರೂಪಕಶಕ್ತಿಯಾಗಿದೆ. ಅಂತೆಯೇ ಅವರು ಅನ್ಯಕವಿಗಳ ಸಂಗಡ ನಡೆಸಿರುವ 'ಕೆಲದಿನಗಳ ಮಧುಚಂದ್ರ'ವೂ ಅಂದಂದಿನ ಕೆಲವು ಕವಿತೆಗಳ ರಚನೆಗೆ

ಕಾರಣವಾಗಿವೆ. ಉತ್ತರಧ್ರುವವಾದ ಅಡಿಗರಿಂದ ಹಿಡಿದು ದಕ್ಷಿಣ ಧ್ರುವವಾದ ಎಸ್. ಮಂಜುನಾಥರವರೆಗೆ ಅವರ ಕವಿತೆಯ ಬಂಧುಬಳಗ ಹರಡಿಕೊಂಡಿದೆ. ಆದರೆ ಅವೆಲ್ಲವನ್ನೂ ಮೀರಿ ತನ್ನತನವನ್ನು ಕಂಡುಕೊಳ್ಳುವುದೂ ಅವರಿಗೆ ಸಾಧ್ಯವಾಗಿದೆ.

ಎಪ್ಪತ್ತರ ದಶಕದ ಮಧ್ಯಭಾಗವೆಂದರೆ, ನವ್ಯ ಕಾವ್ಯದ ಮಲೆಘಟ್ಟ ಸೋಪಾನಗಳ ಕಾಲ. ಉಡುಪಿಯ ಮಠದೂಟಗಳ ಇಕ್ಕಟ್ಟಿನಿಂದ ಹೊರಬಂದ ತರುಣನಿಗೆ, ನವ್ಯವು ನೀಡುವ ಬಿಡುಗಡೆಯ ಭಾವವು ಹಿತವಾಗಿ ಕಂಡಿರಬೇಕು. ಅವರ ಅಂದಿನ ಗೆಳೆಯರೂ ಅಂತಹುದೇ ಒತ್ತಡಗಳಿಂದ ತಪಿಸಿದವರೇ. ಕಾಲೇಜು ವಿದ್ಯಾಭ್ಯಾಸಕ್ಕೆಂದು ಕರಾವಳಿಯನ್ನು ಬಿಟ್ಟು, ಮೈಸೂರಿಗೆ ಚಲಿಸಿದ ಅಡಿಗರಿಗೆ ಸಿಕ್ಕ ಇಂಗ್ಲಿಷ್ ಕಾವ್ಯದ ಅಧ್ಯಯನದ ಅವಕಾಶ ಮೊಗಸಾಲೆಯಂತಹವರಿಗೆ ಸಿಗಲಿಲ್ಲ. ಅದಲ್ಲದೆ ಆಯುರ್ವೇದದ ಓದು ಅವರನ್ನು ಪ್ರೌಢಶಿಕ್ಷಣದಿಂದಲೂ (?) ವಂಚಿತರಾಗಿ ಮಾಡಿತು. ಸಹಜವಾಗಿಯೇ ಅವರದು ಏಕಲವ್ಯ ಪ್ರತಿಭೆ. ಅವರಿಗಿಂತ ಕೊಂಚ ಹಿರಿಯರೋ ಕಿರಿಯರೋ ಆದ ಸುಬ್ರಾಯ ಚೊಕ್ಕಾಡಿ, ರಾಮದಾಸ್, ಉದ್ಯಾವರ ಮುಂತಾದ ಗೆಳೆಯರು, ಅಂತೆಯೇ–ಶಂಕರ ಮೊಕಾಶಿ ಪುಣೇಕರ್, ವಿ. ಎಂ. ಇನಾಂದಾರ್ ಮತ್ತು ಸ್ವತಃ ಅಡಿಗರು ಉಡುಪಿಯಲ್ಲಿ ಕೆಲಸಮಾಡುತ್ತಿದ್ದ ಅವಧಿಯ ಪರಿಚಯ ಪರಿಶ್ರಮಗಳ ಫಲವೂ ಅವರ ಸಂಗಡ ಇರುವಂತೆ ತೋರುತ್ತದೆ. ಇವರೆಲ್ಲರ ಸಂಪರ್ಕವು ಅವರ ಕಾವ್ಯದ ಮೊದಲ ದಿನಗಳನ್ನು ರೂಪಿಸಿದೆ. ಆದರೆ, ಅದರ ಐತಿಹಾಸಿಕ ಬೆಳವಣಿಗೆಯಲ್ಲಿ ನನ್ನ ಆಸಕ್ತಿಯಿಲ್ಲ. ಬದಲಾಗಿ, ಅವರ ಕಾವ್ಯಕ್ಕೆ ವಿಶಿಷ್ಟವೆಂದು ತೋರುವ ಕೆಲವು ಅಂಶಗಳ ನಿರೂಪಣೆಯಲ್ಲಿ ತೊಡಗುವುದು ನನ್ನ ಗುರಿ.

ಮೊದಲು ಹೇಳಬೇಕಾದ ಮಾತುಗಳನ್ನು ಮೊದಲು ಹೇಳಬೇಕು. ಇವರ ಕವಿತೆಗಳ ಸಮಗ್ರ ಸಂಕಲನವಾದ 'ಅರವತ್ತರ ತೇರು' ಕೃತಿಯನ್ನು ಓದಿದಾಗ ನನಗೆ ಸಂತೋಷ ಮತ್ತು ಸಂಕೋಚ ಎರಡೂ ಆದವು. **ಒಬ್ಬ ಕವಿಯ ಮೊದಲ ಸಂಕಲನಗಳನ್ನು ಓದಿ ಬೆಳೆಸಿಕೊಂಡ ಪೂರ್ವಾಗ್ರಹಗಳು, ಅವನ ಅನಂತರದ ಸಂಕಲನಗಳ ಕಿರಿಯಾಳದ ಓದಿಗೆ ಕಾರಣವಾಗಿಬಿಡುತ್ತವೆ.** ಅದೂ ಅಲ್ಲದೆ, ಕರಾವಳಿಯ ಕವಿತೆಗಳು ನಮ್ಮ ಈ ಬೆಂಗಳೂರಿಗೆ ಬಂದು ಚಲಾವಣೆಯಾಗುವುದೂ ಕಡಿಮೆಯೇ. ಆದ್ದರಿಂದ ನನಗೆ ಇಷ್ಟೊಂದು ಒಳ್ಳೆಯ ಕವನಗಳನ್ನು ಒಂದೇ ಸಲ ಓದಿದಾಗ ಆದದ್ದು ಅಚ್ಚರಿಯೇ. ಹೊಸ ಕನ್ನಡಕಾವ್ಯದ ಮುಖ್ಯ ದಾರಿಗಳನ್ನು ತನ್ನೊಳಗೆ ಕರಗಿಸಿಕೊಂಡರೂ ತನ್ನತನವನ್ನು ಕಟ್ಟಿಕೊಂಡ ಮೊಗಸಾಲೆಯವರಿಗೆ, ವ್ಯಕ್ತಿಯಾಗಿ ಸಿಕ್ಕಿರುವಷ್ಟು ಪ್ರಚಾರವು ಕವಿಯಾಗಿ ಸಿಕ್ಕಿಲ್ಲವೆಂಬ ದುಗುಡವೂ ನನ್ನನ್ನು ಕಾಡಿತು. ಕವಿತೆಯ ಆಶಯಗಳ ನೆಲೆಯಲ್ಲಿ, ಅಂತೆಯೇ ಹಲವು ಬಗೆಗಳ ಆಕೃತಿಗಳ ನೆಲೆಯಲ್ಲಿ ಮತ್ತು ಅವೆರಡನ್ನೂ ಹುರಿಗಡಿಯದಂತೆ ಸೇರಿಸುವ ಕೆಲಸದಲ್ಲಿ ಈ ಕವಿ ಸಾಕಷ್ಟು ಸಾಧನೆ ಮಾಡಿದ್ದಾರೆ. ಅಪಾರವಾದ ವೈವಿಧ್ಯವನ್ನೂ ರೂಢಿಸಿಕೊಂಡಿದ್ದಾರೆ. ಅಷ್ಟೇ ಮುಖ್ಯವಾಗಿ, ಅವರು ನಿಂತ ನೀರಾಗದಂತೆ ಬೆಳೆದಿದ್ದಾರೆ. ವಯಸ್ಸಿನ ಅರವತ್ತನ್ನೂ ದಾಟಿಯೂ ಪ್ರಯೋಗಶೀಲತೆಯನ್ನು ಕಳೆದುಕೊಂಡಿಲ್ಲ. ಆ ಕವಿತೆಗಳು ಒಟ್ಟಂದದಲ್ಲಿ ನಿಜವಾಗುವಂತೆ, ಬಿಡಿ ಸಾಲುಗಳಲ್ಲಿ "ಕ್ವೋಟಬಲ್" ಆಗದಿರುವುದು ಅವುಗಳ ಗುಣವೆಂದೇ ನಾನು ತಿಳಿದಿದ್ದೇನೆ. ಎಂದರೆ ಅವರ ಬಹುಪಾಲು ಕವಿತೆಗಳು

ಖಚಿತವಾದ ಬಂಧವುಳ್ಳ ಶಿಲ್ಪಗಳು. ನನ್ನ ಈ ಪ್ರೀತಿ ಗೌರವಗಳು ಅವರ ಇತ್ತೀಚಿನ ಸಂಕಲನವಾದ 'ಇಹ ಪರದ ಕೊಳ'ವನ್ನು ಓದಿದ ನಂತರ ಇನ್ನಷ್ಟು ಹೆಚ್ಚಿದೆ. ಈಗ ಕೊಂಚ ವಿವರವಾದ ಪರಿಶೀಲನೆಗೆ ತೊಡಗುತ್ತೇನೆ.

ಮೊದಲನೆಯದಾಗಿ, ಮೊಗಸಾಲೆಯವರು ಅಷ್ಟೊಂದು ಕಾಲ ಕಳೆದಿರುವ ಕಾಂತಾವರದ ಸಂಗಡ ಅವರಿಗೆ ಇರುವುದು, ಸಂಘರ್ಷದ ಸಂಬಂಧವೇ ಹೊರತು ಸಹಯೋಗದ ಸಂಬಂಧವಲ್ಲ. ನನಗೆ ಇದು ಅವರ ವೈಯಕ್ತಿಕ ಜೀವನದ ಪ್ರಶ್ನೆಯಾಗಿ ಮುಖ್ಯವಲ್ಲ. ಬದಲಾಗಿ ಅದು ಅವರ ಕಾವ್ಯದಲ್ಲಿ ಸಾಂಕೇತಿಕತೆಯ ಪ್ರಶ್ನೆ. ನಿಸರ್ಗ ಮತ್ತು ಸಮಾಜಗಳ ನಡುವಿನ ಸಂಘರ್ಷದಲ್ಲಿ ಅವರಿಗೆ ದೂರದ ಕಾಸರಗೋಡಿನ ಬಳಿಯ ಮೊಗಸಾಲೆಯು, ನಿಸರ್ಗದ ಆರೋಗ್ಯಕರವಾದ ಮೌಲ್ಯಗಳ ಪ್ರತಿನಿಧಿಯಾದರೆ, ಕಾಂತಾವರವು ಹೊರಜಗತ್ತಿನ ಆಕ್ರಮಣಶೀಲತೆ ಮತ್ತು ಸಣ್ಣತನಗಳಿಗೆ ಸಂಕೇತವಾಗುತ್ತದೆ. ನೋಡಿ:

"ಮಾರಿದರು ಹೊರಲೋಕ ಮಾರದುಳಿದೊಳಲೋಕ
ನಾಭಿಕಮಲದ ಸೂರ್ಯನಿಂದು ಮುಳುಗಿದರೂ
ಜೀವಸಾರ್ಥಕ್ಯಕ್ಕೆ ಮಣ್ಣು ಕುಡುಗೋಲು:
ಮೊಗಸಾಲೆ ನಾಳೆಯ ಕಿಂಡಿ ತೆರೆದಾನೆ ಮಗನು" (ಮೊಗಸಾಲೆಗೆ ವಿದಾಯ, ಅರವತ್ತರ ತೇರು, ಪುಟ 352)

ಅಷ್ಟೇ ಅಲ್ಲ, ಮೊಗಸಾಲೆ ಹಾಗೂ ಕಾಂತಾವರಗಳೆರಡೂ ಕವಿಯ ಅಂತರಂಗದಲ್ಲಿಯೇ ಮನೆಮಾಡಿವೆಯೆಂದು ಗೊತ್ತಾದಾಗ, ಆ ಸಂಘರ್ಷವು ಕವಿಮನದ ಕದನಕ್ಕೆ ಒಡ್ಡಿದ ಪ್ರತಿಮೆಯಾಗುತ್ತದೆ. ಇದು ಅವರ ಕಾವ್ಯದ ಕರ್ಷಣಗಳಲ್ಲಿ ಒಂದು. ಅಡಿಗರು ಬಳಸುವ ನಾಗರಿಕ ಪ್ರತಿಮೆಗಳ ಶಿಥಿಲತೆಗೂ ಗ್ರಾಮಮೂಲವಾದ ಪ್ರತಿಮೆಗಳ ಸದೃಢತೆಗೂ ಇರುವ ವೈಷಮ್ಯವನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು. ಕೊನೆಗೂ ಬಾಲ್ಯಕ್ಕೂ ಮುಗ್ಧತೆಗೂ ಕಾವ್ಯಸ್ಫೂರ್ತಿಗೂ ಇರುವ ಅವಿನಾಸಂಬಂಧವು ಸ್ಪಷ್ಟವಾಗುತ್ತದೆ. ಬದಲಾಗಿ, ವಯಸ್ಸು ಕಳೆದಂತೆ ಜಗತ್ತಿನ ಒತ್ತಡಗಳಿಂದಲೇ ಮಲಿನವಾಗುವ ಮನಸ್ಸು ಅವುಗಳನ್ನೂ ಒಳಗೊಳುತ್ತದೆ. ಕಾಂತಾವರದ ಪೇಟೆಬೀದಿಗಳ ಇಣುಕುತೂಹಲಗಳು ಅವರ ಕಥೆ ಕಾದಂಬರಿಗಳಲ್ಲಿ ಎಂತೋ ಹಾಗೆಯೇ ಈ ಕವಿತೆಗಳಲ್ಲಿಯೂ ಇಡಿಕಿರಿದಿದೆ. ಇದು ಅವರ ಇಷ್ಟಾನಿಷ್ಟಗಳ ಸಂಗತಿಯಲ್ಲ. ಅವರ ಹೊರಮನಸ್ಸು ಇದನ್ನು ಒಪ್ಪುವುದಿಲ್ಲ. ಆದರೆ, ಒಳ ಮನಸ್ಸು ಆ ವಾಸನೆಗಳನ್ನು ಬಿಡಲು ತಯಾರಾಗುವುದಿಲ್ಲ. ಆದರೆ, ಸಂಕೇತಗಳಾಗುವ ವಿವರಗಳಿಂದ ಈ ಮಾತಿನ ನಿಜವು ಗೊತ್ತಾಗುತ್ತದೆ. ಉದಾಹರಣೆಗೆ,

"ದೇವಸ್ಥಾನದ ಹೊರಗಿದ್ದ ಬಾನಾಡಿ
ದಾರಿ ತಪ್ಪಿ ಒಳಗೆ ನುಗ್ಗಿ
ಡಿಕ್ಕಿ ಹೊಡೆದು ಬಾಗಿಲಿಗೆ
ಬಂಧಿಯಾಗಿ
ಕುಟುಕುತ್ತಲೇ ಇದೆ ಬಾಗಿಲಿನಲ್ಲಿರುವ

ಸರಪಳಿಯನ್ನು
ಮುಕ್ತಿಗಾಗಿ" (ಅಪ್ರತಿಮ ಪ್ರತಿಮೆ, ಸ.ಕಾವ್ಯ 450)

ಹಾಗೆ ನೋಡಿದರೆ, ಮೊಗಸಾಲೆಯವರ ಈಚಿನ ಕವಿತೆಗಳಲ್ಲಿ ಕಾಂತಾವರವು ಕಾಣೆಯಾಗಿರುವುದು ಆಕಸ್ಮಿಕವೆಂದು ನಾನು ತಿಳಿಯುವುದಿಲ್ಲ. ಅದು ಅವರ ಮನಸ್ಸು ಬೇರೆಬಗೆಯ ಉಡ್ಡಯನಗಳಿಗೆ ಸಿದ್ಧವಾಗುತ್ತಿರುವುದರ ಸೂಚನೆ ಇರಬಹುದು. ಅಂತರಂಗದ ಸಮಾಧಾನದ ಮೂಲಕ ಹೊರ ಜಗತ್ತನ್ನು ಪರಿಭಾವಿಸುವ ನಿರ್ಮಮ ಬಗೆಗಳು ಅವರಿಗೆ ಸಾಧ್ಯವಾಗುತ್ತಿರಬಹುದು.

ಹಿರಿಯ ಕವಿ ಪು.ತಿ.ನ ಅವರು, ತಮ್ಮ ಒಂದು ಕವನದಲ್ಲಿ, ಕವಿಯ ಮನಸ್ಸು ಎಂಬ ಚಿಕ್ಕ ಹಕ್ಕಿಗೆ ಈ ವಿಶಾಲ ವಿಶ್ವವು ಎಂತು ಬಂತೆಂದು ಅಚ್ಚರಿ ಪಡುತ್ತಾರೆ. ಇದನ್ನು ಆಗುಮಾಡುವುದರಿಂದಲೇ ಕವಿಗೆ 'ಸ್ವಕೇಂದ್ರಮುಕ್ತಿ' ಸಿಗುವುದೆಂದು ಅವರ ಅಭಿಪ್ರಾಯ. ಅವರಂತೆಯೇ, ಮೊಗಸಾಲೆಯವರು ಕಾಂತಾವರದ ಕಾಂತಾರದ ನಡುವೆ ಕುಳಿತು, ಅರ್ಮೇನಿಯಾದಿಂದ ಮಗಧದವರೆಗಿನ ಜಗತ್ತನ್ನು ಅದರ ಚರಿತ್ರೆ ಭೂಗೋಳಗಳೊಂದಿಗೆ ಬರಮಾಡಿಕೊಳ್ಳುತ್ತಾರೆ. ಲೋಕಹೃದಯಕ್ಕೆ ಆದ ಗಾಯಗಳು ಕವಿಹೃದಯದ ಅಥವಾ ಎಲ್ಲ ಮಾನವಹೃದಯಗಳ ನೋವಾಗಿ ಪರಿವರ್ತಿತವಾಗುತ್ತವೆ. ಚರಿತ್ರೆಯನ್ನು ಬಿಡಿಯಾಗಿ ನೋಡುವುದು, ಚರಿತ್ರೆಯಿಂದ ಮುಕ್ತವಾದ ನಿಸರ್ಗವನ್ನು ಅದು ಇರುವಂತೆ, ಅದು ಚಿರಂತನವೆಂಬಂತೆ ನೋಡುವುದು ಮತ್ತು ಬೇಂದ್ರೆಯವರು ತಮ್ಮ 'ಚಿಗುರುಗಂಗಳ ಚೆಲುವೆ'ಯಲ್ಲಿ ಕಂಡ ಹಾಗೆ. ಚರಿತ್ರೆಯ ಹಿಡಿತಕ್ಕೆ ಸಿಕ್ಕು ಅವಸಾನದ ಕಡೆಗೆ ಚಲಿಸುತ್ತಿರುವ ನಿಸರ್ಗವನ್ನು ಗ್ರಹಿಸುವುದು ಈ ಮೂರು ಬಗೆಗಳೂ ಮೊಗಸಾಲೆಯವರಿಗೆ ಸಾಧ್ಯವಾಗಿದೆ. ಅಡಿಗರ ರಾಜಕೀಯ ಪ್ರಜ್ಞೆ ಮತ್ತು ನರಸಿಂಹಸ್ವಾಮಿಯವರ ಜೀವನಪ್ರಜ್ಞೆಗಳು ಸೇರುವ ಸಂಧಿಭೂಮಿಯಾಗಿಯೂ ಇವರ ಕವಿತೆ ಕಾಣುತ್ತದೆ. ಇಂತಹ ಕೂಡುವಿಕೆಯನ್ನು ನಾನು ಕಂಡಿರುವುದು, ಬೇಂದ್ರೆ ಮತ್ತು ಅಡಿಗರನ್ನು ಒಂದು ಬಿಂದುವಿನಲ್ಲಿ ಹಿಡಿದುಬಿಡುವ ಆನಂದ ಝುಂಝುರವಾಡರಲ್ಲಿ ಮಾತ್ರವೇ. ಮೊಗಸಾಲೆಯವರು ತಮ್ಮ ಪ್ರಕ್ಷುಬ್ಧ ಕ್ಷಣಗಳಲ್ಲಿ ಇತಿಹಾಸ ಮತ್ತು ಸಮಾಜದ ಅಳಲುಗಳನ್ನು ಗ್ರಹಿಸಿದರೆ, ಶಾಂತ ಗಳಿಗೆಗಳಲ್ಲಿ ನಿಸರ್ಗದ ಅಂತೆಯೇ ಜೀವನದ ಗುಟ್ಟುಗಳನ್ನು ಗ್ರಹಿಸುತ್ತಾರೆ. ಕೆಲವೊಮ್ಮೆ ಇವೆರಡೂ ಸಂಗತಿಗಳು ಒಂದೇ ಕವಿತೆಯ ಒಡಲಿನಲ್ಲಿ ಸಾಧ್ಯವಾಗುತ್ತದೆ.

'ಸ್ವಂತಕ್ಕೆ ಸ್ವಂತಾವತಾರ' ಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ಕುರ್ತಕೋಟಿಯವರು ಹೀಗೆ ಹೇಳುತ್ತಾರೆ: "ಇತಿಹಾಸದ ತೊಡಕಿನಲ್ಲಿ ಸಿಕ್ಕಬಿದ್ದ ಕವಿ ಇತಿಹಾಸವನ್ನು ಅರ್ಥವಿಸಿಕೊಳ್ಳುವುದು ಅನಿವಾರ್ಯವಾಗುತ್ತದೆ. ಅವನ ಹತ್ತಿರ ಇರುವುದೆಂದರೆ ಅವನ ಜೀವಂತವಾದ ಪ್ರಜ್ಞೆ ಮತ್ತು ಭಾಷೆ ಇವೆರಡೇ. ಅವನ ಪ್ರಜ್ಞೆಯ ಮೇಲೆ ಜಗತ್ತು ದಾಳಿ ಮಾಡುತ್ತದೆ." (ಅರವತ್ತರ ತೇರು, ಪುಟ 274) ಅವರು ಹೇಳುವ ಜೀವಂತವಾದ ಪ್ರಜ್ಞೆಯು, ತನಗೆ ದತ್ತವಾದ ಮತ್ತು ತನ್ನದೇ ಆದ ವಿಚಾರಗಳಿಂದಲೂ ನಿರ್ದೇಶಿತವಾಗಿರುತ್ತದೆ. ಕವಿಯಾದವನು ಅದನ್ನು ಬಳಸುವ ಮತ್ತು ಮೀರುವ ಕರ್ಷಣದಲ್ಲಿ ಕೆಲಸ ಮಾಡಬೇಕಾಗುತ್ತದೆ.

ಅವನು ಬಳಸುವ ಭಾಷೆಗೆ ತನ್ನದೇ ಆದ ಅರ್ಥವಲಯಗಳನ್ನು ಕಟ್ಟಿಕೊಳ್ಳುವ ಸಾಮರ್ಥ್ಯವಿದ್ದರೂ ಅದು ಕಪಿಯಿಂದಲೇ ಆಯ್ಕೆಯಾಗಿರುತ್ತದೆ. ಮೊಗಸಾಲೆಯವರ ಕವಿತೆಗಳು ಇತಿಹಾಸವನ್ನು ರಾಜಕೀಯ ನಿಲುವುಗಳಿಗಿಂತ ಹೆಚ್ಚಾಗಿ, ಮಾನವತಾವಾದದ ಫಲವಾದ ವಿಷಾದ, ಅಸಹಾಯಕತೆ ಮತ್ತು ಅಪರಾಧೀ ಪ್ರಜ್ಞೆಗಳ ಸಂಗಡ ನೋಡುತ್ತವೆ. ಆದ್ದರಿಂದಲೇ ಮಗಧದ ರಾಜ, ಪಾಬ್ಲೋ ನೆರುಡಾ, ಅಯೋಧ್ಯೆ, ಗಾಂಧಿ ಮುಂತಾದುದರ ಸಂಗಡದ ಮುಖಾಮುಖಿಯು ಬಹುಮಟ್ಟಿಗೆ ಕೋಪರಹಿತವಾದ ವಿಷಾದದಿಂದ ಕೂಡಿದೆ. ಆದರೆ, ಅಫ್ಘಾನಿಸ್ಥಾನದ ಬಗ್ಗೆ ಬರೆಯುವಾಗ ಕೊಂಚ ವ್ಯತ್ಯಾಸವಿದೆ:

"ಇಲ್ಲ ! ಅಫಘಾನದಲ್ಲಿ ಈಗ ಸಂಜೆ, ಮುಂಜಾನೆ ರಾತ್ರಿ
ಅಮೇರಿಕದ ಸುಡು ಹಗಲು ಇಡಿಯಾಗಿ ಇಳಿದಿದೆ
ಬುದ್ಧ ಗುರುವಿನ ಛಿದ್ರ ಬೆಳದಿಂಗಳ ಮೇಲೆ!" (ಅಫಘಾನ – ಇಲ್ಲಿ!)

ಎಂದರೆ ಇಲ್ಲಿ ಶತ್ರುವನ್ನು ಖಚಿತವಾಗಿ ಗುರುತಿಸಲಾಗಿದೆ. **ಕೊನೆಗೂ ಚರಿತ್ರೆಯ ಗ್ರಹಿಕೆಯೆಂದರೆ ರಾಜಕೀಯದ ತಿಳಿವಳಿಕೆಯೂ ಹೌದು**. ನಿಲುವುಗಳನ್ನು ತಳೆಯುವ ಧೈರ್ಯವೂ ಹೌದು. ಉದಾಹರಣೆಗೆ ಮಧ್ವಾಚಾರ್ಯರ ಪಾಜಕದ ಬಂಡೆಗಳ ಬಗ್ಗೆ ಬರೆಯುವಾಗ,

"ಒಪ್ಪದವರಿಗು ನಿನ್ನನೊಪ್ಪಿದವರಿಗೂ ನಾನು
ಮಠದ ಒಳಹೊರಗಿದ್ದು ಇಡಿಸಿಕೊಳ್ಳದೆ
ಮುದ್ರೆ: ಮರೆತೆ ಮುದ್ರರಾಕ್ಷಸನ ಕೈಗೊಂಬೆ.
ನಿಂತ ನೀರಲ್ಲಿಳಿಸಿ ಕೈಯ ನಾವೇ!

ಇಷ್ಟಾದರೂ ನೀನು ಕಲ್ಲು ಹೃದಯಗಳಲ್ಲಿ
ನೀರು ತುಂಬಿದ ಬಾವಿ ಏಕಾಂತದ
ಇದ್ದರೂ ಮಂದಿ ಸಾವಿರ ನಾನು ಒಬ್ಬಂಟಿ
ತೇರು ಬೀದಿಯ ನಡುವೆ ದೇವರಿಲ್ಲ" (ಪಾಜಕದ ಬಂಡೆ)

ಇಂಥ ಹತ್ತು ಹಲವು ಕವಿತೆಗಳಲ್ಲಿ ಯಾವುದೇ ಐಡಿಯಾಲಜಿಯ ಸಮರ್ಥಕ ಗುಂಪಿನ ಭಾಗವಾಗದೆ ತಟಸ್ಥವಾಗಿ, ಸ್ವತಂತ್ರವಾಗಿ ಉಳಿಯುವುದರ ಚಿಕ್ಕಟ್ಟುಗಳನ್ನು ಹೇಳಲಾಗಿದೆ. ಮುದ್ರೆಯನ್ನು ಒತ್ತಿಸಿಕೊಳ್ಳದವರು ಆಗಂತುಕರಾಗಿಯೇ ಉಳಿಯುತ್ತಾರೆ. 1974 ರಷ್ಟು ಹಿಂದೆಯೇ "ದಿ. ಚಾರು ಮಜುಂದಾರನಿಗೊಂದು ಪತ್ರ" ಎಂಬ ಕವಿತೆಯನ್ನು ಬರೆದು, ಅವರು ಗಾಂಧಿಯವರಿಗಿಂತ ಮುಖ್ಯ ಮತ್ತು ಸತ್ಯಸಮೀಪವೆಂದು ಹೇಳಿದ, ನಾಸ್ತಿಕತೆಯನ್ನು ನಂಬಿಕೊಂಡಿದ್ದ ಮೊಗಸಾಲೆಯವರದು ಮೌಲ್ಯ ತಟಸ್ಥವಲ್ಲದ ಮನಸ್ಸು. ಅಂತೆಯೇ ಸ್ವೀಕೃತ ಮೌಲ್ಯಗಳ ಫಲವಾಗಿಯೇ ಜಡವಾಗದ ಮನಸ್ಸು ಕೂಡ. ಈ ಬೆಳವಣಿಗೆಯು ಒಂದು ಬಗೆಯ ಮಾಗುವಿಕೆಯೆಂದೇ ತೋರುತ್ತದೆ. ತಾನು ನೆಚ್ಚಿದ ಐಡಿಯಾಲಜಿಗೆ ಬಾಹಿರವಾದುದನ್ನೆಲ್ಲ ಸಾರಾಸಗಟಾಗಿ ನಿರಾಕರಿಸುವ ಮನಸ್ಸು ಕ್ರಮೇಣ ಮುರುಟಿಕೊಳ್ಳುತ್ತದೆ. ಕವಿಯಾಗುವ ಸಾಧ್ಯತೆಗಳನ್ನು ಕಳೆದುಕೊಳ್ಳುತ್ತದೆ. ಅಲ್ಲದೆ, ಮೊಗಸಾಲೆಯುವರು ಚಟುವಟಿಕೆಗಳಲ್ಲಿ

ತೊಡಗಿಕೊಂಡಂತೆ ಚಳವಳಿಗಳಲ್ಲಿ ತೊಡಗಿಕೊಳ್ಳಲಿಲ್ಲ. ಸಂಘಗಳನ್ನು ಕಟ್ಟಬೇಕೆನ್ನುವವನು ನಿಸ್ಸಂಗಿಯಾಗಿರುವುದು ಸಾಧ್ಯವಿಲ್ಲ. ಆದ್ದರಿಂದ ಅವರು ಮನದಾಲಯದಲ್ಲಿ ಎರಡು ಕೋಣೆಗಳನ್ನು ಮಾಡಿಕೊಳ್ಳುವುದು ಅನಿವಾರ್ಯವಾಯಿತೆಂದು ತೋರುತ್ತದೆ. ಇದರಿಂದ ಅವರ ಕವಿತೆಗಂತೂ ಲಾಭವಾಗುತ್ತದೆ. ನವ್ಯಕಾವ್ಯದ ಮೇರೆಗಳನ್ನು ಮೀರುವ ಹಾಗೂ ದಲಿತ ಬಂಡಾಯದ ಸರಳೀಕೃತ ಆಕೃತಿಗಳನ್ನು ಕಡ ತೆಗೆದುಕೊಂಡು ಖೋಟಾ ಆಗದ ಶಕ್ತಿಯನ್ನು ಅವರ ಕಾವ್ಯದ ಉತ್ತರಾರ್ಧವು ಸಾಧಿಸಿತು. ಏಕೆಂದರೆ ದಲಿತರ ನೋವುಗಳಿಗೆ ಸಹಭಾಗಿಯೂ ಆಗದ ಉತ್ತರಾಧಿಕಾರಿಯೂ ಆಗದ ಅವರ ನಿಲುವುಗಳನ್ನು ತಮ್ಮದಾಗಿಸಿಕೊಳ್ಳುವ ಹಕ್ಕು ಸುಲಭವಾಗಿ ಬರುವುದಿಲ್ಲ. ಅದು ಸಂಪೂರ್ಣವಾದ ಅಪ ವರ್ಣೀಕರಣವನ್ನು ಬಯಸುತ್ತದೆ.

ನಿಸರ್ಗ, ಪ್ರಕೃತಿ ಎನ್ನುವ ಪದಗಳಿಗೆ ಇರುವ ಎಲ್ಲ ಅರ್ಥಗಳಲ್ಲಿಯೂ ಮೊಗಸಾಲೆಯವರ ಕಾವ್ಯವು ಅವುಗಳನ್ನು ಶೋಧಿಸಿದೆ. ಪ್ರಕೃತಿಯ ವಿವರಗಳ ವರ್ಣನೆಯಷ್ಟೇ ಮುಖ್ಯವಾಗುವ ಒಂದು ಕವಿತೆಯನ್ನೂ ಅವರು ಬರೆದಿಲ್ಲ. ಮನುಷ್ಯನ ಜೀವನದ ಲಯಗಳನ್ನು ಹುಡುಕುವ ಹಾದಿಯಾಗಿಯೇ, ಪರಿಕರವಾಗಿಯೇ ಅವರಿಗೆ ನಿಸರ್ಗವು ಮುಖ್ಯವಾಗುತ್ತದೆ. ಹಾಗೆ ನೋಡಿದರೆ, ಅವರದು ಲೈಂಗಿಕ ಪ್ರತಿಮೆಗಳನ್ನು ವಿನಾ ಕಾರಣ ಓಲೈಸುತ್ತಿದ್ದ, ಬಳಸುತ್ತಿದ್ದ ಕಾವ್ಯ. ಪ್ರಕೃತಿಯನ್ನು ಬಂಧನವೆಂದು, ಮನುಷ್ಯನನ್ನು ವಿಕೃತಿಯೆಂದು, ಸ್ವತಃ ತನ್ನನ್ನು ಬಲಿಪಶುವೆಂದು ತಿಳಿದುಕೊಂಡ ಅಹಂ ಕೇಂದ್ರಿತ ಬರವಣಿಗೆಯನ್ನು ಮೀರಿ, ಸಾವಧಾನವನ್ನು ಸಮಾಧಾನವನ್ನು ಪಡೆಯುವುದು ಅವರ ತಲೆಮಾರಿನ ಹಲವರಿಗೆ ಸಾಧ್ಯವಾಗಲೇ ಇಲ್ಲ. ಆದರೆ, ಇವರಿಗೆ 'ಕಾಡ ಮೂಲಕವೇ ಪಥ ಆಗಸಕ್ಕೆ' ಎನ್ನುವುದನ್ನು ಕಂಡುಕೊಳ್ಳಲು ಸಾಧ್ಯವಾಯಿತು. ಏಕೆಂದರೆ ಅವರು ಕನ್ನಡ ಕಾವ್ಯವನ್ನು ಯಾವುದೋ ಒಂದು ಸ್ಥಗಿತ ಸ್ಥಿತಿಯಲ್ಲಿ ಗ್ರಹಿಸದೆ, ಅದರ ಚಲನಶೀಲ ವಾಸ್ತವವನ್ನು ಗುರುತಿಸಿದರು. ಇದಕ್ಕೆ ಅವರು 25 ವರ್ಷಗಳಿಗಿಂತ ಹಿಂದಿನಿಂದ ನಡೆಸುತ್ತಿರುವ ಸ್ಪರ್ಧೆ ಪ್ರಶಸ್ತಿಗಳ ಫಲವಾದ ಕವಿ ಕಾವ್ಯ ಪರಿಚಯವೂ ಕಾರಣವಾಗಿರಬಹುದು.

ಕಾರಣ ಏನೇ ಇರಲಿ, ಜೀವನವನ್ನು ಕಾವ್ಯವಾಗಿ ಪರಿವರ್ತಿಸಲು ಆಗತ್ಯವಾದ ದೃಷ್ಟಿಕೋನವೊಂದನ್ನು ಅವರು ಕ್ರಮೇಣ ಪಡೆದುಕೊಂಡರು. 'ಬಿರುಸು', 'ಒರಟುತನ' (ಕ್ರೂಡಿಟಿ) ಮತ್ತು ಅತಿ ವಿಸ್ತಾರಗಳನ್ನು ಕಳೆದುಕೊಂಡ, ರೂಪಕಮಯವಾದ, ಸಂಕೀರ್ಣವಾದರೂ ಕ್ಲಿಷ್ಟವಲ್ಲದ ಭಾಷೆಯನ್ನು ಕಂಡುಕೊಂಡರು. ಮೊದಲ ಕವಿತೆಯಲ್ಲಿ ಹೇಳಿಕೊಂಡ 'ಭಾಷೆ ವ್ಯಾಕರಣಗಳ ಕತ್ತು ಹಿಚುಕಿಯಾದರೂ ಸ್ವಂತದ್ದನ್ನು ಹೇಳುವ ಛಲ'ವು ನಿಧಾನವಾಗಿ ಹೊಸ ಆಯಾಮಗಳನ್ನು ಪಡೆದುಕೊಂಡಿತು.

ಅಂತರ್ಪಠ್ಯೀಯತೆಯು (Inter Textuality) ಮೊಗಸಾಲೆಯವರ ಬರವಣಿಗೆಯ ಬಹಳ ಮುಖ್ಯವಾದ ಅಂತೆಯೇ ಅನನ್ಯವಾದ ಗುಣ. ಎಷ್ಟೋ ಸಲ ಅವರ ಒಂದು ಕವಿತೆಗೆ ಬೇರೆ ಯಾರದೋ ಇನ್ನೊಂದು ಕವಿತೆಯು ಪ್ರೇರಣೆಯಾಗುತ್ತದೆ, ಆರಂಭಬಿಂದುವಾಗುತ್ತದೆ. ಆ ಸಂಗತಿಯನ್ನು ಮುಚ್ಚಿಡುವ ಯಾವುದೇ ಪ್ರಯತ್ನವನ್ನೂ

ಅವರು ಮಾಡುವುದಿಲ್ಲ. ಅನೇಕ ಸಲ ಆ ಮೂಲ ಕವಿತೆಯ ಲಯ ಹಾಗೂ ಆಕೃತಿಗಳನ್ನೂ ಅವರು ತಮ್ಮಲ್ಲಿ ಆವಾಹಿಸಿಕೊಳ್ಳುತ್ತಾರೆ. ಅದನ್ನು ಓದಿದ ಕೂಡಲೆ, ಕನ್ನಡ ಕವಿತೆಯ ಗಂಭೀರ ಓದುಗರ ಸ್ಮೃತಿಕೋಶವು ಜಾಗೃತವಾಗುತ್ತದೆ. ಆದರೆ, ಅಂತಿಮವಾಗಿ ಮೊಗಸಾಲೆಯವರು ಕಟ್ಟಿಕೊಡುವುದು ತಮ್ಮದೇ ಆದ ಹೊಸ ಕವಿತೆಯನ್ನೇ ಹೊರತು ಮೂಲ ಕವಿತೆಯ ದುರ್ಬಲ ಪಡಿನೆಳಲನ್ನು ಅಲ್ಲ. ಪಂಪ, ರನ್ನ, ಕುಮಾರವ್ಯಾಸ, ಲಕ್ಷ್ಮೀಶರ ಅಧ್ಯಯನದಿಂದ ಸ್ಪಷ್ಟವಾಗುವಂತೆ, ಕನ್ನಡ ಕಾವ್ಯದ ಇತಿಹಾಸವೇ ಈ ರೀತಿಯ ಸಹಯೋಗ ಮತ್ತು ಮರುಸೃಷ್ಟಿಗಳ ಕಥನವಾಗಿದೆ. ಕನ್ನಡದಲ್ಲಂತೂ ಮೊಗಸಾಲೆಯವರು ಇಂತಹ ಪ್ರಕ್ರಿಯೆಯ ಮುಖ್ಯ ವಕ್ತಾರರು. ಇದು ಎಷ್ಟು ಮಾತ್ರಕ್ಕೂ ಪ್ರಭಾವವಾಗಲೀ ಅನುಕರಣವಾಗಲೀ ಅಲ್ಲ. ಇದು ಪರಂಪರೆಯ ನೆನಪು ಬಳಕೆಗಳಿಂದಲೇ ಕವಿತೆಯನ್ನು ಬೆಳೆಸುವ ಹಾದಿ.

ಉದಾಹರಣೆಗೆ ಅಡಿಗರ 'ಕೂಪಮಂಡೂಕ'ದ ಸಖಿಸು, ಮೊಗಸಾಲೆಯವರ 'ನೀ ಮರಳಿ ಬಂದದ್ದು' ಕವಿತೆಯಲ್ಲಿ ಪಡೆಯುವ ಮುರುಹುಟ್ಟನ್ನು ಕುರ್ತಕೋಟಿಯವರು ಪ್ರಸ್ತಾಪಿಸುತ್ತಾರೆ. ಹಾಗೆಯೇ ನರಸಿಂಹಸ್ವಾಮಿಯವರ 'ಕುಣಿಯುವ ಹೆಣ್ಣು' ಕವಿತೆಯ ಕುಮ್ಮಾರನ ಮಗಳು, ಇಲ್ಲಿನ 'ಕತ್ತಿ' ಕವನದಲ್ಲಿ ತನ್ನ ಮುಂದುವರಿಕೆಯನ್ನು ಕಾಣುತ್ತಾಳೆ.

"ಮಾತಿರಲಿಲ್ಲ ಅಲ್ಲಿ ಕಾಯಕವೇ ಮಾತಾಗಿ
ಕರಗಿ ಆಗುತ್ತಿತ್ತು ಕತ್ತಿ! ಕತ್ತಿ!
ಅದೇ ಆಗ ಮಗಳ ಕಣ್ಣು ಪತಂಗವಾಗಿ ಹೊರಗಿತ್ತು
ನಾನೂ ನೋಡಿದೆ ಹೊರಗೆ ಹೂವೇ ಅಲ್ಲ ಹುಡುಗಿ" (ಕತ್ತಿ 'ಅರವತ್ತರ ತೇರು' ಪುಟ 475)

ಹಾಗೆಯೇ ವಿ.ಸೀ. ಯವರ 'ಶಬರಿ' ಮತ್ತು ಅಡಿಗರ 'ರಾಮನವಮಿಯ ದಿವಸ'ದ ವ್ಯಕ್ತಮಧ್ಯಕ್ಕೆ ಬಂದಿರುವ ಶಬರಿಯರು ಇಲ್ಲಿನ 'ವ್ಯಕ್ತಮಧ್ಯ' ಎಂಬ ಕವಿತೆಯಲ್ಲಿ ಹೊಸ ಸಾಧ್ಯತೆಗಳನ್ನು ಪಡೆಯುತ್ತಾರೆ. ನಿದರ್ಶನಗಳ ಪಟ್ಟಿಯನ್ನು ಬೆಳೆಸದೆ ಹೇಳುವುದಾದರೆ, ಇವರ ನೆರೆಹೊರೆಯವರೇ ಆದ ಎಕ್ಕುಂಡಿ, ತಿರುಮಲೇಶರಿಂದ ಹಿಡಿದು ಇವರ ಮೆಚ್ಚುಗೆಯ ಕವಿಬಂಧುಗಳಾದ ಎಸ್.ಮಂಜುನಾಥರವರೆಗೆ ಅನೇಕರ ಕವಿತೆಗಳು ಇಲ್ಲಿ ಸಾತತ್ಯವನ್ನು ಕಂಡುಕೊಳ್ಳುವ ಬಗೆಯು ನನಗೆ ಮುದನೀಡಿದೆ. ಅದು ಆಶಯಗಳ ಬೆಳವಣಿಗೆಯ ಸಾತತ್ಯವೂ ಹೌದು. ಲಯಗಳ ಸಾತತ್ಯವೂ ಹೌದು. ಅಂತೆಯೇ ಹೊಸ ಆಶಯ ಹಾಗೂ ಲಯಗಳ ಜನ್ಮಭೂಮಿಯೂ ಹೌದು. ಉದಾಹರಣೆಗೆ ಬೇಂದ್ರೆಯವರು,

"ಏಕೆ ಬಂದೆ? ಏನು ತಂದೆ?
ಹೇಳೊ ಹೇಳು ಶ್ರಾವಣಾ
ನೀ ಬಂದ ಕಾರಣಾ." ಎಂದು ಶ್ರಾವಣದ ಆಗಮನವನ್ನು ವಿಜೃಂಭಿಸಿದರೆ, ಮೊಗಸಾಲೆಯವರು.

"ಬಾರೆ ಏಕೆ ಶ್ರಾವಣ
ಹೇಳೆ ಅದಕೆ ಕಾರಣ
ಎನ್ನ ಮನೋನಂದನ

ಕಾದು ಕುಣಿಯಲನುದಿನ
ಬಾರೆ ಏಕೆ ಶ್ರಾವಣ...."          ( ಶ್ರಾವಣ: 'ಅರವತ್ತರ ತೇರು' ಪುಟ 261)

ಎಂದು, ಮೂಲ ಕವನದ ವಿರುದ್ಧ ದಿಕ್ಕಿನಲ್ಲಿ ತಮ್ಮ ಕವಿತೆಯನ್ನು ಬೆಳೆಸುತ್ತಾರೆ. ಹೀಗೆ ಕನ್ನಡ ಕವಿತೆಯ ಜಗತ್ತನ್ನು, ಇಷ್ಟು ವ್ಯಾಪಕವಾಗಿ, ಇಷ್ಟು ಆಳವಾಗಿ, ವಿಭಿನ್ನ ಬಗೆಗಳಲ್ಲಿ ಒಳಗೊಂಡವರು ಬಹು ವಿರಳ.

ನಮ್ಮಲ್ಲಿ, ಇಂತಹುದೇ ಕಾವ್ಯವಸ್ತು ಎನ್ನುವುದರ ಬಗ್ಗೆ, ಎಲ್ಲ ಕಾಲದಲ್ಲಿಯೂ ಕೆಲವು ಅಘೋಷಿತ ನಿಲುವುಗಳು ಕೆಲಸ ಮಾಡುತ್ತಿರುತ್ತವೆ. ಅವು ಚಳುವಳಿಗಳ ಒತ್ತಾಯದಿಂದಲೂ ಇರಬಹುದು. ಹಾಗಲ್ಲದೆಯೂ ಇರುವುದು. ಆದರೆ, ನಿಜವಾದ ಕವಿಯ ಕಣ್ಣಿಗೆ, ಲೋಕವಸ್ತುಗಳೆಲ್ಲವೂ ಕವಿತೆಯ ಆಕರಗಳಾಗಿಯೇ ಕಾಣುತ್ತವೆ. ಅವನು ಪರಿವರ್ತನೆಯ ಪವಾಡಗಳನ್ನು ಬಲ್ಲವನು. ಅಷ್ಟೇ ಅಲ್ಲ, ವಿಭಿನ್ನ ವಸ್ತುಗಳ ಆಯ್ಕೆಯೇ ವಿಭಿನ್ನವಾದ ಕಟ್ಟುವ ಬಗೆಗಳನ್ನು, ಶೈಲಿಗಳನ್ನು ಬಯಸುತ್ತದೆ. ಇದು ಕವಿತೆಯ ಸಮೃದ್ಧಿ ಹಾಗೂ ವೈವಿಧ್ಯಗಳೆರಡಕ್ಕೂ ಕಾರಣವಾಗುತ್ತದೆ. ಆದರೆ, ಇದು ಕೇವಲ ವೈವಿಧ್ಯಕ್ಕಾಗಿ ಮಾಡಿದ ಪ್ರಯೋಗಗಳಾಗದೆ ಒಟ್ಟಿನಲ್ಲಿ ಕವಿಯ ಲೋಕದರ್ಶನದ ಶ್ರುತಿಯನ್ನೇ ಮಿಡಿಯುತ್ತಿರುತ್ತವೆ. ಈಚಿನ ದಶಕಗಳಲ್ಲಿ ತಿರುಮಲೇಶರೂ ಸೇರಿದಂತೆ ಕೆಲವೇ ಕೆಲವರು ಈ ಕೆಲಸವನ್ನು ಮಾಡಿದ್ದಾರೆ. ಮೊಗಸಾಲೆಯವರು ಅಂತಹ ವಿರಳರ ಗುಂಪಿಗೆ ಸೇರಿದವರು. 'ಮೂಗು', 'ಬೆಳ್ಳಿ ರೂಪಾಯಿ', ಸಾಮಾನ್ಯವಾದ ರಬ್ಬರ್ ಸ್ಟಾಂಪಿನ ಘನಸ್ಥಿಕೆ', 'ಇಡ್ಲಿ ಮತ್ತು ಚಟ್ನಿಯನ್ನು ಕುರಿತು', 'ತಾಂಬೂಲ ಹಾಕುವ ವೈಭವ', 'ನಮ್ಮ ಅಂಗಿಯ ನಿರ್ಲಿಪ್ತತೆ', 'ಒಡೆದ ಮಡಿಕೆಯ ತುಂಡಿಗೆ' ಮುಂತಾದ ಹಲವು ಕವಿತೆಗಳನ್ನು ಹೆಸರಿಸಬಹುದು. ಇಂತಹ ಕಡೆ ಕವಿಯು ಲೋಕದ ಸಂಗತಿಗಳಿಗೆ ಪಾತ್ರೆಯೂ ಆಗುತ್ತಾನೆ. ಕನ್ನಡಿಯೂ ಆಗುತ್ತಾನೆ. ಕವಿ ಮಿತ್ರರಾದ ಆನಂದ ಝುಂಜರವಾಡ ಅವರು, 'ಅರವತ್ತರ ತೇರು' ಕೃತಿಯ ಬೆನ್ನುಡಿಯಲ್ಲಿ ಬಹಳ ಸರಿಯಾಗಿ ಹೇಳಿರುವಂತೆ, "ಅನುಭವದ ಆದಿಭೌತಿಕ ಸ್ತರದಿಂದ ಹಿಡಿದು ಅದರ ಅಧ್ಯಾತ್ಮಿಕ ಆಯಾಮಗಳವರೆಗೂ, ನಿಜವಾದ ಕವಿ ಬದುಕು ತಾನೇ ಬಿಟ್ಟುಕೊಡುವ ಅರ್ಥಗಳನ್ನು ಸ್ವೀಕರಿಸುವ, ಬೆಳೆಸುವ ಜಗತ್ತಿಗೆ ಬಿಟ್ಟುಕೊಡುವ ಗರ್ಭವಾಗಿರುತ್ತಾನೆ."

ಡಾ. ನಾ. ಮೊಗಸಾಲೆ ನನಗೆ ಮುಖ್ಯವಾಗಿ ಕಂಡದ್ದು ಅವರು ಈ ಬಗೆಯ ಶಕ್ತಿಯನ್ನು ಪಡೆದುದರಿಂದ. ಈ ಪ್ರಕ್ರಿಯೆಯು, ಅಪರೂಪವೆನಿಸುವ, ಈಗಾಗಲೇ 'ಚೌಕಟ್ಟನ್ನು ಪಡೆದಿಲ್ಲದ' ವಸ್ತುಗಳ ಆಯ್ಕೆಯಿಂದಲೂ ಸಾಧ್ಯವಾಗುತ್ತದೆ. ಏಕೆಂದರೆ, ಅಂತಹ ವಸ್ತುವಿಗೆ ಈಗಾಗಲೇ ದತ್ತವಾಗಿರುವ ಕಾವ್ಯಾತ್ಮಕವಾದ ಉಪಾಧಿಗಳಿರುವುದಿಲ್ಲ. ಹೀಗೆ ಮೊಗಸಾಲೆಯವರು ಒಂದು ಕಡೆ ಹಳೆಯ ಕವಿತೆಗಳನ್ನು ಮುಂದುವರಿಸಿದರೆ, ಮತ್ತೊಂದು ಕಡೆ ಹೊಸ ವಸ್ತುಗಳ ಮೂಲಕ ಹೊಸ ಸಾಧ್ಯತೆಗಳನ್ನು ಅನ್ವೇಷಿಸುತ್ತಾರೆ. ಉದಾಹರಣೆಗೆ, 'ಒಡೆದ ಮಡಿಕೆಯ ತುಂಡಿಗೆ' ಎಂಬ ಸರಳ ಸಂಕೀರ್ಣ ಕವಿತೆಯನ್ನು ನೋಡೋಣ:

'ನೆನೆಸಿಕೊಂಡರೆ ಹೇಗೆ ಒಡೆದ ಮಡಿಕೆಯ ತುಂಡು
ಒಡೆಯದ ಮೊದಲ ತನ್ನ ಸ್ಥಿತಿಯ



ಅಥವಾ ಅದಕ್ಕೂ ಮೊದಲು ಅದು ಮಣ್ಣಾಗಿದ್ದಾಗ
ಆಮೇಲೆ ಕುಂಬಾರನ ಕೈಯಲ್ಲಿ ಪಟ್ಟ ಪಾಡ
ಈಗ ಮರಳಿ ಮಣ್ಣೆಂದರೆ ಆಗಲಾರೆ, ಹೋಗಲಿ
ಮತ್ತೆ ಮಡಿಕೆ ಆಗೆಂದರೂ ಅಸಾಧ್ಯ
ಅಹಲ್ಯೆಗಾದರೂ ಇತ್ತು ಶಾಪಮೋಕ್ಷ; ನಿನಗೆ ವ್ಯಕ್ತಮಧ್ಯವೇ
ಇಲ್ಲವಲ್ಲ ಶಬರಿಯಂಥ!

ತಾಯಿಯಂತಹ ಎದೆಯ ತಂದೆಯಂತಹ ಕಣ್ಣಿನ
ನಿನ್ನಲ್ಲಿ ಉಂಡ ಕಂಡ ರುಚಿಗಳೆಲ್ಲ ಮತ್ತೆ
ಬಂದರೆ ನಮ್ಮ ನಾಲಗೆಗೆ ನಮ್ಮ ಪೂರ್ವಿಕರು ಸತ್ತು
ನಮ್ಮ ನಡುವೆ ಇರುವುದು ಸಾಧ್ಯವಾದಂತೆ: ಸಾಧ್ಯವೇ? (ಅರವತ್ತರ ತೇರು, ಪುಟ 500)

ಈ ಕವಿತೆಯ ಸಾವಧಾನದ ಓದು, ಮಡಕೆಯ ತುಂಡಿಗೆ ದೊರಕಿಸಿಕೊಡುವ ಸಾಂಕೇತಿಕತೆಯು ಅಪರೂಪವಾದುದು. ಮನುಷ್ಯ, ಸಂಸ್ಕೃತಿ ಮತ್ತು ಮನುಷ್ಯ ಜಾತಿ ಇವೆಲ್ಲವೂ ಭೂತ ಕಾಲದ ನೆಲೆಗಳನ್ನು ನೆನಪುಗಳನ್ನು ಕಳೆದುಕೊಂಡು, ಭವಿಷ್ಯದ ಸಾಧ್ಯತೆಗಳ ಬಗ್ಗೆ ಅಜ್ಞವಾಗಿ ಇರುವ ಅನಾಥಸ್ಥಿತಿಯನ್ನು ಈ ಕವಿತೆಯು ಅದ್ಭುತವಾಗಿ ಕಟ್ಟಿಕೊಡುತ್ತದೆ. ಇಂಥ ಕಡೆ ಕವಿ ಮತ್ತು ವಸ್ತು ಮತ್ತು ಓದುಗರ ಸಾರ್ಥಕ ಸಹಯೋಗವು ಸಾಧ್ಯವಾಗುತ್ತದೆ.

ಮನುಷ್ಯಸಂಬಂಧಗಳ ಬಗ್ಗೆ ಮೊಗಸಾಲೆಯವರಿಗೆ ಇರುವ ಕಾಳಜಿಯು ಅವರ ಹತ್ತು ಹಲವು ವ್ಯಕ್ತಿಕೇಂದ್ರಿತ ಕವನಗಳಲ್ಲಿ ಕಂಡುಬರುತ್ತದೆ. ಪುಟ್ಟತ್ತೆ, ಚಿಕ್ಕಪ್ಪ, ಬೋಳ ಲಕ್ಷ್ಮಣ, ಮಾರಣ್ಣ ಮಾಡರು, ವಿಠಲ ಜೇಲಾಡಿ, ಪ್ರೇಮ ಮುಂತಾದವರನ್ನು ಕುರಿತ ಕವಿತೆಗಳು ಸಂಬಂಧ ಪಟ್ಟವರ ಘನತೆಯನ್ನು ನಿರೂಪಿಸುವ ನುಡಿಕಾಣಿಕೆಗಳು ಮಾತ್ರವಲ್ಲ. ಅವುಗಳೂ ವಿಭಿನ್ನ ಆಕೃತಿಗಳಲ್ಲಿ ಮೂಡಿಬಂದು ಕವನಗಳಾಗಿಯೇ ಮುಖ್ಯವಾಗುತ್ತವೆ. ಎಷ್ಟೋ ಸಲ ಕವಿಗೆ ತನ್ನದೇ ಭೂತಕಾಲದ ಆರ್ದ್ರ 'ಸೈಟ್'ಗಳಿಗೆ ಮರುಭೇಟಿ ನೀಡುವ ಅವಕಾಶಗಳೂ ಆಗುತ್ತವೆ.

ಮೊಗಸಾಲೆಯವರು ಕವಿಯಾಗಿ ಹುಟ್ಟಿದ್ದೇ ನವ್ಯ ಕವಿಯಾಗಿ. ಅಡಿಗ, ನರಸಿಂಹಸ್ವಾಮಿ, ರಾಮಚಂದ್ರಶರ್ಮ, ಗಂಗಾಧರ ಚಿತ್ತಾಲ ಮುಂತಾದವರಿಗೆ ಸಹಜವಾಗಿಯೇ ಇದ್ದ ನಿಯತ ಲಯಗಳ ಪರಿಚಯವು ಎರಡನೆಯ, ಮೂರನೆಯ ಪೀಳಿಗೆಗಳ ನವ್ಯರಿಗೆ ಇರಲಿಲ್ಲ. ಗೇಯತೆಯ ಮಾತಂತೂ ದೂರವೇ ಉಳಿಯಿತು. ಸಾಲುಗಳಾಗಿ ಕತ್ತರಿಸಿದ ಗದ್ಯವನ್ನು ಕವಿತೆಯೆಂದು ಕರೆಯುವ, ಚಾಳಿಗಾರರಿಗೆ ಗದ್ಯದ ಲಯಗಳ ಪರಿಚಯವೂ ಇರಲಿಲ್ಲ. ಇಂಥ ಸನ್ನಿವೇಶದಲ್ಲಿ ಕರಾವಳಿಗೆ ಸಹಜವಾದ ಛಂದೋಲಯಗಳಿಗೆ ವಿದಾಯ ಹೇಳುವುದರಿಂದಲೇ ಮೊಗಸಾಲೆಯವರ ಕವಿತೆಯ ಮೊದಲಾಯಿತು. ಇದು ಕವಿತೆಯ ಸ್ಮೃತಿಸಾಧ್ಯತೆಗಳನ್ನು ಕಡಿಮೆಯಾಗಿಸುವ ಅಪಾಯದ ಹಾದಿ. ಸುಮಾರು ಮೂರುವರೆ ದಶಕಗಳ ಹಾದಿಯಲ್ಲಿ ಅವರು ತಮ್ಮ ಕಾವ್ಯ ಭಾಷೆಯನ್ನು ಹಲವು ಬಗೆಗಳಲ್ಲಿ ಹದಗೊಳಿಸಿಕೊಂಡಿದ್ದಾರೆ. ಆದರೆ, ನಿಯತ ಲಯಗಳ ಆಡಳಿತದಡಿಗೆ ಸಾಮಾನ್ಯವಾಗಿ ಹಿಂದಿರುಗಿಲ್ಲ. ಬದಲಾಗಿ ಅವರು

ಗದ್ಯಲಯದ ಪರಿವಲಯದೊಳಗೆ ಸ್ಪಾಂಜಾಯಿಕ್ ಆಗುವ ಪ್ರಯತ್ನ ಮಾಡಿದ್ದಾರೆ. ಇದು ನರಸಿಂಹಸ್ವಾಮಿ, ಜಿ.ಎಸ್.ಎಸ್. ಮುಂತಾದವರ ಆಯ್ಕೆಯಾಗಿದೆ. ಇಲ್ಲಿ ಲಯಭಂಗವೇ ಅನಿರೀಕ್ಷಿತ ನಿಲುಗಡೆಗಳೇ ಕವಿತೆಗಳನ್ನು ಬೆಳೆಸುತ್ತವೆ. ಗಮನಿಸಿ:

1. ನೆರೆ ಇಳಿದ ಹೊಳೆಯಲ್ಲಿ ಹೊಳೆಹೊಳೆವ ಕೆನ್ನೀರು
ಮತ್ತೈದೆ ನಡೆದಂತೆ ತುಂಬು ಸಭೆಯಲ್ಲಿ
ಆ ಹೊಳೆಯ ದಾಟಲಿಕೆ ಬಂದಳೊಬ್ಬಳು ಹುಡುಗಿ
ಯೌವನದ ನೆರೆಗೊಂದು ದೋಣಿ ಬಯಸಿ (ಹೊಳೆ, ಅರವತ್ತರ ತೇರು, ಪುಟ 482)

(ಇದು ಐದು ಮಾತ್ರೆಗಳ ನಿಯತ ಲಯಕ್ಕೆ ಮರಳುವ ಕವಿತೆ)

2. "ವೇದಿಕೆಯ ಶಬರಿ ಪೆಚ್ಚಾಗಿ ನಡೆದಳು ಹಿನ್ನೆಲೆಗೆ
ಸ್ತಬ್ಧವಾಯಿತು ಇಡೀ ಸಭೆ ಒಂದು ಕ್ಷಣ
ಯಾರು ಹೇಳುವುದು ವೆಂಕಜ್ಜಿಗೆ ಈತ ಮೊಮ್ಮಗನಲ್ಲ
ಇದು ಬಯಲಾಟ ವಾಸ್ತವವಲ್ಲ ಎಂಬ ಕಹಿಯ" (ವ್ಯಕ್ತಮಧ್ಯ, ಅರವತ್ತರ ತೇರು, ಪುಟ 482)

(ಇದು ಸ್ಪಾಂಜಾಯಿಕ್ ಆದರೂ ಗದ್ಯಲಯಕ್ಕೆ ಒಲಿದ ಕವಿತೆ)

ಮೊಗಸಾಲೆಯವರು ತಮ್ಮ ಇತರ ಕೆಲವು ಸಮಕಾಲೀನರಂತೆ, ಕಥೆಯಾಗದ ಕಥನದಿಂದ ಒಂದು ಸನ್ನಿವೇಶವನ್ನು ಕಟ್ಟಿಕೊಡುತ್ತಾರೆ. ಅದಕ್ಕೆ ಸಾಂಕೇತಿಕತೆಯ ಶಕ್ತಿಯೂ ಒಡಗೂಡಿರುತ್ತದೆ. ಇಂಥ ಕಡೆ ಅರ್ಥಲಯವೇ ಕಾವ್ಯಲಯವೂ ಆಗಿ ಕವಿತೆಯ ಓದನ್ನು ಆಹ್ಲಾದಮಯವಾಗಿ ಸುತ್ತದೆ. ಬಹಳ ಸರಳವೆಂದು ಕಾಣುವ ಒಂದುಕವಿತೆಯನ್ನು ಗಮನಿಸಿ:



"ಚಹಾ ಕುಡಿಯದವನು ಚಹಾ ಕುಡಿಯುವವನನ್ನು ಕೇಳಿದ
ಕುಡಿವ ಹರ್ಷ ಯಾವುದದು?

ಚಹಾ ಗಿಡಗಳ ನಳನಳಿಕೆ
ಸಮುದ್ರವೇ ಮಳೆಯಾಗಿ ಬರುವ ಮಾಗುವಿಕೆ
ಕರುವಿಗಾಗಿಯೇ ತುಂಬುವ ಕೆಚ್ಚಲು
ಕಬ್ಬಿನ ತೋಟವೇ ಸಕ್ಕರೆಯಾಗುವ ಮನಸ್ಸು

ಬೆಂಕಿಯಲ್ಲಿ ಹದವಾಗಿ ಕುದಿದು ಉಕ್ಕದೆ
ಬಟ್ಟಲಲ್ಲಿ ತುಂಬಿದರೂ ಅಲೆ ಎಬ್ಬಿಸದೆ
ಸಿತಾರದಲ್ಲಿ ಎದ್ದಹಾಗೆ ಸ್ವರಗಳು
ಕುಡಿಯುವವನ ಗಂಟಲೊಳಗೆ ಇಳಿದು

ಚಹಾದ ಗಿಡ ಸಮುದ್ರವಾಗುವುದು
ಸಮುದ್ರ ಹಸುವಾಗುವುದು
ಹಸು ಕಬ್ಬಿನ ತೋಟವಾಗುವುದು
ಸಕ್ಕರೆಯೇ ಮನಸ್ಸಾಗುವುದು

ಚಹಾ ಕುಡಿಯುವವ ಹೇಳುತ್ತಾ ಹೋದ
ಬಟ್ಟಲು ತುಂಬ ತುಂಬಿ
ಚಹಾ ಕುಡಿಯದವನು
ಬಟ್ಟಲು ಎತ್ತದೇ
ಚಹಾ ಕುಡಿದ ಹಾಗೆ
ತುಂಬಿಕೊಂಡು
ಉಕ್ಕಿದ. (ಚಹಾ, ಅರವತ್ತರ ತೇರು, ಪುಟ 493)

ಈ ಕವಿತೆಯು , ಕವಿಯೊಳಗೆ ಪ್ರವೇಸಿಸುವ ಲೋಕವು ಕವಿತೆಯಾಗುವ, ಅಂತೆಯೇ ಓದುಗನ ಅಂತರಂಗದಲ್ಲಿ ಕವಿತೆಯು ತನ್ನ ಕಾವ್ಯಗುಣವನ್ನು ಕಾಪಾಡಿಕೊಂಡೇ ಮರಳಿ ಲೋಕವಾಗುವ ಪವಾಡವನ್ನು ತುಂಬ ಪರಿಣಾಮವಾಗಿ ಹೇಳುತ್ತದೆ. ಹಾಗಲ್ಲದೆಯೂ ಕವಿತೆಯು ಒಂದು ಸಾಮಾನ್ಯವಾದ ಅನುಭವವನ್ನು ಮೆಟಾಫಿಸಿಕಲ್ ಆದ ಘನತೆಗೆ ಏರಿಸುತ್ತದೆ. ಮೊಗಸಾಲೆಯವರ ಕಾವ್ಯದಲ್ಲಿ ಇಂಥ ಅನೇಕ ಕವಿತೆಗಳು ಇಡಿಕಿರಿದಿವೆ. ಅವು ಕವಿತೆಯ ಅನುಭವದ ಆಮೋದದಾಚೆಗೂ ಬಹಳ ಪ್ರಬುದ್ಧವಾದ ತಿಳಿವಳಿಕೆಯನ್ನು ನೀಡುತ್ತವೆ. ನನ್ನ ಕಾಲದ ಕವಿಗಳಲ್ಲಿ ಈ ಬಗೆಯ ಸಾಧನೆಗಳು ಬಹಳ ಅಪರೂಪ. ಈ ಪೀಳಿಗೆಯ ಪ್ರಮುಖ ಕವಿಗಳಾದ ಶಿವಪ್ರಕಾಶರ ಇತಿಹಾಸ/ಸಮಾಜಗಳ ಸಾಂದ್ರವಾದ ನೆನಪು, ಎಸ್. ಮಂಜುನಾಥರ, ವಸ್ತುಲೋಕವನ್ನು ನೋಡುವ ತಟಸ್ಥ ಪರಿಭಾವನೆಯಿಂದಲೇ ನಮ್ಮ ಪ್ರಜ್ಞೆಯ ಪರಿಧಿಗಳನ್ನು ವಿಸ್ತರಿಸುವ ಪ್ರತಿಭೆ, ತಿರುಮಲೇಶರ ವಸ್ತು ಗದ್ಯ ವೈವಿಧ್ಯ, ವೆಂಕಟೇಶಮೂರ್ತಿಯವರ, ಜೀವನವನ್ನು ಕವಿತೆಯಾಗಿಸುವ ಕುಸುರಿಗೆಲಸ ಇವೆಲ್ಲವನ್ನೂ ಏಕತ್ರಗೊಳಿಸಿರುವ ಪ್ರತಿಭೆ ಮೊಗಸಾಲೆಯವರದು. ಮೇಲೆ ಹೇಳಿದ ಒಂದೊಂದು ಲಕ್ಷಣದಲ್ಲಿಯೂ ಆಯಾಯಾ ಕವಿಗಳೇ ಶ್ರೇಷ್ಠರು. ಆದರೆ, ಅದೆಲ್ಲದರ ಸಂಯೋಜನೆಯಿಂದ ಮೊಗಸಾಲೆಯವರು ಅನನ್ಯರು.

ಕವಿತೆಯನ್ನು ಕುರಿತ ಧ್ಯಾನವು ಯಾವುದೇ ಕವಿಯ ಪ್ರಧಾನ ಕಾಳಜಿಗಳಲ್ಲಿ ಒಂದು. ಈ ಸ್ವಾಭಿಮುಖತೆಯ ಚಲನಶೀಲವಾದಾಗ, ತನ್ನ ಕವಿತೆಗೆ ಸಾಧ್ಯವಿರುವ ಕೆಲಸಗಳನ್ನು ಕುರಿತ ಕವಿಯ ಅನಿಸಿಕೆಗಳು ಬದಲಾಗುತ್ತವೆ. ಅದರೊಂದಿಗೆ, ಅವನ ಕಾವ್ಯದ ಸ್ವರೂಪವೂ ಹೊಸ ಹಾದಿ ಹಿಡಿಯುತ್ತದೆ. ಮೊಗಸಾಲೆಯವರು ಕವಿತೆಯನ್ನು ಕುರಿತು ಅನೇಕ ಕವಿತೆಗಳನ್ನು ಬರೆದಿದ್ದಾರೆ. ಅನೇಕರ ಕವಿತೆಗಳನ್ನು ಅನೇಕ ಕಾರಣಗಳಿಗಾಗಿ ಮೆಚ್ಚಿಕೊಂಡಿದ್ದಾರೆ. ಆದರೆ ಅವರ ಕಾವ್ಯತತ್ವವು ಕವನಕೇಂದ್ರಿತವಾದ ಕವಿತೆಗಳಿಗಿಂತ ಬೇರೆಡೆಯೇ ಹೆಚ್ಚು ಸ್ಪಷ್ಟವಾಗುತ್ತದೆ. ಕವಿತೆಯೆಂದರೆ ತನ್ನ ಸ್ವಂತಿಕೆಯ ಭಾಷಿಕ ಅಭಿವ್ಯಕ್ತಿಯೆಂಬ ನೆಲೆಯಿಂದ ಹೊರಟು, ಕವಿಯು ತೋರಿಸುವವನೇ ವಿನಾ ಹೇಳುವವನಲ್ಲವೆಂಬ ವಿನಯದ ನಿಲುವಿನವರೆಗೆ ಅವರ ಕವಿತೆಯ ಬೆಳವಣಿಗೆಯ ಹರಹು ಇದೆ. ಒಂದು ರೀತಿಯಲ್ಲಿ ಇದು ಅಡಿಗರಿಂದ ಮಂಜುನಾಥರವರೆಗೆ ಮಾಡಿದ ಪಯಣ. ಯಕ್ಷಗಾನ ಸಹಜವಾದ ಅಬ್ಬರ ಅತಿ ಮಾತುಗಳಿಂದ ಹಿಡಿದು, 'ಮಾತು ಮೈಲಿಗೆ' ಯೆನ್ನುವ ವಿನಯದಿಂದಲೇ, ನೋಟಕ್ಕೆ ಸಿಗದೆ ನುಸುಳುವುದನ್ನುಹಿಡಿದು

ತೋರಿಸುವ ಪಯಣ. ಇದು ಸುಲಭವೇನೂ ಅಲ್ಲ. ಆದರೆ ಅಡಿಗರಂತಹವರಿಗೆ ಈ ಎರಡೂ ಬಗೆಗಳು ಏಕಕಾಲದಲ್ಲಿ ಲಭ್ಯವಾಗಿದ್ದವು. ಮಂಜುನಾಥರಿಗೆ ಮೊದಲನೆಯ ಬಗೆ ಸಾಧ್ಯವೂ ಇಲ್ಲ. ಇಷ್ಟವೂ ಇಲ್ಲ. ಮೊಗಸಾಲೆಯವರಾದರೋ ಒಂದರಿಂದ ಇನ್ನೊಂದಕ್ಕೆ ಚಲಿಸಿದವರು. ಆದ್ದರಿಂದಲೇ ಅವರ ಈಚಿನ ಕವಿತೆಗಳಲ್ಲಿ ಜನಭರಿತ ತರಲೆ ತಾಪತ್ರಯಗಳ ಕಾಂತಾವರವು ಕಾಣೆಯಾಗಿ ಜನವಿದೂರ ವಸ್ತುಲೋಕದ ಪರಿಭಾವನೆಗೆ ಮನಸ್ಸು ಒಲಿಯುತ್ತದೆ. ಒಂದು ಇಡೀ ಕವಿತೆಯಲ್ಲಿ ಬೆಕ್ಕು, ಹಲ್ಲಿ ಮತ್ತು ಇಲಿಗಳೊಂದಿಗೆ ಇರಲು ಅವರಿಗೆ ಸಾಧ್ಯವಾಗುತ್ತದೆ. ಇದರಲ್ಲಿ ತಪ್ಪೇನೂ ಇಲ್ಲ. ಆದರೆ, ಅವರಿಗೆ ಕಾಂತಾವರದೊಂದಿಗಿನ ವ್ಯವಹಾರವು ಸ್ಥಗಿತವಾಗಿಲ್ಲ. ಬದಲಾಗಿ ಅಭ್ಯಾಸವಾಗಿದೆ. ಇಂತಹ ಸನ್ನಿವೇಶದಲ್ಲಿ ಕವಿತೆಯ ರಚನೆಯು ಆಹಾರ, ನಿದ್ದೆ, ಭಯ. ಮೈಥುನಗಳಂತೆ ಸಲೀಸು ಮತ್ತು ನಿರಪಾಯವಾಗುತ್ತದೆ. ಅದರಲ್ಲಿಯೂ ಮೊಗಸಾಲೆಯವರು ಅರವತ್ತರ ನಂತರವೂ ಅಧ್ಯಾತ್ಮ ಅನುಭಾವಗಳಲ್ಲಿ ನಸು ಮಾತ್ರವೂ ಆಸಕ್ತಿಯನ್ನು ತಳೆದಿಲ್ಲ. ಹೀಗಿರುವಾಗ, ಕವಿತೆಗೆ ಅಗತ್ಯವಾದ ತೀವ್ರತೆಯನ್ನು ಕಾಪಾಡಿಕೊಳ್ಳುವುದು ಅವರ ಕವಿತೆಯ ಭವಿಷ್ಯದ ದೃಷ್ಟಿಯಿಂದ ಅತ್ಯಗತ್ಯ. ಹೆಚ್ಚಾಗಿ ಬರೆಯುವುದರಷ್ಟೇ ಹುಚ್ಚಾಗಿ ಬರೆಯುವುದೂ ಮುಖ್ಯ.

ಈ ಸಂದರ್ಭದಲ್ಲಿ ಇವರ 'ಇಹಪರದ ಕೊಳ' ಸಂಕಲನವನ್ನು ಕುರಿತಂತೆ ಕೆಲವು ಮಾತುಗಳನ್ನು ಹೇಳಬಹುದು. ಅಲ್ಲಿ, ಅವರ ಕವಿತೆಯು ಪಡೆದುಕೊಂಡಿರುವ ವಿಶಿಷ್ಟ ತಿರುವಿನ ಬಗ್ಗೆ ಗೆಳೆಯರಾದ ಓ.ಎಲ್. ಎನ್. ಅವರು ಮಹತ್ವದ ಮಾತುಗಳನ್ನು ಹೇಳಿದ್ದಾರೆ. ಅವು ಮೊಗಸಾಲೆಯವರ ಸಮಗ್ರ ಕಾವ್ಯಕ್ಕೆ ಅನ್ವಯವಾಗದಿದ್ದರೂ ಈ ಸಂಕಲನಕ್ಕೆ ಹಾಗೂ ನಿಕಟಪೂರ್ವದ ಸಂಕಲನಗಳ ಅನೇಕ ಕವಿತೆಗಳಿಗೆ ಅನ್ವಯಿಸುತ್ತವೆ. ಅದು ಬಾಹ್ಯ ಲೋಕದಿಂದ ಒಳಸರಿತ ಹಾಗೂ ಅಂತರಂಗದ ಕೇಂದ್ರದಿಂದ ಹೊರ ಜಗವನ್ನು ಪರಿಭಾವಿಸುವ ಬಗೆ. ಜಗತ್ತನ್ನು ಭೌತಿಕವಾದ ಕಣ್ಣುಗಳಿಂದ ನೋಡುವುದಲ್ಲ. ಆ ನೋಟವು ಸಾಧ್ಯವಾಗುವುದೇ ಕಲ್ಪನೆಯ ಬಲದಿಂದ. ಇಲ್ಲಿ ಕಲ್ಪನೆಯಾದರೂ ಆಲೋಚನೆಗೆ ದಾರಿ ಮಾಡಿಕೊಡುವ ಸಾಧನ. ಎಂದರೆ, ಇದು ಮನಸ್ಸು ಕಟ್ಟಿಕೊಳ್ಳುವ ಲೋಕ. ಅಲ್ಲದೆ ಒಂದೇ ಸಂಗತಿಯನ್ನು ಹಲವು ಕೋನಗಳಿಂದ ನೋಡುತ್ತಾ ಭಾವನೆ ವಿಚಾರಗಳನ್ನು ಸಂಯೋಜಿಸುವ ಕೆಲಸ. ಪು.ತಿ.ನ. ಅವರ 'ಮಲೆದೇಗುಲ' ಈ ಕೆಲಸವನ್ನು ಬಹಳ ಸಮರ್ಥವಾಗಿ ಮಾಡಿದೆ. ಸ್ವಾಮಿಯವರು ಸರಿಯಾಗಿಯೇ ಹೇಳುವಂತೆ "ಈ ಸಂಕಲನದ ಕವಿತೆಗಳು ತಮ್ಮ ತಮ್ಮ ಅಂತರಂಗದ ಮೂಲಕ ಲೋಕವನ್ನು ನೋಡುವ ಮನೋಧರ್ಮವುಳ್ಳ ಓದುಗರನ್ನೂ, ಓದಿದ ಕವಿತೆಗಳನ್ನು ಸಾವಧಾನವಾಗಿ ಮನಸ್ಸಿಗೆ ತಂದುಕೊಂಡು ಪರಿಶೀಲಿಸುವ ಮನಸ್ಥಿತಿಯನ್ನು ಬಯಸುತ್ತವೆ" (ಇಹಪರದ ಕೊಳ, ಮುನ್ನುಡಿ) ಈ ಮಾತುಗಳು ಸರಿ. ಈ ಕವಿತೆಗಳೂ ಮನಸೆಳೆಯುತ್ತವೆ. ಆದರೆ, ಈ ವಿಧಾನವು ಕವಿತೆಯೆಂಬ ಮಾಧ್ಯಮದ ಸಾಧ್ಯತೆಗಳನ್ನು ಸೀಮಿತಗೊಳಿಸುತ್ತದೆ. ಅಂತರಂಗದಿಂದ ನೋಡಿದ ಮಾತ್ರಕ್ಕೆ ಇತಿಹಾಸ, ಸಮಾಜ, ಸಂಬಂಧಗಳ ಲೋಕ ಮುಂತಾದವು ಕಾಣೆಯಾಗುವ ಅಗತ್ಯವೇನೂ ಇಲ್ಲ, ಕೊನೆಗೂ ಆ ಅಂತರಂಗಕ್ಕೂ ಸ್ವಯಂಭೂ ಆದ ಅಸ್ತಿತ್ವವೇನೂ ಇಲ್ಲ. ಇಂದಿನ ಸನ್ನಿವೇಶದಲ್ಲಿ

ಅದು ಸಾಮಾಜಿಕವಾದ ತಾತ್ವಿಕತೆಯ ಪ್ರತಿಪಾದನೆಯ ಜವಾಬ್ದಾರಿಯಿಂದ ದೂರ ಸರಿಯುವ ಸುಲಭವಾದ ಮಾರ್ಗವೂ ಆಗಬಹುದು. ಕವಿಗೆ ಇರುವ, ಇಂತಹ ಆಯ್ಕೆಯನ್ನು ಮಾಡಿಕೊಳ್ಳುವ ಸ್ವಾತಂತ್ರ್ಯದ ಪ್ರಶ್ನೆಯಲ್ಲ. ಬದಲಾಗಿ ಕವಿತೆಯ ಸಾಧ್ಯತೆಗಳು ಹಿಗ್ಗುವ ಅಥವಾ ಕುಗ್ಗುವ ಪ್ರಕ್ರಿಯೆಯ ಮಾತು.

ಡಾ. ಮೊಗಸಾಲೆಯವರ ಸಮಗ್ರ ಕಾವ್ಯದ ಬಗ್ಗೆ ಬರೆಯುವುದು ನನ್ನದೇ ಆಯ್ಕೆ. ಈ ಬರವಣಿಗೆಯ ಮೊದಲಲ್ಲಿ ಉದ್ಧರಿಸಿರುವ ಕವಿತೆಯಲ್ಲಿ ಹೇಳಿರುವಂತೆ ಮೊಗಸಾಲೆಯವರು ಒಡೆದದ್ದನ್ನೆಲ್ಲ ಇಡಿಯಾಗಿಸುವ ಕೆಲವನ್ನು ತಮ್ಮ ಕವಿತೆಗಳಲ್ಲಿ ಮಾಡಿದ್ದಾರೆ. ವಿಮರ್ಶೆಯ ಇಡಿ ಇದ್ದುದನ್ನೆಲ್ಲ ಒಡೆದುಕೊಡುವ ಉತ್ಸುಕತೆಯನ್ನು ತೋರಿಸುತ್ತದೆ. ಎರಡೂ ಅಗತ್ಯವೆಂದೇ ನನ್ನ ನಂಬಕೆ. ಆದರೆ ಕಾವ್ಯವು ತನ್ನ ಸ್ವರೂಪದಿಂದಲೇ ಸಮಗ್ರವಾಗುವಂತೆ, ವಿಮರ್ಶೆಯ ಸಮಗ್ರವಲ್ಲ. ವಿಮರ್ಶಕನು ಕಾವ್ಯವನ್ನು ತನಗೆ ಸರಿಕಾಣುವ ಬಗೆಯಲ್ಲಿ, ತನಗೆ ಸರಿಯೆನಿಸುವ ವಿಧಾನ/ಸಲಕರಣೆಗಳನ್ನು ಬಳಸಿ ಪರಿಶೀಲಿಸುತ್ತಾನೆ. ಆದ್ದರಿಂದಲೇ ಈಗಾಗಲೇ ಅವರ ಕಾವ್ಯದ ಬಗ್ಗೆ ಬರೆದಿರುವ ಕೀರ್ತಿನಾಥ ಕುರ್ತಕೋಟಿ, ಮಾಧವ ಕುಲಕರ್ಣಿ, ಲಕ್ಷ್ಮೀಶ ತೋಳ್ಪಾಡಿ, ನಾಗಭೂಷಣಸ್ವಾಮಿ ಮುಂತಾದವರು ತಮ್ಮದೇ ಆದ ಒಳನೋಟಗಳನ್ನು ನೀಡಿದ್ದಾರೆ. ನನ್ನದು ಅದರ ಮುಂದುವರಿಕೆ. ಈ ರಿಲೇ ಆಟ ಇಲ್ಲಿಗೆ ಮುಗಿಯುವುದಿಲ್ಲ. ಮುಗಿಯಬಾರದು. ಈ ಎಲ್ಲ ವಿಮರ್ಶೆಗಳನ್ನು ಮೂಸಿಯೂ ನೋಡದ ಕಾವ್ಯಾಸಕ್ತರ ಬಳಗದಲ್ಲಿಯೂ ಮೊಗಸಾಲೆಯವರ ಕಾವ್ಯವು ತನ್ನದೇ ಆದ ನಿಜದ ನೆಲೆಗಳನ್ನು ಕಂಡುಕೊಳ್ಳುತ್ತದೆ. ಯಾವ ಕವಿತೆಯು ತನ್ನ ಕಡೆಗೆ ಮತ್ತೆ ಮತ್ತೆ ಸೆಳೆಯುವುದೋ ಅದು ದೊಡ್ಡ ಕಾವ್ಯ. ಯಾರದೋ ಕಾವ್ಯವನ್ನು ಓದಿ ಮುಗಿಸಿ ಆಯಿತು ಎಂದು ಯಾರೂ ಹೇಳಲು ಸಾಧ್ಯವಿಲ್ಲ. ಕವಿತೆಯು ಓದುಗನೊಂದಿಗೆ ಬೆಳೆಯುತ್ತದೆ, ಸಮುದಾಯಗಳ ಇತಿಹಾಸದ ಚಲನವಲನಗಳ ಅಗ್ನಿದಿವ್ಯದಲ್ಲಿ ಬೆಳೆದು ಬದಲಾಗುತ್ತದೆ. ಅಂತಹ ಮರು ಓದುಗಳನ್ನು ಪಡೆಯಬಲ್ಲ, ಮರು ಹುಟ್ಟುಗಳನ್ನು ಕಾಣಬಲ್ಲ ಅನೇಕ ಕವಿತೆಗಳನ್ನು ಮೊಗಸಾಲೆಯವರು ಬರೆದಿದ್ದಾರೆ. ಒಬ್ಬ ಕವಿಗೆ ಇನ್ನೇನು ಬೇಕು??

O

# ಇಹ ಪರದ ಕೊಳ

(ಸಂಕಲನಕ್ಕೆ ಬರೆದ ಮುನ್ನುಡಿ)

ಓ. ಎಲ್. ನಾಗಭೂಷಣ ಸ್ವಾಮಿ

ಡಾ. ನಾ. ಮೊಗಸಾಲೆಯವರು ಹಿರಿಯರು. ಅವರನ್ನು ಭೇಟಿಯಾಗುವ ಅವಕಾಶ ದೊರೆತಿಲ್ಲ. ಅವರ ಬರವಣಿಗೆಯಿಂದ ಮತ್ತು ಅವರು ತಮ್ಮ ಊರಿನಲ್ಲಿ ಮಾಡಿರುವ ಸಂಸ್ಕೃತಿ ಸಂವರ್ಧನೆಯ ಕೆಲಸಗಳನ್ನು ಕುರಿತು ಕೇಳಿದ, ಓದಿದ ಮಾತುಗಳಿಂದಷ್ಟೇ ಅವರ ಚಿತ್ರವೊಂದನ್ನು ಮನಸ್ಸು ರೂಪಿಸಿಕೊಂಡಿದೆ. ನಮ್ಮ ಕಾಲದ ಗೌರವಾನ್ವಿತ, ಗೌರವಾರ್ಹ ವ್ಯಕ್ತಿಗಳಲ್ಲಿ ಅವರೊಬ್ಬರು ಎನಿಸಿದೆ. ಅವರ ಆತ್ಮಕಥನವನ್ನು ಓದಿದ ಮೇಲೆ ಅವರ ಬದುಕಿನ ಕಥೆ ಅಪರಿಚಿತರಿಗೆ ಎಷ್ಟು ತಿಳಿಯಬಹುದೋ ಅಷ್ಟು ತಿಳಿದಿದೆ. ಒಂದು ತಲೆಮಾರಿನ ಸಾಹಿತ್ಯಾಭಿರುಚಿಯನ್ನು ಬೆಳೆಸುವಲ್ಲಿ, ಪ್ರೋತ್ಸಾಹಿಸುವಲ್ಲಿ ಅವರ ದುಡಿಮೆ ಎಷ್ಟು ಮಹತ್ವದ್ದು ಅನ್ನುವ ಅಭಿಮಾನವೂ ಮೂಡಿದೆ. ಇದೀಗ ತೀರ ಅಪರಿಚಿತನಾದ ನನ್ನ ಮಾತುಗಳನ್ನು ಅವರ ಹೊಸ ಕವಿತೆಯ ಸಂಕಲನದೊಂದಿಗೆ ಸೇರಿಸುವ ಔದಾರ್ಯ ತೋರಿದ್ದಾರೆ. ಅವರ ಕವಿತೆಗಳನ್ನು ಓದುವ ಆಸಕ್ತರೊಂದಿಗೆ ಆ ಕವಿತೆಗಳ ನನ್ನ ಓದಿನ ಅನುಭವವನ್ನು ಹಂಚಿಕೊಳ್ಳುವ ಅವಕಾಶ ಮಾಡಿಕೊಟ್ಟಿದ್ದಾರೆ. ಅದಕ್ಕಾಗಿ ಕವಿಗೆ ಕೃತಜ್ಞತೆಗಳು.

ನಾ. ಮೊಗಸಾಲೆಯವರದು ಮುಕ್ತವಾದ ಕವಿ ಮನಸ್ಸು ಅನ್ನಿಸುತ್ತದೆ. ಕನ್ನಡದ ಎಲ್ಲ ಪ್ರಮುಖ ಕವಿಗಳನ್ನು ಗಮನವಿಟ್ಟು ಅಭ್ಯಾಸ ಮಾಡಿ ಆ ಅಭ್ಯಾಸದ ಮೂಲಕ ತಮ್ಮ ಕಾವ್ಯದ ಭಾಷೆಯನ್ನೂ ರೂಪವನ್ನೂ ಕಂಡರಿಸಿಕೊಳ್ಳುವ ರೀತಿ ಅವರ ರಚನೆಗಳಲ್ಲಿ ಕಾಣುತ್ತದೆ. ಅಡಿಗರು ಮೊದಲಾಗಿ ಕನ್ನಡದ ಹಲವು ಕವಿಗಳ, ನವೋದಯ ಮೊದಲಾಗಿ ಇತ್ತೀಚಿನ ಅಧ್ಯಾತ್ಮದ ಸನಿಹದಲ್ಲಿ ಸುಳಿದಾಡುವ ಕಾವ್ಯಭಾಷೆಯವರೆಗಿನ, ಹಲವು ನೆರಳುಗಳು ನಲಿದಾಡುವ ಕಾವ್ಯಭೂಮಿಯಾಗಿ ಅವರ ರಚನೆ ಕೆಲವೊಮ್ಮೆ ತೋರುತ್ತದೆ. ಇದು ದೋಷವೇನೂ ಅಲ್ಲ. ಯಾಕೆಂದರೆ ಕಾವ್ಯದ ಪರಂಪರೆ ಅನ್ನುವುದು ಸೃಷ್ಟಿಯಾಗುವುದೇ ಕವಿಗಳು ಹೀಗೆ ತಾವು ಮೆಚ್ಚಿದ ಮಾತಿನ ಧಾಟಿ, ಧೋರಣೆಗಳನ್ನು ತಮ್ಮ ರಚನೆಗಳಲ್ಲಿ ಸ್ಥಿರಗೊಳಿಸುವುದರ ಮೂಲಕ ತಾನೆ? ಹಲವು ಕಿರು ತೊರೆಗಳು ಸೇರಿಯೇ ಅಲ್ಲವೆ ಕನ್ನಡ ಕಾವ್ಯದ ಮಹಾನದಿ ಸೃಷ್ಟಿಯಾಗುವುದು? ಏನಿದ್ದರೂ ಕಾವ್ಯ ಕೂಪಗಳಿಗಿಂತ ಕಾವ್ಯ ತೊರೆಗಳು ಅಪೇಕ್ಷಣೀಯ ಎಂದು ನಂಬಿರುವವನು ನಾನು.

"ಇಹ ಪರದ ಕೊಳ" ಸಂಕಲನದಲ್ಲಿ ನನಗೆ ಕೆಲವು ವೈಶಿಷ್ಟ್ಯಗಳು ಕಂಡಿವೆ. ಮೊದಲನೆಯದಾಗಿ ಇದು ಹಲವು ಕಾವ್ಯಗುಚ್ಛಗಳನ್ನು ಒಳಗೊಂಡ ಸಂಕಲನ. ಒಂದೊಂದು ಗುಚ್ಛದಲ್ಲೂ ನಿರ್ದಿಷ್ಟ

ವಿಷಯ ಅಥವಾ ವಸ್ತು ಅಥವಾ ಆಲೋಚನೆ ಪ್ರೇರಿಸಿದ ರಚನೆಗಳಿವೆ. ಒಂದೊಂದು ಗುಚ್ಛದ ಕವಿತೆಗಳೂ ಒಂದೇ ವಿಷಯ ಅಥವಾ ವಸ್ತು ಅಥವಾ ಆಲೋಚನೆ ಪ್ರೇರಿಸಿದ ರಚನೆಗಳಿವೆ. ಒಂದೊಂದು ಗುಚ್ಛದ ಕವಿತೆಗಳೂ ಒಂದೇ ವಿಷಯವನ್ನು ಬೇರೆ ಬೇರೆ ಮಗ್ಗುಲುಗಳಿಂದ ಕಂಡ ನೋಟಗಳಾಗಿವೆ. ಈ ಎಲ್ಲ ಗುಚ್ಛಗಳ ಹಿಂದೆ ಅವನ್ನೆಲ್ಲ ಒಟ್ಟಾಗಿ ಕಟ್ಟಿರುವ ಸೂತ್ರವೂ ಕ್ರಮೇಣ ಓದುಗರ ಅರಿವಿಗೆ ಬರುತ್ತದೆ. ಎರಡನೆಯ ವೈಶಿಷ್ಟ್ಯವೆಂದರೆ ಗದ್ಯದಲ್ಲಿ ಮಂಡಿಸಿದರೆ ಜಟಿಲ ತಾತ್ವಿಕ ಪ್ರಮೇಯಗಳಾಗುವ ಸಂಗತಿಗಳು ಇಲ್ಲಿ ಅತಿ ಸರಳವಾದ ಆಡುಮಾತಿನ ಧಾಟಿಯಲ್ಲಿ ಮಂಡಿತವಾಗಿವೆ. ದಿನಬಳಕೆಯ ಮಾತಿನ ಹೊರತಾಗಿ ಬೇರೆಯ ರೀತಿಯ ಭಾಷೆ ಎಲ್ಲೂ ಎದುರಾಗದು. ಜಾತ್ರೆಯೋ, ಮರದ ನೆರಳೋ, ಮಲಗಿರುವ ಮಗುವೋ, ಕೆರೆಯೊಳಗಿನ ಬಾತುಕೋಳಿಗಳೋ, ಇಂಥ ಸರ್ವಸಾಧಾರಣ ನೋಟಗಳು ಅಸಾಮಾನ್ಯ ಅರಿವನ್ನು ಬೆಳಗುವಂತೆ ಮೈಗೊಂಡಿವೆಯೋ ಅನ್ನಿಸುವಂತಿವೆ. ಮೂರನೆಯ ವೈಶಿಷ್ಟ್ಯವೆಂದರೆ ಇಂದಿನ ಪ್ರಚಲಿತ ಕವಿತೆ ಬಹುಮುಖ್ಯವೆಂದು ಭಾವಿಸಿರುವ, ಅಥವಾ ಭ್ರಮಿಸಿರುವ, ರಾಜಕೀಯ ನಿಲುವು, ಸಮಾಜಪರ ಚಿಂತನೆ ಇತ್ಯಾದಿಗಳು ಕಣ್ಮರೆಯಾಗಿ ಹೊರಲೋಕವನ್ನು ಅಂತರಂಗ ಭಾವಿಸಿದ ಬಗೆಯೇ ಮುನ್ನೆಲೆಯಲ್ಲಿ ವ್ಯಾಪಿಸಿಕೊಂಡಿರುವುದು. ನಾಲ್ಕನೆಯ ವೈಶಿಷ್ಟ್ಯವೆಂದರೆ ಅಚ್ಚರಿ ಇಲ್ಲಿನ ಬಹಳಷ್ಟು ಕವಿತೆಗಳ ಸ್ಥಾಯಿಯಾಗಿರುವುದು.

ನಾ. ಮೊಗಸಾಲೆಯವರ ಈ ಸಂಕಲನದ ಕವಿತೆಗಳು ಕನ್ನಡದ ಮತ್ತು ಜಗತ್ತಿನ ವಿವಿಧ ಭಾಷೆಗಳ ಅಂತರಂಗ ಕವಿತೆಗಳು ಎಂದು ಕರೆಯಬಹುದಾದ ಪ್ರಕಾರಕ್ಕೆ ಸೇರಿದವು. ಎ.ಕೆ. ರಾಮಾನುಜನ್, ಕೆ.ವಿ. ತಿರುಮಲೇಶ, ಎಸ್. ಮಂಜುನಾಥ, ಸಂಧ್ಯಾ ಇವರಂಥ ಆಧುನಿಕ ಕವಿಗಳು ನಿರ್ಮಿಸಿರುವ ಕಾವ್ಯಮಾರ್ಗದಲ್ಲಿ ಈ ಕವಿತೆಗಳು ಹೆಜ್ಜೆ ಹಾಕಿವೆ. ಜಪಾನಿನ ಹಾಯ್ಕುಗಳ ಹಾಗೆಯೇ ಇಲ್ಲಿನ ಒಂದೊಂದು ಕವಿತೆಯೂ ಖಚಿತವಾದ ಒಂದೊಂದು ಚಿತ್ರವನ್ನೋ ದೃಶ್ಯವನ್ನೋ ಕಟ್ಟಿಕೊಡುತ್ತವೆ. ಅಮೆರಿಕೆಯ ರಾಬರ್ಟ್ ಫ್ರಾಸ್ಟ್‌ನ ಕೆಲವು ಕವಿತೆಗಳ ಹಾಗೆ ಅಚ್ಚರಿಯನ್ನೂ, ಅರಿವನ್ನೂ ಹಿಡಿದಿಡಲು ಪ್ರಯತ್ನಿಸುತ್ತವೆ. ಒಂದು ವ್ಯತ್ಯಾಸವೆಂದರೆ ಈ ಸಂಕಲನದ ಎಲ್ಲ ಕವಿತೆಗಳ ಹಿಂದೆ ಇರುವ 'ಸಂಬಂಧ'ವೆಂಬ ಮಾತು ಹೇಳಿದೆ. "ಎರಡೆಂಬೆನೆ ಒಂದಾಗಿದೆ, ಒಂದೆಂಬೆನೆ ಎರಡಾಗಿದೆ" ಎಂಬ ವಚನವೊಂದರ ಸಾಲು ನೆನಪಾಗುತ್ತಿದೆ. ಈ ಸಂಕಲನದ ಬಹುಪಾಲು ಕವಿತೆಗಳು ಎರಡು ಎಂಬ ಭಿನ್ನತೆ ಸತ್ಯವೋ, ಒಂದು ಎಂಬ ಭಾವವು ಸತ್ಯವೋ ಎಂಬ ಬೆರಗನ್ನೂ, ಜಿಜ್ಞಾಸೆಯನ್ನೂ ಒಳಗೊಂಡಿವೆ. "ಇಹಪರದ ಕೊಳ"ದ ಬಾತುಕೋಳಿ, ಕಮಲಗಳು ಬೇರೆ ಬೇರೆಯೋ. ಒಂದು ಇನ್ನೊಂದರ ಪ್ರತಿಬಿಂಬವೋ, ಅಥವಾ ಅವೆರಡೂ ಕೊಳದ ಕಮಲದ ಕನಸೋ? "ನಿಶ್ಯಬ್ದವು ಶಬ್ದನಾದಂತೆ" ಕವಿತೆಯ ತೆಂಗಿನ ಮರ, ಎಳನೀರು, ಕೊಬರಿಗಳ ನಿರಂತರ ಆವರ್ತನವನ್ನು ಗ್ರಹಿಸುವ ನಾನು, 'ಸಂಭ್ರಮ" ಕವಿತೆಯ ಹೂ, ಗಿಡ, ಪರಿಮಳ, "ನವಿಲು ನವಿಲೇ" ಕವಿತೆಯ ನವಿಲು ಮತ್ತು ನವಿಲನ್ನು ಕಾಣುವ ಕಣ್ಣು. "ಅಂಕ" ಕವಿತೆಯ ಹುಂಜ ಮತ್ತು ಚೂರಿ ಹೀಗೆ ಅಸಂಖ್ಯಾತ ಕವಿತೆಗಳಲ್ಲಿ ಎರಡೆಂಬ ಭಿನ್ನ ವೈವಿಧ್ಯ ಮತ್ತು ಒಂದು ಎಂಬ ಅಖಂಡ ಭಾವ ಇದೇ ಮತ್ತೆ ಮತ್ತೆ ಪರಿಶೀಲನೆಗೆ ಒಳಗಾಗಿದೆ. ಹೊರ ಲೋಕದ ವಸ್ತುಗಳು ಮಾತ್ರವಲ್ಲ "ಮಿಥುನ" ಎಂಬ ಹೆಸರಿನ ಎರಡು ಕವಿತೆಗಳಲ್ಲಿ ಮೈಥುನದಂಥ

ಆಪ್ತ ಸಂಭವದ ಐಕ್ಯ ಮತ್ತು ಭಿನ್ನತೆಗಳೇ ಶೋಧಿತವಾಗಿವೆ. ಸಾವಧಾನದಿಂದ ಓದುವ ಓದುಗರು ಸಂಭ್ರಮದಂಥ ಪುಟ್ಟ ಕವಿತೆಯನ್ನು ಕನ್ನಡದ ಇಬ್ಬರು ಮಹತ್ವದ ಕವಿಗಳ ರಚನೆಗಳೊಂದಿಗೆ ಮನಸ್ಸಿಗೆ ತಂದುಕೊಳ್ಳಬಹುದು. ಕವಿತೆ ಹೀಗಿದೆ:

*ತಂಬಿಗೆ ತುಂಬ ಇದ್ದ ನೀರು*
*ಪುಟ್ಟ ಚಮಚೆಯನ್ನು ತುಂಬಿಕೊಳ್ಳುವಾಗ*
*ಪಡುವ ಸಂಭ್ರಮ*

*ಹೂವಿನಲ್ಲಿ*
*ಗಿಡವೂ ತುಂಬಿಕೊಳ್ಳುವಾಗ*
*ಪಡುವ ಘಮಘಮ*

*ಹೂವಿನಪರಿಮಳಕ್ಕಿಂತ ಹೆಚ್ಚು*

ಈ ಕವಿತೆಯೊಡನೆ ಪಂಪನ ಆದಿಪುರಾಣ (1.64) ಈ ಭಾಗವನ್ನು ನೋಡಿ

*ನನೆಯನೆ ಪೇರಿ ಕೆಂದಳಿರೊಳೆಯ್ದೆ ಬಳಲ್ದೆಳಮಾವು ಬಂದ ಮಾ*
*ವನೆ ಮರೆಗೊಂಡು ಬಗ್ಗಿಸುವ ಕೋಗಿಲೆ ಕೋಗಿಲೆಯಿರ್ಕೆದಾಣದೊಳ್*
*ಜಿನುಗುವ ದುಂಬಿ ತುಂಬಿಯೊಳರಲ್ದಲರೆಂಬಿವರಿಂ ಬಸಂತ ರಾ*
*ಜನ ಮನೆಯಂತೆ ಕಣ್ಗೆಸದು ತೋರುಗುಮಲ್ಲಿಯ ನಂದನಾಳಿಗಳ್*

ನಮ್ಮ ಕಾಲದ ಕನ್ನಡ ಗದ್ಯದಲ್ಲಿ ಇದು ಹೀಗೆ ಆದೀತು:

ಮೊಗ್ಗುಗಳನ್ನು ಹೇರಿಕೊಂಡ, ಕೆಂದಳಿರನ್ನು ತಳೆದ, ಆದ್ದರಿಂದಲೇ ಬಳಲಿದಂತೆ ಕಾಣುವ ಮಾವು.
ಸಮೃದ್ಧವಾದ ಮಾವನ್ನೇ ಮರೆಮಾಡಿಕೊಂಡು ಹಾಡುವ ಕೋಗಿಲೆ
ತುಂಬಿಯೊಳಗೆ ಅರಳಿದ ಹೂ
ಇವೆಲ್ಲ ಸೇರಿ ಅಲ್ಲಿನ ತೋಟಗಳು ವಸಂತರಾಜನ ಮನೆಯಂತೆ ಕಣ್ಣಿಗೆ ತೋರುತ್ತಿದ್ದವು.

ಇದರೊಡನೆ ಅಲ್ಲಮನ ಈ ವಚನವನ್ನು ನೋಡಿ:

*ಗಿಡುವಿನ ಮೇಲಣ ತುಂಬಿ ಕೊಡೆ ವಿಕಸಿತವಾಯಿತ್ತು*
*ತುಂಬಿ ನೋಡಾ*
*ಆತುಮ ತುಂಬಿ*
*ತುಂಬಿ ನೋಡಾ*
*ಪರಮಾತುಮ ತುಂಬಿ*
*ತುಂಬಿ ನೋಡಾ ಗುಹೇಶ್ವರನೆಂಬ ಲಿಂಗಕ್ಕೆರಗಿ ನಿಬ್ಬೆರಗಾಯಿತ್ತು*

ವಿವರಗಳಲ್ಲಿ ವ್ಯತ್ಯಾಸವಿದೆ ನಿಜ. ಆದರೆ ಮೊಗಸಾಲೆಯವರ ಕವಿತೆಯಲ್ಲಿ ವ್ಯಕ್ತವಾಗಿರುವ ಧೋರಣೆ ಇದೆಯಲ್ಲ ಅದು ಕನ್ನಡ ಕಾವ್ಯ ಪರಂಪರೆಯ ಮುಖ್ಯವಾದ ನಿಲುವೇ ಆಗಿದೆ.

ಇದರಂತೆಯೇ "ಮಾಗುವುದು" ಎಂಬ ಇಡೀ ಕವಿತೆ ಅಲ್ಲಮನ "ನಾಚಿ ಮಾದುದು ಮಾದುದಲ್ಲ" ವಚನವನ್ನೂ "ಲಿಂಗದೊಳಗೆ ಮಾಲಿಂಗ" ಕವಿತೆಯ "ಬೆಂಕಿಗೆ ಬಲಿಯಾಗುವುದು ಮರವು/ ತನ್ನೊಳಗೆ ಇರುವ ಬೆಂಕಿ / ತಾನೇ ಎಂದುಕೊಂಡು" ಅನ್ನುವ ಸಾಲುಗಳು "ಮರದೊಳಗಣ ಕಿಚ್ಚು" ಎಂಬ ವಚನ ರೂಪಕವನ್ನೂ ಮನಸ್ಸಿಗೆ ತರುತ್ತವೆ. ನಿರ್ದಿಷ್ಟ ಮನೋಧರ್ಮದ ಮಾತುಗಳು ಕಾವ್ಯ ರೂಪವನ್ನು ಪಡೆಯುವಾಗ ಕಾವ್ಯ ಪರಂಪರೆಯ ಒಂದು ನಿರ್ದಿಷ್ಟ ಮಾದರಿಯ ನುಡಿಗಟ್ಟನ್ನೂ, ಆಶಯ ರೂಪಕಗಳನ್ನೂ ಬಳಸಿಕೊಳ್ಳುವುದು ಅನಿವಾರ್ಯ ಅನ್ನುವುದಕ್ಕೆ ಇಷ್ಟು ನಿದರ್ಶನಗಳನ್ನೂ ವಿವರಣೆಗಳನ್ನೂ ನೀಡಿದೆ.

ಈ ಸಂಕಲನದ "ದಾರಿ" "ದೇವರನ್ನು ಬಿಟ್ಟು ಮತ್ತೆಲ್ಲವನ್ನು", "ಇರುವೆ ಎನ್ನವು ಮನಸ್ಸು" "ಭರವಸೆ", "ಮಿಥುನ-2" "ಕಣ್ಣು", "ಬಾಹುಬಲಿ" "ಈ ಜಗದ ಪರಿ" ಇವು ನನಗೆ ಬಹಳ ಇಷ್ಟವಾದ ಕವಿತೆಗಳಾಗಿವೆ. ಇಹ ಮತ್ತು ಪರ ಎಂಬ ವ್ಯತ್ಯಾಸ ಕೃತಕವೆಂದೂ, ಭಿನ್ನತೆ ಕೇವಲ ತೋರಿಕೆಯೆಂದೂ, **ಕೊಳದ ಅಲೆಗಳಂತೆ ಒಮ್ಮೆ ಇಹವಾಗಿ ಕಂಡದ್ದೇ ಮತ್ತೊಮ್ಮೆ ಪರವಾಗಿ ಕಾಣಬಹುದೆಂದೂ ತೋರಿಸುವ ಕವಿತೆಗಳು ಇವು.** ಹೊರಗಿನ ಸಮಾಜ, ತಾತ್ವಿಕತೆ, ಪರಿಚಿತ ಅರ್ಥದ ಧರ್ಮ, ರಾಜಕೀಯ, ಚರಿತ್ರೆ, ಇತಿಹಾಸ ಇಂಥ ಎಲ್ಲ ಸಂಗತಿಗಳನ್ನೂ ಬಿಟ್ಟುಕೊಟ್ಟು ಕೇವಲ ಅಂತರಂಗದ ಅಲೆಗಳ ಹೊಯ್ದಾಟ ಚೆಲ್ಲಾಟ ಚಿನ್ನಾಟಗಳನ್ನೇ ಭಾಷೆಯಲ್ಲಿ ಹಿಡಿದಿಡಲು ಬಯಸುವ ಕವಿ ಬಹಳ ಇಕ್ಕಟ್ಟಿನಲ್ಲಿ ಕೆಲಸ ಮಾಡಬೇಕಾಗುತ್ತದೆ. ಪರಿಚಿತವಾದದ್ದನ್ನು ಅಪರಿಚಿತವಾದ ಕೋನದಲ್ಲಿ ಕಾಣಿಸಿಕೊಡುವ, ಓದುಗರ ಅರಿವನ್ನು ಹೊಸತು ಮಾಡುವ ಸಾಮರ್ಥ್ಯ ಹೊಂದಿರಬೇಕಾಗುತ್ತದೆ. ಹಾಗಾದರೂ ವಚನಕಾರರ ಅನುಭವನಿಷ್ಠ ವಚನಗಳು ಏನಿವೆ ಅವುಗಳಷ್ಟು ತಾಜಾ ಆಗಿ, ಉರಿಯ ನಾಲಗೆಯ ಮಾತುಗಳನ್ನು ಹೇಳುವುದು ಕೇವಲ ಭಾಷೆಯ ಲೀಲೆಯಾಗಿರುವುದಿಲ್ಲ. ಅಲಂಕಾರವೂ ಆಗಿರುವುದಿಲ್ಲ. ವ್ಯಕ್ತಿತ್ವದೊಳಗಿನ ಕಿಚ್ಚಿಗೆ, ಉಜ್ವಲತೆಗೆ ಸಂಬಂಧಿಸಿದ್ದಾಗಿರುತ್ತದೆ. ತಾನೇ ಉರುವಲಾಗಿ, ತಾನೇ ಬೆಂಕಿಯಾಗಿ, ತಾನೇ ಸುಟ್ಟುಕೊಂಡು ತನಗಾಗಿ ನುಡಿದ ಮಾತು ಪುಣ್ಯವಿದ್ದವರಿಗೆ ಬೆಳಕು ತೋರುವ ಮಾತಾಗುತ್ತದೆ. ಇಲ್ಲದಿದ್ದರೆ ಅಭ್ಯಾಸವಾದ ರೂಪಕಗಳಲ್ಲಿ ಅಭ್ಯಾಸವಾದ ಮಾದರಿಗಳಲ್ಲಿ ಉಲಿಯುವ ಗಿಳಿಕವಿತಗಳಾಗುತ್ತವೆ. ಸದ್ಯದ ಕವಿಗಳಲ್ಲಿ ಎಸ್. ಮಂಜುನಾಥ, ನಾ. ಮೊಗಸಾಲೆ, ಸಂಧ್ಯಾ ಇವರು ಇಂಥ ಸ್ವ ಕಾವ್ಯ ಲೋಕ ನಿರ್ಮಾಣದ ಕಷ್ಟದ ದಾರಿಯನ್ನು ಆರಿಸಿಕೊಂಡಿದ್ದಾರೆ. ಇಂಥ ಕಾವ್ಯದ ಮೊದಲ ಗುರಿ ಸ್ವತಃ ಕವಿಯೇ. ಲಾಭವೂ ನಷ್ಟವೂ ಕವಿಗೇ. ಆಮೇಲೆ ಉಳಿದದ್ದು ಒಂದಿಷ್ಟು ಸಾವಧಾನದ ಓದುಗರಿಗೆ, ನಾ. ಮೊಗಸಾಲೆಯವರು ಈ ಸಂಕಲನದ ಕವಿತೆಗಳಲ್ಲಿ ಅಂಥ ಒಂದು ಯಾನಕ್ಕೆ ಸ್ವ-ಧ್ಯಾನಕ್ಕೆ ತೊಡಗಿದ ಕುರುಹುಗಳಿವೆ. ಅವರ ಇಹಪರದ ಕೊಳದ ಅಲೆಗಳು ಓದುಗರ ಅಂತರಂಗದ ಉರಿಯನ್ನು ಶಮನಮಾಡುವಂತೆ ಮತ್ತಷ್ಟು ಆಳವೂ ವ್ಯಾಪಕವೂ ಆಗಲೆಂದು ಹಾರೈಸುತ್ತೇನೆ.

O

# ಭಾಗ - ೨

# ಗದ್ಯ ಯಾನ

# ಮೊಗಸಾಲೆಯವರ ಕಾದಂಬರಿಗಳಲ್ಲಿ ಎಡಪಂಥೀಯ ಧೋರಣೆಗಳು

- ಅರವಿಂದ ಚೊಕ್ಕಾಡಿ

"ನೀವು ಕಾಫಿ ಕುಡಿದಿದ್ದೀರಾ ? ಬಹುಶಃ ಕುಡಿದೇ ಇರುತ್ತೀರಿ. ನೆಸ್ಕೆಫೆ? ಬ್ರೂ ? ಕೂರ್ಗ್ ಕಾಫಿ? ಲಕ್ಷ್ಮಿ ಕಾಫಿ? ಚಿಕೋರಿ ಹಾಕದ ಕಷಾಯದಂಥಾ ಕಾಫಿ?"

"ರ್ರೀ ಸುಮ್ನಿರ್ರೀ, ಯಾವುದೋ ಒಂದು ಕುಡಿದಿರ್ತೀವಿ, ನಿಮಗ್ಯಾಕ್ರಿ ಅದೆಲ್ಲ" ಅಂತ ದಯವಿಟ್ಟು ರೇಗಬೇಡಿ. ನೀವು ಏನು ಬೇಕಾದರೂ ಕುಡಿಯಿರಿ, ಅದು ನಿಮ್ಮಿಷ್ಟ. ಆದ್ರೆ ಒಂದು ಮಾತು. ನೀವು ಕುಡಿದ ಎಲ್ಲ ಕಾಫಿ ರುಚೀನೂ ಒಂದೇ ಇತ್ತಾ? ಅರರೆ! ಅದ್ಯಾಕ್ ಸ್ವಾಮಿ ತಲೆಕೆಡಿಸ್ಕೊಳ್ತಿದ್ದೀರಾ? 'ಹೌದು', 'ಅಲ್ಲ' ಎರಡೂ ಉತ್ತರ ಸರಿ ಅಂತನಾ. ನೀವು ಹೇಳೋದು ಕರೆಕ್ಟು. ಒಂದೊಂದು ಬ್ರಾಂಡಿನ ಕಾಫಿಯ ರುಚಿ, ವಾಸನೆ ಬೇರೆಬೇರೆಯೂ ಆಗಿರುತ್ತದೆ. ಹಾಗೇ ಅದೆಲ್ಲವೂ ಕಾಫಿಯೇ ಆದ್ದರಿಂದ ಎಲ್ಲೋ ಒಂದು ಕಡೆ ಒಂದೇ ರುಚಿ ಒಂದೇ ವಾಸನೆ ಸಿಕ್ಕಿಬಿಡುತ್ತದೆ.

"ಯಾವುದೋ ಟಾಪಿಕ್ ಹಿಡ್ಕೊಂಡು ಇನ್ನೇನೋ ಅನ್ತಿದ್ದಾನೆ" ಅಂದ್ಕೋಬೇಡಿ. ಬಂದೆ....ಟಾಪಿಕ್ಕಿಗೇ ಬಂದೆ. ಕಾಫಿ ಒಂದೇ ಆದರೂ ಬೇರೆಬೇರೆ ಸ್ವಾದ ಸಿಗುವ ಹಾಗೆ ಎಡಪಂಥವೂ ಸಹ. ಒಬ್ಬೊಬ್ಬರು, ಒಂದೊಂದು ಗುಂಪು. ಎಡಪಂಥವನ್ನು ಗ್ರಹಿಸುವ ರೀತಿಯಲ್ಲಿ ಭಿನ್ನತೆ ಸಾಧ್ಯವಿದೆ. ನನ್ನ ಪ್ರಕಾರ ಎಡಪಂಥ ಅಂದರೆ ಏನು ಅನ್ನೋದನ್ನ ಮೊದಲು ಹೇಳಿಬಿಡ್ತೇನೆ.

ಬಹುಶಃ ಪಂಥ 'ಎಡ'ವಿರಲಿ 'ಬಲ'ವಿರಲಿ; ಮೂಲಭೂತವಾಗಿ ಒಂದು ಧೋರಣೆಯ ಉದ್ದೇಶ ಸಹನೀಯ ಜೀವನ ವ್ಯವಸ್ಥೆಯನ್ನು ಕಟ್ಟಿಕೊಳ್ಳುವುದೇ ಆಗಿರುತ್ತದೆ. ಸಾಂಸ್ಕೃತಿಕ ಸಂದರ್ಭದಲ್ಲಿ ಇದು ಯಾವ ರೀತಿ ಆಗುತ್ತದೆಂಬುದನ್ನು ವಾಲ್ಮೀಕಿ, ವ್ಯಾಸ, ಹೋಮರ್, ಜಾಯ್ಸಿ ಮುಂತಾದವರೆಲ್ಲ ಸಾದರಪಡಿಸಿದ್ದಾರೆ. ಆ್ಯಡಂ ಸ್ಮಿತ್, ಮಿರ್‌ಡಾಲ್, ಸೇನ್, ತಿರುವಳ್ವರ್ ಮುಂತಾದವರು ಆರ್ಥಿಕ ಸಂದರ್ಭಧಲ್ಲಿ ಇದನ್ನು ನೋಡಿದ್ದಾರೆ. ಕಾಮ್ಟೆಯಂತವರು ಸಾಮಾಜಿಕ ಸಂದರ್ಭದಲ್ಲಿ ನೋಡಿದ್ದರೆ, ಗಾಂಧಿ ಆರ್ಥಿಕ ಮತ್ತು ಸಾಂಸ್ಕೃತಿಕ ಸಂದರ್ಭವೆರಡನ್ನೂ ಇರಿಸಿಕೊಂಡು ನೋಡಿದ್ದಾರೆ. ಹಾಬ್ಸ್, ರೂಸೋ, ಲಾಕ್‌ರಂಥವರು ರಾಜಕೀಯ ಸಂದರ್ಭವನ್ನಿರಿಸಿಕೊಂಡು ನೋಡಿದ್ದಾರೆ. ಆರ್ಥಿಕತೆಯನ್ನೇ ಕೇಂದ್ರಬಿಂದುವಾಗಿರಿಸಿಕೊಂಡಿದ್ದರೂ ಒಂದು ವ್ಯವಸ್ಥೆಯನ್ನು ಪಲ್ಲಟಗೊಳಿಸುವ ಶಕ್ತಿಯಾಗಿ 'ರಾಜಕೀಯ'ವನ್ನು ಕಂಡ ಮಾರ್ಕ್ಸ್ ಬದಲಾವಣೆಯ ಹರಿಕಾರನಾಗಿ 'ರಾಜಕೀಯ'ವನ್ನೇ

ತೆಗೆದುಕೊಳ್ಳುತ್ತಾನೆ. ಕೈಗಾರಿಕಾ ಕ್ರಾಂತಿಯ ತರುವಾಯದ ಸ್ಥಿತಿಯಲ್ಲಿ ವ್ಯಾಪಕವಾದ 'ಸಂಪರ್ಕ ಜಗತ್ತಿ'ನ ಹಿನ್ನೆಲೆಯಲ್ಲಿ 'ರಾಜಕೀಯ'ವು ಅತ್ಯಂತ ಪ್ರಬಲ ಪರಿವರ್ತನಾ ಶಕ್ತಿಯಾಗಿ ಬೆಳೆದುದೇ ಇದಕ್ಕೆ ಕಾರಣವೆಂದು ತೋರುತ್ತದೆ. ಹಾಗಂತ ಮಾರ್ಕ್ಸ್‌ಗೆ ಮೊದಲು 'ಎಡಪಂಥ' ಇರಲಿಲ್ಲವೆಂದಲ್ಲ. ಎಡಪಂಥ ಎಂದರೆ 'ಕಮ್ಯುನಿಸ್ಟ್' ಪಕ್ಷವಾಗಲಿ, 'ಕಮ್ಯುನಿಸಂ' ಆಗಲಿ ಅಷ್ಟೇ ಅಲ್ಲ. ಅವು ಎಡಪಂಥೀಯ ಧೋರಣೆಯ ರಾಜಕೀಯ ಪರಿಕರಗಳೇ ಹೊರತು ಎಡಪಂಥವೆಂದರೆ ಅಷ್ಟೇ ಅಲ್ಲ. ಮನುಷ್ಯ ರೂಪಿಸಿಕೊಂಡ ವ್ಯವಸ್ಥೆಯ ಪರಿಕರಗಳು ಸಹನೀಯ ಬದುಕನ್ನು ಕಟ್ಟಿಕೊಡುವ ಬದಲು ಮಾನವ ಸಹಜ ಸ್ವಾರ್ಥಕ್ಕೆ ಸಿಕ್ಕು ಅಸಹನೀಯ ಬದುಕನ್ನು ರೂಪಿಸುತ್ತಾ ಹೋದ ಹಾಗೆ; ಆ ಅಸಹನೀಯ ವ್ಯವಸ್ಥೆಯನ್ನು 'ಒಪ್ಪಿಸುವ' ಮತ್ತು 'ಒಪ್ಪಿಕೊಳ್ಳುವ' ಪ್ರಕ್ರಿಯೆಗಳು ದಟ್ಟವಾಗುತ್ತಾ ಹೋದ ಹಾಗೆ; ಸಮಾಜವು ಜಡ್ಡು ಕಟ್ಟಿ ಚಲನಶೀಲತೆಯನ್ನು ಕಳೆದುಕೊಂಡ ಹಾಗೆ ಇದನ್ನೆಲ್ಲ ಮೀರುವ, ಇವನ್ನು ಪ್ರಶ್ನಿಸುವ, ಎದುರಿಸುವ ಶಕ್ತಿ ಹುಟ್ಟಿಕೊಳ್ಳಬೇಕಾಗುತ್ತದೆ. ಆ ಶಕ್ತಿಗೆ ಈಗ ಇರುವ ನೀತಿ-ನಿಯಮಗಳಂತಹ ಸಾಧನಗಳು ಈ ಹೊತ್ತಿನ ಸಮಾಜವನ್ನು ಸಹನೀಯವಾಗಿರಿಸುವುದಕ್ಕಾಗಿ ಅದು ಹೊಸ ಹೊಸ ಸಾಧನಗಳ ಹುಡುಕಾಟ ನಡೆಸುತ್ತದೆ. ಇದೇ ಎಡಪಂಥೀಯ ಶಕ್ತಿ. ಈ ಹೊತ್ತಿನ ಸಮಾಜಕ್ಕಾಗಿ ಈ ಶಕ್ತಿ ರೂಪಿಸಿದ ಸಾಧನಗಳು ಸಹ ಇನ್ನೊಂದು ನೂರು ವರ್ಷ ಕಳೆದ ಬಳಿಕ ವ್ಯವಸ್ಥೆಯಾಗಿ, ಜಡ ಸಮಾಜಕ್ಕೆ ಕಾರಣವಾಗಬಹುದು. ಸೋವಿಯತ್ ರಷ್ಯಾದಲ್ಲಿ ಕಮ್ಯುನಿಸ್ಟ್ ಪ್ರಭುತ್ವದಲ್ಲಿ ಆದದ್ದೂ ಇದೇ. ಆಗ ಆ ಜಡವ್ಯವಸ್ಥೆಯನ್ನು ಎದುರಿಸಿ ಮತ್ತೊಂದನ್ನು ಕಟ್ಟಿಕೊಳ್ಳುವ ಪ್ರಯತ್ನ ಕೂಡ ಎಡಪಂಥೀಯ ಧೋರಣೆಯೇ ಆಗಿರುತ್ತದೆ. ಯಾವುದೇ ಸಮಾಜದ ಯಾವುದೇ ನಾಗರಿಕತೆಯ ಚಾಲಕಶಕ್ತಿ ಎಡಪಂಥವೇ ಆಗಿರುತ್ತದೆ. ಅದಿಲ್ಲದಿದ್ದರೆ ಚಲನಶೀಲತೆ ಇಲ್ಲ.

ಸಾಹಿತಿಯಾದವನು ಸದಾ ಚಲನಶೀಲತೆಯನ್ನು ಬಯಸುತ್ತಾನೆ. ಸಹನೀಯ ಬದುಕನ್ನು ಕಟ್ಟುವ ನಿರಂತರ ಅನ್ವೇಷಣೆಯೇ ಬರಹದ ಮೂಲಾಧಾರವಾಗಿರುತ್ತದೆ. ಜೀವಪರ ದೃಷ್ಟಿ ಆತನ ಶಕ್ತಿಯಾಗಿರುತ್ತದೆ. ಅಂತಲೇ ಒಬ್ಬ ಒಳ್ಳೆಯ ಸಾಹಿತಿಯಲ್ಲಿ ಸದಾ ಎಡಪಂಥೀಯ ಒಲವುಗಳಿರುತ್ತವೆ.

ನಾ.ಮೊಗಸಾಲೆಯವರನ್ನು ಒಳ್ಳೆಯ ಸಾಹಿತಿ ಎಂದು ಒಪ್ಪಿಕೊಳ್ಳುವಾಗ ಅವರಲ್ಲಿ ಎಡಪಂಥೀಯ ಒಲವುಗಳಿವೆ ಎಂಬುದನ್ನು ಒಪ್ಪಿಕೊಳ್ಳಬೇಕು. ಆ ನಿಲುವನ್ನು ಮೊಗಸಾಲೆ ಹೇಳುವ ಕ್ರಮಕ್ಕೂ ಬೇರೆಯವರು ಹೇಳುವ ಕ್ರಮಕ್ಕೂ ವ್ಯತ್ಯಾಸವಿರಬಹುದು. ಮೊಗಸಾಲೆ ಹೇಳುವ ಕ್ರಮ ಎಡಪಂಥೀಯ ಧೋರಣೆಯ ಮಂಡನೆಯ ಜನಪ್ರಿಯ ಕ್ರಮವಲ್ಲದಿರಬಹುದು ಅಷ್ಟೇ.

ಮೊಗಸಾಲೆಯವರ ಕಾದಂಬರಿಗಳಲ್ಲಿ ಎಡಪಂಥೀಯ ಧೋರಣೆಯನ್ನು ಗುರುತಿಸುವ ಮೊದಲು ಅವರ ಕಾದಂಬರಿಗಳ ಬಗ್ಗೆ ಕೆಲವು ಮಾತು ಹೇಳಬೇಕು. ಮೊಗಸಾಲೆಯವರದು ಅತ್ತ ತಾತ್ತ್ವಿಕವೂ ಅಲ್ಲದ ಇತ್ತ ಜನಪ್ರಿಯವೂ ಅಲ್ಲದ ಸೆಮಿ_ಕ್ಲಾಸಿಕಲ್ ಶೈಲಿಯ ಕಾದಂಬರಿಗಳು. ಯಾವ ತತ್ತ್ವದೊಳಕ್ಕೂ ಸಿಲುಕಿಕೊಳ್ಳದೆ ತಾತ್ತ್ವಿಕ ನೆಲೆಯನ್ನರಸುತ್ತಾ ಸಾಗುವ 'ನೆಲಮುಗಿಲುಗಳ ಮಧ್ಯೆ'ಯಂತಹ ಕಾದಂಬರಿ ಒಂದು ಕಡೆ, ಎಡಪಂಥೀಯ ಧೋರಣೆಯಿಂದ ಹೊರಟು

ಅದರ ಹತಾಶ ಸ್ಥಿತಿಯನ್ನು ಗಮನಿಸುವ 'ಉಪ್ಪು', 'ಪಂಥ' ದಂತಹ ಕಾದಂಬರಿಗಳು ಇನ್ನೊಂದೆಡೆ, ಸಿನಿಮಾ ಕತೆಯಂತೆ ಭಾಸವಾಗುವ 'ಕನಸಿನ ಬಳ್ಳಿ', 'ಹದ್ದು' ನಂತಹ ಕಾದಂಬರಿಗಳು ಮತ್ತೊಂದೆಡೆ, ಎಡಪಂಥೀಯ ನೆಲೆಯಿಂದಲೇ ವಿಡಂಬನಾತ್ಮಕವಾಗಿ ಸಾಗುವ 'ತೊಟ್ಟಿ' ಬೇರೊಂದೆಡೆ, ಶುದ್ಧ ಎಸ್.ಎಲ್.ಭೈರಪ್ಪನವರ ಧಾಟಿಯಲ್ಲಿ ಸಾಗುವ 'ನನ್ನದಲ್ಲದ್ದು' ಮಗದೊಂದೆಡೆ ಕಾಣಿಸಿಕೊಳ್ಳುತ್ತವೆ. ಜನಪ್ರಿಯ ಧಾಟಿ ಹೊಂದಿರುವ 'ಹದ್ದು','ಕನಸಿನ ಬಳ್ಳಿ' ಯಂಥವನ್ನು ಬದಿಗಿರಿಸಿ ಹೇಳಿದರೂ ಬೇರೆ ಬೇರೆ ಕಾದಂಬರಿಗಳಲ್ಲಿರುವ ತಾತ್ತ್ವಿಕ ಧೋರಣೆಗಳಲ್ಲಿ ಸಮನ್ವಯ ಇರುವ ಹಾಗೆಯೇ ಪ್ರತ್ಯೇಕತೆಗಳೂ ಇವೆ. ಬಹುಶಃ ಕ್ಲಾಸಿಕಲ್ ನಿರೂಪಣಾ ವಿಧಾನದ ಜೊತೆಜೊತೆಗೇ ಜನಪ್ರಿಯ ನಿರೂಪಣಾ ತಂತ್ರವನ್ನೂ ತರುವ ಮೊಗಸಾಲೆಯವರ ಕ್ರಮ ಇದಕ್ಕೆ ಕಾರಣವೆಂದು ತೋರುತ್ತದೆ. 'ಅರ್ಥ'ದಂತಹ ಸಾಂಸ್ಕೃತಿಕ ಹುಡುಕಾಟದ ಕಾದಂಬರಿಯಲ್ಲಿ ಈ ಅಂಶ ದಟ್ಟವಾಗಿ ಕಾಣಿಸಿಕೊಳ್ಳುತ್ತದೆ. ಎರಡನೆ ಸಂಗತಿಯೆಂದರೆ, ಮೊಗಸಾಲೆಯವರ ಕಾದಂಬರಿಗಳು ತುಂಬಾ ನವ್ಯ ಧೋರಣೆ ಹೊಂದಿರುವಂಥವು. ಕಾದಂಬರಿಯ ವಿಸ್ತರಣೆಯಲ್ಲಿ ಒಂದು ಘಟನೆಯಿಂದ ಮತ್ತೊಂದು ಘಟನೆಗೆ ಜಿಗಿಯಬೇಕಾದಾಗ ಉಂಟಾಗುವ ತಾತ್ತ್ವಿಕ ಪಲ್ಲಟವನ್ನು ಮೊಗಸಾಲೆ ಗಮನಿಸುವುದು ಕಡಿಮೆ. ಇದು ಅವರ ಕಾದಂಬರಿಗಳನ್ನು ನವ್ಯವಾಗಿಸುತ್ತದೆ.

ಇಂಥಲ್ಲಿ ಈ ಎಲ್ಲ ಕಾದಂಬರಿಗಳಲ್ಲಿನ ಒಂದು ಧೋರಣೆಯನ್ನು ಪರಿಶೀಲನೆಗೆ ಒಳಪಡಿಸುವಾಗ ತಾತ್ತ್ವಿಕ ಅಂಶಗಳನ್ನೆಲ್ಲ ಒಂದೆಡೆ ತಂದು ಅಲ್ಲಿನ ಒಟ್ಟೂ ಧೋರಣೆಯನ್ನು, ಹಾಗೂ ಬೀಸುಮಾತುಗಳನ್ನೆಲ್ಲ ಒಂದೆಡೆ ತಂದು ಅಲ್ಲಿನ ಒಟ್ಟೂ ಧೋರಣೆಯನ್ನು ಸಮನ್ವಯಗೊಳಿಸಿ ಸತ್ಯವನ್ನು ಹುಡುಕುವ ಪ್ರಯತ್ನ ಮಾಡಬೇಕಾಗುತ್ತದೆ. ಅಂತಹ ವಿನಮ್ರ ಪ್ರಯತ್ನವನ್ನಷ್ಟೆ ಇಲ್ಲಿ ಮಾಡಿದ್ದೇನೆ.

'ಪ್ರೀತಿ' ಮೊಗಸಾಲೆಯವರ ಮೂಲ ನೆಲೆ. ಅವರ ಬದುಕಿಗೂ ಸಾಹಿತ್ಯಕ್ಕೂ ಅದೇ ಸಂವಿಧಾನ. ಆದರದು ಮಾರ್ಕ್ಸ್‌ವಾದಿ ನಿರೂಪಣಾ ಕ್ರಮದಂತೆ ಬಂಡವಾಳ ಕೇಂದ್ರಿತ ವ್ಯಕ್ತಿತ್ವ ವಿನ್ಯಾಸದ ನಿಲುವಿಗಿಂತ ಆಚೆಗಿನದು. 'ಮಣ್ಣಿನ ಮಕ್ಕಳು' ಕಾದಂಬರಿಯ ಮಂಜಪ್ಪ, ಚೋಮ, ಸುಬ್ಬಿ, ಲಕ್ಷ್ಮಿ, 'ಪಲ್ಲಟ'ದ ಗಾಬ್ರು, 'ಪಂಥ'ದ ಹೊನ್ನಿಯಂತಹ ದುರ್ಬಲ ವರ್ಗವನ್ನು ಪ್ರತಿನಿಧಿಸುವ ಪಾತ್ರಗಳು ಬಂಡವಾಳ ಕೇಂದ್ರಿತ ವ್ಯಕ್ತಿತ್ವ ವಿನ್ಯಾಸದ ಮಾರ್ಕ್ಸ್‌ವಾದಿ ಶೈಲಿಯನ್ನು ಹೋಲುತ್ತವೆ. ಆದರೆ 'ಅದರೊಂದಿಗಿದ್ದೂ ಅದನ್ನು ಮೀರುವ' ಚಿಂತನಾಕ್ರಮವು ಮಾರ್ಕ್ಸ್‌ವಾದಿ ಶೈಲಿಗಿಂತ ಭಿನ್ನ ಕ್ರಮದಲ್ಲಿ ಹೆಚ್ಚು ವಾಸ್ತವ ಪ್ರಜ್ಞೆಯಿಂದ ಗಮನ ಸೆಳೆಯುತ್ತದೆ. ಕಾದಂಬರಿಗಳಲ್ಲಿ ಬರುವ ದುರ್ಬಲ ವರ್ಗದ ಪ್ರಾತಿನಿಧಿಕ ಪಾತ್ರಗಳೆಲ್ಲವೂ ಕ್ರಾಂತಿಯ ತಹತಹದಿಂದ ಕೂಡಿವೆ. ಆದರದು ಯಶಸ್ವಿಯಾಗುವುದಿಲ್ಲ. 'ಮಣ್ಣಿನ ಮಕ್ಕಳು'ನ ಸೋಲಿನ ಹಿಂದೆ ಮಂಜಪ್ಪನಿಗೆ ಧಣಿಗಳ ಮೇಲಿರುವ ಅಪಾರ ಭಕ್ತಿ, ಚೋಮನ ಅರಿವಿನ ಕೊರತೆ, ಚೋಮನನ್ನು ಮುನ್ನಡೆಸುವ ಶಕ್ತಿಗಳಲ್ಲಿ ಕ್ರಾಂತಿಯ ತುಡಿತ ಅಂತರಂಗದಿಂದ ಬಾರದಿರುವುದು, ಇಂತಹ ಪರಿಸರವಿದೆ. 'ಉಪ್ಪು'ನ ವಾಮನ ರಾವ್‌ನ ಸೋಲಿಗೆ ಇಲ್ಲಿನ ರಾಜಕೀಯ ಸನ್ನಿವೇಶಗಳು ಕಾರಣವಾಗಿದ್ದರೆ, ಮಲ್ಲಿಕಾ ಮೆನನ್‌ಳ ಪಾತ್ರದ ಹತಾಶೆ ಸಂಸ್ಕೃತಿಜನ್ಯವಾದುದು. 'ಪಂಥ'ದ ಹೊನ್ನಿಯ ಸೋಲಿಗೆ ಇಲ್ಲಿನ ಮತೀಯವಾದಿ ಸಂಗತಿಗಳು, ಪುರುಷ ಪಾರಮ್ಯದ

ವಾಸ್ತವಗಳು ಕಾರಣವಾಗಿವೆ. ಹೀಗೆ ಕ್ರಾಂತಿಯ ಆಸಕ್ತಿ ಉಳ್ಳ ಪಾತ್ರಗಳು ಕ್ರಾಂತಿಯನ್ನು ತರಲು ಸಾಧ್ಯವಾಗದೆ ಇರುವುದಕ್ಕೆ ಕಾರಣವಾದ ಭಾರತೀಯ ಸಮಾಜದ ವಾಸ್ತವಗಳನ್ನು ಮೊಗಸಾಲೆ ವಿಶ್ಲೇಷಣೆ ಮಾಡುತ್ತಾರೆ. ಆದಾಗ್ಯೂ ಒಂದು ಸ್ಥಿತಿಯಿಂದ ಮತ್ತೊಂದು ಸ್ಥಿತಿಗೆ ದಾಟುವಲ್ಲಿ ಮೊಗಸಾಲೆ ತತ್ವ ಮತ್ತು ವಾಸ್ತವದ ವ್ಯತ್ಯಾಸಗಳನ್ನು ಸ್ಪಷ್ಟಪಡಿಸಿಕೊಳ್ಳಲಾಗದೆ ಅವೆರಡೂ ಒಂದೇ ಎಂಬರ್ಥದಲ್ಲಿ ಸ್ವೀಕರಿಸುವುದಿದೆ. ಉದಾಹರಣೆಗೆ 'ಉಪ್ಪು' ಕಾದಂಬರಿಯ ಚಾಲಕಶಕ್ತಿಯಾಗಿ ಇರುವ ಕಮ್ಯುನಿಸ್ಟರು. ಅಲ್ಲಿ ಕಮ್ಯುನಿಸ್ಟರ ದೌರ್ಬಲ್ಯಗಳನ್ನು ಕಮ್ಯುನಿಸಂನ ದೌರ್ಬಲ್ಯವೆಂಬ ಅರ್ಥದಲ್ಲಿ ಚಿತ್ರೀಕರಿಸಲಾಗಿದೆ. ಆದರೆ ಸತ್ಯ ಅದಲ್ಲ. ವ್ಯಕ್ತಿಗಳ ದುರಾಶೆ, ಸ್ವಾರ್ಥಗಳನ್ನು ಸಿದ್ಧಾಂತದ ಸೋಲು ಎಂಬರ್ಥದಲ್ಲಿ ಸ್ವೀಕರಿಸಬೇಕಾಗಿಲ್ಲ. ವ್ಯಕ್ತಿಗಳ ಗುಣಸ್ವಭಾವಗಳಿಗೆ ಹೊಂದಿಕೊಳ್ಳದ ಸಿದ್ಧಾಂತ ಸೋಲುತ್ತದೆಂದೇ ಭಾವಿಸುವುದಾದರೂ ಕಮ್ಯುನಿಸಂ ಹುಟ್ಟಿಕೊಂಡದ್ದು ಭಾರತೀಯ ಸನ್ನಿವೇಶದಲ್ಲಲ್ಲ. ಅಂಥಲ್ಲಿ ಅದು ಹುಟ್ಟಿಕೊಂಡ ಸಮಾಜ ಮತ್ತು ಆ ಕಾಲದ ಸನ್ನಿವೇಶಗಳನ್ನು ಗಮನಿಸಿ ಈ ಸಮಾಜದಲ್ಲಿ ಈ ಕಾಲದಲ್ಲಿ ಅದು ಯಾವ ಸ್ವರೂಪ ಧರಿಸುತ್ತದೆಂದು ಪರಿಶೀಲಿಸಲು ಸಾಧ್ಯವೇ ಹೊರತು ಪೂರ್ವನಿರ್ಧರಿತ ತೀರ್ಮಾನಗಳನ್ನು ತೆಗೆದುಕೊಳ್ಳಲು ಬರುವುದಿಲ್ಲ. ಸಿದ್ಧಾಂತಕ್ಕೆ ಅತೀತವಾಗಿ ನಿಂತು ಎಡಪಂಥೀಯ ಒಲವುಗಳನ್ನು ಪ್ರತಿಪಾದಿಸುವಾಗ ಈ ಸಂಗತಿಯನ್ನು ಗಮನಿಸಬೇಕಾಗುತ್ತದೆ.

ಒಬ್ಬ ವೈದ್ಯರೂ ಆಗಿ ಮನುಷ್ಯನ ಅಂತರಂಗವನ್ನು ಬಹುಮುಖಿಯಾಗಿ ಬಲ್ಲ ಮೊಗಸಾಲೆ ಎಡಪಂಥದ ಸಹಜ ಲಕ್ಷಣಗಳಾದ ಭೌತವಾದಿ ನಿಲುಮೆ ಮತ್ತು ಸಾಂಪತ್ತಿಕ ಅಭಿವೃದ್ಧಿಯ ಆಚೆಯ ಅಂತರಂಗವನ್ನು 'ದೃಷ್ಟಿ','ಪ್ರಕೃತಿ','ನೆಲಮುಗಿಲುಗಳ ಮಧ್ಯೆ' ಯಂತಹ ಕಾದಂಬರಿಗಳಲ್ಲಿ ವಿಶ್ಲೇಷಿಸುತ್ತಾರೆ. ಲೈಂಗಿಕ ಅತೃಪ್ತಿಯ, ವ್ಯಕ್ತಿಯ ಜೀವಂತಿಕೆಯನ್ನು ಕೊಲ್ಲುವ; ಕ್ರಮೇಣ ವ್ಯಕ್ತಿಯನ್ನೇ ಕೊಲ್ಲುವ ಸಂಗತಿ 'ನನ್ನದಲ್ಲದ್ದು'ನಲ್ಲಿ ಆರ್ದ್ರವಾಗಿ ಮಂಡನೆಯಾಗಿದೆ. 'ದೃಷ್ಟಿ'ಯ ಈಶ್ವರ, 'ಪ್ರಕೃತಿ'ಯ ಶೀಲರಂತಹ ಪಾತ್ರಗಳು ಇದೇ ಜಾಡಿನಲ್ಲಿ ಸಾಗುತ್ತವೆ. ಈ ನೆಲೆಗಳಿಂದಲೂ ಮನುಷ್ಯನಿಗೆ ಬರುವ ನೋವುಗಳನ್ನು ಗಮನಿಸುವ ಮೊಗಸಾಲೆ ಅವುಗಳಿಗೆ ಸಾಕ್ಷಿ ಮತ್ತು ಪ್ರಮಾಣೀಕರಣದ ಸೂತ್ರದೊಳಗೆ ಉತ್ತರ ಹುಡುಕಲಾಗದೆ ಹೋಗುತ್ತಾರೆ. ಪ್ರಾಯಶಃ ಈ ಅಂತರಂಗದ ತಲ್ಲಣಗಳಿಗೆ ಖಚಿತ ಪರಿಹಾರ ಸೂತ್ರ ಒದಗಿಸುವುದು ಯಾರಿಗಾದರೂ ಕಷ್ಟಕರವೇ. ಅಂತಲೇ ಆ ಹಂತದಲ್ಲಿ ಮೊಗಸಾಲೆ ಆಧ್ಯಾತ್ಮಿಕ ನೆಲಗಳಲ್ಲೇನಾದರೂ ಉತ್ತರವಿದೆಯೇ ಎಂದು ಪರಿಶೀಲಿಸುತ್ತಾರೆ. 'ದೃಷ್ಟಿ'ಯ ವಾಸುದೇವರಾಯ ಮತ್ತು ಭಾಗೀರಥಿಯರ ಪ್ರೇಮ, ಆ ಪ್ರೇಮಕ್ಕಂಜಿ ಮುಂಬೈ ಬಿಡುವ ವಾಸುದೇವರಾಯ, ನಂತರ ಪ್ರೇಮವು ಒಂದು ಅನುಭಾವಿಕ ಪ್ರಜ್ಞೆಯ ರೂಪು ತಳೆದು ಎಲ್ಲ ಅಂಜಿಕೆಗಳಿಗಿಂತ ಮುಕ್ತನಾಗಿ ಮತ್ತೆ ಮುಂಬೈಗೆ ಹೊರಡಲು ವಾಸುದೇವರಾಯ ಸಜ್ಜುಗೊಳ್ಳುವುದು: ಇಲ್ಲಿ ಐಹಿಕ ಪ್ರೀತಿ ಅನುಭಾವಿಕ ನೆಲೆಯನ್ನು ತಲುಪುವಲ್ಲಿ ಲೈಂಗಿಕ ಆಕಾಂಕ್ಷೆಗಳಿಗೆ ಪರ್ಯಾಯ ನೆಲೆಯಲ್ಲಿ ಸಮಾಧಾನವನ್ನು ಹುಡುಕಲಾಗಿದೆ. ಐಹಿಕ ಸಂಗತಿಗಳಿಂದ ಆಧ್ಯಾತ್ಮಿಕ ಜಗತ್ತಿಗೆ ವಿಸ್ತರಿಸಿಕೊಳ್ಳುವಲ್ಲಿ ಮೊಗಸಾಲೆಯವರ ಎಡಪಂಥೀಯ ಧೋರಣೆ ಪ್ರಶ್ನೆಗೆಡೆಮಾಡಿಕೊಡುತ್ತದೆ. ಆದರೆ ಇಲ್ಲಿನ ಮೂಲ ಉದ್ದೇಶ ಲೌಕಿಕವನ್ನು ಸಹನೀಯಗೊಳಿಸುವುದೇ ಆಗಿದೆ ಮತ್ತು ಲೌಕಿಕದಲ್ಲಿ ಅದೆಷ್ಟೋ ಸಂಗತಿಗಳು ತಾರ್ಕಿಕ ಉತ್ತರಕ್ಕೆ ಅತೀತವಾಗಿ ನಿಂತುಬಿಡುತ್ತವೆ. ಅಂಥಲ್ಲಿ ಲೌಕಿಕ

ನೋವುಗಳಿಗೆ ಸ್ಪಂದಿಸುವ ಎಲ್ಲ ಪ್ರಕ್ರಿಯೆಗಳೂ ಎಡಪಂಥೀಯವಾಗಿಯೇ ಇರುತ್ತವೆ ಎಂದು ನನ್ನೆಣಿಕೆ.

'ನೆಲಮುಗಿಲುಗಳ ಮಧ್ಯೆ' ಸಾಂಪತ್ತಿಕ ದೌರ್ಬಲ್ಯವನ್ನು ಬದಿಗಿರಿಸಿ ಪೂರ್ತಿಯಾಗಿ ಅಂತರಂಗದ ವ್ಯಾಪಾರವಾಗಿ ಬಿಡುತ್ತದೆ. ದಯಾಮರಣವೆಂಬುದು ಸರಿಯೋ ತಪ್ಪೋ ಎಂಬ ಎಳೆಯನ್ನಿರಿಸಿಕೊಂಡು ಒಟ್ಟೂ ಸೃಷ್ಟಿಯ, ನಮ್ಮೆಲ್ಲ ಬೌದ್ಧಿಕ ಬೆಳವಣಿಗೆಯ, ನಾಗರಿಕ ಸ್ಥಿತಿಗತಿಯ ಬಗ್ಗೆ ತುಂಬಾ ಜಟಿಲವಾದ ಪ್ರಶ್ನೆಗಳನ್ನು ಎತ್ತುತ್ತದೆ. ದಯಾಮರಣ ಸರಿ ಎನ್ನುವುದಕ್ಕೂ ತಪ್ಪು ಎನ್ನುವುದಕ್ಕೂ ಅದರದೇ ಆದ ತಾರ್ಕಿಕ ಸಮರ್ಥನೆಗಳಿವೆ. ಆದರೆ ಖಚಿತ ಉತ್ತರವಿಲ್ಲ. ಈ ಸಂವಿಧಾನದ ಆಶ್ರಯದಲ್ಲೇ ಸೃಷ್ಟಿಯ ಎಲ್ಲ ಜೀವರಾಶಿಗಳ ಹುಟ್ಟು ಮತ್ತು ಸಾವಿನ ಕುರಿತ ಮೂಲ ಪ್ರಶ್ನೆಗಳನ್ನು ಎತ್ತಲಾಗಿದೆ. ಕಠೋಪನಿಷತ್ತಿನಿಂದ ಮಾರ್ಕ್ಸ್ ತನಕ ಕಾಡಿದಂತಹ ಪ್ರಶ್ನೆಗಳಿವು. ಅದಕ್ಕೆ ಉತ್ತರ ದೊರೆಯದಿರಬಹುದು. ಆದರೆ ವೇದಾಂತದ ಧಾಟಿಗಿಂತ ಭಿನ್ನವಾಗಿ ಸಿದ್ಧಾಂತದ ಕ್ರಮಕ್ಕಿಂತ ಬೇರೆಯದಾಗಿ ತಮ್ಮ ವೈದ್ಯ ವಿಜ್ಞಾನದ ಜ್ಞಾನವನ್ನು ಪ್ರೀತಿ, ಲೈಂಗಿಕತೆ, ಕರುಣೆ, ಸಾಮಾಜಿಕ ಸಂಬಂಧಗಳಂತ ಆಪ್ತ ಸಂಗತಿಗಳ ಮೂಲಕ ಸರಳ ಶೈಲಿಯಲ್ಲಿ ಓದುಗನನ್ನು ಚಿಂತನೆಗೆ ಹಚ್ಚುವಂತೆ ಮಂಡಿಸಲಾಗಿದೆ ಎಂಬುದೇ ಈ ಕೃತಿಯ ಮಹತ್ವವಾಗಿದೆ.

ಬಹುಶಃ ಮೊಗಸಾಲೆ ಮಹತ್ವ ಪಡೆಯುವುದು ಕೂಡ ಈ ಕಾರಣಕ್ಕಾಗಿಯೇ. ಮೇಲ್ನೋಟಕ್ಕೆ ಮೊಗಸಾಲೆ ತುಂಬಾ ಸರಳ. ಭಾವಜೀವಿ. ಆದರೆ ಅಂತರಂಗದಲ್ಲಿ ತುಂಬಾ ಸಂಕೀರ್ಣ. ನೋವು ಮತ್ತು ಸಂಕಟಗಳಿಂದ ಪೂರ್ಣವ್ಯಕ್ತಿತ್ವ ಪಡೆದವರು ಮೊಗಸಾಲೆ. ಆದರೆ ನೋವಿನ ಅನುಭವವಿದ್ದಾಗಲೇ ನಲಿವೂ ಅರಿವಿಗೆ ಬರುತ್ತದೆ. ಆ ಅರಿವನ್ನು ಪಡೆಯುವ ದಾರಿಯಲ್ಲಿ ಮತ್ತೊಬ್ಬರ ನೋವಿಗೆ ಮುಖಾಮುಖಿಯಾಗುತ್ತಾ ಸಾಹಿತ್ಯಕ ಶೈಲಿಯಲ್ಲಿ ಹೊರಗೆಡವಿದ ಸಂಗತಿಗಳೇ ಮೊಗಸಾಲೆಯವರ ಕಾದಂಬರಿಗಳು. ಅಂತಲೇ ಅದರಲ್ಲಿ ತತ್ತ್ವ, ಚಿಂತನೆ, ಸಿದ್ಧಾಂತಗಳೆಲ್ಲದರಾಚೆಗೆ ಇರುವ ಬದುಕಿನ ತಲಸ್ಪರ್ಶಿ ತಿಳಿವಳಿಕೆಗಳು ಕಾಣಿಸುತ್ತವೆ. ವಾಚಕನನ್ನು ಬದುಕಿಗೆ ಹತ್ತಿರವಾಗಿಸುತ್ತಾ ಕೃತಿ ಮತ್ತು ಓದುಗ ಏಕತ್ರಗೊಳ್ಳುವ ಸಾಧ್ಯತೆಗಳೇ ಮೊಗಸಾಲೆಯವರ ಕಾದಂಬರಿಗಳ ಮಹತ್ವವಾಗಿದೆ.

O



# ಸಾಮಾಜಿಕ ಕ್ರಾಂತಿ ಮತ್ತು ಪಲ್ಲಟ

ಡಾ. ರಾಜಶೇಖರ ಮಠಪತಿ

ಪ್ರಸಿದ್ಧ ಕಾದಂಬರಿಕಾರ ಸಾಮರ್ ಸೆಟ್ ಮಾಮ್ ತಾನೊಬ್ಬ ಕಾದಂಬರಿಕಾರನಾಗಿ ರೂಪುಗೊಂಡದ್ದು ಹೇಗೆ? ಎಂದು ಆತ್ಮಾವಲೋಕನ ಮಾಡಿಕೊಳ್ಳುತ್ತಾ ಹೀಗೆ ಹೇಳುತ್ತಾನೆ "I do not know a better training for a writer than to spend some years in the medical profession. Because, human nature will be displayed before you" ಒಬ್ಬ ಕಾದಂಬರಿಕಾರನಾಗಿ ವೈದ್ಯವೃತ್ತಿಯನ್ನು ಬದುಕಿನ ಹಲವು ಮಗ್ಗುಲುಗಳನ್ನು ತೆರೆದು ತೋರಿಸುವ ಅಪೂರ್ವ ಕ್ಷೇತ್ರ ಎಂದು ಮಾಮ್ ಬಲವಾಗಿ ನಂಬಿದ್ದ. ಮನುಷ್ಯನಿಗೆ ಸಾಧ್ಯವಿರುವ ಎಲ್ಲ ಭಾವೋದ್ವೇಗಗಳ; ಜೀವ, ದೇಹಗಳನ್ನೂ ಖಾಲಿಗೊಳಿಸುವ ರೀತಿಗಳ, ನೋವು ಆಕ್ರಂದನಗಳಿಂದ ಕೂಗುವ ಧ್ವನಿಗಳ, ಭಯ ಮತ್ತು ಮುಕ್ತಿಯ ಮಧ್ಯ ಲಟಕಾಯಿಸಿದ ಆತ್ಮಗಳ, ರೋಗಿಗಳ ಮುಖದ ಮೇಲೆ ಕಾಣುವ ಕಪ್ಪು ಗೆರೆಗಳು. ಆಶೆಯ ದೀಪ ಹೊತ್ತಿಸಿಕೊಂಡು ಉರಿದ ಕಣ್ಣಿನ ದೀಪಗಳು, ಸಾವಿನ ಮೇಲೆ ವ್ಯಂಗ್ಯವಾಡಿದ ನಗೆಯ ಮಾತುಗಳು. ಫೋಟೊಗಳನ್ನು ತೆಗೆದಿಡಲಾಗದ ಮಾಮ್ ಚಿತ್ರಗಳನ್ನು ಮೂರು ವರ್ಷಗಳ ಕಾಲ ನೇರವಾಗಿ ನೋಡಿ, ಅನುಭವಿಸಿ ತನ್ನ ಕಾದಂಬರಿಯ ಪ್ರತಿಯೊಂದು ಪಾತ್ರವನ್ನೂ ಕಣ್ಣೊಳಗೆ ಆಕಾರವಾಗಿ ಬಳಸಿಕೊಂಡ. ಆತನ ಪ್ರಕಾರ ಒಬ್ಬ ರಾಜಕಾರಣಿ, ಮತ್ತೊಬ್ಬ ವೈದ್ಯ ಇವರು ಕಾದಂಬರಿಕಾರರಾಗುವುದಾದರೆ ಆ ಕಾದಂಬರಿಯ ಸ್ವರೂಪವೇ ಅದ್ಭುತವಾಗಿರುತ್ತದೆ. ಯಾಕೆಂದರೆ ಅವರಿಬ್ಬರೂ ಮನುಷ್ಯನನ್ನು ತೀರ ಸಮೀಪದಿಂದ ನೋಡಿದವರು. ಅವರಿಂದಲೇ ಹುಟ್ಟಿ ಬಂದವರು. ಮನುಷ್ಯನಲ್ಲಿಯ ಸ್ವಾರ್ಥ, ದಯಾಳುತನ, ದೈವೀಕತೆ, ಕಾಮ, ನಾಚಿಕೆ, ಸಂತತ್ವ, ಧೈರ್ಯ, ಧಿಕ್ಕಾರ, ದೌರ್ಬಲ್ಯ, ಮೋಸ, ಸುಳ್ಳುಗಳಲ್ಲಿ, ಇವರೊಂದಿಗೆ ವ್ಯವಹರಿಸಿದಷ್ಟು ಪಾರದರ್ಶಕವಾಗಿ ಇನ್ನೆಲ್ಲಿಯೂ ಅಭಿವ್ಯಕ್ತಗೊಳ್ಳುವುದಿಲ್ಲ. ಪ್ರೇಮ ಎಂದರೂ ಎಷ್ಟೇ ದೇವಸದೃಶ್ಯರಾಗಿದ್ದರೂ ಕೂಡಾ ಅದರ ಉಗಮಕ್ಕೆ ಲೈಂಗಿಕತೆಗೆ ಆಹ್ವಾನ ನೀಡುವ ದೇಹ ನಿಜವಾದ ಆಕರ ಎಂದೂ ಅವರು ಸಾರಿ ಹೇಳಿದವರು ಎಂದು ಸಾಮರ್ ಸೆಟ್ ಮಾಮ್ ತನ್ನ ಹಲವು ಸಮೀಕ್ಷೆಗಳ ನಂತರ ಒಪ್ಪಿಕೊಂಡಿದ್ದು ಸತ್ಯವಾಗಿತ್ತು. ಈ ಪೀಠಿಕೆಯ ಉದ್ದೇಶ ಕನ್ನಡದಲ್ಲಿಯೂ ಇಂಥವೇ ಒಬ್ಬ ಕಾದಂಬರಿಕಾರ. ಅವೆಲ್ಲ ಲೋಕಾನುಭವ ಮತ್ತು ಚಿಂತನೆಗಳೊಡನೆ ಕೃತಿ ರಚನೆಯಲ್ಲಿ ತೊಡಗಿದ್ದಾರೆ ಎನ್ನುವುದನ್ನು ಹೇಳುವುದು.

ನಾ. ಮೊಗಸಾಲೆ ಕನ್ನಡದ ಒಬ್ಬ ವಿಶಿಷ್ಟ ಸಾಹಿತ್ಯ ಕೃಷಿಕಾರ, ಅದೇ ವೈದ್ಯವೃತ್ತಿಯ ಹಿನ್ನೆಲೆಯಿಂದ ಬಂದವರು. ಸಾಮರ್‌ಸೆಟ್ ಮಾಮ್‌ನಿಗೆ ತಾನೊಬ್ಬ ಕಾದಂಬರಿಕಾರನಾಗಿ ಬೆಳೆದ ರೀತಿಯನ್ನೂ ಅವಲೋಕಿಸಿಕೊಂಡಾಗ, ಅದರ ಹಿಂದೆ ಆಕರವಾದ ವೈದ್ಯವೃತ್ತಿ ನೆನಪಾದರೆ, ಮೊಗಸಾಲೆಯವರ ವೃತ್ತಿ ಹಾಗೂ ಪ್ರವೃತ್ತಿಗಳೆರಡರಲ್ಲೂ ವಿಹಾರ ಮಾಡಿದರೆ, ಕರ್ನಾಟಕದ ಗ್ರಾಮೀಣ ಜೀವನ, ಸಂಸ್ಕೃತಿ ಮತ್ತು ಪರಂಪರೆಯ ಪರಿಕಲ್ಪನೆ ದೊರೆಯುತ್ತದೆ. ಹೀಗೆ ಕರ್ನಾಟಕದಲ್ಲಿ ವೈದ್ಯವೃತ್ತಿಯನ್ನು ನಂಬಿಕೊಂಡು ಪ್ರವೃತ್ತಿಯಿಂದ ಸಾಹಿತಿಗಳಾಗಿ ಮನುಷ್ಯ ಸಂಬಂಧಗಳ ಹಲವು ರೂಪಗಳನ್ನು ತಮ್ಮ ಬರಹಗಳಲ್ಲಿ ಅನಾವರಣಗೊಳಿಸಿದ ಡಾ. ಕರವೀರಪ್ರಭು ಕ್ಯಾಲಕೊಂಡ, ನಾಗಲೋಟಮಠ, ಸಿ.ಆರ್. ಚಂದ್ರಶೇಖರ, ಅನುಪಮಾ ನಿರಂಜನರಿಗಿಂತಲೂ ನಾ.ಮೊಗಸಾಲೆ ಪ್ರತ್ಯೇಕವಾಗಿ ನಿಲ್ಲವುದು ತಮ್ಮ ಕಾದಂಬರಿಗಳಲ್ಲಿ ಅವರು ತಾಳುವ ಗ್ರಾಮೀಣ ನಿಲುವುಗಳಿಂದಾಗಿ. ಪಾತ್ರವೊಂದನ್ನು ನಾಯಕ ಅಥವಾ ನಾಯಕಿಯ ಸ್ಥಾನಕ್ಕೆ ಆಪಾದಿಸದ ನಾ. ಮೊಗಸಾಲೆಯವರ ಕಾದಂಬರಿಗಳು ಮಾತನಾಡುವುದು ಅಥವಾ ತೋರಿಸುವುದು ಸೈದ್ಧಾಂತಿಕ ಸಂಘರ್ಷ, ಸಾಂಸ್ಕೃತಿಕ ವಿಘಟನೆ, ವೈಚಾರಿಕ ಧ್ರುವೀಕರಣ ಮತ್ತು ರಾಜಕೀಯ 'ಪಲ್ಲಟ'. ಇವು ಸಮಾಜದ ಆಂತರ್ಯದಿಂದ ಹುಟ್ಟಿ ಸಮಾಜವನ್ನೇ ಕೇಂದ್ರೀಕರಿಸಿಕೊಂಡು, ಸಾಮಾಜಿಕ 'ಪಲ್ಲಟ'ವನ್ನೂ ನಿರೀಕ್ಷಿಸುವ ಚಿಂತನೆಗಳು. ಹಾಗಂತ ಕಾದಂಬರಿಯ ಹಂದರ ಎನ್ನುವುದು ಅವರ ಪಾಲಿಗೆ ಬೌದ್ಧಿಕ ಅಥವಾ ರಾಜಕೀಯ ವಾಗ್‌ಯುದ್ಧದ ಅಖಾಡಾ ಅಲ್ಲ. ಕಲಾಕೃತಿಯ ಪಡಿಯಚ್ಚಿನಲ್ಲಿಯೇ ಎರಕಹೊಯ್ದಂತೆ ಒಂದು ಸಂಘರ್ಷವನ್ನೂ ಕಟ್ಟಿಕೊಡುವ ಮೊಗಸಾಲೆಯವರಿಗೆ ಕಾದಂಬರಿಕಾರನನ್ನು ಕುರಿತಾದ ಈ ಮಾತು ``The peculiarity of the artist is that he is, in some particulars different from other men and so, the world of his construction is different too" ಅನ್ವಯವಾದೀತು. ನಾವು ಕೇಳಿದ, ಕಂಡ ಬದುಕಿನ ಸ್ಥಿತ್ಯಂತರಗಳನ್ನೇ ಅಥವಾ 'ಪಲ್ಲಟ'ಗಳನ್ನೇ ಕಾದಂಬರಿಕಾರನೊಬ್ಬ ಹೇಗೆ ಹೆಣೆಯಬಲ್ಲ ಎಂದು ಗಮನಿಸುವುದಾದರೆ ನಾ. ಮೊಗಸಾಲೆಯವರ 'ಪಲ್ಲಟ'ವನ್ನೂ ನೋಡಬೇಕು. ಅದು ಸೂಕ್ಷ್ಮಮನಸ್ಸಿನ ವೈದ್ಯನೊಬ್ಬ ತಟಸ್ಥವಾಗಿ ಗಮನಿಸಿದ ನಮ್ಮ ಸಮಾಜದ ಪ್ರಮುಖ ಬದಲಾವಣೆಯೊಂದರ ಅಪೂರ್ವ ದಾಖಲೆ. ಚಲನಶೀಲ ಸಮಾಜದ ವೈಪರಿತ್ಯಗಳ ಪೂರ್ಣಗೊಂಡ ದಾಖಲಾತಿಯ ನಿರೀಕ್ಷೆ ಮೂರ್ಖತೆಯೂ ಕೂಡಾ.

1979ರಲ್ಲಿ ಪ್ರಕಟವಾಗಿರುವ ನಾ. ಮೊಗಸಾಲೆಯವರ ಕಾದಂಬರಿ 'ಪಲ್ಲಟ'ದ ಮುನ್ನುಡಿಯನ್ನೂ ಬರೆಯುತ್ತ ಉದ್ಯಾವರ ಮಾಧವ ಆಚಾರ್ಯ ತುಂಬ ಗಮನಾರ್ಹವಾದ ಮಾತನ್ನೂ ಹೇಳುತ್ತಾರೆ. "ಗುಡ್ಡಗಳಿಂದ ಸುತ್ತುವರಿದ ಹಳ್ಳಿಯಲ್ಲೂ ವೈದ್ಯಕೀಯ ವೃತ್ತಿ ನಡೆಸುತ್ತಾ ಭಾರತ ಸಾಮಾಜಿಕ ದುರಂತವನ್ನು ಬರವಣಿಗೆಯಲ್ಲಿ ಮೂಡಿಸಲು ನಿಷ್ಠೆಯಿಂದ ಪ್ರಯತ್ನಿಸುವ ಶ್ರೀ ಮೊಗಸಾಲೆಯವರು ಕನ್ನಡದ ವಿಶಿಷ್ಟ ಬರಹಗಾರ" ಈ ಹಿನ್ನೆಲೆಯಲ್ಲಿ ಮೊಗಸಾಲೆಯವರ 'ಪಲ್ಲಟ' Microcosm picture of macrocosm issue.

ಬಹಳಷ್ಟು ಚಿಂತಕರ ದೃಷ್ಟಿಯಲ್ಲಿ 'ಪಲ್ಲಟ' ಶಿವರಾಮ ಕಾರಂತರ 'ಚೋಮನ ದುಡಿ'ಯನ್ನು ನೆನಪಿಗೆ ತರುವ 'ಉಳುವವನೆ ಭೂಮಿಯ ಒಡೆಯ' ಎಂಬ ಸುಳ್ಳು ಆಶ್ವಾಸನೆಯ ಮರೀಚಿಕೆಯ

ಹಿಂದೆ ಹುಟ್ಟಿದ ದಾರುಣ ಕತೆ ಅಷ್ಟೆ. ಅಥವಾ ಸಾಮಾಜಿಕ ಅನ್ಯಾಯಗಳನ್ನು ಪ್ರತಿಭಟಿಸುವುದು ಬರಹಗಾರರ ಮೌಲ್ಯವಾಗಿರುವ ಕಾರಣಕ್ಕೆ ಚರ್ಚೆಗೆ ಆಹ್ವಾನಿಸಿರುವ ಪುಟಗಳ ಲೆಕ್ಕ. ಮತ್ತೆ ಕೆಲವರಿಗೆ ತೀವ್ರವಾದ ಸಾಮಾಜಿಕ ಪರಿವರ್ತನೆಗೊಳಪಟ್ಟ ಸೋವಿಯತ್ ರಷ್ಯಾದ ಕ್ರಾಂತಿಯ ಭಾರತೀಯ ಪುನರಾವರ್ತನೆ. ಈ ವಾದಗಳನ್ನು ಒಪ್ಪುವುದಾದರೆ 'ಪಲ್ಲಟ'ವನ್ನು ಓದುವ ಅಥವಾ ಚಿಂತನೆಗೊಳಪಡಿಸುವ ಯಾವ ಕಾರಣವೂ ಇಲ್ಲ. ಈ ಸಂದೇಶಗಳನ್ನು ಮೀರಿದ ವೈಶಿಷ್ಟ್ಯತೆ ಈ ಕಾದಂಬರಿಯಲ್ಲಿ ಒದಗಿದೆ ಎಂದು ತಿಳಿಯಲು 'ಪಲ್ಲಟ'ದ ಕಥಾ ಹಂದರದ ಸಂಕ್ಷಿಪ್ತ ಪರಿಚಯ ಇಲ್ಲಿ ತುಂಬಾ ಅವಶ್ಯ.

ಮಲೆನಾಡಿನ ಎದೆಯ ಭಾಗದಲ್ಲಿ ಜರೆಗುಡ್ಡೆ ಒಂದು ಸಣ್ಣ ಹಳ್ಳಿ. ಈ ದೇಶದ ಅನೇಕ ಹಳ್ಳಿಗಳಂತೆ ನದಿಯೊಂದು ಅಡ್ಡಹರಿದು, ಉಳಿದ ಸೌಲಭ್ಯಗಳಿಂದ ಪ್ರತ್ಯೇಕಗೊಂಡ ಈ ಹಳ್ಳಿ ಮತ್ತು ಅಲ್ಲಿಯ ಹುಡುಗಿಯರು ಸೇತುವೆಯ ಕೆಲಸಕ್ಕೆ ಬರುವ ಮಲೆಯಾಳಿ ಹುಡುಗರ ಕಾಮುಕತೆಗೆ ಬಲಿಯಾದಂತೆ ಹಳ್ಳಿಯೊಳಗಿನ ಜನರಲ್ಲಿ ಮಾರಪ್ಪ ಶೆಟ್ಟರ Feudal ಮತ್ತು Fundamental ವಿಕೃತಿಗಳಿಗೂ ಒಂದಿಲ್ಲ ಒಂದು ಕಾರಣಕ್ಕೆ ಬಲಿಯಾಗಿದ್ದಾರೆ. ಕಾನೂನಿನ ಬೆಂಬಲವಿಲ್ಲದ ಭೂಮಸೂದೆಯಂಥ ಕಾಯಿದೆ ಮಾನಸಿಕವಾಗಿ ಸ್ವತಂತ್ರವಾಗಿರುವ ಗಾಬ್ರು ವಿನಂಥವರಲ್ಲಿ ದ್ವಂದ್ವವನ್ನೇ ಹುಟ್ಟಿಸಿಲ್ಲ. ಗಾಬ್ರು ಮಾನಸಿಕವಾಗಿ 'ಪಲ್ಲಟ'ವಾಗದಿರುವುದೇ ಮಾರಪ್ಪಶೆಟ್ಟಿಯ ಗಾಬರಿ ಹಾಗೂ ಕ್ರೌರ್ಯಕ್ಕೆ ಕಾರಣ. ಪುಸ್ತಕಗಳ ಮೂಲಕ ಹಳ್ಳಿಯ ಅಂತರ್ಯವನ್ನು ಅರಿಯಲು ಹೋಗುವ ಗಾಬ್ರುವಿನ ಮಗ ಒಚ್ಚ ಒಬ್ಬ ಹುಚ್ಚ. ಒಚ್ಚನಿಗೆ ತನ್ನ ಅಪ್ಪ ಗಾಬ್ರು Sentimental foolನಂತೆ ಕಂಡರೆ ಗಾಬ್ರುವಿಗೆ ತನ್ನ ಮಗ ಒಚ್ಚ ಒಬ್ಬ ದ್ರೋಹಿಯಂತೆ ಕಾಣುತ್ತಾನೆ. ಭೌತಿಕ ಆಶೆಯನ್ನು ಒಚ್ಚನಲ್ಲಿ ಹುಟ್ಟಿಸಿದ ಭೂಮಸೂದೆ ಆತನಲ್ಲಿ ನಡುರಾತ್ರಿಯಲ್ಲಿ ಕೊಡೆ ಹಿಡಿಯುವ ಕನಸನ್ನು ಚಿಗುರಿಸಿದೆ. ಆದರೆ ಒಚ್ಚ ಸ್ವತಂತ್ರನಲ್ಲ. ಅವನ ಈ ಆಶಯಗಳಿಗೆ ಗಟ್ಟಿಯಾದ ಬೇರುಗಳು, ನೈತಿಕ ಸ್ಥೈರ್ಯ ಅವನಲ್ಲಿಯೇ ಇಲ್ಲ. ಆತನ ಒಂದು ಕಡೆಗೆ ಮಾರಪ್ಪಶೆಟ್ಟಿಯ ಮಾತು, ಇನ್ನೊಂದು ಕಡೆಗೆ ತನ್ನವರುಗಳ ಸೇವೆಯ ನೆಲೆಯ ಮೇಲೆ ನಿಂತು ನೈತಿಕ ಸ್ಥೈರ್ಯದೊಂದಿಗೆ ಮಾತಾಡುವ ತನ್ನ ಅಪ್ಪ ಗಾಬ್ರು. ಇವರಿಬ್ಬರ ನಡುವೆ ಹರಿದು ಹೋದವ ಒಚ್ಚ. It is ragged doll between two ends ಈತ ನಮ್ಮ ವರ್ತಮಾನದ ಸಂಕೇತ. ಈ ಭಾವನಾತ್ಮಕ ಮನುಷ್ಯ ಸಂಬಂಧಗಳು ನಮ್ಮ ಕಾಯಿದೆ ಹಾಗೂ ಆಶ್ವಾಸನೆಗಳಿಗಿಂತ ಸಶಕ್ತವಾದವು ಎನ್ನುವುದನ್ನು ತೋರಿಸಲು ಕಾದಂಬರಿಕಾರ ಸೃಷ್ಟಿಸಿದ ತೀವ್ರವಾದ ಪಾತ್ರ ಒಚ್ಚ. ಗಾಂಧಿಯುಗದಿಂದ ಆರಂಭವಾಗಿ ಗೋದಾನ, ಭೂದಾನ, ಉಳುವವನೆ ಭೂ ಒಡೆಯ ರೈತ ಚಳವಳಿಗಳವರೆಗಿನ ಕಾಲಘಟ್ಟದಲ್ಲಿ ಬರೆಯಲ್ಪಟ್ಟ ಬಹುಪಾಲು ಭಾರತೀಯ ಪ್ರಾದೇಶಿಕ ಹಾಗೂ ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಕಾದಂಬರಿಕಾರರು ಇಂಥದೊಂದು ಪಾತ್ರವನ್ನು ನಿರಂತರವಾಗಿ ಸೃಷ್ಟಿಸುತ್ತ ಬಂದರು.

ಗಾಬ್ರುವಿನ ಹೆಂಡತಿ ನತ್ತಲಾ ಪುರುಷ ಪ್ರಧಾನ ಸಮಾಜದೊಳಗಿನ ಪೇಲವ ಧ್ವನಿ. ಇಲ್ಲಿ ಆಕೆಗೆ ನೆರಳಿನ ಅಸ್ತಿತ್ವ. ಆಕೆ ಯಾರನ್ನೂ ನಿಯಂತ್ರಿಸುವಷ್ಟು ಸಶಕ್ತಳಾಗಿಲ್ಲ. ಮಾರಪ್ಪ ಶೆಟ್ಟಿಯ ಮಾತಿಗೆ ತನ್ನ ಉಜ್ವಲ ಭವಿಷ್ಯವನ್ನೇ ಬಲಿ ಕೊಟ್ಟ ಮಗ ಒಚ್ಚನಿಗೂ, ರಂಗಪ್ಪ

ಶೆಟ್ಟಿರ ಸಾತ್ವಿಕತೆಗೆ ಮರುಳಾಗಿರುವ ಗಂಡ ಗಾಬ್ರುವಿಗೂ ನತ್ತಲಾ ಒಂದು ನೆಲೆಯಿಲ್ಲದ ಧ್ವನಿ, ಅಥವಾ ಇವರಿಬ್ಬರ ಕ್ರಿಯೆಗೆ ಮೂಕ ಸಾಕ್ಷಿ ಅನ್ನಬಹುದು. ಮಗಳು ಮೇರಿ ಅವ್ವನ ಇನ್ನೊಂದು ಪ್ರತಿರೂಪ. ಬಾಹ್ಯಜಗತ್ತಿನ ಲೋಕ ವ್ಯವಹಾರಗಳನ್ನೇನೂ ಅರಿಯದ ಆಕೆಗೆ ಅಣ್ಣ ಹಾಗೂ ಅಪ್ಪ ಇಬ್ಬರೂ ಅರ್ಥವಾಗಲಾರರು. ಆಕೆಗೆ ಮಾರಪ್ಪಶೆಟ್ಟಿಯ ಮಾತು, ರೂಪ ರಾತ್ರಿಗಳನ್ನು ಕಾಡಿದರೆ, ಅಪ್ಪ ಅವ್ವ ಹಾಗೂ ಸುತ್ತಲಿನ ಸಮಾಜ ನೀಡಿದ ಮೌಲ್ಯಗಳ ದೀಕ್ಷೆ ಹಗಲುಗಳಲ್ಲಿ ಆಕೆ ಹಾಕಿಕೊಂಡ ಸಂವಿಧಾನವಾಗಿದೆ. "ಹಾಗೆ ನೋಡಿದರೆ ತಮ್ಮೂರಲ್ಲಿ ಯಾವ ಹೆಂಗಸು ಪರಿಶುದ್ಧ ಅಂತ ಬೊಟ್ಟು ಮಾಡಿ ಹೇಳಲು ಸಾಧ್ಯ? ಏನೋ, ಬೆರಳೆಣಿಕೆಯಷ್ಟು ಇದ್ದೀತು. ನೂರಕ್ಕೊಂದು ಹತ್ತರ ಹಾಗೆ! ಇದು ನಮ್ಮೂರು ಅಂತ ಏನು, ಎಲ್ಲ ಊರು ಹೀಗೆ." ಆದರೆ ಯಾಕೆ ಹೀಗೆ ಅಂತ ತನಗೇ ಅರ್ಥ ಆಗೋದಿಲ್ಲ. ಅಪ್ಪ ಹಾಗೂ ಅವ್ವರ ಜಗಳದಲ್ಲಿ ಕೂಸು ಬಡವಾದ ಹಾಗೆ. ತನ್ನ ದಾರಿಯನ್ನೂ ತಪ್ಪಿಸಿಕೊಂಡಾಕೆ. ಹೀಗೆ ಇಡೀ ಕಾದಂಬರಿಯು ತುಂಬಾ ಆಂತರಿಕ, ಸಾಮಾಜಿಕ ಹಾಗೂ ರಾಜಕೀಯ ತಾತ್ವಿಕ ತಾಕಲಾಟಗಳೊಂದಿಗೆ ನರಳುವ ಪಾತ್ರಗಳನ್ನು ನೋಡಬಹುದು.

ಸ್ವಾರಸ್ಯಕರವಾದ ಒಂದು ಅಂಶವೆಂದರೆ ಜರೆಗುಡ್ಡೆಯ ಬುಡಾನ್ ಸಾಹೇಬರ ಚಹಾದ ಅಂಗಡಿ. ಭೂಮಸೂದೆ ಹಾಗೂ ಎಮರ್ಜನ್ಸಿಯಂಥ ಬೆಳವಣಿಗೆಗಳೊಂದಿಗೆ ಬುಡಾನ್ ಸಾಹೇಬರಾಗಲಿ ಅಥವಾ ಅವರ ಚಹಾದ ಅಂಗಡಿಯಾಗಲಿ ಮಾಡುವಂಥದ್ದು ಏನೂ ಇಲ್ಲ. ಆದರೆ ಈ ಚಹದ ಅಂಗಡಿಗಳೇ ನಮ್ಮ ಹಳ್ಳಿಗಳ ಪರಿವರ್ತನೆಯ, ಕೌಟುಂಬಿಕ ವಿಕೇಂದ್ರಿಕರಣಗಳ ಪ್ರಥಮ ಮೆಟ್ಟಿಲುಗಳು ಎಂಬುದನ್ನು ಕಾದಂಬರಿಕಾರರು ತುಂಬಾ ಮಾರ್ಮಿಕವಾಗಿ ಚರ್ಚಿಸುತ್ತಾರೆ. ಆದರೆ ಜರೆಗುಡ್ಡೆಯ ವಿಷಯದಲ್ಲಿ ಮಾತ್ರ ಕಾದಂಬರಿಕಾರರು ಇದನ್ನೂ ಸಂಪೂರ್ಣವಾಗಿ ಒಪ್ಪಿಕೊಂಡಂತಿಲ್ಲ. ಯಾಕೆಂದರೆ ಕಾದಂಬರಿಯ Epilogue ನಲ್ಲಿ ಕಾದಂಬರಿಕಾರರು ಹೇಳುವುದು ಹೀಗೆ "ಬುಡಾನ್ ಸಾಹೇಬ ಮಾತ್ರ ಈ ಸೇತುವೆಯಿಂದ ತನ್ನ ವ್ಯಾಪಾರಕ್ಕೆ ತೊಂದರೆಯಾಯ್ತು, ಊರು ಅಂಡಮಾನದ ಹಾಗೇ ಇದ್ದರೆ, ತನ್ನ ಚಹಾದ ಅಂಗಡಿ ಇನ್ನಷ್ಟು ಹೆಚ್ಚು ಲಾಭ ಗಿಟ್ಟಿಸುತ್ತಿತ್ತು ಎಂದು ನಂಬುತ್ತಾರೆ. ಮಲ್ಕರಾಜ್ ಆನಂದರ Barber's trade unionನ್ನೂ ನೆನಪಿಸುವ ಬುಡಾನ್ ಸಾಹೇಬರ ಅಂಗಡಿ ಜರೆಗಡ್ಡೆಯಲ್ಲಿ ಮುಂದೆ ಬರಲಿರುವ ಸಾರಾಯಿ ಅಂಗಡಿ, ಬಾರು ಹಾಗೂ ಹೋಟೆಲ್ ಸಂಸ್ಕೃತಿಯ ಪ್ರಾತಿನಿಧಿಕ ಸಂಕೇತ. ಜೊತೆಗೆ ವರ್ತಮಾನದಲ್ಲಿ ಅದು ಜರೆಗುಡ್ಡೆಯ ಜನರ ಅನೇಕ ರೀತಿಯ ಚರ್ಚೆ ಸಂಘರ್ಷ ಚಟುವಟಿಕೆ ಹಾಗೂ ಕ್ರಿಯೆಗಳಿಗೆ ತನ್ನನ್ನೇ ತಾನು ಪರಿವರ್ತಿಸಿಕೊಳ್ಳುವ ಅಮೀಬಾದಂಥ ಒಂದು Species. ಊರಲ್ಲಿ ಯಾರನ್ನೂ ಕುರಿತು Information ಗಳನ್ನು ನೀಡಬಲ್ಲ ಕೇಂದ್ರ. ಕೆಲವೊಮ್ಮೆ ಒಬ್ಬೊಬ್ಬನ ವ್ಯಕ್ತಿತ್ವವನ್ನೂ ವ್ಯಾಖ್ಯಾನಿಸಬಲ್ಲ, ಅವರನ್ನೂ ಕುರಿತು ಷರಾ ಎಳೆಯಬಲ್ಲ ವಿದ್ಯಾಲಯಗಳ ಕಾರ್ಯವನ್ನೂ ಇದು ನಿರ್ವಹಿಸುತ್ತದೆ. ಹೋಟೆಲ್ ಉದ್ಯಮವನ್ನೇ ಅರಸಿಕೊಂಡು ಹಂಚಿಹೋದ ಇಡೀ ದಕ್ಷಿಣ ಹಾಗೂ ಉತ್ತರ ಕನ್ನಡದ ಸಂಸ್ಕೃತಿಯ ಒಳವಿಧಾನದಂತೆ ಕಾರ್ಯ ಮಾಡೋರ ಹೋಟೆಲ್ ಆರಂಭಿಕ ಅಥವಾ ಮೂಲದಲ್ಲಿಯ ಸ್ಥಿತಿಯನ್ನೂ ಕಾದಂಬರಿಕಾರರು ಈ ಬುಡಾನ್ ಸಾಹೇಬರ ಬೀಡಾ ಅಂಗಡಿ ಮೂಲಕ ತೋರಿಸುವ, ಆ ಮೂಲಕವೇ ಅದನ್ನೊಂದು

ಸಾಕ್ಷಿ ಪ್ರಜ್ಞೆಯಂತೆ ನಿಲ್ಲಿಸಿ ಅನೇಕ ವಿಷಯಗಳನ್ನು ಒಂದೆಡೆ ಸೇರಿಸುವ ಕಾರ್ಯವನ್ನು ನಾ ಮೊಗಸಾಲೆಯವರು ತುಂಬಾ ಸೊಗಸಾಗಿ ನಿರ್ವಹಿಸಿದ್ದಾರೆ.

ಕಾದಂಬರಿ ಎಂಬುದೊಂದು ಮೂಲತಃ ಯೂರೋಪಿಯನ್ ಕಥಾ ರಚನೆಯ ಒಂದು ಪ್ರಕಾರವಾದುದರಿಂದ ಅದನ್ನು ಕೆಲವು ಬದಲಾವಣೆಗಳೊಂದಿಗೆ ತಮ್ಮದಾಗಿಸಿಕೊಂಡ ಹಲವು ಉಪಸಂಸ್ಕೃತಿಗಳಲ್ಲೂ ಅನೇಕ ರೀತಿಯ ಪ್ರಯೋಗಗಳು ನಡೆದವು. ಲಂಕೇಶರ ಕಥೆಯೊಂದರಲ್ಲಿ ದಿನಸಿ ಅಂಗಡಿಯೊಂದು ಇಂಥದೇ ಕಾರ್ಯವನ್ನು ನಿರ್ವಹಿಸಿದ್ದನ್ನು ನೋಡಬಹುದು. ಇಲ್ಲಿ ಗಮನಿಸಬೇಕಾದುದು ಬುಡಾನ್ ಸಾಹೇಬರ ವರ್ಣನೆ. ಹಾಗೆ ನೋಡಿದಲ್ಲಿ ಜರೆಗುಡ್ಡೆಯಲ್ಲಿ ಬುಡಾನ್ ಸಾಹೇಬ ಜನಾಂಗೀಯವಾಗಿ ಡಿಂಂಣಟಜು. ಆತ ಕವ್ವಾಯುರೊಂದಿಗೆ, ದಲಿತರೊಂದಿಗೆ, ಶೆಟ್ಟರೊಂದಿಗೆ, ರಾಜಕಾರಣಿಗಳೊಂದಿಗೆ, ಬೆರೆಯುವುದರೊಂದಿಗೆ ಒಂದು ಪ್ರೀತಿಯನ್ನು ಕಂಡುಕೊಂಡವ, ಬುಡಾನ್ ಕೆಲವರಿಗೆ ಕಾಕಾ ಆದರೆ ಮತ್ತೆ ಕೆಲವರಿಗೆ ಚಾಚಾ. ಕೆಲವರಿಗೆ ಸಾಹೇಬ ಆದರೆ ಮತ್ತೆ ಕೆಲವರಿಗೆ ಆತನೊಬ್ಬ ತುರ್ಕ. ಆಧುನಿಕ ಭಾರತೀಯ ಕಾಲಘಟ್ಟದೊಂದಿಗೆ ಎಲ್ಲ 'ಪಲ್ಲಟ'ಗಳನ್ನು ಎದುರಿಸುತ್ತ ಬಂದ ನಮ್ಮ ಭಾರತೀಯ ಸಂಸ್ಕೃತಿ ವೈವಿಧ್ಯಮಯವಾಗಿ ಬೆಳೆಯುವಲ್ಲಿ ಇರುವ ಕಾರಣಗಳನ್ನು ಬುಡಾನ್ ಸಾಹೇಬರಂಥವರಲ್ಲಿ ಕಾದಂಬರಿಕಾರರು ತೋರಿಸುತ್ತಾರೆ. ಈ ಹಳ್ಳಿಯ ಆಂತರ್ಯದಲ್ಲಿ ಆತನ ಅಂಗಡಿಯಷ್ಟೇ ಅವನೂ ನಿರಾಳ. ನಿರ್ಲಿಪ್ತ ಮತ್ತು ಕೆಲವೊಮ್ಮೆ ತಟಸ್ಥ.

ಕಾದಂಬರಿಯ ದ್ವಂದ್ವ ಎನ್ನುವುದು ಪಾತ್ರಗಳಿಂದ ಹೊರತುಪಡಿಸಿದ ಬೆಳವಣಿಗೆಯಲ್ಲ. ಒಂದು ಕಾದಂಬರಿ ಎಷ್ಟೇ ವಿಸ್ತಾರವಾದ ಪಾತ್ರಗಳ ಹರವನ್ನೂ ಹೊಂದಿದ್ದರೂ ಚರ್ಚಿಸುವ ಪ್ರಶ್ನೆ ಮಾತ್ರ ಒಂದೇ ಆಗಿರುತ್ತದೆ. ಉಳಿದ ಅನೇಕ ವಿಷಯಗಳು ಆ ಒಂದೇ ಪ್ರಶ್ನೆಯ ಸುತ್ತಲೂ ಸುತ್ತುವ ಪಾತ್ರಗಳಷ್ಟೆ. ಉದಾಹರಣೆಗೆ 'ಪಲ್ಲಟ'ದ ಮೂಲ ಪ್ರಶ್ನೆ ಹಾಗೂ ಉತ್ತರಗಳೆರಡೂ ಗಾಬ್ರುವಿನಂಥ ಒಂದು ದಲಿತ ಮನಸ್ಸು. ಆತ ನಿತ್ಯ 'ಚೋಮ' 'ತಬರ' 'ಸಿಕ್ರಿ' ಹಾಗೂ ಇನ್ನೇನೇನೊ. ಆತನ ನಿಯತ್ತು ಒಂದೆಡೆಯಾದರೆ ತಿಳಿವಳಿಕೆ ಮತ್ತೊಂದೆಡೆ. ಆತನಿಗೆ ಚೆನ್ನಾಗಿ ಗೊತ್ತಿದೆ.

"ಏನಪ್ಪ, ನಮ್ಮ ಕರ್ನಾಟಕ ಸರಕಾರ ಒಳ್ಳೆ ಸರಕಾರವಾದ್ದರಿಂದ ನನ್ನಂಥವರು ಬಚಾವಾದೇವು! ಈ ಭೂ ಮಸೂದೆ ಅದೂ ಇದೂ ಅಂತ ಬಾರದೇ ಇದ್ದಿದ್ರೆ ಈ ಸೂಳೆ ಮಕ್ಕಳು ನಮ್ಮ ಬೆನ್ನು ಸುಲಿದು ಚಪ್ಪಲಿ ಮಾಡಿ ನಡೆಯದೆ ಬಿಡುತ್ತಿರಲಿಲ್ಲ. ಸಾಕಪ್ಪ ಸಾಕು! ಈ ಜನರ ಚಾಕರಿ ಮಾಡಿ ಮಾಡಿ ಹತ್ತು ವರುಷ ಬದುಕುವವ ನಾಲ್ಕೇ ವರುಷದಲ್ಲಿ ಸತ್ತಾನು! ಎಷ್ಟು ಮಂದಿಯ ಅನ್ನ ತೆಗೀಲಿಲ್ಲ ಈ ಜಮೀನ್ದಾರರು! ಎಷ್ಟು ಮಂದಿ ಹೆಣ್ಣು ಮಕ್ಕಳನ್ನು ಬಲಾತ್ಕರಿಸಲಿಲ್ಲ ಈ ಕೋಳಿಕಳ್ಳರು! ಈಗ ಬಾಯಿ ಬಂದದ್ದಿದ್ದರೆ ನಮ್ ಸರಕಾರದಿಂದ ಅಂತಾನೆ ನಮ್ಮ ಒಚ್ಚ ಕೂಡ. ಅವನಂತೂ ಖಂಡಿತ ನನ್ನ ಹಾಗೆ ಉಗ್ರಾಣಿ ಚಾಕರಿ ಮಾಡಲು ಎಂದಿಗೂ ಒಪ್ಪುವವನಲ್ಲ. ನಿಮ್ಮ ಕಾಲದಲ್ಲಿ ಅದೆಲ್ಲಾ ಆಯ್ತು ಬಾಬಾ. ನಾನು ನಿಮ್ಮ ಹಾಗೆ ಮೆಟ್ಟು ಕಲ್ಲನ್ನು ತುಳಿದ ಹಾಗೆ ಈ ಜನ ತುಳಿಯೋದನ್ನ ಸಹಿಸಲಾರೆ ಅಂತ

ಹೇಳ್ತಿರ್ತಾನೆ ಆಗಾಗ. ಕ್ರಾಂತಿ ಮಾಡ್ತಾನಂತೆ ಮತ್ತೆ. ಹುಚ್ಚ ಮುಂಡೇದು, ಕ್ರಾಂತಿಯಂತೆ ಕ್ರಾಂತಿ".

ಬದುಕು ಮಾಗಿದ ಹಾದಿಯಲ್ಲಿರುವ ಗಾಬ್ರುವಿಗೆ ಮೀಸೆ ಮೂಡುವ ಹಾದಿಯಲ್ಲಿರುವ ಹುಡುಗನ ಮಾತು ಸಾಧು ಎನ್ನಿಸುವುದಿಲ್ಲ. ಕ್ರಾಂತಿ ಈ ನೆಲದ ಗುಣಧರ್ಮ ಅಲ್ಲ ಎನ್ನೋದು ಸ್ಪಷ್ಟವಾಗಿ ತಿಳಿದಿದೆ. ಆತ ಸಂಪ್ರದಾಯಿಕ ಹಿನ್ನೆಲೆಯಲ್ಲಿ ಬೆಳೆದು ಬಂದವ. ಈಗಲೂ ಆತನಿಗೆ ಅದರಲ್ಲಿಯೇ ನಂಬಿಕೆಯಿದೆ. ಕಾನೂನೊಂದರ ತಾತ್ಕಾಲಿಕ ಕ್ರಾಂತಿಯನ್ನೂ ಆತ ಬಲ್ಲನಾದರೂ ಅದರಿಂದ ಅಮೋಘವಾವ 'ಪಲ್ಲಟ'ವನ್ನು ನಿರೀಕ್ಷಿಸಲಾರ. ಮನುಷ್ಯನ ಆಂತರ್ಯದಲ್ಲಿ ಹುಟ್ಟಿದ ಕ್ರಾಂತಿ ಸಾಮಾಜಿಕವಾಗಿ ಯಾವ ಬದಲಾವಣೆಯನ್ನೂ ತರಲಾರದು ಎಂಬುದೇ ಆತನ ವಾದ. ಆತ ಈ ಕಾದಂಬರಿಯಲ್ಲಿ ಗಾಂಧಿ ಯುಗದ ಪಳೆಯುಳಿಕೆಯಂತೆ ಕಾಣುತ್ತಾನೆ. ದ್ವೇಷ, ಪ್ರತೀಕಾರ, ಶ್ರೀಮಂತಿಕೆ ಆತನ ಕನಸಿನಲ್ಲಿಯೂ ಸುಳಿಯಲಾರವು. ಸಾಮಾಜಿಕವಾಗಿ ಆತ ಶೋಷಣೆಗೆ ಒಳಗಾಗಿದ್ದರೂ ಕೂಡಾ ಆತ ಅದನ್ನೇ ಒಂದು ಜೀವನ ಮಾರ್ಗ ಮಾಡಿಕೊಂಡಿದ್ದಾನೆ. ಪ್ರಜಾಪ್ರಭುತ್ವ, ಕಮ್ಯುನಿಸಂ, ಭೂಸುಧಾರಣಾ ಮಸೂದೆ, ಎಮರ್ಜನ್ಸಿ ಈ ಯಾವ ಪದಗಳಿಗೂ ಅವನ ಬದುಕೆಂಬ ಶಬ್ದಕೋಶದಲ್ಲಿ ಅರ್ಥಗಳೂ ಇಲ್ಲ, ಅಸ್ತಿತ್ವವೂ ಇಲ್ಲ.

'ಪಲ್ಲಟ' ಕಾದಂಬರಿಯನ್ನೂ ಸಾಹಿತ್ಯ ವಿಮರ್ಶಕರು ಲೈಂಗಿಕ ನೆಲೆಯಲ್ಲಿಯೂ ಗುರುತಿಸಿದ್ದಾರೆ. ಆದರೆ ಅದೂ ಇಲ್ಲಿ ಆನಂದದ ಮಾರ್ಗವಲ್ಲ. ಲೈಂಗಿಕತೆ ಕಾದಂಬರಿಯ ಗ್ರಾಮೀಣ ವಸ್ತುವಿನ ಬದುಕಿನ ಸಂಘರ್ಷದ ಸಹಜ ಹಾಗೂ ಅನಿವಾರ್ಯ ಅಂಗವಾಗಿ ಇಲ್ಲಿ ಬೆಳೆಯುತ್ತದೆ. ಕೆಳ ಹಾಗೂ ಮೇಲುವರ್ಗದ ಮಧ್ಯದ ಹೋರಾಟದೊಳಗೆ ಕೆಲವೊಮ್ಮೆ ಅದು ಪ್ರತೀಕಾರ ತೀರಿಸಿಕೊಳ್ಳುವ ರೀತಿಯಂತೆ ಉಪಯೋಗವಾಗಿದೆ. ಮಾರಪ್ಪ ಶೆಟ್ಟಿ ಶಾನುಭೋಗರ ಹೆಂಡತಿಯನ್ನು ಕೆಡಿಸುವಾಗ ಬಳಸುವಂಥ ಭಾಷೆಯೂ ಅಂಥದ್ದು. "ಭಾರೀ ಮಜಾ ಇದೇರೀ, ಬ್ರಾಹ್ಮಣ ಹೆಂಡತಿಯರದ್ದೂ ಇಷ್ಟೂ ಪಸಂದಾಗಿರುತ್ತೆ ಅಂತ ಗೊತ್ತೇ ಇರಲಿಲ್ಲ." "ಬೇಕಾದ್ರೆ ನೀವೂ ನೋಡ್ರೋ, ಒಳ್ಳೆ ಪದ್ಮಿನಿ ಜಾತಿ ಹೆಣ್ಣು. ನಾಳೆ ಎಲ್ಲಿ ಸಿಗುತ್ತೆ ಹೇಳಿ? ಯಾರು ಮೊದಲು ನೀನಾ? ನಾನಾ?"

ಇಲ್ಲಿ ಮಾರಪ್ಪ ಶೆಟ್ಟಿ ಸೇಡು ತೀರಿಸಿಕೊಳ್ಳುತ್ತಿರುವುದು ಬರೀ ಶಾನುಭಾಗರ ಹೆಂಡತಿ ಮೇಲಲ್ಲ. ಬದಲಾಗಿ ಬ್ರಾಹ್ಮಣರ ಮೇಲೆ. ಆತ ವರ್ಗ ಸಂಘರ್ಷದ ಹರಿಕಾರ ಆ ಹಳ್ಳಿಯಲ್ಲಿ, ತನ್ನ ಪದತಲದಲ್ಲಿ ಹಳ್ಳಿಯನ್ನು ಮಲಗಿಸಿಕೊಳ್ಳುವಂತೆ ಮಾಡಲು ಆತನ ಏನನ್ನೂ ಮಾಡಬಲ್ಲ.

ಹೀಗೆ 'ಪಲ್ಲಟ' ಹಲವು ಪಾತ್ರಗಳ ಮಾನಸಿಕ ವ್ಯವಹಾರಿಕ, ಸಾಮಾಜಿಕ, ಮೌಲಿಕ ಪಲ್ಲಟಗಳನ್ನು ತೋರಿಸುತ್ತಲೇ ಸಾಮಾಜಿಕ ಸಂದರ್ಭದ ಹಿನ್ನೆಲೆಯಲ್ಲಿ ಒಂದು ಪಾತ್ರ ಯಾವ ತೆರನಾಗಿ ಮೈದಾಳುತ್ತದೆ ಎಂಬುದನ್ನು ತೋರಿಸುತ್ತದೆ. ಇಡೀ ಕಾದಂಬರಿಯ ವಸ್ತುವನ್ನು ಸೈದ್ಧಾಂತಿಕವಾಗಿ ಕ್ರೋಡೀಕರಿಸುವುದಾದರೆ ಗಾಂಧಿಜಿಯವರ ಸಮಾಜ ಸುಧಾರಣಾ ದೃಷ್ಟಿಕೋನವನ್ನೇ ಇಲ್ಲಿ ಎತ್ತಿಕೊಳ್ಳಬಹುದು. ಹರಿಜನ ಉದ್ಧಾರದಂತಹ ಅಥವಾ ಜಾತಿ

ನಿರ್ಮೂಲನೆಯಂತಹ ಒಂದು ಪ್ರಶ್ನೆ ಬಂದಾಗ ಗಾಂಧೀಜಿ ಅಂಬೇಡ್ಕರ್ ವಾದದ ವಿರೋಧಿಯಂತೆ ಕಂಡು ಬಂದರು ಕೂಡಾ ಅವರಿಗೆ ತಿಳಿದಿದ್ದ ಮನುಷ್ಯನ ಮಿತಿಗಳು ಮಾತ್ರ ಉಳಿದವರಿಗೆ ತಿಳಿದಿರಲಿಲ್ಲ ಎಂದೇ ಹೇಳಬಹುದು. ಕಾನೂನಿನಿಂದ ಹಾಗೂ ಪೋಲೀಸ್ ವ್ಯವಸ್ಥೆಯಿಂದ ತರಲಾಗದ ಪಲ್ಲಟವನ್ನು ಮನುಷ್ಯನ ಹೃದಯವನ್ನು ಸಂಪರ್ಕಿಸುವುದರ ಮೂಲಕ ತರಬಹುದು ಎಂಬುದನ್ನು ಗಾಂಧಿ ಬಲವಾಗಿ ನಂಬಿದ್ರು, ಅವರ ಈ ವಾದ ಒಂದು ರೀತಿಯಲ್ಲಿ ಬುದ್ಧ ಬಸವರ ಅಹಿಂಸೆ ಮತ್ತು ವೈಚಾರಿಕ ಕ್ರಾಂತಿಯ ವಾದವೇ ಆಗಿತ್ತು. ಆದರೆ ಸಂದರ್ಭ ಬೇರೆ. ಆದರೆ ಜಾಗತೀಕರಣ, ಉದಾರೀಕರಣ ಹಾಗೂ ಖಾಸಗೀಕರಣದ ಈ ವೇಳೆಯಲ್ಲಿ ಪಲ್ಲಟದೊಳಗಿನ ಒಚ್ಚ ಮತ್ತು ಮಾರಪ್ಪನಂತ ಮನುಷ್ಯರು ಗಾಳಿಯೊಳಗಿನ ತರಗೆಲೆಯಂತೆ ಹಾರಿ ಹೋಗಿ ಗಾಂಧಿವಾದದ ಹಿಂದಿನ ಪ್ರಾಮಾಣಿಕತೆಯನ್ನು ನೆನಪಿಗೆ ತರುತ್ತಾರೆ.

ಸ್ವಾತಂತ್ರ್ಯೋತ್ತರದ ಭ್ರಮ ನಿರಸನಗಳನ್ನು ಒಡಲೊಳಗೆ ಇಟ್ಟುಕೊಂಡು ಬೆಳೆಸುವ ಪಲ್ಲಟ ಲೈಂಗಿಕ ವಿಚಾರಗಳಲ್ಲಿ ತುಂಬಾ ಜನಪರವಾಗಿ ಮೂಡಿಬಂದಿದೆ. ಕಾದಂಬರಿಯಲ್ಲಿಯ ಲೈಂಗಿಕ ಕಥಾ ಹಂದರದೊಳಗಿನ ಗ್ರಾಮೀಣ ಪರಿಸರ, ಸಂವೇದನೆ ಬದುಕಿಗೆ ಸಹಕಾರಿಯಾಗಿ ಬಂದಿದೆ. ಪಲ್ಲಟ ವಿಶೇಷವೆನಿಸಿಕೊಳ್ಳುವುದು ಅದರ ಮುಕ್ತಾಯದಲ್ಲಿ. ಕಾದಂಬರಿ ಮುಗಿದರೂ ಮುಗಿಯದ ಅದರ ಅಂತರ್ಯ ಓದುಗನನ್ನು ಮತ್ತೆ ಮತ್ತೆ ಚಿಂತನೆಗೆ ಹಚ್ಚುತ್ತದೆ. ಪಲ್ಲಟ ಭಾರತದ ಒಂದು ಸಾಮಾಜಿಕ ಸಂದರ್ಭದ ಹಲವು ಹಳ್ಳಿಗಳ ಸಾಮೂಹಿಕ ಹಾಗೂ ಅವಿಚ್ಚಿನ್ನ ಆತ್ಮಕಥೆ. ಇಲ್ಲಿಕಾಣುವ ಒಂದು ಹಳ್ಳಿ ಈ ದೇಶದ ನಕ್ಷೆಯಲ್ಲಿ ಹುದುಗಿಹೋದ ಹೆಸರಿರುವ, ಇರದ ಸಾವಿರ ಸಾವಿರ ಹಳ್ಳಿಗಳ ನೈಜ ಸ್ಥಿತಿಯನ್ನು ನಮ್ಮ ಮುಂದೆ ಬಿಚ್ಚಿಡುತ್ತದೆ. ಬದುಕು ಅನಾವರಣಗೊಂಡ ಪಲ್ಲಟದೊಳಗೆ ಸೋಲು, ಗೆಲುವು ನೈತಿಕ ಹಾಗೂ ಅನೈತಿಕ ಎನ್ನುವ ವಿಷಯಗಳಿಗೆ ಯಾವ ಅರ್ಥವು ಇಲ್ಲ. ಪ್ರೇಮಚಂದರ ಕಾದಂಬರಿ 'ಗೋದಾನ'ದೊಳಗೆ ಪರೆದೆಯ ಮೇಲೆ ಕಾಣಿಸದೆಯೂ ಸರ್ವನಿಯಾಮಕನಂತೆ ಪಾತ್ರ ಆಡುವ ಆಕಳಿನಂತೆ ಈ ಕಾದಂಬರಿಯೊಳಗಿನ 'ಭೂಮಿ' ಎಂಬ ಸೆಂಟಿಮೆಂಟ್; ನಿಜಕ್ಕೂ ನಾ. ಮೊಗಸಾಲೆಯಲ್ಲಿ ಮನೋಭೂಮಿಕೆಯಿಂದ ಹೊರಬಂದ ಒಂದು ಅದ್ಭುತ.

O

# ‘ನನ್ನದಲ್ಲದ್ದು’ ಕುರಿತು....

ಡಾ. ಮಲ್ಲಿಕಾರ್ಜುನ ಹಿರೇಮಠ

18799

1977ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಪಡೆದು ಮೂರು ಮುದ್ರಣಗಳನ್ನು ಕಂಡು ಜನಪ್ರಿಯವಾದ ಕಾದಂಬರಿ ‘ನನ್ನದಲ್ಲದ್ದು’. ನವ್ಯ ಸಾಹಿತ್ಯದ ಸಂದರ್ಭದಲ್ಲಿ ಬಂದ ಡಾ. ನಾ. ಮೊಗಸಾಲೆಯವರ ಈ ಕಾದಂಬರಿ ನವ್ಯದ ಹಲವಾರು ಸಾಧ್ಯತೆಗಳನ್ನು ಬಳಸಿಕೊಂಡು ರಚಿತವಾದ ಒಂದು ಲಕ್ಷ್ಯಾರ್ಹ ಕೃತಿ. ಕಾಮು ಮತ್ತು ಕಾಫ್ಕಾರ ಅಸ್ತಿತ್ವವಾದದ ಚಿಂತನಧಾರೆ ಈ ಕೃತಿಯಲ್ಲಿ ದಟ್ಟೈಸಿದೆ. ಆದರೆ ಚಿಂತನೆಗಳು ಕಾದಂಬರಿಯ ವಿವರಗಳಲ್ಲಿ, ಕ್ರಿಯೆಯಲ್ಲಿ ಸಂಭವಿಸುವ ಮೂಲಕ ಆಶಯ ಮತ್ತು ನಿರ್ವಹಣೆಯಲ್ಲಿ ಸಾಮರಸ್ಯ ಏರ್ಪಟ್ಟು ಕಲೆಗಾರಿಕೆ ಸಿದ್ಧಿಸಿದೆ. ಕಾದಂಬರಿಯ ನಾಯಕ ಡಾ. ಶ್ರೀನಿವಾಸ ನವ್ಯದ ಎಲ್ಲ ನಾಯಕರ ಹಾಗೆ ಅಂತರ್ಮುಖಿ, ದುರ್ಬಲ, ಸೂಕ್ಷ್ಮ ಸಂವೇದನಾಶೀಲ, ಅಸ್ವಸ್ಥ, ಒಬ್ಬನ ಅಸ್ತಿತ್ವ ಹಾಗೆ ಅಸಂಗತ ಮತ್ತು ಖಾಲಿತನದ ಅನುಭವಗಳ ಮೂಲಕ ಬದುಕಿನ ಅರ್ಥವನ್ನು ಅರಿಯುವ ಪ್ರಯತ್ನವನ್ನು ಮಾಡುತ್ತಾನೆ. ಡಾ. ಶ್ರೀನಿವಾಸ ಪ್ರಖ್ಯಾತ ಅಸ್ಥಿ ಶಾಸ್ತ್ರಜ್ಞ (Ortho paedist), ವಿದ್ಯಾವಂತ, ಸಾಹಿತ್ಯದ ಓದಿನಲ್ಲಿ ಆಸಕ್ತಿವುಳ್ಳವ. ಆಳವಾಗಿ ವಿಚಾರಿಸುತ್ತಲೇ ತೀವ್ರ ಭಾವುಕನಾಗಿಬಿಡುವಂಥವನು. ನಿರೂಪಕ, ಪತ್ರಕರ್ತ ಹಾಗೂ ಸಾಹಿತಿ ಶೇಖರ ಅವನ ಆತ್ಮೀಯ ಮಿತ್ರವಾಗಿರುವುದಕ್ಕೆ ಕಾರಣ “ನನ್ನಲ್ಲೂ ಶ್ರೀನಿವಾಸರಲ್ಲೂ ನಮ್ಮ ಸ್ವಂತ ಬದುಕಿನ ಬಗ್ಗೆ ಇದ್ದ ಪರಕೀಯ ಅನುಭವ, ಭಯವೇ ಈ ಸ್ನೇಹಕ್ಕೆ ಮೂಲ ಇರಬೇಕು” ಶೇಖರ ಕೂಡ ಶ್ರೀನಿವಾಸನ ಜೊತೆ ತನ್ನನ್ನೂ ಸಮೀಕರಿಸಿಕೊಳ್ಳುತ್ತಾನೆ. ಶ್ರೀನಿವಾಸರ ಹಾಗೆ ಬದುಕಿನ ನಿಗೂಢತೆ, ಅಂತರ್ಮುಖತೆ ಸವಾಲಾಗಿ ಪ್ರಶ್ನೆಯಾಗಿ ನನಗೆ ನನ್ನ ಉದ್ಯೋಗದಲ್ಲಿ ಅಸ್ತಿತ್ವದಲ್ಲಿ ಬರಹದಲ್ಲಿ ಸಂಸಾರದಲ್ಲಿ ಕಾಡಿಸಿದ್ದಿದೆ’ ಎಂದು ಶೇಖರ ಹೇಳಿಕೊಂಡರೂ ಇವನ ಅನಿಸಿಕೆಗಳಿಗೆ ಡಾ. ಶ್ರೀನಿವಾಸರ ಬದುಕಿನಲ್ಲಿ ದೊರೆಯುವಂಥ ಗಟ್ಟಿ ಆಧಾರಗಳು ದೊರೆಯುವುದಿಲ್ಲ. ಆದರೆ ಶೇಖರ ಒಬ್ಬ ಸೂಕ್ಷ್ಮಸಂವೇದನಾಶೀಲ ಬರಹಗಾರನಾಗಿ, ಆಪ್ತಮಿತ್ರನಾಗಿ ಶ್ರೀನಿವಾಸನ ಬದುಕಿನ ನಿಗೂಢತೆಯನ್ನೂ ಅಂತರ್ಮುಖತೆಯನ್ನೂ ಶೋಧಿಸಲು ತೊಡಗುತ್ತಾನೆ.

ಶ್ರೀನಿವಾಸನಿಗೆ ತನ್ನ ಬದುಕೇ ತನ್ನದಲ್ಲದ್ದು ಎನ್ನುವ ಹೆಂಗ್ ಓವರ್ ಅನುಭವಕ್ಕೆ ಕಾರಣ ಹೆಚ್ಚಿನಂಶ ಆತನ ಬುದ್ಧಿಮತ್ತೆಯೇ ಎಂದು ಶೇಖರ ಗುರುತಿಸುತ್ತಾನೆ. ಶ್ರೀನಿವಾಸನಿಗೆ ಹಲವಾರು ಭಾವಗಳ ತಾಕಲಾಟದಲ್ಲಿ ನಿಕ್ಷಿಪ್ತತೆ, ಅಸಂಗತತೆ ಆವರಿಸಿರುವುದನ್ನೂ ಗಮನಿಸುತ್ತಾನೆ.

ಶೇಖರನ ಮನೆಗೆ ಬಂದ ಶ್ರೀನಿವಾಸ ಕಾಫಿ ಕುಡಿದಾದ ಮೇಲೆ "ನಾನು ಕುಡಿದಿದ್ದು ಕಾಫೀನಾ ಟೀಯಾ?" ಎಂಬ ಅವನ ಪ್ರಶ್ನೆಯಿಂದ ಶೇಖರನ ಹೆಂಡತಿ ತಬ್ಬಿಬ್ಬಾದದ್ದನ್ನು ಕಂಡು ಶೇಖರನ ಕಡೆಗೆ ತಿರುಗಿ "ನನ್ನ ನಡತೆ ತುಂಬ ಅಬ್ಸರ್ಡ್ ಆಗಿರತ್ತೆ . ಯಾಕಂತ ನನಗೇ ಗೊತ್ತಾಗೋದಿಲ್ಲ" ಎಂದು ಹೇಳಿಕೊಳ್ಳುತ್ತಾನೆ.

ಎಲ್ಲಿಗೆ ಏನು ಎಂದು ಹೇಳದೇ ಶ್ರೀನಿವಾಸ ಶೇಖರನನ್ನು ಕಾರಿನಲ್ಲಿ ಕೂಡಿಸಿಕೊಂಡು ಹೊರಟಾಗ ದಾರಿಯಲ್ಲಿ ತನಗೆ ಕಾಡುವ ವಿಚಾರದ ಪ್ರಸ್ತಾಪ ಮಾಡುತ್ತಾನೆ. "ಈ ಸ್ಟಿಲ್ ಲೈಫ್‌ನಲ್ಲಿ ಮತ್ತೇನಿದೆ ಹೇಳಿ? ನಿನ್ನೆಯ ಅನುಭವಗಳೇ ಇಂದು, ಇಂದಿನವುಗಳೇ ನಾಳೆಗಾಗಿ ಕಾಯುತ್ತಿರುವಾಗ ಇಂದಿಗೂ ನಾಳೆಗೂ ಏನು ವ್ಯತ್ಯಾಸ ಹೇಳಿ? ಇಲ್ಲ, ಒಂದಲ್ಲ ಹತ್ತು ವಿಧದಲ್ಲಿ ದಿನಾ ಇಂಚಿಂಚು ಸಾಯುತ್ತಾ ಇರೋದಕ್ಕಿಂತ ಭೌತಿಕವಾಗಿ ಈ ದೇಹ ಒಮ್ಮೆಲೇ ನಿರ್ನಾಮವಾದರೆ ಈಗ ತಿನ್ನುವ ಮಾನಸಿಕ ಹಿಂಸೆಯಾದರೂ ತಪ್ಪುತ್ತದಲ್ಲ?" ಈ ಪ್ರಶ್ನೆಯಲ್ಲಿ ಬದುಕಿನ ಜಡತೆಯ ಬಗ್ಗೆ ಆತಂಕ ಇರುವಂತೆಯೇ ಅವನ ದುರಂತದ ಮುನ್ಸೂಚನೆಯೂ ಇದೆ. ತನ್ನ ಬದುಕು ಒಂದು ಅಸಂಗತ ಕಾದಂಬರಿಗೆ ವಸ್ತುವಾಗುವಂತಹದ್ದು ಎಂದು ಭಾವಿಸುತ್ತ ಶ್ರೀನಿವಾಸ ಶೇಖರನಿಗೆ ಕಾದಂಬರಿ ಬರೆಯಲು ಸೂಚಿಸುತ್ತಾನೆ. ಆದರೆ ಥೀಮೇ ಇಲ್ಲದ ಆ ಕಾದಂಬರಿ ಓದಲು ತಾನಿರಬಾರದು ಎಂಬ ಮಾತನ್ನು ಸೇರಿಸುವಲ್ಲಿ ಕೂಡ ಅವನ ದುರಂತ ಪ್ರಜ್ಞೆ ವ್ಯಕ್ತವಾಗುತ್ತದೆ.

ಶ್ರೀನಿವಾಸ ತನ್ನ ಬದುಕನ್ನೂ ಅಂತ್ಯಗೊಳಿಸುವ ಪೂರ್ವದಲ್ಲಿ ಶೇಖರನಿಗೆ ಬರೆದ ಪತ್ರದಲ್ಲಿ ತನ್ನ ಆತ್ಮಹತ್ಯೆಗೆ ಪ್ರೇರಿತವಾಗಿರುವ ಮನಸ್ಥಿತಿಯ ಬಗ್ಗೆ ಹೇಳುತ್ತಾನೆ. " ನಿನ್ನೆಯ ಬದುಕೇ ಇಂದಾದರೆ, ಇಂದಿನ ಬದುಕೇ ನಾಳೆಯಾದರೆ ಭೂತ, ಭವಿಷ್ಯ ವರ್ತಮಾನವೇ ಇಲ್ಲದ ತ್ರಿಶಂಕುಸ್ಥಿತಿಯಲ್ಲಿ ಯಾಕೆ ನಾನಿರಬೇಕು?..... ಶೇಖರ್ ಈ ಪತ್ರ ನಿಮಗೆ ತಲುಪುವ ಸಮಯದಲ್ಲಿ ನನ್ನದಲ್ಲವಾದ ನನ್ನ ಬದುಕಿನಿಂದ ನಾನು ಬಹುದೂರ ಬಂದಿರುತ್ತೇನೆ". ಬದಲಾವಣೆ ಹೊಸತನಗಳಿಗೆ ಒಡ್ಡಿಕೊಳ್ಳದ ಜಡಬದುಕು ತನ್ನದಾದಾಗ ಇಂಥ ಬದುಕಿನಿಂದ ಪ್ರಯೋಜನವಾದರೂ ಏನು? ಬದುಕಿನ ಕ್ಷಣ....... ಪರಕೀಯತೆಯಂಥ ಭಾವನೆಗಳಿಂದ ಆತ ತತ್ತರಿಸಿದ್ದಾನೆ. ಅವನ ವಿಕ್ಷಿಪ್ತ ಪ್ರಭಾವ, ಅತಿ ಬೌದ್ಧಿಕತೆ, ಉಳಟ ಭಾವುಕತೆ ಅವನನ್ನೂ ಪ್ರಪಾತಕ್ಕೆ ತಳ್ಳುತ್ತಿವೆ. ತನ್ನ ಪತ್ರದ ಜೊತೆಗೆ ಇರಿಸಿದ ಒಂದು ಲಕೋಟೆಯಲ್ಲಿ ತನ್ನ ಡೈರಿಗಳನ್ನು ಶೇಖರ ನೋಡಬೇಕೆಂದು ಸೂಚಿಸಿ ಇಬ್ಬರು ಹೆಣ್ಣುಮಕ್ಕಳ ಹಾಗೂ ಒಬ್ಬ ಮಹನೀಯರ ವಿಳಾಸಗಳನ್ನೂ ಕೂಡ ಕೊಟ್ಟಿದ್ದಾನೆ. ಆತನ ಬಗ್ಗೆ ಕಾದಂಬರಿ ಬರೆಯಲು ಇವೆಲ್ಲ ಎಳೆಗಳು ಸಹಾಯಕವಾದಾವು ಎಂದು ಶ್ರೀನಿವಾಸರನ್ನೂ ಹುಡುಕುವ ಒತ್ತಡ ಉಂಟಾಗಿ ಶೋಧನೆಗೆ ತೊಡಗುತ್ತಾನೆ. ಲೇಖಕರು ಒಂದು ರೀತಿ ಪತ್ತೇದಾರಿ ತಂತ್ರದ ಮೂಲಕ ಅನ್ವೇಷಣೆಗೆ ತೊಡಗುವುದರಿಂದ ಶ್ರೀನಿವಾಸರ ಜೀವನದ ಬಗ್ಗೆ ಅಷ್ಟಷ್ಟೇ ರಹಸ್ಯಗಳು ಬಿಚ್ಚಿಕೊಳ್ಳುತ್ತ ಹೋಗುವುದರಿಂದ ಕಾದಂಬರಿ ಕುತೂಹಲದಿಂದ ಓದಿಸಿಕೊಳ್ಳುತ್ತದೆ.

ಶೇಖರ ಆತನ ಭೂತಕಾಲವನ್ನು ಕೆದಕುತ್ತ ಹೋಗುತ್ತಾನೆ. ಶ್ರೀನಿವಾಸನ ತಂದೆ ಮುತ್ತಪ್ಪ ಶಾಸ್ತ್ರಿ ಊರಲ್ಲಿ ಗೌರವಾನ್ವಿತ ವ್ಯಕ್ತಿಯಾಗಿರುವುದರಿಂದ ವಿವಾಹಿತ ಹಾಗೂ ಅವಿವಾಹಿತ

ಒಕ್ಕಲು ಹೆಣ್ಣುಮಕ್ಕಳೊಂದಿಗೆ ಲೈಂಗಿಕ ಸಂಪರ್ಕ ಹೊಂದಿದ್ದರೂ ಯಾರೊಬ್ಬರೂ ಎದುರಿಗೆ ಮಾತನಾಡಲಾರರು. ತಂದೆಯೊಂದಿಗೆ ಆತ್ಮೀಯತೆ ಯಾವತ್ತೂ ಇರಲಿಲ್ಲ. ಇವನ ಬೇಕುಬೇಡಗಳನ್ನು ನೋಡಿಕೊಳ್ಳುವವರು ಇವನ ತಾಯಿ ಮತ್ತು ಚಿಕ್ಕಪ್ಪ. ಇವನ ವಿದ್ಯಾಭ್ಯಾಸಕ್ಕೆ ಶಾಸ್ತ್ರಿಗಳ ಮನವೊಲಿಸಿ ಕಳಿಸಲು ನೆರವಾದರು ಕಾಮತ. ಚಿಕ್ಕಪ್ಪ ತನ್ನ ಪ್ರೇಯಸಿ ನಿಂಗಿಗೆ ಹಲಸು ತರಲು ಗಿಡಹತ್ತಿ ಕೆಳಬಿದ್ದು ಬೆನ್ನುಮೂಳೆ ಮುರಿದುಕೊಂಡು ಆಸ್ಪತ್ರೆ ಸೇರಿ ಪ್ರಾಣಬಿಡುವುದನ್ನು ಕಣ್ಣಾರೆ ಕಂಡ ಶ್ರೀನಿವಾಸ ತಾನೊಬ್ಬ ಅಸ್ಥಿತಜ್ಞನಾಗಬೇಕೆಂದು ನಿರ್ಣಯಿಸುತ್ತಾನೆ. ಈ ಪೂರ್ವವೃತ್ತಾಂತ ಕೂಡ ಸೂಕ್ಷ್ಮಮನಸ್ಸಿನ ಶ್ರೀನಿವಾಸನ ಮೇಲೆ ಆದ ಆಘಾತಗಳನ್ನೂ ವಿವರಿಸುತ್ತಾರೆ.

ಶ್ರೀನಿವಾಸ ವೈದ್ಯಕೀಯ ವಿದ್ಯಾಭ್ಯಾಸ ಮುಗಿಸಿ ಬಂದ ನಂತರ ತೀವ್ರ ಮಧುಮೇಹದಿಂದ ತಂದೆಯ ಕಾಲಿಗೆ ಗ್ಯಾಂಗ್ರಿನ್ ಆಗಿ ಅದನ್ನು ಕತ್ತರಿಸಿದಲ್ಲಿ ಗುಣವಾಗದೆ ಆತ ಹಾರ್ಟ್ ಅಟ್ಯಾಕ್ ಆಗಿ ಸಾಯುತ್ತಾನೆ. ತಂದೆಯ ಹಾರೈಕೆಯಲ್ಲಿ ತನ್ನ ಆರೋಗ್ಯವನ್ನೂ ನಿರ್ಲಕ್ಷಿಸಿದ ತಾಯಿಗೆ ಲಕ್ವಾ ಹೊಡೆದು ಕೆಲವೇ ದಿನಗಳಲ್ಲಿ ಕೊನೆಯುಸಿರೆಳೆಯುತ್ತಾಳೆ. ತನ್ನವರೆನ್ನುವವರು ಈ ಲೋಕದಿಂದ ದೂರವಾದ ಮೇಲೆ ಶ್ರೀನಿವಾಸನಿಗೆ ಜೀವನದಲ್ಲಿ ಜಿಗುಪ್ಸೆ ಹುಟ್ಟಿಕೊಳ್ಳುತ್ತದೆ; ಅನಾಥಭಾವನೆ ಕಾಡಿಸತೊಡಗುತ್ತದೆ. ತಂದೆಯ ಡಯಾಬಿಟಿಸ್ ಆನುವಂಶೀಯವಾಗಿ ತನಗೆ ಬರುತ್ತದೆ, ಮುಂದಿನ ಪೀಳಿಗೆ ಇಂಥ ಸಂಕಟಕ್ಕೆ ಒಳಗಾಗಬಾರದೆಂದು ವ್ಯಾಸೆಕ್ಟಮಿ ಮಾಡಿಸಿಕೊಳ್ಳುತ್ತಾನೆ. ಆದರೆ ಏಕಾಂತನದಿಂದ ಮುಕ್ತವಾಗಲು ಕೊನೆಗೆ ಮದುವೆಗೆ ತಯಾರಾಗುತ್ತಾನೆ. ಅವನ ದುರಂತದ ಮೂಲ ಇಲ್ಲಿಯೇ ಇದೆ.

ವತ್ಸಲಳೊಂದಿಗಿನ ಶ್ರೀನಿವಾಸನ ದಾಂಪತ್ಯಜೀವನ ಹಿತಕಾರಿಯಾಗಿಯೇ ಇತ್ತು. ಆದರೆ ಆಕೆ ತನಗೆ ಮಕ್ಕಳು ಬೇಕು ಎಂಬ ಅಭಿಲಾಷೆಯಿಂದ ಗೈನೊಕಲಜಿಸ್ಟ್ ಕಡೆ ತೋರಿಸಿಕೊಳ್ಳಲು ಆಗ್ರಹಪಡಿಸಿದಾಗ ಸತ್ಯವನ್ನು ಹೇಳಬೇಕಾದ ಪ್ರಾಮಾಣಿಕತೆಯನ್ನೂ ಆತ ತೋರಿದ್ದರಿಂದಾಗಿ ಅವರ ದಾಂಪತ್ಯ ಜೀವನದಲ್ಲಿ ದೊಡ್ಡ ಕಂದಕ ಬೀಳುತ್ತದೆ. ಗಂಡನ ಈ ವರ್ತನೆಯಿಂದ ಆಕೆ ತೀವ್ರ ನೋವನುಭವಿಸಿದ ಪರಿಣಾಮವಾಗಿ ಅವಳಲ್ಲಿ ಈಡಿಯುಜುಣಥಿ ಆವರಿಸಿಬಿಡುತ್ತದೆ. ಅವಳಿಗೆ ಕೃತಕ ಗರ್ಭದಾನದ ವಿಚಾರ ಹೇಳಿದಾಗಂತೂ ಆಕೆ ಕೆರಳಿಬಿಡುತ್ತಾಳೆ. ಶ್ರೀನಿವಾಸ 'ವತ್ಸಲಳ ಮತ್ತು ನನ್ನ ಬದುಕಿನ ಮಧ್ಯೆ ಹುಟ್ಟಿದ ಕಂದಕ ಎಂದಿಗೂ ಮುಚ್ಚುವಂಥಾದ್ದಲ್ಲ' ಎಂದು ಸಂಕಟಪಟ್ಟುಕೊಳ್ಳುತ್ತಾನೆ. ಶ್ರೀನಿವಾಸ ತನ್ನ ಡೈರಿಯಲಿ ನಿಸ್ಸಂಕೋಚವಾಗಿ ವತ್ಸಲಳಿಂದ ತನಗೆ ಲೈಂಗಿಕ ಅತೃಪ್ತಿ ಬಾಧಿಸುತ್ತಿರುವ ಬಗ್ಗೆ ಹೇಳಿಕೊಂಡಿದ್ದಾನೆ. ಆತ ತನ್ನ ಕಾಮಾಸಕ್ತಿಗಾಗಿ ಬೇರೆ ಹೆಣ್ಣುಗಳತ್ತ ಹೊರಳುತ್ತಾನೆ.

ಶಾಂತಾ ಫಡ್ಕೆಯ ತೊಡೆಯ ಆಪರೇಷನ್ ಸಂದರ್ಭದಲ್ಲಿ ಶ್ರೀನಿವಾಸ ಚಿತ್ತಸ್ವಾಸ್ಥ್ಯವನ್ನೂ ಕಳೆದುಕೊಂಡಿರುವ ಬಗ್ಗೆ ಡೈರಿಯಲ್ಲಿ ಬರೆದುಕೊಂಡಿದ್ದನ್ನು ಶೇಖರ ಗಮನಿಸುತ್ತಾನೆ. ಆಕೆ ಅವನಲ್ಲಿ ತೋರಿಸುವ ಪ್ರೇಮ ಗಂಡ ಫಡ್ಕೆಯ ಮೇಲಿನ ರೋಷದ ಇನ್ನೊಂದು ಮುಖ ಎಂದು ಜಿಗುಪ್ಸೆಗೊಳ್ಳುತ್ತಾನೆ. ಶ್ರೀನಿವಾಸನ ವಿದ್ಯಾರ್ಥಿನಿ ಸೂಕ್ಷ್ಮ ಆಗಾಗ ಬಿಡುವಿನ ಸಮಯದಲ್ಲಿ ಚೇಂಬರ್ ಪ್ರವೇಶಿಸಿ ಹರಟುತ್ತ ಸಾಮೀಪ್ಯ ಸಾಧಿಸುತ್ತಾಳೆ. ಆದರೆ ಆಕೆಗೆ ಮದುವೆಗಿಂತ

ಮೊದಲು ಶ್ರೀನಿವಾಸನೊಂದಿಗೆ ಸುಖಿಬೇಕು. ಅಷ್ಟೆ ಎಂದು ತಿಳಿದು ಮತ್ತೆ ಜಿಗುಪ್ಸೆ ಅನುಭವಿಸುತ್ತಾನೆ. ಆಕೆಯ ಪ್ರೀತಿ ನಿಜವೇ ಎಂದು ತಿಳಿದು ಮದುವೆಯ ಬಗ್ಗೆ ಪ್ರಸ್ತಾಪಿಸಿದಾಗ ಆಕೆಯ 'ವ್ಯವಹಾರಿಕ ಕುಶಲತೆ' ಯಿಂದ ಪಾಠ ಕಲಿಯುತ್ತಾನೆ. ಪಶ್ಚಾತ್ತಾಪ ಪಡುತ್ತಾನೆ. ಡೈರಿಯಲ್ಲಿ ಶ್ರೀನಿವಾಸ ಇನ್ನೊಂದು ಹೆಣ್ಣಿನ ಪ್ರಸ್ತಾಪವನ್ನೂ ಮಾಡುತ್ತಾನೆ. ಆತ ವಿದ್ಯಾರ್ಥಿವೇತನ ಪಡೆದು ಇಂಗ್ಲೆಂಡಿನಲ್ಲಿ ಹೆಚ್ಚಿನ ವಿದ್ಯಾಭ್ಯಾಸ ಮಾಡಲು ಹೋದಾಗ ಎಸ್ತೆಲಾ ಎಂಬ ಸಹಪಾಠಿ. ಆಕೆ ಮದುವೆಯಾಗಿ ಇಂಡಿಯಾಕ್ಕೆ ಬಂದು ಇವರೊಂದಿಗೆ ಇರಲೂ ಸಿದ್ಧವಾದವಳು. ಸೆಕ್ಸ್ ಬಗ್ಗೆ ಆಕೆಗೆ ನಾಚಿಕೆ, ಸಂಕೋಚಗಳೇನೂ ಇರಲಿಲ್ಲ. ಅದು ಆಹಾರದ ಹಾಗೆ ಎಂದು ಭಾವಿಸಿದವಳು. ಅವಳನ್ನೂ ಮದುವೆಯಾಗಿದ್ದರೆ ತಾನು ಸುಖವಾಗಿರಬಹುದಿತ್ತು ಎಂದು ಶ್ರೀನಿವಾಸ ಭಾವಿಸುತ್ತಾನೆ. ಕೃತಕ ಗರ್ಭಧಾರಣೆಯ ಪ್ರಸ್ತಾಪ ಮಾಡಿದ್ದರೆ ಅವಳು ಸಹಜ ಒಪ್ಪಬಹುದಿತ್ತು. ಆಕೆಯನ್ನೂ ವರ್ಜಿಸಿದ್ದು ತಪ್ಪು ಎಂದು ಕೊರಗುತ್ತಾನೆ. ಅವನಿಗೆ ಲೈಂಗಿಕ ಅತೃಪ್ತಿ ಒಂದೇ ಸಮನೆ ಕಾಡುತ್ತದೆ. ಹೀಗಾಗಿ ವೇಶ್ಯೆಯರ ಸಂಗ ಕೂಡ ಮಾಡುತ್ತಾನೆ. ಮನುಷ್ಯ ಕಾಮದ ಮೇಲೆ ಎಷ್ಟು ಅವಲಂಬಿತನಾಗಿದ್ದಾನೆ, ಅಥವಾ ಮನುಷ್ಯನನ್ನು ಕಾಮ ಎಷ್ಟರಮಟ್ಟಿಗೆ ವೃತ್ತಾಕಾರ ತಾಳಿ, ಆ ವೃತ್ತದೊಳಗೆ ಚಕ್ರಾಕಾರವಾಗಿ ತಿರುಗುತ್ತಾ ಚಕ್ರಬಿಂಬದ ಕೋಟೆಯಾಗಿ ಒಳಗೊಳ್ಳುವ ಬಗೆ ಮೇಲು ನೋಟಕ್ಕೆ ಸುಲಭಗಮ್ಯವಲ್ಲ. ನನ್ನನ್ನೂ ಪೀಡಿಸುವ ಈ ಹುಚ್ಚು ಕಾಮಕ್ಕೆ ಪರಿಹಾರ ಅಂದರೆ ಒಂದೇ-ಸಾವು! ಈ ಎಲ್ಲ ಸಂಬಂಧಗಳೂ ವಿಫಲತೆ ಉಂಟುಮಾಡುತ್ತವೆ. ಎಲ್ಲೂ ಅವನಿಗೆ ಸಮಾಧಾನ ತೃಪ್ತಿ ಸಿಗುವುದಿಲ್ಲ. ಶೇಖರ ಕಾಮತರನ್ನು ಭೇಟಿಯಾದಾಗ ಇನ್ನೊಂದು ಕ್ರೂರ ಸತ್ಯ ಬಯಲಿಗೆ ಬರುತ್ತದೆ. ಶ್ರೀನಿವಾಸ ತನ್ನ ಮುಂದಿನ ಸಂತಾನ ರೋಗಿಷ್ಠವಾಗಿರಬಾರದೆಂದು ವ್ಯಾಸಕ್ಟಮಿ ಮಾಡಿಸಿಕೊಂಡಿರುವ ಬಗ್ಗೆ ಕಾಮತರ ಮುಂದೆ ಹೇಳಿದಾಗ ಅನಿವಾರ್ಯವಾಗಿ ಅವರು ಬಾಯಿಬಿಡಬೇಕಾಗುತ್ತದೆ. ಶ್ರೀನಿವಾಸ ಶಾಸ್ತ್ರಿಗಳ ಮಗನಲ್ಲ. ವಿವಾಹ ಪೂರ್ವದಲ್ಲಿ ಗಂಗಮ್ಮ ಬಸುರಿಯಾಗಿ ಆತ್ಮಹತ್ಯೆ ಮಾಡಿಕೊಳ್ಳಲು ಯತ್ನಿಸಿದಾಗ ಗಂಗಮ್ಮನನ್ನು ಅವರು ಮದುವೆಯಾಗಿರುವ ಸಾಧ್ಯತೆಯ ತಿಳಿವಳಿಕೆ ಪರೋಕ್ಷವಾಗಿ ಕಾಮತರು ನೀಡಿದಾಗ ತನ್ನ ಹೆಂಡತಿಗೆ ಅನ್ಯಾಯ ಮಾಡಿದ ಪಾಪಪ್ರಜ್ಞೆಯಿಂದ ಶ್ರೀನಿವಾಸ ತತ್ತರಿಸುತ್ತಾನೆ. ಕಾಮತರು ಈ ಸತ್ಯವನ್ನು ನೇರ ಪ್ರಸ್ತಾಪ ಮಾಡದಿದ್ದರೂ ಮಧುಮೇಹ ತಂದೆಯಿಂದ ಅವನಿಗೆ ಬರುವಂತಹದ್ದಲ್ಲ ಎಂದು ಒಗಟಿನ ರೀತಿಯಲ್ಲಿ ಹೇಳಿದ್ದನ್ನು ಶ್ರೀನಿವಾಸ ಶೋಧಿಸಿಕೊಂಡಿರಬೇಕು ಎಂದು ಕಾಮತ ಭಾವಿಸುತ್ತಾರೆ. ಪ್ರತಿಯೊಂದು ಸಂಗತಿಯೂ ಶ್ರೀನಿವಾಸನನ್ನು ಆಳವಾಗಿ ಕಲಕುತ್ತದೆ. ಅವನನ್ನು ಪ್ರಪಾತಕ್ಕೆ ಕೊಂಡೊಯ್ಯುವಲ್ಲಿ ಸಹಾಯಕವಾಗುತ್ತದೆ. ಅವನ ಸ್ವಭಾವ ಮತ್ತು ತಪ್ಪು ನಿರ್ಣಯಗಳಿಂದಾಗಿ ಆತ ಯಾತನೆಗೀಡಾಗುತ್ತ ತನ್ನ ಅಂತ್ಯವನ್ನು ಮಾಡಿಕೊಳ್ಳುವ ದುರ್ಧರ ಪ್ರಸಂಗವನ್ನು ಕಾದಂಬರಿಕಾರ ಕಟ್ಟಿಕೊಡುತ್ತಾನೆ. ಶ್ರೀನಿವಾಸನ ಬಗ್ಗೆ, ಅವನ ದೋಷಗಳನ್ನರಿತೂ ನಾವು ಸಾನುಭೂತಿ ತೋರಿಸಲು ಕಾರಣಗಳಿವೆ. ಅವನು ಯಾವ ಮುಖವಾಡಗಳನ್ನೂ ಹಾಕಿಕೊಳ್ಳದ ಒಬ್ಬ ಪ್ರಾಮಾಣಿಕ ವ್ಯಕ್ತಿ. ಅವನ ಅಪ್ಪಟ ಪ್ರಾಮಾಣಿಕತೆ, ಕಾಮದ ಬಗೆಗಿನ ಅವನ ನಿಸ್ಸಂಕೋಚ ಅನಿಸಿಕೆಗಳು, ಬಾಲಿತನದ ಅನುಭವಗಳ ವಿಶ್ಲೇಷಣೆ, ಸೂಕ್ಷ್ಮ ಸಂವೇದನಾಶೀಲತೆ, ಆತನ ಮಾನಸಿಕ ಹಿಂಸೆ ಇವುಗಳಿಂದಾಗಿ ಆತ ನಮಗೆ ಹತ್ತಿರದವನೂ ಆಗುತ್ತಾನೆ. ಅವನ ಅಂತರಾಳದ

ಅಭಿವ್ಯಕ್ತಿಯಲ್ಲಿ ಬದುಕಿನ ನಿಗೂಢತೆಯ ಚಿಂತನೆ ಇದೆ. ಅವನ ಸುಡುವ ಅನುಭವಗಳ ಮೂಸೆಯಲ್ಲಿ ಚಿಂತನೆಗಳು ಒಡಮೂಡುವುದರಿಂದ ಅವು ಕಥನದ ಹೊರಗೆ ಉಳಿಯುವುದಿಲ್ಲ ಎಂಬುದು ಬಹುಮುಖ್ಯ ಸಂಗತಿ.

ಕಾದಂಬರಿಯ ಆರಂಭದ ಅಧ್ಯಾಯದಲ್ಲೇ ಶ್ರೀನಿವಾಸನ ಆತ್ಮಹತ್ಯೆ ಜರುಗಿಬಿಡುತ್ತದೆ. ಅಂತ್ಯದ ಉತ್ಕಟ ಸನ್ನಿವೇಶದಿಂದ ಆರಂಭಗೊಳ್ಳುವ ಕಾದಂಬರಿ ಅಷ್ಟಷ್ಟೆ ರಹಸ್ಯಗಳ ಶೋಧನೆಯ ಮೂಲಕ ಕುತೂಹಲದಿಂದ ಓದಿಸಿಕೊಂಡು ಹೋಗುತ್ತದೆ. ಇಲ್ಲಿಯ ಅಸಂಗತತೆಯ ಚಿಂತನಧಾರೆ ನಮಗೆ ಸಮ್ಮತವಾಗಲಿ, ಬಿಡಲಿ, ಆದರೆ ಇದು ಕಥನದ ಸಂದರ್ಭದಲ್ಲಿ ಬದುಕಿನ ಆಳ ವಿಶ್ಲೇಷಣೆಗೆ ಅನುವು ಮಾಡಿಕೊಡುತ್ತದೆ; ಮನಸ್ಸಿನ ಚಾಂಚಲ್ಯ, ಸಂಕಟ, ಅಸ್ವಸ್ಥತೆ ಮೂಲಕ ಅನುಭವಗಳ ಪ್ರಾಮಾಣಿಕ ಶೋಧನೆ ಸಾಧ್ಯವಾಗಿಸುತ್ತದೆ. ವಿಚಾರಗಳು ಅನುಭವಜನ್ಯವಾಗಿ, ಕಾದಂಬರಿಯ ಕ್ರಿಯೆಯಲ್ಲಿ ಮೈದಾಳುವುದರಿಂದಾಗಿ 'ನನ್ನದಲ್ಲದ್ದು' ಕಾದಂಬರಿ ಒಂದು ಸಫಲ ಕೃತಿಯಾಗಿದೆ.

○



# ದೃಷ್ಟಿ: ವಾಸ್ತವ ಬದುಕಿನ ಅನಾವರಣ

ಪ್ರೊ. ಅಬ್ಬಾಸ್ ಮೇಲಿನಮನಿ

ಮನುಷ್ಯ ಈಗ ಜಾಗತೀಕರಣದ ಕಾಲಘಟ್ಟದಲ್ಲಿ ಉಸಿರಾಡುತ್ತಿದ್ದಾನೆ. ಈ ಜಾಗತೀಕರಣ ಎಂಬುದು ಪ್ರಧಾನವಾಗಿ ಜಗತ್ತಿನ ವಾಣಿಜ್ಯ ವ್ಯವಸ್ಥೆಗೆ ಸಂಬಂಧಿಸಿದ್ದು. ಅಂದರೆ ಪರಸ್ಪರ ಒಡಂಬಡಿಕೆಯ ಆರ್ಥಿಕ ವ್ಯವಹಾರದ ಅನಾವರಣ. ಮುಕ್ತ ಮಾರುಕಟ್ಟೆಯ ನೀತಿ ಸಮೃದ್ಧ ಕನಸಿನ ಬೀಜವೆನಿಸಿದರೂ, ಅದು ನಿಶ್ಶಬ್ಧವಾಗಿ ರಾಷ್ಟ್ರದ ರಾಜಕೀಯ, ಸಾಂಸ್ಕೃತಿಕ ವಲಯಗಳನ್ನು ಆಕ್ರಮಿಸಿಕೊಳ್ಳುವುದು, ಅದರೊಂದಿಗೆ ಮುಖಾಮುಖಿಯಾಗುವ ಮನುಷ್ಯನ ಬದುಕು ಕೂಡ ತನ್ನ ಅಸ್ತಿತ್ವಕ್ಕಾಗಿ ತಡಕಾಡುತ್ತಲೇ ಇರುವುದು. ಅದರ ನಿಜದ ನೆಲೆಯಲ್ಲಿ ಅರಳಿಕೊಳ್ಳಬಹುದಾದ ಜೀವನ ಮೌಲ್ಯಗಳು. ಮನುಷ್ಯ ಸಂಬಂಧಗಳು ಲಯ ತಪ್ಪಿಸಿಕೊಂಡು ಪರಕೀಯವೆನಿಸುವ, ಅನಿಶ್ಚಿತ ದೃಷ್ಟಿಯಿಲ್ಲದಾಗಿ ದ್ವಂದ್ವಕ್ಕೊಳಪಟ್ಟು ಭ್ರಮನಿರಸನಗೊಳ್ಳುವ ಅಪಾಯವಿಲ್ಲದಿಲ್ಲ.

ಡಾ. ನಾ. ಮೊಗಸಾಲೆ ಅವರು ಹತ್ತು ವರ್ಷದ ಹಿಂದೆ ಬರೆದ 'ದೃಷ್ಟಿ' ಕಾದಂಬರಿ ಈ ಜಾಗತೀಕರಣದ ಮಾಯೆಗೆ ಸಿಲುಕಿದಂತೆ ಕಾಣಿಸುವುದು. ಅದರ ಕೇಂದ್ರ ಪಾತ್ರವಾದ ವಾಸುದೇವರಾಯನ ಜೀವಾನುಧಾನವು ಅದಕ್ಕೆ ಸಾಕ್ಷಿಯೋ ಎನ್ನುವಂತೆ ನಮ್ಮೆದುರು ಬಿಚ್ಚಿಕೊಳ್ಳುವುದು. ಅದು ಅಚ್ಚರಿಯಾದಂತೆ ವಾಸ್ತವ ಕೂಡ ಅನಿಸುವುದು.

ಈರೋಡಿ ವಾಸುದೇವರಾಯನ ಬದುಕು ಅವನ ಇಚ್ಛೆಯಂತೆ ರೂಪುಗೊಂಡಿದ್ದಲ್ಲ. ಅದು ಇತರರ ರಕ್ತ ಮಾಂಸದ ಅಭೀಕ್ಷೆಯ ಆಕೃತಿ. ದ್ವಂದ್ವದ ಪ್ರಕೃತಿ. ಸ್ವಂತದ್ದಾದ ಜೀವನ ದೃಷ್ಟಿ ಯಾವುದೆಂದು ಅವನಿಗೆ ಗೊತ್ತಿಲ್ಲ. ಜೀವನವೆಂದರೆ ಅಂಗೈಯಲ್ಲಿ ಹಿಡಿದಿಡುವಂಥದ್ದಲ್ಲ ಎಂಬುದು ಅವನ ವ್ಯಾಖ್ಯಾನ. ಇನ್ನೊಬ್ಬರು ಹೀಗೆ ಬದುಕಿದರು ತಾನೂ ಹಾಗೆ ಬದುಕಿ ಸಾರ್ಥಕಗೊಂಡೆ ಎನ್ನುವ ಸಂತೃಪ್ತಿ. ಬೇರೆಯವರ ಅಭಿಪ್ರಾಯಗಳನ್ನು ಮನ್ನಿಸಿ, ತನ್ನ ಆಸೆ ಆಕಾಂಕ್ಷೆಗಳನ್ನು ಹತ್ತಿಕ್ಕಿ ಅವರ ಅಭಿಪ್ರಾಯದಂತೆ ಮೂರ್ತಗೊಂಡಿದ್ದರ ಸಾರ್ಥಕತೆ. ಆದರೆ ಇದು ಎಷ್ಟರ ಮಟ್ಟಿಗೆ ಸರಿ? ಈ ಪ್ರಶ್ನೆಗೆ ಅವನ ಬಳಿ ಉತ್ತರವಿಲ್ಲ. ಅದಕ್ಕಾಗಿ ತಡಕಾಡುವುದಿಲ್ಲ ಯಾಕೆಂದರೆ ಮನುಷ್ಯ ಪರಿಸರದ ಕೂಸು ಎಂಬುದು ಅವನ ಸಮಜಾಯಿಷಿ, ಅದು ಅವನ ಸಮಾಜ ವ್ಯವಸ್ಥೆಯ ಅನುಭವದ ಅನಿಸಿಕೆಯೂ ಆಗಿರಬಹುದು.

ತಂದೆ ವೆಂಕಣ್ಣನ ಹೆಣ್ಮರುಳತನ, ಅದರಿಂದ ಆಘಾತಗೊಂಡ ತಾಯಿ ರಾಧೆಯ

ದುರ್ಮರಣ–ವಾಸುದೇವ ಒಂದೂವರೆ ತಿಂಗಳು ಕೂಸಿರುವಾಗಲೇ ಸಂಭವಿಸಿದ್ದು, ತಂದೆಯ ಮಮಕಾರದಿಂದ ವಂಚಿಸಿಕೊಂಡು ಅಜ್ಜ ಅಜ್ಜಿಯರ ಹೆಪ್ಪುಗಟ್ಟಿದ ಪ್ರೀತಿಯಲ್ಲಿ, ಚಿಕ್ಕಮ್ಮ ಸರಸೋತಿಯ ಮಮತೆಯ ಉಪಚಾರದಲ್ಲಿ ಬಾಲ್ಯದ ಸೊಗಡು ಅನುಭವಿಸಿದ್ದು, ನಂತರದಲ್ಲಿ ಯಮುನತ್ತೆ ಮತ್ತವಳ ಗಂಡ ಕತೆಗಾರ ಸುಬ್ರಾಯ ಹೆಗ್ಡೆಯರ ಅಕ್ಕರೆಯ ಆಸರೆ, ಅವರ ಮಕ್ಕಳಾದ ಭಾಗೀರ್ತಿ, ಗಂಗಾ, ಕಾವೇರಿಯರ ಅನ್ಯೋನ್ಯ ಒಡನಾಟದಲ್ಲಿ ವಿದ್ಯಾಭ್ಯಾಸದ ಫಲಪ್ರಾಪ್ತಿ ಕಂಡದ್ದು. ಮೆಟ್ರಿಕ್ ಮತ್ತು ಬಿ.ಎ ಪರೀಕ್ಷೆಗಳಲ್ಲಿ ರ್‍ಯಾಂಕ್ ಗಿಟ್ಟಿಸಿದ್ದು. ಇದೆಲ್ಲ ಅವನ ಅದೃಷ್ಟ. ಆದರೆ ಅವನ ಮುಂದಿನ ಗುರಿಯೇನು? ಅದು ಅವನಿಗೆ ಗೊತ್ತಿಲ್ಲ. ಭಾಗೀರಥಿ ಅದನ್ನು ನಿರ್ಧರಿಸುವಳು.

ಅವಳ ಆಸೆಯಂತೆ, ಮಾವ ಹೆಗ್ಡೆ ಮತ್ತು ಅವನ ಸ್ನೇಹಿತ ಸೊರಾಬ್‌ಜೀಯ ಇಷ್ಟದಂತೆ 'ಲಾ' ಓದಲು ಇಂಗ್ಲೆಂಡಿಗೆ ಹೋಗಿ ಆಕ್ಸ್‌ಫರ್ಡ್ ಯುನಿವರ್ಸಿಟಿ ಸೇರಿಕೊಳ್ಳುತ್ತಾನೆ. ಹೇಗೋ ಬ್ಯಾರಿಸ್ಟರ್ ಪರೀಕ್ಷೆ ಮುಗಿಸಿದವನು ಮಾವನ ಅಪಘಾತದ ಸುದ್ದಿ ತಿಳಿದು ಭಾರತಕ್ಕೆ ಹಿಂತಿರುಗುತ್ತಾನೆ. ಅವನ ಶುಶ್ರೂಷೆಗೂ ನಿಂತು, ನಂತರದಲ್ಲಿ ನಿಂತುಹೋದ ಮಾತೃಭೂಮಿ ಪತ್ರಿಕೆಯನ್ನು ಪುನಃ ಪ್ರಾರಂಭಿಸುವಲ್ಲಿ ಆಸಕ್ತನಾಗುತ್ತಾನೆ. ಮಾವ ಚೇತರಿಸಿಕೊಂಡು ಮತ್ತೆ ಸಂಪಾದಕನ ಜವಾಬ್ದಾರಿ ನಿರ್ವಹಿಸಲು ತೊಡಗಿದ ಮೇಲೆ ಅವನಿಗೆ ಕಾಡುವುದು ಭವಿಷ್ಯದ ಚಿಂತೆ. ಸೊರಾಬ್‌ಜಿ ಅದನ್ನು ಪರಿಹರಿಸುತ್ತಾರೆ. ಮಾತೃಭೂಮಿ ಇಂಗ್ಲಿಷ್ ಆವೃತ್ತಿಯನ್ನು ಆರಂಭಿಸಿ ಅದರ ಸಂಪಾದಕನ ಜವಾಬ್ದಾರಿಯನ್ನೂ ವಾಸುವಿನ ಹೆಗಲೇರಿಸುತ್ತಾರೆ. ಹೀಗೆ ಅವನ ಬದುಕಿನ ಸೂತ್ರವನ್ನು ನಿರ್ವಹಿಸುವವರು ಬೇರೆಯವರೆ.

"ನೀನೊಬ್ಬ ಗೊಂದಲ ಮನಸ್ಸಿನವ, ನಿನಗೆ ಸ್ವತಂತ್ರವಾಗಿ ಯೋಚಿಸುವ ಶಕ್ತಿ ಇಲ್ಲ" ಎನ್ನವುದು ಅವನ ಅಂತರಂಗದ ಗೆಳೆಯ ಆರ್.ಕೆ. ನಾಯರ್ ಹೇಳುವ ಮಾತು. ಅದು ವಾಸುದೇವರಾಯನ ವ್ಯಕ್ತಿತ್ವವನ್ನು ಚೆನ್ನಾಗಿ ಅರ್ಥೈಸಿದ ಮಾತೂ ಹೌದು. ಅವನಿಗೆ ನಾಯಕನ ಸ್ನೇಹ ಬೇಕು. ಅವನ ಸಿದ್ಧಾಂತದ ಬದ್ಧತೆ ಬೇಡ. ಕೃಷ್ಣಮೆನನ್‌ರ ಪ್ರಭಾವ, ಅವರ 'ಇಂಡಿಯಾ ಲೀಗ್' ಬಗ್ಗೆ ಕೌತುಕಕ್ಕೊಳಗಾದರೂ ಅವರ ಇಚ್ಛೆಗೆ ಬಲವಾಗಿ ಅಂಟಿಕೊಳ್ಳಲು ಅವನಿಗೆ ಸಾಧ್ಯವಾಗುವುದಿಲ್ಲ. ಓದಿಗೆ ವಿಮುಖನಾಗಿ ಮೊದಲ ವರ್ಷದಲ್ಲಿ ಫೇಲಾಗುವುದು, ಮತ್ತೆ ತನ್ನ ಮೇಲೆ ನಂಬುಗೆ ಇರಿಸಿದ ಭಾಗಿ, ಹೆಗ್ಡೆ, ಸೊರಾಬ್‌ಜಿಯರಿಗೆ ದ್ರೋಹ ಬಗೆದೆನೆಂದು ನೊಂದುಕೊಳ್ಳುವುದು. ಭಾರತದಲ್ಲಿ ಬ್ರಿಟಿಷರು ದಬ್ಬಾಳಿಕೆ ನಡೆಸುವರೆಂದು ಅವರ ಬಗ್ಗೆ ಜಿಗುಪ್ಸೆಗೊಳ್ಳುತ್ತಲೇ ಪ್ರಾಧ್ಯಾಪಕ ಡಾ. ಹೆನ್ರಿ ಆಸ್ಟನ್‌ರ ಅಭಿಪ್ರಾಯಗಳಿಗೆ ಮನ್ನಣೆ ನೀಡಿ ನಾಯರ್‌ನೊಂದಿಗೆ ವಾದಕ್ಕಿಳಿವುದು. ಬ್ಯಾರಿಸ್ಟರ್ ಪರೀಕ್ಷೆ ಪಾಸು ಮಾಡಿ ಮುಂದೆ ಇಂಗ್ಲೆಂಡಿನಲ್ಲಿ ಉಳಿಯಬೇಕೋ, ಭಾರತಕ್ಕೆ ಹಿಂತಿರುಗಿ ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿಕೊಳ್ಳಬೇಕೋ, ವಕಾಲತ್ ಮೂಲಕ ಹಣ ಸಂಪಾದನೆಗೆ ತೊಡಗಬೇಕೋ.... ಹೀಗೆ ಅವನು ದ್ವಂದ್ವದ ತೆಕ್ಕೆಗೆ ಸಿಕ್ಕು ಏನಾಗಬೇಕೋ ಅದಾಗದೇ ಬಯಸಿದ್ದನ್ನು ಪಡೆಯದೆ ಹೋಗುತ್ತಾನೆ. ಲಾ ಓದಿ ಪತ್ರಿಕೆಯ ಸಂಪಾದಕನಾಗುವುದು. ಭಾಗೀರಥಿಯನ್ನು ಪ್ರೀತಿಸಿ, ಮೂಕಿಯಾದ ಗಂಗಾಳನ್ನು ಮದುವೆಯಾಗುವುದು ಇದಕ್ಕೆ ನಿದರ್ಶನ. ಯಾವುದನ್ನೂ ಅವನು ತನಗಿಷ್ಟವೆಂದು ದೃಢಚಿತ್ತವಾಗಿ ಹಕ್ಕಿನಿಂದ ಪಡೆದುಕೊಂಡಿಲ್ಲ. ಕೊನೆತನಕ ಅದನ್ನೇ ಮುಂದುವರಿಸಿಕೊಂಡು ಹೋಗುವ

ಮನಸ್ಸಿಲ್ಲದವನಾಗಿ ಸಂಪಾದಕನ ಜವಾಬ್ದಾರಿಯನ್ನೂ ಮಗಸಿಗೊಪ್ಪಿಸಿ ಈರೋಡಿಗೆ ಬರುತ್ತಾನೆ.

ಆ ನಡುವೆ ಅವನು ಅನುಭವಿಸಿದ ನೋವಿನ ಪ್ರಸಂಗಗಳಿಗೆ ಲೆಕ್ಕವಿಲ್ಲ. ಭಾಗೀರಥಿ ಮೂರು ಸಲ ಗರ್ಭಸ್ರಾವದಿಂದ ಬಳಲಿದ್ದು, ಅವಳ ಗಂಡ ಪ್ರೊ. ಶಂಕರ ಭುಗಿಲೆದ್ದ ವಿದ್ಯಾರ್ಥಿ ಚಳವಳಿಯಲ್ಲಿ ಆಕಸ್ಮಿಕ ಪೊಲೀಸ್ ಗುಂಡಿಗೆ ಬಲಿಯಾಗಿದ್ದು, ಆ ಕೊರಗಿನಲ್ಲಿ ಮಾವ ಸುಬ್ರಾಯ ಹೆಗ್ಡೆ ಸತ್ತದ್ದು, ಗಂಡನ ಬೆನ್ನಲ್ಲೇ ಜ್ವರದ ಬಾಧೆಯಿಂದ ಯಮುನತ್ತೆ ತೀರಿಕೊಂಡದ್ದು, ಮಗ ಸುಮಂತ ಆಕ್ಸಿಡೆಂಟ್‌ನಲ್ಲಿ ಅಸುನೀಗಿದ್ದು, ಗಂಗಾ ಗರ್ಭಕೋಶದ ಕ್ಯಾನ್ಸರ್‌ನಿಂದ ಸತ್ತಿದ್ದು, ಸ್ವತಃ ತಾನೇ ಅಸ್ವಸ್ಥನಾಗಿ ಸಾವಿನೊಂದಿಗೆ ಹೋರಾಡಿದ್ದು..... ಅದೆಲ್ಲದರಿಂದ ಅವನು ಬದುಕಿದ್ದೇ ಹೆಚ್ಚು. ಆ ಹೆಚ್ಚುಗಾರಿಕೆಯ ಜೀವದ್ರವ್ಯವೆಂದರೆ ಭಾಗೀರಥಿ. ಅವಳ ಜೀವನೋತ್ಸಾಹ ಅಷ್ಟು ಅಗಾಧ ಎನ್ನಬೇಕು. ಮಡುಗಟ್ಟಿದ ಯಾತನೆಯನ್ನು ಒಡಲಲ್ಲಿಟ್ಟುಕೊಂಡು ವಾಸುದೇವರಾಯನನ್ನು ಉಪಚರಿಸಿ ಉಳಿಸಿಕೊಂಡ ಅವಳ ಅಂತಃಕರಣದ ಕಾಳಜಿ ನಿರಂತರವಾದುದು.

" ಆಗುವುದನ್ನು ಈ ಜಗತ್ತಿನಲ್ಲಿ ಯಾರಿಂದಲೂ ತಪ್ಪಿಸಲಾಗದು ವಾಸು!" ಮಾವನ ಅನಾಹುತವನ್ನು ಸಹಿಸಲಸಾಧ್ಯವಾಗಿ ದಿಗ್ಭ್ರಾಂತ ಸ್ಥಿತಿಯಲ್ಲಿದ್ದ ವಾಸುವನ್ನು ನೋಡಿ ಭಾಗೀರಥಿ ಉದ್ಗರಿಸುವ ಮಾತಿದು. ಅದು ನಿಜವೇ ಎನ್ನುವಂತಹ ಘಟನೆಗಳು ಅವನೆದುರೇ ನಡೆದು ಹೋಗಿದ್ದವು. ಸುಮಂತ ಇಂಗ್ಲೆಂಡಿಗೆ ಹೋಗಿ ಇಲೆಕ್ಟ್ರಾನಿಕ್ಸ್ ಸೈನ್ಸ್‌ನಲ್ಲಿ ಡಾಕ್ಟರೇಟ್ ಮುಗಿಸಿಕೊಂಡು ಬರುವಾಗ ಪಾಕಿಸ್ತಾನಿ ಮೂಲದ ಮುಸ್ಲಿಂ ಹುಡುಗಿ ಶಬನಾಳನ್ನು ಮದುವೆ ಮಾಡಿಕೊಂಡು ಬಂದದ್ದು, ಮತ್ತೊಬ್ಬ ಮಗ ಹೇಮಂತ ಜಗಳವಾಡಿ ಮನೆಬಿಟ್ಟು ಹೋಗಿ ಮಾರ್ಕ್ಸಿಸ್ಟ್ ಆದದ್ದು, ಕೊನೆಯ ಮಗ ಜಯಂತ ಜರ್ನಲಿಸಂನ ಮೂಲಭೂತ ತತ್ವಗಳನ್ನು ಗಾಳಿಗೆ ತೂರಿದ್ದು, ಅದೆಲ್ಲವನ್ನೂ ವಾಸು ಸಹಜವೆಂಬಂತೆ ಸ್ವೀಕರಿಸಿದ್ದರೂ ಅದರೊಳಗಿನ ನೋವಿನ ಕಿಚ್ಚು ಮಾತ್ರ ಅವನನ್ನು ಜೀವಂತ ದಹಿಸತೊಡಗಿತ್ತು. ಭಾಗಿ ಅದನ್ನು ಗ್ರಹಿಸಿಕೊಂಡೇ ಅವನ ಜೊತೆಗೆ ಇರಲು ಪೂನಾ ಬಿಟ್ಟು ಮುಂಬೈಗೆ ಬಂದಿದ್ದಳು.

ಮುಂಬಯಿ ಬದುಕು ಸಾಕು ಅನಿಸಿದಾಗ ವಾಸುವಿಗೆ ದಟ್ಟವಾಗಿ ಕಾಡಿದ್ದು ಈರೋಡು. ಸೊಸೆ ಶಬಾನಾ, ಭಾಗಿ ಎಷ್ಟೆ ತಡೆವೊಡ್ಡಿದರೂ ಅವನು ಹಳ್ಳಿಗೆ ಹಂಬಲಿಸಿ ಬರುತ್ತಾನೆ. ಆ ಹಂಬಲದ ಉದ್ದೇಶವಾದರೂ ಏನು? ಹುಟ್ಟಿದೂರಲ್ಲಿ ತನ್ನ ಜೀವನಸಂಜೆಯನ್ನು ಆರಾಮವಾಗಿ ಕಳೆಯುವುದು. ಆದರೆ ಒಳಸತ್ಯ ಬೇರೆಯಾಗಿದೆ. ಇನ್ನೊಬ್ಬರ ಚದುರಂಗದಾಟದಲ್ಲಿ ತಾನು ಕಾಯಾಗಿ ಬಳಕೆಯಾಗಬಾರದು. ತನ್ನದೇ ಆದ ಬದುಕನ್ನು ರೂಪಿಸಿಕೊಳ್ಳಬೇಕೆನ್ನುವುದು. ಇದೂ ಕೂಡ ಒಳಸತ್ಯವೇ. ನಿಜಸಂಗತಿಯೆಂದರೆ ಅವನೊಳಗೆ ಉದ್ಭವಗೊಂಡ ರಾಕ್ಷಸನ ಭಯ. ಭಾಗಿಯನ್ನು ಪ್ರೀತಿಸುವ, ಅವಳನ್ನು ತನ್ನ ಬಾಹುಗಳಲ್ಲಿ ಬಂಧಿಸುವ ಆಸೆ ಮನಸ್ಸು ಆವರಿಸಿದ್ದು. ಶಬಾನಾ ಮುಂಜಾನೆ ಕೆಲಸಕ್ಕೆ ಹೋಗಿ ಸಂಜೆ ಬರುವುದು. ಅವಳ ಮಗ ಪ್ರಥಮ್ ಸ್ಕೂಲಿಗೆ ಹೋಗುವುದು. ವಿಪುಲ ಅವಕಾಶ. ರಾಕ್ಷಸ ಯಾವ ಹೊತ್ತಿಗಾದರೂ ದಾಳಿ ಇಡಬಹುದು. ಆ ರಾಕ್ಷಸನನ್ನು ಸಂಹಾರ ಮಾಡುವ ಉಪಾಯದಿಂದ ಅವನು ಮುಂಬಯಿ ಬಿಡುತ್ತಾನೆ. ಆತ್ಮಚರಿತ್ರೆ ಬರೆಯುವ ನೆಪವೂ ಅದಕ್ಕೆ ಬಲವಾದ ಕಾರಣವಾಗುವುದು.

ಹಳ್ಳಿಯ ಪ್ರಕೃತಿ ವಾಸುವಿಗೆ ಇಷ್ಟವಾಗುತ್ತದೆ. ಬಾಲ್ಯದ ಹಸಿಹಸಿ ಕ್ಷಣಗಳು, ಗುಂಪಿಗುಡ್ಡೆ, ಗುಡ್ಡದ ತುದಿಯಲ್ಲಿ ವಿಶಾಲವಾಗಿ, ತಾನೇತಾನಾಗಿ ಹರಡಿಕೊಂಡ ಜಾರುಪರದೆ, ಅಡಿಕೆತೋಟ, ತೆಂಗನಮರ, ಬಾಲ್ಯಸಖ ಪುಟ್ಟಣ್ಣಯ್ಯ ಜೊತೆಗಿನ ಪಟ್ಟಾಂಗ, ಮಹಾಬಲಣ್ಣನ ಆಪ್ತತೆಯಲ್ಲಿ ಅವನು ಮುಂಬಯಿ ಮರೆಯುತ್ತಾನೆ. ಈರೋಡಿನ ಜೀವಂತಿಕೆಯ ಪರಿಸರದಲ್ಲಿ ಹೊಸ ಬದುಕಿಗೆ ಕಾತರಿಸುವ, ಅದರ ಲವಲವಿಕೆಯಲ್ಲಿ ಆತ್ಮಕತೆ ಬರೆಯುವ ಹೊರಳಿನಲ್ಲಿ ಮತ್ತೊಂದು ಬಗೆಯ ಅಡ್ಡಿ ಆತಂಕ ಎದುರಾಗುತ್ತವೆ. ಊರಿನಲ್ಲಿ ಸುಬ್ರಹ್ಮಣ್ಯ ದೇವಸ್ಥಾನದ ಆಡಳ್ತೆ ಮೊಕ್ತೇಸರ ರಾಮಭಟ್ಟರ ಯೋಜನೆಯ ಹಂಚಿಕೆ, ಆ ಬಗ್ಗೆ ವಾಸುದೇವರಾಯನ ಅನಾಸ್ಥೆ, ಗೋಪಾಲ ಚಿಕ್ಕಪ್ಪನ ಆಸ್ತಮಾ ಉಲ್ಬಣ, ಮತ್ತವನ ಸಾವು, ಪುಟ್ಟಣ್ಣಯ್ಯ ಮೇಸ್ತ್ರು ಮನೆಗೆ ಬೆಂಕಿ ಬಿದ್ದು ಸರ್ವ ನಾಶವಾದ ಪ್ರಸಂಗ, ಆ ಮನೆಯ ರಿಪೇರಿಯ ಮೇಲುಸ್ತುವಾರಿ, ಕೋಟ ಮೂಲೆ ಪರಮೇಶ್ವರನ ವಿರುದ್ಧ ಕೋರ್ಟಿಗೆ ಬಂದು ಸಾಕ್ಷಿ ಹೇಳಲು ರಾಮಣ್ಣಶೆಟ್ಟಿಯಿಂದ ಒತ್ತಡ, ವಾಸುವಿನ ನಿರಾಕರಣೆ, ಮೇಸ್ತ್ರ ಹೆಂಡತಿಯೊಂದಿಗೆ ವಾಸು ಸಂಬಂಧವಿರಿಸಿಕೊಂಡ ಬಗೆಗೆ ಗುಮಾನಿ ಮಾತು, ಊರಿನ ಜನರ ಸ್ವಾರ್ಥ, ಹರಕುತನ, ಹೊಲಸು ರಾಜಕೀಯ, ಇದೆಲ್ಲದರಿಂದ ಬೇಸತ್ತು ತಿರುಗಿ ಮುಂಬಯಿಗೆ ಹಿಂತಿರುಗುವ ನಿರ್ಧಾರ ಮಾಡುತ್ತಾನೆ ವಾಸುದೇವರಾಯ.

18799

ಅವನ ಅನಿಶ್ಚಿತ ಜೀವನದೃಷ್ಟಿ ಮತ್ತು ಅದರಿಂದಾಗುವ ಭ್ರಮನಿರಸನವನ್ನು ಚಿತ್ರಿಸುವುದೇ ಕಾದಂಬರಿಯ ಕೇಂದ್ರಪ್ರಜ್ಞೆಯಾಗಿದ್ದರೂ ಅದರ ಒಳಸ್ತರದಲ್ಲಿ ವಿಜೃಂಭಿಸುವ ಮನುಷ್ಯ ಬದುಕಿನ ವೈಪರೀತ್ಯಗಳು, ವ್ಯಕ್ತಿ, ಸಮಾಜ ಹಾಗೂ ಪರಿಸರಗಳ ಮೇಲೆ ಅವು ಉಂಟು ಮಾಡುವ ಪರಿಣಾಮಗಳು ಗಾಢವಾಗಿ ಅಭಿವ್ಯಕ್ತಗೊಂಡಿವೆ.

ಇಲ್ಲಿನ ಮನುಷ್ಯನಿಗೆ ಅವರವರದೇ ಆದ ಬದುಕಿನ ಪ್ರೀತಿ ಇದೆ. ಅದು ಸಾಂದ್ರವೂ ಆಗಿದೆ. ಕಟ್ಟಿಕೊಂಡ ಬದುಕನ್ನು ಉಳಿಸಿಕೊಳ್ಳುವುದರಲ್ಲಿ ಅವರು ಮಗ್ನರೂ ಕೂಡ. ಸ್ವಾರ್ಥವೋ ನೀಚತನವೋ ಅಸಂಗತವೋ, ಅನೈತಿಕವೋ, ಹೇಗಾದರೂ ಆಗಿರಲಿ, ಅದಕ್ಕೆ ಯಾರನ್ನೂ ಬಲಿಕೊಟ್ಟಾದರೂ ಉಸಿರಾಡಿಸಿಕೊಂಡಿರಬೇಕೆನ್ನುವುದು ಅವರ ಜೀವನ ಛಲ. ವಾಸುದೇವನ ಅಪ್ಪ ವೆಂಕಣ್ಣನಿಗೆ ತಿಮ್ಮನ ಹೆಂಡತಿಯೊಂದಿಗೆ ನಿರಂತರ ಸಂಬಂಧ. ಸುಬ್ರಾಯ ಹೆಗ್ಡೆ, ಪಾರ್ಸಿ ಸೊರಾಬ್‌ಜೀಯ ವಿಧವೆ ತಂಗಿಯೊಂದಿಗೆ, ಹೆಗ್ಡೆ ಹೆಂಡತಿ ಯಮುನಾಳೊಂದಿಗೆ ಸೊರಾಬ್‌ಜೀಯ ಸಂಬಂಧ. ಗೋಪಾಲ ಚಿಕ್ಕಪ್ಪ, ಕಾಂಬಿ ಚಿಕ್ಕಮ್ಮರಿಗೆ ವಾಸುದೇವರಾಯ ಮುಂಬಯಿ ಬಿಟ್ಟು ಬಂದದ್ದು ಪಿತ್ರಾರ್ಜಿತ ಆಸ್ತಿ ಕೇಳಲು ಎಂಬ ದಿಗಿಲು; ಮಹಾಬಲನಿಗೆ ತನ್ನ ಇದ್ದೊಬ್ಬ ಮಗನ ಬಗ್ಗೆ ಚಿಂತೆ. ತಮ್ಮಂದಿರು ಅವನನ್ನು ಓದಿಸಲು ಸಹಕರಿಸಲಿಲ್ಲ, ಅವರ ಹೆಣ್ಣು ಮಕ್ಕಳಿಗೆ ತಾನು ನಾಯಿಯ ಹಾಗೆ ದುಡಿದು ಗಂಟು ಮಾಡಬೇಕು ಎಂಬ ಅಸಹನೆ. ಆಡಳ್ತೆ ಮೊಕ್ತೇಸರ ರಾಮಭಟ್ಟರಿಗೆ ದುಡ್ಡಿನ ಬಡ್ಡಿಯಲ್ಲಿ ನಿತ್ಯವೂ ದೇವತಾ ವಿನಿಯೋಗ ಸುಸೂತ್ರಾಗಿ ಸಾಗಿಸುವ ಆಲೋಚನೆ, ಮೂಡುಮನೆ ಗೋವಿಂದ ಭಟ್ಟರಿಗೆ ಮತ್ತೊಬ್ಬರ ಬದುಕಿನ ಒಳಪದರುಗಳನ್ನು ಬಿಚ್ಚಿಡುವ ಅಸಹ್ಯ ಖಯ್ಯಾಲಿ. ಗೋಪಾಲ ಚಿಕ್ಕಪ್ಪನ ಮಗ ನಾರಾಯಣನಿಗೆ ಜೀವನದ ಕಷ್ಟ, ಅದಕ್ಕಾಗಿ ಪಾಲು ಮಾಡಿಕೊಳ್ಳುವ

ಆತುರ. ಅವನ ಮತ್ತೊಬ್ಬ ಮಗ ಡಾ. ಈಶ್ವರನಿಗೆ ಹೆಣ್ಣು, ಹೆಂಡದ ತೆವಲು; ಬದುಕನ್ನು ಸುಖವಾಗಿ ಅನುಭವಿಸುವ ಆಸ್ಥೆ. ನಾಯರ್‌ನಿಗೆ ಓದಿಗಿಂತ ಸ್ವಾತಂತ್ರ್ಯ ಮುಖ್ಯ. ಕೃಷ್ಣಮೆನನ್‌ರಿಗೆ ಬ್ರಿಟಿಷ್ ಪಾರ್ಲಿಮೆಂಟಿನ ಶಾಸಕನಾಗಿ ಪ್ರತಿಷ್ಠಿತರಾಗುವ ಬಯಕೆ. ಹೇಗಾದರೂ ದುಡ್ಡು ಮಾಡಬೇಕೆನ್ನುವುದು ಬಿಸಿನೆಸ್‌ಮೆನ್ ಮುರ್ಡೇಶ್ವರ ನಾಗೇಶ್ವರ ಹೆಗ್ಡೆಯ ದೊಡ್ಡಸ್ತಿಕೆ. ಮಾವನನ್ನು ಹಿಂಬಾಲಿಸಿಕೊಂಡು ಹೋಗುವುದು ಜಯಂತನ ಹೆಬ್ಬಯಕೆ. ಇವರಿಗೆ ತಮ್ಮ ನಂಬಿಕೆಗಳೇ ಜೀವನದ ಮೌಲ್ಯಗಳು. ಅವನ್ನು ಅವರು ಜಾಣ್ಮೆಯಿಂದ ಸೂಕ್ಷ್ಮವಾಗಿ ಅಥವಾ ಧಾರ್ಷ್ಟ್ಯತನದಿಂದಲಾದರೂ ಅನಾವರಣಗೊಳಿಸುವಲ್ಲಿ ಆಸಕ್ತರು.

ಇಲ್ಲಿ ಪ್ರಕಟವಾಗುವ ಮನುಷ್ಯ ಸಂಬಂಧಗಳಾದರೂ ಎಷ್ಟು ಸೂಕ್ಷ್ಮ! ಹುಟ್ಟಿಸಿದ ಅಪ್ಪನ ಸಾವು ಸಂಭವಿಸಿದೆ. ಅಂತಿಮವಾಗಿ ಮುಖ ದರ್ಶನ ಮಾಡುವ ವ್ಯವಧಾನವಿರದ ಮಕ್ಕಳಿಗೆ ವೈಯಕ್ತಿಕ ಹಿತಾಸಕ್ತಿ. ನಾರಾಯಣನ ಮಗನಿಗೆ ಮದ್ರಾಸಿನಲ್ಲಿ ಇಂಟರ್‌ವ್ಯೂ ಇದೆ. ಅಪ್ಪನ ಹೆಣ ನೋಡಲು ಬಂದು ಮಗನಿಗೆ ಸಿಗುವ ಕೆಲಸ ಕಳೆದುಕೊಳ್ಳುವುದು ಬೇಕಿಲ್ಲ. ವೈಕುಂಠ ಸಮಾರಾಧನೆಗೆ ಬಂದು ಆಸ್ತಿಯ ಪಾಲಿನ ವಿಷಯ ಮಾತಾಡುವುದು ಮಾತ್ರ ಜರೂರಿಯದ್ದು ಅನಿಸುತ್ತದೆ. ಡಾ. ಈಶ್ವರನಿಗೆ ತಂದೆಯ ಸಾವು ವಿಶೇಷವೇನಲ್ಲ. ಅದರ ಬಗ್ಗೆ ಅವನಿಗೆ ಮೋಹ ಇಲ್ಲ. ತಾಯಿ ಕ್ಯಾನ್ಸರ್‌ನಲ್ಲಿ ನರಳುತ್ತಿದ್ದಾಗ ಪತ್ನಿಯೊಂದಿಗೆ ಬರುವ ಜಯಂತನಿಗೆ ಆಸ್ಪತ್ರೆ ಅಲರ್ಜಿಯಾಗಿ ತೋರುತ್ತದೆ.

ತಂದೆ ಮಕ್ಕಳ, ಗುರು ಶಿಷ್ಯರ ಸಂಬಂಧಗಳೂ ಶಿಥಿಲವೆ. ಹೇಮಂತ ಸಂಗೀತ ಕಲಿಯಲು ಹೋಗಿ, ಗುರು ರಮಾನಂದ ಜೋಶಿಯವರ ಕುಡಿತದ ಚಟವನ್ನೇ ಮೈಗೂಡಿಸಿಕೊಂಡು ಅವರೊಂದಿಗೆ ಕಾದಾಡುತ್ತಾನೆ. ತಂದೆಗೂ ಸವಾಲಾಗಿ ನಿಂತು, ಮನಸ್ತಾಪ ಮಾಡಿಕೊಂಡು ಮನೆ ತೊರೆದು ಹೋದವನು ನಕ್ಸಲೈಟ್ ಗುಂಪಿಗೆ ಸೇರುವುದು, ಜಯಂತ ತಂದೆಯೆದುರು ಕುಳಿತು ಸಿಗರೇಟು ಹೊತ್ತಿಸಿ ಅಸಡ್ಡೆಯಿಂದ ಕೋಟ ಮೂಲೆ ಪರಮೇಶ್ವರ ಅಕ್ಷರ ಕಲಿಸಿದ ಪುಟ್ಟಣ್ಣಯ್ಯ ಮೇಸ್ತ್ರ ಹಲ್ಲು ಉದುರಿಸುವ, ಮನೆಗೆ ಬೆಂಕಿ ಹಚ್ಚುವ ಧಮಕಿ ಹಾಕುವುದು ಅಪಮೌಲ್ಯವೆನಿಸಿದರೂ ತಲೆಮಾರಿನಿಂದ ತಲೆಮಾರಿಗೆ ಮನುಷ್ಯರ ವಿಚಾರಗಳು ನಿಲುವುಗಳಲ್ಲಿ ಅಂತರ ಹೆಚ್ಚಿರುವುದನ್ನು ಕಾದಂಬರಿ ಸ್ಪಷ್ಟವಾಗಿ ಇಲ್ಲಿ ದಾಖಲಿಸುತ್ತದೆ. ಹಳೆಯ ತಲೆಮಾರಿಗೆ ಸಂಪ್ರದಾಯ ಪರಂಪರೆಗಳು ಒಂದು ಮೌಲ್ಯವೆನಿಸಿದರೆ ಹೊಸ ಪೀಳಿಗೆಗೆ ಅದು ಕಾಲುಕಸ. ಪುಟ್ಟಯ್ಯನ ಮಗಳು ಶೂದ್ರನೊಂದಿಗೆ, ವಾಸುದೇವರಾಯನ ಮಗ ಸುಮಂತ ಮುಸ್ಲಿಂ ಹುಡುಗಿಯೊಂದಿಗೆ ಮದುವೆಯಾದರೆ, ಕ್ರಿಶ್ಚಿಯನ್ ಗೆಳತಿಯೊಂದಿಗೆ ಡಾ. ಈಶ್ವರ್ ಅವೈವಾಹಿಕ ಸಂಬಂಧ ಇರಿಸಿಕೊಳ್ಳುತ್ತಾನೆ. ಜಯಂತ ಪತ್ರಿಕೋದ್ಯಮದ ಮೌಲ್ಯಗಳನ್ನು ಗಾಳಿಗೆ ತೂರಿ ಸರಕಾರದ ಬಾಲಂಗೋಚಿಯಾದರೆ, ಕೋಟ ಮೂಲೆ ಪರಮೇಶ್ವರ ಹಳ್ಳಿಯಲ್ಲಿ ಗೂಳಿಯಂತೆ ತಿರುಗುತ್ತಾ ದೇವಸ್ಥಾನದ ಜೀರ್ಣೋದ್ಧಾರ ವಿರೋಧಿಸುತ್ತ ಧರ್ಮವಿರೋಧಿ, ದೈವವಿರೋಧಿ ಅನಿಸಿಕೊಳ್ಳುತ್ತಾನೆ. ಎರಡು ತಲೆಮಾರುಗಳ ಮಧ್ಯೆ ಹೊಂದಾಣಿಕೆ ಅಸಾಧ್ಯವೆನಿಸಿ ಸಂಘರ್ಷಕ್ಕೆ ದಾರಿಯಾಗುವುದನ್ನು ಕಾದಂಬರಿ ಚಿತ್ರಿಸುತ್ತದೆ.

ವಾಸುದೇವರಾಯನಿಗೆ ಪರಂಪರೆಯ ಮೌಲ್ಯಗಳು ಇಷ್ಟ. ಅವನಿಗೆ ಅವುಗಳ ಬಗ್ಗೆ

ಗೌರವವೂ ಇದೆ. ಆದರೆ ಹೊಸ ತಲೆಮಾರಿನವರ ವಿಚಾರಗಳನ್ನು ಅವನು ತಪ್ಪು ಎನ್ನುವುದಿಲ್ಲ. ಸುಮಂತ ಶಬಾನಳನ್ನು ಮದುವೆ ಮಾಡಿಕೊಂಡು ಬಂದಾಗ, ಹೇಮಂತ ಕುಡಿದು ಬೈದಾಡಿದಾಗ ಜಯಂತ ತನ್ನೆದುರು ಶೀಥಲಯುದ್ಧ ಆರಂಭಿಸಿದಾಗ ಅವನ ಪ್ರತಿರೋಧವಿಲ್ಲ. ಡಾ. ಈಶ್ವರ ತನಗೆ ಕುಡಿತದ ಚಟ, ಹೆಣ್ಣಿನ ಹುಚ್ಚು ಇಲ್ಲವೆಂದಾಗ, ಬದುಕಿನ ಅನಿಶ್ಚಿತ ಧೋರಣೆಯನ್ನು ನೇರವಾಗಿ ಟೀಕಿಸಿದಾಗ ಅದು ಸತ್ಯವೆಂದು ಅವನ ಮನಸ್ಸು ತಣ್ಣಗೆ ಒಪ್ಪಿಕೊಳ್ಳುತ್ತದೆ. ಇನ್ನೊಬ್ಬರ ಮಾತುಗಳನ್ನು ಮೌನವಾಗಿ ಆಲಿಸುವುದು ಮತ್ತು ಆಳವಾಗಿ ಯೋಚಿಸಿ ಅದಕ್ಕೆ ಉತ್ತರಿಸುವುದು ಅವನ ಸ್ವಭಾವ. ಬೇರೆಯವರ ಒತ್ತಡಕ್ಕೆ ಮಣಿಯುವುದು ಅವನಿಗಾಗುವುದಿಲ್ಲ. ರಾಮಣ್ಣಶೆಟ್ಟಿಯ ಮಾತು ನಿರಾಕರಿಸಿ ಪರಮೇಶ್ವರ ಭಟ್ಟನನ್ನು ಸಮರ್ಥಿಸಿಕೊಂಡದ್ದೇ ಇದಕ್ಕೆ ಸಾಕ್ಷಿ.

ಪರಮೇಶ್ವರಭಟ್ಟರೊಂದಿಗೆ ಸಂಘರ್ಷಕ್ಕೆ ಇಳಿಯುವುದೆಂದರೆ ಅದು ಹಳ್ಳಿಯ ರಾಜಕೀಯದಲ್ಲಿ ತೊಡಗಿಸಿಕೊಂಡಂತೆ ಎನ್ನುವುದು ಅವನ ವಿಚಾರ. ನಿವೃತ್ತಿ ಜೀವನವನ್ನು ಸುಖವಾಗಿ ಕಳೆಯಲು ಬಂದವನಿಗೆ ಅದು ಇಷ್ಟವೂ ಇಲ್ಲ. ಆದರೆ ಹಳ್ಳಿಗಳ ಇವತ್ತಿನ ವಾಸ್ತವ ಸ್ಥಿತಿಯೇನು? ಅಲ್ಲಿಯೂ ಮುಂಬಯಿ ಸಂಸ್ಕೃತಿ ಬೇರು ಬಿಡತೊಡಗಿದೆ. ರಾಜಕೀಯದ ಅಧಃಪತನದಿಂದಾಗಿ ಚಾಕು ಚೂರಿ ಬಳಕೆ ಆಗುತ್ತಿದೆ. ಹೀಗೆಂದು ಪುಟ್ಟಣ್ಣಯ್ಯ ಹೇಳಿದ್ದಾನೆ. ಇಲ್ಲಿ ನಂಬುವಂತಹ ಜನರು ಇಲ್ಲ ಎನ್ನುವುದು ಹೋಟೆಲಿನ ವೆಂಕಟ್ರಮಣ ಭಟ್ಟರ ಅಭಿಪ್ರಾಯ. ಅದರ ಸತ್ಯದ ದರ್ಶನದಿಂದ ವಾಸುದೇವರಾಯನಿಗೆ ಮುಂಬಯಿ ನೆನಪಾಗುತ್ತದೆ. ಅದರ ಸೆಳೆತ ಹೆಚ್ಚಾದಂತೆ ಭಾಗೀರಥಿ ಕಣ್ಣೆದುರು ತೇಲಿಬರುತ್ತಾಳೆ. ಅವಳ ಬದುಕು ನೋಡುವ ದೃಷ್ಟಿ ವಾಸ್ತವ ಅನಿಸುತ್ತದೆ. ಆ ದೃಷ್ಟಿಯ ಮಾನವೀಯ ಕಾಳಜಿ, ಒಡಲಾಳದ ಪ್ರೀತಿ ತನ್ನ ಜೀವನದುಸಿರು ಎಂಬುದು ವಾಸುದೇವರಾಯನ ತಿಳಿವಳಿಕೆಯಾಗುತ್ತದೆ.

ಡಾ. ನಾ. ಮೊಗಸಾಲೆ ಅವರದು ಪ್ರಬುದ್ಧ ಬರವಣಿಗೆ. ಸಮಗ್ರ ಜೀವನವನ್ನು ಚಿತ್ರಿಸುವಾಗಿನ ಅವರ ಸಂಯಮ ಮನುಷ್ಯನ ಒಳಬಗೆಯ ಸೂಕ್ಷ್ಮಗಳನ್ನು ಗಾಢವಾಗಿಯೇ ಶೋಧಿಸುವಂತಹದ್ದು. ಮಹಾಕಾದಂಬರಿಗೆ ವಸ್ತುವಾಗಬೇಕಾದದ್ದನ್ನು ಸಂಕ್ಷಿಪ್ತ ಪುಟಗಳಲ್ಲಿ ಅರ್ಥಪೂರ್ಣವಾಗಿ ಕೌತುಕವಾಗಿ ಸೆರೆಹಿಡಿದದ್ದು ಅವರ ಪ್ರತಿಭೆಯ ವೈಶಿಷ್ಟ್ಯವೆನ್ನಬೇಕು.

ಆಕ್ರಮಣಶೀಲ ನಡವಳಿಕೆಯನ್ನು ಮೈಗೂಡಿಸಿಕೊಂಡೇ ಪ್ರವೇಶಿಸಿರುವ ಜಾಗತೀಕರಣ ಎಂಬ ಪ್ರಚಂಡ ಮನುಷ್ಯನನ್ನು ಸ್ವಾರ್ಥಿಯನ್ನಾಗಿ ಮಾಡುತ್ತಾನೆ. ಸಂಬಂಧಗಳನ್ನು ವಿಚ್ಛಿದ್ರಗೊಳಿಸುತ್ತಾನೆ. ಹುಸಿ ಆದರ್ಶ, ಧಾರ್ಮಿಕ ಸಿದ್ಧಾಂತ, ನಂಬಿಕೆಗಳನ್ನು ಬಲಗೊಳಿಸಿ ಸರ್ವನಾಶಕ್ಕಾಗಿ ತಹತಹಿಸುತ್ತಾನೆ. ಅವನ ವರ್ತನೆ ಮೇಲ್ನೋಟಕ್ಕೆ ಮೋಹಕವೆನಿಸಿದರೂ ಒಳಗೆ ಅಪಾಯಕಾರಿ. ಹಾಗೆಂದು ಅಸಹಾಯಕತೆಯಿಂದ ಅವನ ಪ್ರವಾಹದಲ್ಲಿ ಕೊಚ್ಚಿಹೋಗುವಂತಿಲ್ಲ. ಬುದ್ಧಿವಂತಿಕೆ ಅದಕ್ಕೆ ಬೇಕು. ಜೀವನದ ಬದ್ಧತೆ ಬೇಕು. ನಿಶ್ಚಿತ ದೃಷ್ಟಿ ಬೇಕು. ನಾ. ಮೊಗಸಾಲೆ ಅವರ ಈ ದೃಷ್ಟಿ ಅಂಥದಕ್ಕೆ ದಿಕ್ಸೂಚಿಯಾಗಿರುವುದು.

O

# ಮನ ತಟ್ಟುವ 'ತೊಟ್ಟಿ'

ಸುಬ್ರಾಯ ಮತ್ತೀಹಳ್ಳಿ

ಉತ್ಕಟ ಕ್ರಿಯಾಶೀಲತೆ, ಉನ್ನತ ಸಂಘಟನಾ ಚಾತುರ್ಯ, ಅಪರಿಮಿತ ಸಾಹಿತ್ಯೋತ್ಸಾಹಗಳೊಡನೆ, ಭಿನ್ನ ವೃತ್ತಿಯಲ್ಲೂ ಸೈ ಎನ್ನಿಸಿಕೊಂಡಿರುವ ಮೊಗಸಾಲೆ, ಪ್ರಸ್ತುತ ಸಾರಸ್ವತ ಕ್ಷೇತ್ರದ ಅಪರೂಪದ ಸಂಘಟಕರು. ಸಾಧಕರೂ ಹೌದು.

ಮೊಗಸಾಲೆ ಕನ್ನಡ ಜನರ ಅಂತರಂಗ ತಲುಪಿದ್ದು, ಅಲುಗಿಸಿದ್ದು, ಅವರದ್ದೇ ಆದ ವೈಶಿಷ್ಟ್ಯವುಳ್ಳ ಕಾವ್ಯ ಮತ್ತು ವಿವಿಧ ಸಾಂಸ್ಕೃತಿಕ-ಸಾಹಿತ್ಯಿಕ ಸಂಘಟನೆಗಳನ್ನು, ವ್ಯವಸ್ಥಿತವಾಗಿ ಅಷ್ಟೇ ಅರ್ಥಪೂರ್ಣವಾಗಿ ಸೃಷ್ಟಿಸಿ, ಬೆಳೆಸಿ ಬಂಗಾರವಾಗಿಸಿದ್ದಕ್ಕೆ ಎಂದು ತಿಳಿದಿದ್ದೇನೆ.

ಇದೇ ಕಾರಣಕ್ಕಿರಬಹುದು, ಅವರ ಅಭಿಮಾನಿಗಳ ಸಂಖ್ಯೆ ಜಿಲ್ಲೆಯನ್ನು ಮೀರಿ ವ್ಯಾಪಿಸಿದೆ.

ವೈದ್ಯ ವೃತ್ತಿ, ಸೃಜನಶೀಲ ಪ್ರವೃತ್ತಿಯೆರಡರ ನಡುವೆ ಸುವರ್ಣ ಸೇತುವೆಯನ್ನು ಯಶಸ್ವಿಯಾಗಿ ನಿರ್ಮಿಸಿಕೊಂಡಿರುವ ಮೊಗಸಾಲೆಯವರ ವ್ಯಕ್ತಿತ್ವದ ವೈವಿಧ್ಯ ಕಂಡು ಬೆರಗು ಮೂಡುತ್ತದೆ. ವೃತ್ತಿಗೆ ಸಾರ್ಥಕತೆ ನೀಡುತ್ತಲೇ, ಸಾಹಿತ್ಯ ಕೃಷಿಯಲ್ಲಿ ತಮ್ಮದೇ ಆದ ಸ್ಥಾನವನ್ನು ಗುರುತಿಸಿಕೊಂಡಿದ್ದಾರೆ. ಕಾವ್ಯದ ಗಂಭೀರ ಆಸ್ವಾದಕರನ್ನು, ಮತ್ತು ಗದ್ಯದಲ್ಲಿ ಸಾಮಾನ್ಯ ಓದುಗರನ್ನು, ಏಕಕಾಲದಲ್ಲಿ ಹಿಡಿದಿಟ್ಟುಕೊಂಡಿರುವ ಅಪರೂಪದ ವ್ಯಕ್ತಿತ್ವ ಮೊಗಸಾಲೆಯವರದ್ದು.

ಕಾವ್ಯದಲ್ಲಿ ಪ್ರತಿಮಾನಿಷ್ಠೆ ಮೇಲುಗೈ ಪಡೆದರೆ, ಗದ್ಯದಲ್ಲಿ ವಾಚ್ಯಗೊಳ್ಳುತ್ತಾರೆ. ಕಾವ್ಯದಲ್ಲಿ ಸ್ವಾಂತಿಕೆಯ ಸುಳಿಯಿದ್ದರೆ, ಕಾದಂಬರಿಗಳು ಹತ್ತು ಹಲವು ಪ್ರಭಾವಗಳಲ್ಲಿ ಮಿಂದಂತೆನ್ನಿಸುತ್ತದೆ. ಅವರ ಗದ್ಯಕೃತಿಗಳನ್ನು ಒಂದೊಂದಾಗಿ ಗಮನಿಸುತ್ತಾ ಹೋದರೆ, ಸ್ವಾಂತಿಕೆಯ ಅಭಿವ್ಯಕ್ತಿಗಾಗಿನ ಹೋರಾಟವೇ ಪ್ರತಿ ರಚನೆಗಳಲ್ಲಿಯೂ ಎದ್ದು ತೋರುತ್ತದೆ. ಅವರ " ನನ್ನದಲ್ಲದ್ದು" ಕೃತಿ ಅವರ ಅನ್ವೇಷಣಾ ಮಾರ್ಗದಲ್ಲಿ ಮುಂಚೂಣಿಯಲ್ಲಿದೆ ಎನ್ನಬಹುದಾಗಿದೆ.

"ಸದ್ಯದ ಸ್ಥಿತಿಯಲ್ಲಿ ಸಾಹಿತ್ಯ ನಿಂತ ನೀರು" ಎಂಬ ಹಳಹಳಿಕೆ ಕ್ಲೀಷೆಯಾಗುವಷ್ಟು ಕೇಳಿಬರುತ್ತಿರುವುದಾದರೂ, ಕಾದಂಬರಿ ಮಾತ್ರ ಬಹುದೊಡ್ಡ ಓದುಗ ಸಮುದಾಯವನ್ನು ಇನ್ನೂ ಉಳಿಸಿಕೊಂಡಿದೆ. ಕಾವ್ಯ-ನಾಟಕ ಕ್ಷೇತ್ರ ತನ್ನ ಅಭಿವ್ಯಕ್ತಿ ತಂತ್ರ ಮಾರ್ಗ ಶೈಲಿಗಳನ್ನ ಬದಲಿಸಿಕೊಂಡಂತೇ ಕಾದಂಬರಿ ಅಷ್ಟಾಗಿ ಬದಲಿಸಿಕೊಳ್ಳದೇ ಸಿದ್ಧ ಶೈಲಿ, ಸಿದ್ಧ ತಂತ್ರಗಳಲ್ಲಿಯೇ ಮುಂದುವರೆಯುತ್ತಿರುವುದು, ಓದುಗವರ್ಗದ ಸ್ಥಿರತೆಗೆ ಕಾರಣವಿರಬಹುದಾಗಿದೆ. ದೇವನೂರು,

ತೇಜಸ್ವಿ, ಸತ್ಯನಾರಾಯಣರಂಥ ಲೇಖಕರು ಭಿನ್ನ ಪ್ರಯೋಗ ಗೈದಿರುವರಾದರೂ, ಸಾಮಾನ್ಯ ಓದುಗನ ದೃಷ್ಟಿಗೆ ಅವುಗಳಿನ್ನೂ ನಿಲುಕಿಲ್ಲ.

ಮೊಗಸಾಲೆಯವರ 'ತೊಟ್ಟಿ' ಕಾದಂಬರಿ ಅವರ ಹನ್ನೊಂದನೆಯ ಕೃತಿ. ಕಥನಕ್ರಿಯೆಯ ಕಾಲ ಮತ್ತು ವಿಸ್ತಾರವನ್ನು ಗಮನಿಸಿದರೆ ಇದೊಂದು ನೀಳ್ಗತೆಯೆನ್ನಬಹುದು. ಕೇವಲ ಎರಡು ಮೂರು ದಿನಗಳಲ್ಲಿ, ಪ್ರಾರಂಭವಾಗಿ ಮುಗಿದುಹೋಗುವ ಪ್ರಸ್ತುತ ಕೃತಿ, ವಿಡಂಬನೆಯ ದೃಷ್ಟಿಯ ಮೂಲಕ, ಜಡ್ಡುಗಟ್ಟಿದ ಭಾರತೀಯ ಸಮಾಜ ಮತ್ತು ರಾಜಕೀಯ ವ್ಯವಸ್ಥೆಯನ್ನು ಲೇವಡಿಗೈಯುತ್ತದೆ. ಅಲಕ್ಷಿತ ಉಪಕರಣವಾದ ಸಾರ್ವಜನಿಕ ಕಸದ ತೊಟ್ಟಿ ಕೃತಿಯ ಕೇಂದ್ರಬಿಂದು. ಕಾಫ್ಕಾನ "ಮೆಟಮಾರ್ಫಸಿಸ್" (ರೂಪಾಂತರ) ಕೃತಿಯನ್ನು ನೆನಪಿಸುವಂಥ ಪ್ರಾರಂಭದ ಸನ್ನಿವೇಶ.

ಕಥಾನಾಯಕನಿಗೆ ನಿದ್ದೆಯನ್ನೂ ಹೊಡೆದೋಡಿಸುವಷ್ಟು ಭೀಕರ ದುರ್ವಾಸನೆ, ಮುಂಜಾವಿನಲ್ಲಿಯೇ ಎದುರಾಗುವ ಮೂಲಕ ತೊಟ್ಟಿ ತೆರೆದುಕೊಳ್ಳುತ್ತದೆ. ಸಾವಕಾಶ ಇಡೀ ಗಲ್ಲಿಯನ್ನು ವ್ಯಾಪಿಸಿ, ಅಸಹನೀಯ ವಾತಾವರಣವನ್ನು ಸೃಷ್ಟಿಸುತ್ತದೆ. (ಕಾಫ್ಕಾನ ಕೃತಿಯಲ್ಲಿ ನಾಯಕ ಮುಂಜಾನೆ ಎಚ್ಚರಗೊಳ್ಳುವಾಗ ದೊಡ್ಡ ಹಲ್ಲಿಯ ರೂಪ ಪಡೆದಿರುತ್ತಾನೆ.)

ಕಥೆಯ ಕೇಂದ್ರ ಪಾತ್ರ ಬಾಳಪ್ಪ. ಆತನೊಬ್ಬ ಅದೇ ಗಲ್ಲಿಯಲ್ಲಿ ಕಳೆದ ಹತ್ತು ವರ್ಷದಿಂದ ವಾಸವಾಗಿರುವ 'ದಿನಸುದ್ದಿ' ಪತ್ರಿಕೆಯ ವರದಿಗಾರ. ಆದರೆ ಆತನಿಗೆ ಅಕ್ಕ-ಪಕ್ಕದ ಮನೆಗಳ ಸಂಪರ್ಕವೂ ಸೊನ್ನೆ.ಇಡೀ ಗಲ್ಲಿಗೆ ಎರಗಿದ ದುರ್ವಾಸನೆಯಾದರೂ, ಬಾಳಪ್ಪ ಮತ್ತೊಬ್ಬರ ಮನೆ ಬಾಗಿಲು ತಟ್ಟಿ ಎಬ್ಬಿಸುತ್ತಾನೆ. ದುರ್ವಾಸನೆಯ ನಿವಾರಣೆಗೆ ನಡೆಯುವ ಹೋರಾಟ, ಸಂಸಾರದೊಳಗಿನ, ಸಮಾಜದಲ್ಲಿನ ಅಧಿಕಾರಶಾಹಿಯ, ರಾಜಕಾರಣದ ಕೊಳಕುಗಳನ್ನೆಲ್ಲ ಹೊರಹಾಕುತ್ತ ಸಾಗುತ್ತದೆ. ಕೊನೆಯಲ್ಲಿ ತೊಟ್ಟಿಯೊಳಗಿನ ದುರ್ವಾಸನೆ ಮಾಯವಾದರೂ, ಮನುಷ್ಯ ಸಮಾಜದೊಳಗಿನ ಕೊಳಕಿಗೆ ಮಾತ್ರ ಮುಕ್ತಿಯಿಲ್ಲವೆಂಬ ಆಶಯದೊಂದಿಗೆ ಕೃತಿ ಮುಕ್ತಾಯಗೊಳ್ಳುತ್ತದೆ.

ಕಾದಂಬರಿಯು ಒಟ್ಟೂ ಭಾರತೀಯ ಸಮಾಜದಲ್ಲಿ, ಸುಶಿಕ್ಷಿತ, ನಗರೀಕೃತ ಸಮುದಾಯವೊಂದನ್ನು ತನ್ನ ವಿಶ್ಲೇಷಣೆಗೆ ಆಯ್ದುಕೊಳ್ಳುತ್ತದೆ. ಪ್ರವೃತ್ತಿಯಲ್ಲಿ, ಈ ಸಮಾಜ ಕೊಳೆಗೇರಿ ಅಥವಾ ಗ್ರಾಮಾಂತರದ ಲಕ್ಷಣಕ್ಕಿಂತ ಭಿನ್ನವಾಗಿದ್ದರೂ ನಾಗರಿಕ ವೇಷದ ಅನಾಗರಿಕರಾಗಿ, ಸ್ವಂತ ಸಂಸಾರದ ಚಿಪ್ಪಿನೊಳಗೆ ಸುಖಿಸುವ ಸ್ವಾರ್ಥಿಗಳಾಗಿ ತೋರುತ್ತಾರೆ ಈ ಜನರು.

ಪತ್ರಕರ್ತ ಬಾಳಪ್ಪ ಪಕ್ಕದ ರಾಘವೇಂದ್ರರಾಯನೆಂಬ ವ್ಯಕ್ತಿಯ ಮನೆಬಾಗಿಲು ಬಡಿದು ಎಬ್ಬಿಸಿ ಬಡಾವಣೆಗೆ ಎರಗಿದ ಸಮಸ್ಯೆಯನ್ನು ನಿವೇದಿಸಲು ತೊಡಗಿದ ಕೂಡಲೇ ಬಾಗಿಲು ರಾಚುತ್ತ "ತನಗೆ ಈಗ ಬಿಡುವಿಲ್ಲ" ಎಂದು ಸಿಡುಕುತ್ತಾನೆ. ಶಿವನಂಜಯ್ಯ ಎಂಬ ಮತ್ತೊಬ್ಬ ಪರಿಚಿತನ ಬಾಗಿಲು ಬಡಿದಾಗ ಹೊರಬಂದ ಆತ, "ನಿಮಗೆಲ್ಲಾ ಈ ಬಡಾವಣೆಯಲ್ಲಿ ವಾಸನೆಯಿದೆ ಅಂದರೆ ನನಗೂ ಇದ್ದ ಹಾಗೆ. ನಿಮಗಿಲ್ಲವೋ, ನನಗೂ ಇಲ್ಲ. ಗೀತೆಯಲ್ಲಿ ಪರಮಾತ್ಮ ಹೇಳಿದ್ದಾನೆ. ಈ ವಾಸನಾ ಪ್ರಪಂಚದಲ್ಲಿ, ತಾವರೆಯ ಮೇಲಿನ ನೀರಿನ

ಹಾಗಿರಬೇಕು.ನನ್ನ ಜೀವನ ದೃಷ್ಟಿಯೂ ಅದೇ". ಎಂದು ಧರ್ಮಗುರುವಿನಂತೇ ಮಾತನಾಡಿದ ಆ ವ್ಯಕ್ತಿ, ಭಯಂಕರ ವಾಸನೆ ಮೂಗಿಗಡರಿದಾಗ, "ಅಸಾಧ್ಯವಪ್ಪಾ ಇದು! ಸ್ವಾಮಿ ರಾಘವೇಂದ್ರಾ ಕಾಪಾಡು" ಎಂದುಕೊಂಡ ಅವರು ದಢಾರನೆ ಕಿಟಕಿ ಬಾಗಿಲು ಮುಚ್ಚಿ ದೇವರ ಕೋಣೆಗೆ ನುಗ್ಗಿ ನಿಟ್ಟುಸಿರು ಬಿಟ್ಟು ಕುಳಿತರು.(ಪು.9)

ಕೃತಿ ಸ್ಥಗಿತ ಸಮಾಜದ ಲೇವಡಿಗೈಯುತ್ತಿರುವ ನಡುವೆ, ಪಾತ್ರಗಳ ಅಂತರಂಗದ ಬದುಕನ್ನ ಗಂಭೀರವಾಗಿ ದೃಷ್ಟಿಸುತ್ತದೆ. ಪತ್ರಕರ್ತ ಬಾಳಪ್ಪ, ಸುಪ್ರಸಿದ್ಧ ಸಾಹಿತಿಯೂ ಹೌದು. ಪ್ರತಿಷ್ಠಿತ ಸ್ಥಾನವೂ ಇದೆ. ಆದರೆ ಮಕ್ಕಳನ್ನು ಪಡೆಯಲಾಗದ ನಿಃಸಹಾಯಕ. ದುಃಖಿತ ಪತ್ನಿ, ರೋಗಪೀಡಿತ ತಾಯಿ ಇಬ್ಬರನ್ನೂ ನಿಭಾಯಿಸಬೇಕಾದ ಸ್ಥಿತಿ.

ರಾಘವೇಂದ್ರ ರಾಯನೂ ಅಷ್ಟೇ, ಹೃದಯ ರೋಗಿ. ಯಾರನ್ನೋ ಕಟ್ಟಿಕೊಂಡು ಓಡಿಹೋದ ಮಗಳು, ನಿವೃತ್ತ ಶಿಕ್ಷಕನ ನೋವು. ವಿಜ್ಞಾನಿಗಿರುವ ಅಲರ್ಜಿ. ಪೊಲೀಸ್ ಪೇದೆಗಳ ಪಡಿಪಾಟಲು. ಸಮಸ್ಯೆಯನ್ನು ಓಟಾಗಿ ನಗದೀಕರಿಸಲು ಹೆಣಗಾಡುವ ರಾಜಕಾರಣಿ, ಹೀಗೆ ಸಮಾಜದ ಒಳಹೊರಗುಗಳನ್ನೆಲ್ಲ ಸವರಿಕೊಳ್ಳುತ್ತ ಸಾಗುತ್ತದೆ ಕಾದಂಬರಿ.

ಪತ್ರಕರ್ತ ಅದೇ ಮೊದಲ ಬಾರಿಯೆಂಬಂತೆ, ಸಂಪೂರ್ಣ ಬೇಜವಾಬ್ದಾರಿ ಮತ್ತು ಸಾಮಾಜಿಕ ಪ್ರಜ್ಞಾರಹಿತ ಜಗತ್ತೊಂದನ್ನು ನೋಡುತ್ತಾನೆ. ಬಡಾವಣೆಯ ಸಮಸ್ಯೆಯನ್ನು ನಿವಾರಿಸಲು ಪ್ರವೇಶಿಸಿದರೆ, ಅದು ಅವನನ್ನೇ ಸುತ್ತಿಕೊಳ್ಳುತ್ತದೆ. ಸಮಸ್ಯೆ ಅದೆಷ್ಟು ಗೋಜಲಾಗುತ್ತದೆಯೆಂದರೆ, ಅದರ ಬೇರೆಲ್ಲಿದೆ, ಕೊಂಬೆ-ರೆಂಬೆಗಳೆಷ್ಟು ಚಾಚಿಕೊಂಡಿವೆ ಎಂಬುದನ್ನು ಕಂಡು ಹಿಡಿಯಲಾಗದಷ್ಟು ಗೊಂದಲ ಸೃಷ್ಟಿಸುತ್ತದೆ.

ಇಂಥ ಗೊಂದಲದ ಸಮಯದಲ್ಲಿ ರಾಜಕೀಯ ವ್ಯವಸ್ಥೆ ಮೂಗು ತೂರಿ, ನಿವಾರಣೆಯ ನೆಪದಲ್ಲಿ ನಿರಂತರವಾಗಿಸುವಲ್ಲಿ ಯಶ ಪಡೆಯುತ್ತದೆ.

ತೊಟ್ಟಿಯ ಸ್ಥಳಾಂತರದ ಉದ್ದೇಶಕ್ಕಾಗಿಯೇ ತೊಟ್ಟಿಯಿರಿಸಿದ ಸ್ಥಳದ ಪಕ್ಕ ದೇವಾಲಯ ನಿರ್ಮಿಸುವ ಯೋಜನೆ ರೂಪುಗೊಂಡಾಗ, ಸಮಾಜ ಘಾತಕ ಹಿನ್ನೆಲೆಯಲ್ಲಿ ಕಟ್ಟುತ್ತಿರುವ ದೇವಾಲಯವ ವಿರುದ್ಧ ಪ್ರತಿಭಟನೆ ಎದ್ದರೆ, ಅದಕ್ಕೆ ಪ್ರತಿಯಾಗಿ, "ಸನಾತನ ಧರ್ಮ ಸಂರಕ್ಷಣಾ ಸಮಿತಿ" ದೇವಾಲಯದ ಪರವಾಗಿ ಚಳುವಳಿ ಸಂಘಟಿಸತೊಡಗುತ್ತದೆ. ಈ ನಡುವೆ, ಸಮಸ್ಯೆಯ ನಿವಾರಣೆಗಾಗಿ ಹೋರಾಟಗೈದ ಪತ್ರಕರ್ತನ ಎತ್ತಂಗಡಿಯಾಗುತ್ತದೆ.

ತೊಟ್ಟಿಯ ದುರ್ವಾಸನೆ ತಾತ್ಕಾಲಿಕವಾಗಿ ನಿವಾರಣೆಯಾದವರೂ ಕೊಳೆತ ಸಮಾಜ ನಾರುತ್ತಲೇ ಇರುತ್ತದೆ.

ಇಂಥ ಸಾಮಾಜಿಕ ವಿಡಂಬನೆಯ ಕೃತಿಗಳು ಕನ್ನಡದಲ್ಲಿ ಅಪರೂಪವಲ್ಲದಿದ್ದರೂ ಮೊಗಸಾಲೆತನವಿರುವುದು ಅವರ ಚುರುಕು ಶೈಲಿಯ ಕಥೆಗಾರಿಕೆಯಲ್ಲಿ.

ಕೃತಿಯೊಳಗಿನ ಪ್ರಮುಖ ಘಟನೆಯಾದ ದೇವಾಲಯ ನಿರ್ಮಾಣ ಸಂಘರ್ಷ, ವೈಕುಂಠರಾಜುರವರ ಉದ್ಭವ ಕಾದಂಬರಿಯನ್ನು ಒಮ್ಮೆಲೇ ನೆನಪಿಸುತ್ತದೆಯಾದವರೂ. 'ತೊಟ್ಟಿ' ಕೃತಿಯ ಆಶಯದಲ್ಲಿ ಸಾವಯವ ಸಂಬಂಧ ಸ್ಥಾಪಿಸಿಕೊಂಡಿದೆ.

ಭಾಷೆಯ ಮೇಲಣ ಹಿಡಿತ, ಸುಂದರ ಪಾತ್ರ ಸೃಷ್ಟಿ, ಕವಿಯ ಸಂವೇದನಾಶೀಲತೆ, ಗಾಂಭೀರ್ಯ ಮತ್ತು ಹಾಸ್ಯಗಳಲ್ಲಿ ಆಯ ತಪ್ಪದ ಒಳನೋಟಗಳಂಥ ಗುಣಗಳನ್ನ ಕಂಡಾಗ ಮೊಗಸಾಲೆಯವರ ಸೃಜನಶೀಲ ಅನ್ವೇಷಣೆ ಪ್ರಕ್ರಿಯೆಯ ಬಗೆಗೆ ಗಾಢ ನಿರೀಕ್ಷೆ, ಕುತೂಹಲಗಳು ಒಮ್ಮೆಲೇ ಮೂಡುತ್ತದೆ.

ಶ್ರೀಯುತರ ಅರವತ್ತರ ಈ ಸಂದರ್ಭದಲ್ಲಿ ಹಾರ್ದಿಕವಾಗಿ ಇನ್ನೂ ಯಶ ಬಯಸುತ್ತಿದ್ದೇನೆ.

o



# ಕನ್ನಡದ ಲಗಾನ್ ಲೇಖಕ, ಡಾ.ನಾ.ಮೊಗಸಾಲೆ

ಸತೀಶ್ ಕುಲಕರ್ಣಿ

ಎಪ್ಪತ್ತರ ದಶಕದಲ್ಲಿ ನಾವೆಲ್ಲ ಸಾಹಿತ್ಯದ ಹುಚ್ಚು ಹಚ್ಚಿಕೊಂಡು ಹುಬ್ಬಳ್ಳಿ ಪಿ.ಸಿ.ಜಾಬಿನ ಸೈನ್ಸ್ ಕಾಲೇಜಿನಲ್ಲಿ ಓದುತ್ತಿದ್ದೆವು. ಈಗಿನ ಪ್ರಮುಖ ಕವಿಗಳಾದ ಸರಜೂ ಕಾಟಕರ, ಅಲ್ಲಮಪ್ರಭು ಬೆಟದೂರ, ಗವಿಸಿದ್ಧ ಬಳ್ಳಾರಿ ಮುಂತಾದವರು ನನ್ನ ಒಡನಾಡಿಗಳಾಗಿದ್ದರು. ನವ್ಯ ಸಾಹಿತ್ಯದ ಭರಾಟೆ ದಿನಗಳಾದ ಆ ದಶಕದಲ್ಲಿ ಚರ್ಚೆ ವಾಗ್ವಾದಗಳು ಇಡೀ ಕನ್ನಡ ಸಾಹಿತ್ಯದಲ್ಲಿ, ಒಂದು ರೀತಿಯಲ್ಲಿ ಏನೋ ಅದ್ಭುತ ನಡೆದಿದೆ ಎಂಬುವ ಉತ್ಸಾಹದ ವಾತಾವರಣವಿತ್ತು. ಲಂಕೇಶ, ಚಂಪಾ, ಗಿರಡ್ಡಿ, ಸಿದ್ಧಲಿಂಗಪಟ್ಟಣ ಶೆಟ್ಟಿ, ಡಾ.ಬುದ್ದಣ್ಣ ಹಿಂಗಮಿರೆ, ಕುಸನೂರ, ಶಾಂತರಸ ಇವರೆಲ್ಲ ಈ ನಾಡಿನ ಸಾಹಿತ್ಯ ಲೋಕದ ಮಹಾಭಾರತ ಯುದ್ಧ ಸೇನಾನಿಗಳಂತೆ ಕಾಣುವ ಕಾಲವದು.

ಪ್ರಜಾವಾಣಿ ಪತ್ರಿಕೆ, ಗೋಪಾಲಕೃಷ್ಣ ಅಡಿಗರ ಸಾಕ್ಷಿ ಪತ್ರಿಕೆ ಹಾಗೂ ಚಂಪಾ ಆ್ಯಂಡ್ ಕಂಪನಿಯ ಸಂಕ್ರಮಣ ಪತ್ರಿಕೆ, ಸಾಹಿತ್ಯ ಲೋಕದಲ್ಲಿ ಯಾರನ್ನಾದರೂ ಸಾಹಿತಿಗಳು ಕವಿಗಳು ಹೌದೋ ಅಲ್ಲೋ ಎಂದು ನಿರ್ಧರಿಸುವ ಮಾಂತ್ರಿಕ ಥರ್ಡ್ ಅಂಪೈರ್ ಆಗಿದ್ದವು. ನಾವೆಲ್ಲ ವಿಶೇಷವಾಗಿ ನವ್ಯ ಕವಿಗಳು ಅನ್ನಿಸಿಕೊಳ್ಳಬೇಕೆಂಬ ಹಂಬಲದಿಂದ ಒದ್ದಾಡುತ್ತಿದ್ದೆವು. ಯಾವ ಪತ್ರಿಕೆಯನ್ನೇ ನೋಡಲಿ ಅಲ್ಲಿ ಕೆಲವು ಕವಿತೆಗಳು ಖಾಯಂ ಆಗಿ ಪ್ರಿಂಟಾಗುತ್ತಿದ್ದವು. ಅವುಗಳ ಪೈಕಿ ಡಾ.ಮೊಗಸಾಲೆ, ಬಿ.ಆರ್.ಲಕ್ಷ್ಮಣರಾವ್, ಸುಬ್ರಾಯ ಚೊಕ್ಕಾಡಿ, ಜಯಸುದರ್ಶನ, ದೊಡ್ಡರಂಗೇಗೌಡ, ಎಮ್.ಎನ್.ಜಯಪ್ರಕಾಶ, ಹಾ.ಮೂ.ಪಟೇಲ, ಚನ್ನಣ್ಣ ವಾಲೀಕಾರ ಇವರ ಕವಿತೆ ಇರದ ಸಾಪ್ತಾಹಿಕವೇ ಇರುತ್ತಿರಲಿಲ್ಲ.

ಮೂವತ್ತು ವರ್ಷಗಳ ನಂತರ ಈ ಎಲ್ಲ ಹೆಸರುಗಳು ಈಗಲೂ ನಮಗೆಲ್ಲ ಆಕರ್ಷಕವೇ ಆಗಿವೆ. ಅವರೆಲ್ಲ ವಯಸ್ಸಾಗಿ ಹಿರಿಯರಾಗಿ ಅನೇಕ ಸ್ಥಾನ ಮಾನ ಪ್ರಶಸ್ತಿಗಳಿಗೆ ಪಾತ್ರರಾದರು ನಮ್ಮ ಹಳೆಯ ನೆನಪುಗಳಿಗೆ ಅವೇ ಬಣ್ಣ ಹೊತ್ತು ನಿಂತವರು. ಡಾ.ನಾ.ಮೊಗಸಾಲೆ ಈ ಪೈಕಿ ಒಬ್ಬರು.

ಕಾಂತಾವರದಂತಹ ಒಂದು ಪುಟ್ಟ ಹಳ್ಳಿಯಲ್ಲಿ ಇದ್ದುಕೊಂಡು ಗಮನಾರ್ಹವಾದ ಸಾಹಿತ್ಯ ರಚನೆ ಮಾಡುತ್ತಿರುವವರು ಮೊಗಸಾಲೆಯವರು ಎಂದಿಗೂ ಬೆಂಗಳೂರಿಗಿಂತ ಕಡಿಮೆ ಅಲ್ಲ ಅನ್ನುವಂತೆ ಬರೆದವರು. ಸತತ ಚಿಂತನೆ, ಅಧ್ಯಯನ, ಹೊಸ ಹೊಸ

ಪ್ರಯೋಗ ಇದೆಲ್ಲಕ್ಕಿಂತ ಹೆಚ್ಚಾಗಿ ಸಹೃದಯತೆಯ ಈ ಮನುಷ್ಯ ಕನ್ನಡ ಸಾಹಿತ್ಯ ಲೋಕದ 'ಲಗಾನ' ಲೇಖಕ. ತಮ್ಮ ವೈದ್ಯಕೀಯ ವೃತ್ತಿಯ ಅನುಭವಗಳನ್ನು ಮತ್ತೆ ಮತ್ತೆ ಕಾದಂಬರಿಗಳಲ್ಲಿ ತಂದವರು. ಕಾಂತಾವರ ಕನ್ನಡ ಸಂಘದ ಮೂಲಕ ಪ್ರತಿಷ್ಠಾನಗಳ ಹೊಸ ಮನ್ವಂತರವನ್ನು ಹುಟ್ಟುಹಾಕಿದವರು. ಈಗ ಊರೂರಿಗೊಂದು ಪ್ರತಿಷ್ಠಾನಗಳು ಹುಟ್ಟಿವರೂ ಮೊಗಸಾಲೆಯವರ ಕುಶಲತೆ ಮತ್ತು ಪ್ರೀತಿಗಳಲ್ಲಿ ಬೆಳೆದ ಅವರ ಪ್ರತಿಷ್ಠಾನವನ್ನು ನಾಡಿನ ಎಲ್ಲ ಪ್ರಮುಖ ಲೇಖಕರೂ ಮೆಚ್ಚಿಕೊಂಡಿದ್ದಾರೆ.

ಮೊಗಸಾಲೆಯವರು ಕವಿಯಾಗಿ ಹೆಸರು ಮಾಡುತ್ತ ಕ್ರಮೇಣ ಕಥೆ, ಕಾದಂಬರಿ, ವೈದ್ಯಕೀಯ, ವಿಚಾರ ಸಾಹಿತ್ಯ ಹೀಗೆ ಹಲವು ಕ್ಷೇತ್ರಗಳಲ್ಲಿ ತಮ್ಮ ಸೃಷ್ಟಿ ಕ್ರಿಯೆಯನ್ನು ವಿಸ್ತರಿಸಿಕೊಳ್ಳುತ್ತ ಈಗಲೂ 'ಪಂಥ'ದಂಥ ಉತ್ತಮ ಸಮಕಾಲೀನ ಸಮಸ್ಯೆಯ ಕಾದಂಬರಿ ಕೊಡುವಂತಹ ಮನಃಸ್ಥಿತಿಯನ್ನು ಕಾಯ್ದುಕೊಂಡವರು.

ಕಾವ್ಯದ ಸೂಕ್ತ ನೇಯ್ಗೆಯಲ್ಲಿ ತಮ್ಮ ಅನುಭವ ಕಟ್ಟಿದ ಮೊಗಸಾಲೆಯವರು, ತಾವುಂಡ ವೈದ್ಯಕೀಯ ವೃತ್ತಿಯ ಅನುಭವಗಳನ್ನು ದಟ್ಟಾಗಿ ಕಾದಂಬರಿಗಳಲ್ಲಿ ಕೊಡುತ್ತಿರುವುದನ್ನು ಬೇರೆ ಬೇರೆ ರೀತಿಯಲ್ಲಿ ನಾವು ವಿಶ್ಲೇಷಿಸಿ ನೋಡಬಹುದು. ಒಬ್ಬ ಸೃಜನಶೀಲ ಲೇಖಕ ಎಂಥ ಒಳ ತೀರದ ಗ್ರಾಮದಲ್ಲಿದ್ದರೂ ವಿಸ್ತೃತ ಓದು, ವೈಚಾರಿಕತೆಯಿಂದ ಅರ್ಥಪೂರ್ಣ ಸಾಹಿತ್ಯವನ್ನು ನೀಡಬಲ್ಲ ಎಂಬುದಕ್ಕೆ ಮೊಗಸಾಲೆಯವರು ಮಾದರಿಯ ಉದಾಹರಣೆ. ಯಂತ್ರ ಯುಗದ ತಂತ್ರದಲ್ಲಿ ಜಗತ್ತು ಅಂಗೈಯಲ್ಲಿ ಬರುವ ಈ ದಿನಗಳಲ್ಲಿ ಇದನ್ನೆಲ್ಲ ಗ್ರಹಿಸಿ ಕೃತಿಯಾಗಿಸುವ ಸತ್ವ ಡಾ.ನಾ.ಮೊಗಸಾಲೆ ಅವರಲ್ಲಿದೆ. ಇದರ ಜೊತೆ ಜೊತೆಯಲ್ಲಿ ಕನ್ನಡ ಸಾಹಿತ್ಯ ತೆಗೆದುಕೊಳ್ಳುತ್ತಿರುವ ತಿರುವುಗಳ ಸಂಗಡ ಅವರು ಬೆಳೆಯುತ್ತಿರುವದನ್ನು ಗಮನಿಸಬಹುದು. ಉಪಲಬ್ಧತೆಯ ಗ್ರಾಮೀಣ ಕೊರತೆಯ ನಡುವೆ ಸಾಹಿತ್ಯದ ಸೃಷ್ಟಿಕ್ರಿಯೆ ಮತ್ತು ಹುಡುಕಾಟವನ್ನು ಈಗಲೂ ಕಾಯ್ದುಕೊಂಡಿರುವ ಅಪರೂಪದ ಲೇಖಕ ಡಾ.ನಾ.ಮೊಗಸಾಲೆಯವರು.

ಕಾವ್ಯದಂತೆ ಕಾದಂಬರಿ ಮೊಗಸಾಲೆಯವರಿಗೆ ಒಲಿದ ಮತ್ತೊಂದು ಮುಖ್ಯ ಪ್ರಕಾರ. ಕನ್ನಡದಲ್ಲಿ ಕಾದಂಬರಿ ಬರೆಯುವವರ ಸಂಖ್ಯೆ ಬಹಳ ಕಡಿಮೆಯಾಗುತ್ತಿರುವ ಈ ದಿನಮಾನಗಳಲ್ಲಿ ಮೊಗಸಾಲೆಯವರು ನಿರಂತರವಾಗಿ ಕಾದಂಬರಿಗಳನ್ನು ಬರೆಯುತ್ತಿರುವುದು ಅವರು ಬರವಣಿಗೆಯಲ್ಲಿ ಇಟ್ಟ ಶ್ರದ್ಧೆಯ ಸಂಕೇತ. ದೊಡ್ಡ ಕ್ಯಾನವಾಸಿನಲ್ಲಿ ಅನುಭವಗಳನ್ನು ಹೇಳುವ ತಾಳ್ಮೆ, ಬರವಣಿಗೆಯ ಲಯವನ್ನು ಕಾಪಾಡಿಕೊಳ್ಳುವುದು ಹಾಗೂ ವಿಭಿನ್ನ ವಸ್ತು ವಿಷಯಗಳನ್ನು ಆಯ್ದುಕೊಂಡು ಬರೆಯುವುದು ಕಾದಂಬರಿಕಾರರಿಗೆ ದೊಡ್ಡ ಸವಾಲುಗಳು. ಕನ್ನಡದಲ್ಲಿ ಈ ಮೊದಲು ಪ್ರಮುಖವಾಗಿ ಬರೆಯುತ್ತಿರುವ ಕಾದಂಬರಿಕಾರರ ಸಂಗಡ ಕೆಲ ಹೊಸ ಹೆಸರುಗಳು ಕೆಲವೇ ಕೆಲವಾದರು ಇದ್ದರೂ ಗಟ್ಟಿ ಹೆಸರುಗಳು ಬರುತ್ತಿರುವುದು ಆಶಾದಾಯಕ ಸಂಗತಿ.

ಡಾ.ನಾ.ಮೊಗಸಾಲೆ ಅವರ ಕಾದಂಬರಿ 'ಪ್ರಕೃತಿ'. ಮನುಷ್ಯನ ಅಸ್ತಿತ್ವ ಮತ್ತು ಗುಣ ಪ್ರಮುಖಗಳ ಸಂಘರ್ಷದ ಕಾದಂಬರಿ. ತಮ್ಮ ವೃತ್ತಿ ಮೂಲದ ಅನುಭವದ ಹಿನ್ನೆಲೆಯಲ್ಲಿ

ಬರೆದ ಪ್ರಕೃತಿ ಕಾದಂಬರಿ ಸುಧಾ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟಗೊಂಡಾಗ ಕೆಲವು ಚರ್ಚೆ ನಡೆದು ಇನ್ನೂ ಹೆಚ್ಚಿನ ರೀತಿಯಲ್ಲಿ ಗಮನ ಸೆಳೆದದ್ದು ಈಗಲೂ ನೆನಪಿದೆ.

ಕಾದಂಬರಿ ಮುಖ್ಯ ಪಾತ್ರ ಶ್ರೀನಿವಾಸ ಕಾರಂತ, ಲೇಖಕ ಹಾಗೂ ಶೀಲಾ ಕಾರಂತ, ತ್ರಿಕೋನಗಳಲ್ಲಿ ಒಡಮುರಿದು ರೂಪುಗೊಳ್ಳುವ ಪ್ರಕೃತಿ ಸಹಜವಾಗಿ ಕೆಲವು ಕುತೂಹಲಗಳಿಗಾಗಿ ಆಕರ್ಷಿಸುತ್ತದೆ. ಬಹಳ ಮುಖ್ಯವಾಗಿ ಕಾದಂಬರಿಕಾರ ಮೊಗಸಾಲೆಯವರು ರೂಢಿಸಿಕೊಂಡಿರುವ ಆಕರ್ಷಕ ಶೈಲಿ ಇದರ ಪ್ರಮುಖ ಅಂಶ. ಘಟ್ಟದ ಕೆಳಗಿನ ಜೀವನ ವಿಧಾನ, ಪ್ರಾದೇಶಿಕ ಸ್ಥಳ ವಿವೇಚನೆ ಸಹಜವಾಗಿ ನಮ್ಮಂಥ ಉತ್ತರ ಕರ್ನಾಟಕದ ಓದುಗರನ್ನು ಸೆಳೆಯುತ್ತದೆ. ಇವೆಲ್ಲ ಒಂದು ಅರ್ಥದಲ್ಲಿ ಕಾದಂಬರಿಯ ಗಂಭೀರವಲ್ಲದ ವಿಮರ್ಶೆ ಅಲ್ಲದಿದ್ದರೂ ಒಬ್ಬ ಸಾಮಾನ್ಯ ಓದುಗ ಕಾದಂಬರಿ ಒಂದನ್ನು ಕೈಗೆತ್ತಿಕೊಂಡು ಓದಬೇಕೆಂಬ ಸಹಜ ಸೆಳೆತಗಳ ಕಾರಣಗಳಾಗಿವೆ.

ಶ್ರೀನಿವಾಸ ಕಾರಂತನ ನಿಗೂಢ ಬದುಕು, ವಾಸ್ತವವಾದಿ ಚಿಂತನಾ ಕ್ರಮದ ಜೀವನ ಹಾಗೂ ಒಂದು ಹಂತದ ಹತಾಶೆಗಳ ನಡುವೆಯೂ ಸಾಧಿಸಿಕೊಂಡ ದಾಟುವಿಕೆ ಪ್ರಕೃತಿ ಕಾದಂಬರಿಯಲ್ಲಿ ಇರುವ ದರ್ಶನ. ಅವರ ಮಗಳು ಶೀಲಾ ಕಾರಂತ ಹೆಚ್ಚು ಬಿಚ್ಚಿಕೊಳ್ಳದಿದ್ದರೂ ವಾಸ್ತವಗಳ ಬೇಡಿಕೆಯಲ್ಲಿ ಬದುಕುವ ಪ್ರಕೃತಿ ಸಹಜತೆ ನಾ.ಮೊಗಸಾಲೆ ಅವರಿಂದ ಚಿತ್ರಿತವಾಗಿದೆ. "ಬದುಕಿನ ನಿಗೂಢತೆಯೇ ಹೀಗೆ,ವಿಚಿತ್ರ; ಎಷ್ಟೋ ಸಲ ವಿಕೃತವೂ ಕೂಡಾ." ಎಂದು ಲೇಖಕರು ಒಂದು ಕಡೆಗೆ ಹೇಳುತ್ತಾರೆ.

ಶ್ರೀನಿವಾಸ ಕಾರಂತರು " ಪಾಟೀಲರೆ, ಇದು ಚರ್ಚೆಗೆ ಚರ್ಚೆ. ನಾನು ಹೇಳೋದಾದರೆ ಈ ಪ್ರಕೃತಿಯನ್ನು ಹೇಗೆ ನಾವು ಪೂರ್ತಿ ಅರ್ಥಮಾಡಿಕೊಳ್ಳಲು ಅಸಾಧ್ಯವೋ ಹಾಗೇ ಮನುಷ್ಯನನ್ನು ಕೂಡಾ. ಮನುಷ್ಯ ಇನ್ನೊಬ್ಬನನ್ನು ತಿಳಿಯುವದಿರಲಿ ತನ್ನನ್ನು ತಾನು ತಿಳಿಯುವುದು ಎಂದಿಗೂ ಸಾಧ್ಯವಿಲ್ಲ. ಎಷ್ಟೋ ಸಲ ಒಬ್ಬಾತ ಆದರ್ಶಕ್ಕೆ ಜೀವನ ಮೌಲ್ಯಕ್ಕೆ ವಿರುದ್ಧವಾಗಿ ಆತ ನಡೆದುಕೊಳ್ಳುವಂತಹ ಪ್ರಸಂಗ ಬರುತ್ತದೆ. ಆಗ ಆತ ಹಾಗೆ ನಡೆದುಕೊಳ್ಳುತ್ತಾನೆ". ಇಡೀ ಕಾದಂಬರಿಯ ಈ ತಾತ್ವಿಕ ಸೂತ್ರ ಕಾರಂತರ ಮೂಲಕ ಮೊಗಸಾಲೆಯವರು ಹೇಳುತ್ತಾರೆ.

ಶ್ರೀನಿವಾಸ ಕಾರಂತರು ದೈಹಿಕ ಶಕ್ತಿಕೊರತೆಯಿಂದ ಕಾಮ ಮೀರಲಾಗದೆ ಒಪ್ಪಿಕೊಳ್ಳುವ ಪ್ರಕೃತಿ ಸಹಜ ಹೆಂಡತಿಯ ಅನೈತಿಕ ಸಂಬಂಧ ತದ್ವಿರುದ್ಧವಾಗಿ ಸಾವಿನ ಬಾಗಿಲಲ್ಲಿರುವಾಗ ಮತ್ತೊಂದು ಮದುವೆಯಾಗಿ ನಡೆದುಕೊಳ್ಳುವ ರೀತಿ ಕಾದಂಬರಿಯಲ್ಲಿ ಕಾಣುತ್ತೇವೆ. ವಾಸ್ತವದೆದುರು ನಂಬುಗೆ, ಸಿದ್ಧಾಂತಗಳೆಲ್ಲ ವ್ಯಕ್ತಿ ವೈಚಿತ್ರ್ಯದ ಮನುಷ್ಯ ಗುಣವನ್ನು ಮೀರಲಾಗದ್ದು ಎಂದು ತೋರಿಸುತ್ತ ಅತ್ಯಂತ ನಿಗೂಢ ಪಾತ್ರ ಸೃಷ್ಟಿ. ಶೀಲಾ ಕಾರಂತ ಕೂಡಾ ತಂದೆಯಂತೆ ಎಲ್ಲವನ್ನು ಮಿಕ್ಕಿ ಸಮಯದ ಬೇಡಿಕೆ ಮತ್ತು ಕಾಮದ ವಿಸ್ಮೃತಿಯಲ್ಲಿ ಮುನ್ನಡೆಯುವುದು ಕಾದಂಬರಿಯಲ್ಲಿ ನಿಚ್ಚಳವಾಗಿದೆ.

ಲೇಖಕ ಮೊಗಸಾಲೆ ಕಾದಂಬರಿಯ ನಿರೂಪಕರಾಗಿ ಮನುಷ್ಯ ಗುಣ, ಜೀವನದ ವಾಸ್ತವ, ಕಠೋರತೆ ಹಾಗೂ ನಂಬುಗೆಯ ಪಲ್ಲಟಗಳನ್ನು ಮತ್ತೆ ಮತ್ತೆ ತೂಗಿ ನೋಡಿದ್ದಾರೆ.

ಯಾವ ನಿರ್ಣಯಕ್ಕೂ ಬಾರದೆ ಎಲ್ಲ ಪ್ರಮುಖ ಪಾತ್ರಗಳು ತಮ್ಮನ್ನು ಸರಿಯಾಗಿ ಚಿತ್ರಿಸಿಲ್ಲ ಎಂಬ ಅತೃಪ್ತಿ ವ್ಯಕ್ತಪಡಿಸುತ್ತಾರೆ. ಶೀಲಾ ಕಾರಂತ ಪಾತ್ರ " ನಾನು ನಿಮಗೆ ಸವಾಲಾದವಳು" ಎಂದು ಹೇಳುವ ಮೂಲಕ ಪ್ರಶ್ನಿಸುತ್ತದೆ. ಲೇಖಕ ಕೊನೆಗೂ ತನ್ನ ಕೃತಿಯ ವಿಮರ್ಶಕರಾಗಿ ಓದುಗರ ಮನಸ್ಸಿನ ಪ್ರಶ್ನೆಗಳನ್ನು ಗ್ರಹಿಸಿ ಒಟ್ಟಾರೆ ಚರ್ಚೆಗೆ ಬಿಡುತ್ತಾರೆ.

ಪ್ರಕೃತಿ ಕಿರು ಕಾದಂಬರಿ ಮನುಷ್ಯಗುಣಗಳ ಅನೇಕ ವಿಚಿತ್ರ ನಡಾವಳಿಗಳನ್ನು ಸಿದ್ಧಾಂತಗಳ ಆಚೆಗೂ ಇದ್ದು ನೋಡುವುದು ಕುತೂಹಲದ ರೀತಿಯಾಗಿದೆ. ಡಾ.ನಾ.ಮೊಗಸಾಲೆ ಹತ್ತು ಪ್ರಶ್ನೆಗಳ ಹುತ್ತಗಳನ್ನು ಎಂಬತ್ತರ ದಶಕದಲ್ಲಿ ಇಟ್ಟುಕೊಂಡು ಬರೆದಿರುವುದು ಇದನ್ನು ಓದಿದಾಗ ಗೋಚರವಾಗುವುದು. ಅನಂತರದ ಲೇಖಕರ ಬೆಳವಣಿಗೆ, ಬರವಣಿಗೆ ಸಮಗ್ರ ಕಾದಂಬರಿಗಳನ್ನಿಟ್ಟುಕೊಂಡು ವಿಶ್ಲೇಷಿಸಿದಾಗ ಮಾತ್ರ ಸಾಧ್ಯ.

o

# ಜಾಗತೀಕರಣದ 'ಅರ್ಥ'

ಕಾಶ್ಯಪ ಪರ್ಣಕುಟಿ

ಜಾಗತೀಕರಣವನ್ನು ನಮ್ಮ ದೇಶ ಒಪ್ಪಿಕೊಂಡ ಮೇಲೆ ಉಂಟಾಗಿರುವ ಬದಲಾವಣೆಗಳನ್ನು ಅರ್ಥೈಸಲು ಯತ್ನಿಸಿದ ಕೃತಿ ಮೊಗಸಾಲೆಯವರ 'ಅರ್ಥ' ಕಾದಂಬರಿ. ಕಾಯಾ ವಾಚಾ ಮನಸಾ ಎಂಬುದಕ್ಕೆ ತ್ರಿಕರಣ ಪೂರ್ವಕ ಎಂಬ ಪ್ರಾಚೀನವಾದ, ಅಷ್ಟೇ ಸಂಪನ್ನವಾದ ಅರ್ಥವಿದೆ. ಪ್ರಸ್ತುತದಲ್ಲಿ ನಮ್ಮೆಲ್ಲ ನಡೆ, ನುಡಿ ತ್ರಿಕರಣ ಪೂರ್ವಕವಾಗಿ ಇರಬೇಕಾಗಿದೆ. ಆದರೆ ಆ ಅರ್ಥದಲ್ಲಲ್ಲ. ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣ ಎಂಬ ತ್ರಿಕರಣಗಳಿಂದಾಗಿ.

ಜಾಗತೀಕರಣ ಎಂದರೆ ಏನೆಂದೇ ಯಾರಿಗೂ ಅರ್ಥವಾಗಿರಲಿಲ್ಲ. ಭಾರತೀಯ ಸಂಸ್ಕೃತಿಯ ಪರಮ ಧ್ಯೇಯವಾದ ವಿಶ್ವಮಾನವತೆಗೆ ಪರ್ಯಾಯವಾಗಿರಬೇಕೆಂದೂ, ಹತ್ತು ವರ್ಷಗಳ ಹಿಂದೆ ನಂಬಿದವರಿದ್ದರು. ಆದರಿಂದು ಜಾಗತೀಕರಣದ ದುಷ್ಟ ಪರಿಣಾಮಗಳೆಲ್ಲ ಅನುಭವಕ್ಕೆ ಬಂದ ಮೇಲೆ ಇದೊಂದು ಬಗೆಯ ವಸಾಹತೀಕರಣ ಎನ್ನುವುದು ತಿಳಿಯತೊಡಗಿದೆ. ಭಾರತೀಯ ಸಂಸ್ಕೃತಿಯ ಅನನ್ಯತೆಯನ್ನು ರಕ್ಷಿಸಿಕೊಳ್ಳುವುದು ಹೇಗೆಂದು ಎಲ್ಲ ಸಂಸ್ಕೃತಿವೇತ್ತರ ಚಿಂತೆಯಾಗಿದೆ. ಅಂಥ ಒಂದು ಅರ್ಥಪೂರ್ಣ ಚಿಂತನೆಯ ಪರಿಣಾಮವೇ ನಾ.ಮೊಗಸಾಲೆಯವರ 'ಅರ್ಥ' ಕಾದಂಬರಿ. ಮನುಷ್ಯ ಬದುಕಿಗೆ ಅರ್ಥ (ಹಣ) ಅತ್ಯಗತ್ಯ. ಆದರೆ ಅರ್ಥ ಸಾಧನೆಗಾಗಿ ನಮ್ಮ ಪರಂಪರೆ, ಸಂಸ್ಕೃತಿ, ಜೀವನ ಮೌಲ್ಯಗಳನ್ನು ಬಲಿಕೊಡುವುದು ಅರ್ಥಹೀನ ಎಂಬುದನ್ನು ಅನನ್ಯವಾಗಿ ತೋರಿಸುತ್ತಲೇ ಜಾಗತೀಕರಣದ ಪರಿಣಾಮವನ್ನು ಸ್ಪಷ್ಟವಾಗಿ ಅರ್ಥೈಸುತ್ತ ಕಾದಂಬರಿ ಸಾಗುವುದು ಅರ್ಥಪೂರ್ಣವಾಗಿದೆ.

'ಅರ್ಥ ಸಾಧನೆಯೇ ಅಭಿವೃದ್ಧಿ' ಎಂದು ಎಲ್ಲ ರೀತಿಯ ಉದ್ದಿಮೆಗಳನ್ನು ಆಹ್ವಾನಿಸಿಕೊಂಡು ಅವುಗಳ ಅಪಾಯಕಾರೀ ತ್ಯಾಜ್ಯಗಳಿಂದ ಇಡೀ ಪರಿಸರ ವಿನಾಶಹೊಂದಿ ನಮ್ಮ ಸಾಮಾಜಿಕ, ಸಾಂಸ್ಕೃತಿಕ ಬದುಕು ಉಧ್ವಸ್ಥಗೊಳ್ಳುತ್ತಿರುವುದನ್ನು ಸೂಕ್ಷ್ಮವಾಗಿ ಅಭಿವ್ಯಕ್ತಿಸಲಾಗಿದೆ.

ದ.ಕ. ಜಿಲ್ಲೆಯ ಬಂಟ್ವಾಳ ತಾಲೂಕಿನ ಪುಟ್ಟ ಹಳ್ಳಿ ಖಜಾನೆ. ಅಡಿಕೆ ಕೃಷಿಯನ್ನು ಪರಂಪರೆಯಿಂದ ಮಾಡಿಕೊಂಡು ಬಂದ ತಿಮ್ಮಪ್ಪಯ್ಯನ ಕುಟುಂಬ. ಅಲ್ಲಿಯೇ ಶಂಭಯ್ಯನ ಕುಟುಂಬವೂ ಇದೆ. ತಿಮ್ಮಪ್ಪಯ್ಯನ ಒಬ್ಬನೇ ಮಗ ಸೂರ್ಯ ನಾರಾಯಣ, ಸಾಫ್ಟವೇರ್

ಇಂಜನಿಯರ್ ಆಗಿ ಅಮೇರಿಕಾದಲ್ಲಿ ನೆಲೆಸಿದ್ದಾನೆ. ಅವನು ಹಾಗೂ ಅವನ ಹೆಂಡತಿ ಅಮೇರಿಕಾದ ಬದುಕಿಗೆ ಮಾರು ಹೋದವರು. ಇಂಡಿಯಾ ಎಂದರೇ ಅಲರ್ಜಿ. ತಿಮ್ಮಪ್ಪಯ್ಯನ ತಂಗಿ ಪುಟ್ಟಕ್ಕ ಮದುವೆಯಾಗಿಯೂ ವಿಧವೆಯಂತೆ ಬದುಕುತ್ತ ಅಣ್ಣನ ಜೊತೆಗಿದ್ದಾಳೆ. ಈ ಇಬ್ಬರು ವೃದ್ಧರೂ ತಮ್ಮ ಆಸ್ತಿಯನ್ನು ಮಾರಿ ಎಲ್ಲಾದರೂ ಹಾಯಾಗಿ ಬದುಕಲು ಯೋಚಿಸುತ್ತಾರೆ. ಅಲ್ಲಿಂದ ಕತೆ ಅನಾವರಣಗೊಳ್ಳುತ್ತ ಸಾಗುತ್ತದೆ. ಶಂಭಯ್ಯನಿಗೆ ಮಕ್ಕಳಾಗಿರಲಿಲ್ಲ. ಅವನ ಹೆಂಡತಿ ತಿಮ್ಮಪ್ಪಯ್ಯನಿಂದಲೇ ಗರ್ಭಧರಿಸಿ ಪಡೆದ ಮಗ ಸುರೇಶ. ಅವನೂ ಅಮೇರಿಕಾದಲ್ಲಿದ್ದು, ಉದ್ಯೋಗ ತ್ಯಜಿಸಿ ಮನೆಗೇ ಮರಳಿ ಕೃಷಿಯಲ್ಲಿ ತೊಡಗಿಕೊಂಡವ. ಅಮೇರಿಕಾದಲ್ಲಿ ಪೆಂಟಗಾನ ಮೇಲೆ ವೈಮಾನಿಕ ಧಾಳಿ ನಡೆದಾಗ ಅಲ್ಲಿಯೇ ಉದ್ಯೋಗದಲ್ಲಿದ್ದ ಸೂರ್ಯ ತಂದೆಗೆ ಆಸ್ತಿ ಮಾರು ಎಂದು ದೂರವಾಣಿಯಲ್ಲಿ ಮಾತನಾಡಲು ಯತ್ನಿಸಿದ್ದರಿಂದ ಕಚೇರಿಗೆ ಹೋಗುವುದು ತಡವಾಗಿ ಬದುಕಿ ಉಳಿಯುತ್ತಾನೆ. ಕೂಡಲೇ ಕೆಲಸ ಬಿಟ್ಟು ಊರಿಗೆ ಮರಳುತ್ತಾನೆ. ಇದು ಕಾದಂಬರಿಯ ಒಟ್ಟು ಕತೆ.

ದ.ಕ ಜಿಲ್ಲೆಯ ಪರಿಸರದಲ್ಲಿ ಕತೆ ಸರಳವಾಗಿ, ಅಷ್ಟೇ ಕುತೂಹಲಕರವಾಗಿ ಸಾಗುತ್ತದೆ. ಪಾತ್ರ ಸೃಷ್ಟಿ ಚೆನ್ನಾಗಿದೆ. ಆದರೆ ತಿಮ್ಮಪ್ಪಯ್ಯನ ವಯಸ್ಸು ತೀರ ಹೆಚ್ಚು ಎನಿಸುತ್ತದೆ. ಅವನ ಮಗನಿಗೆ 50 ದಾಟಬೇಕು. ಮೊಮ್ಮಗನಿಗೆ ಇಪ್ಪತ್ತಾದರೂ ಆಗಬೇಕು. ಆದರೆ ಕತೆಯಲ್ಲಿ ತೀರ ಕಡಿಮೆಯಾಗಿದೆ. ಪುಟ 59ರಲ್ಲಿ ಕಿಟ್ಟಪ್ಪನ ಎರಡನೇ ಮಗ ನಿರಂಜನ ಎಂದಿದ್ದು ಮುಂದಿನ ಪ್ಯಾರಾದಲ್ಲೇ ಕಿಟ್ಟಪ್ಪನ ದೊಡ್ಡ ಮಗ ನಿರಂಜನ ಎಂದೂ ಬಂದಿದೆ. ಈ ರೀತಿಯ ದೋಷಗಳು ಪಾತ್ರಗಳ ವಯಸ್ಸಿನ ಕುರಿತಾದ ಸಂದೇಹಗಳು ಓದುಗನ ಮುಖಕ್ಕೆ ರಾಚುತ್ತವೆ. ತಿಮ್ಮಪ್ಪಯ್ಯ ಶಾನುಭೋಗನಾಗಿ ಅಪ್ಪನಿಂದ ಅಧಿಕಾರ ಪಡೆದಾಗ 25 ವರ್ಷದ ತರುಣ, ಓದಿದವ, ಯಕ್ಷಗಾನ ಅರ್ಥಧಾರಿ ಕೂಡ. ಬ್ರಿಟಿಷರ ಆಡಳಿತದಲ್ಲಿ ಶಾನುಭೋಗರಿಗೆ ಒದಗಿದ ಕಷ್ಟಗಳ ಉಲ್ಲೇಖವಿದೆ. ಆದರೆ ಸ್ವಾತಂತ್ರ್ಯ ಸಮರಕ್ಕೆ ಆತ ಏಕೆ ಇಳಿಯಲಿಲ್ಲ ಎಂಬುದೂ ಕಾಡುತ್ತದೆ. ಇದರಿಂದಾಗಿ ಪಾತ್ರ ಸೋಲುತ್ತದೆ.

ಪುಟ್ಟಕ್ಕನ ಪಾತ್ರ ಸೊಗಸಾಗಿದೆ. ಕಾರಂತರ ಮೂಕಜ್ಜಿಯನ್ನು ನೆನಪಿಸುವ ಪಾತ್ರವಿದು. ಆಕೆಯ ತಾತ್ವಿಕ ಬದ್ಧತೆ, ಸೂಕ್ಷ್ಮ ಸಂವೇದನೆ ವಿಶಿಷ್ಟವಾಗಿದ್ದು ಓದುಗನಿಗೆ ಖುಷಿಕೊಡುತ್ತದೆ.

ಇಡೀ ಕತೆಯನ್ನು ಜಾಗತೀಕರಣಕ್ಕೆ ಪ್ರತಿಭಟನೆಯಾಗಿ ಬರೆಯಬೇಕೆಂಬುದು ಸಂಕಲ್ಪವೇ ಆಗಿರುವುದರಿಂದ ಪಾತ್ರಗಳ ಕಲ್ಪನೆಯಲ್ಲಿ ಕೆಲವು ದೋಷಗಳಾಗಿವೆಯಾದರೂ ಜಾಗತೀಕರಣದ ದುಷ್ಪರಿಣಾಮಗಳನ್ನು ಬಿಂಬಿಸುವಲ್ಲಿ ಮೊಗಸಾಲೆ ಯಶಸ್ವಿಯಾಗಿದ್ದಾರೆ.

"ಯಾವುದೇ ಜನಪದ ಕಲೆ, ಕಸುಬು ಈಗ ಯಾವುದೇ ಜಾತಿಯ,ವರ್ಗದ್ದಾಗಿ ಉಳಿಯಲಿಲ್ಲ..... ಎಲ್ಲ ಸಂಸ್ಕೃತಿಗಳೂ ಸೇರಿಹೋಗಿವೆ"(ಪು.77) ಎಂದು ಹೇಳುವಾಗಲೂ ವೈಚಾರಿಕ ವಿಶ್ಲೇಷಣೆ ಇನ್ನೂ ಆಳವಾಗಿ ಬಂದಿದ್ದರೆ ಚೆನ್ನಾಗಿತ್ತು. "ಪರಿಸರ ಇಲಾಖೆಯಿಂದ ನೋ ಅಬ್ಜಕ್ಷನ್ ಸರ್ಟಿಫಿಕೇಟ್ ಪಡೆಯಲು ಉಳಿದ ರಾಜ್ಯಗಳಿಗಿಂತ ಕರ್ನಾಟಕದಲ್ಲಿ ಸುಲಭ"(ಪು:83) ಎಂದು ಸಿಂಗ್ ಹೇಳುವಾಗ ರಾಜ್ಯದ ಪ್ರಸ್ತುತ ಸ್ಥಿತಿ ಚೆನ್ನಾಗಿ ಮೂಡಿಬಂದಿದೆ.

ತಿಮ್ಮಪ್ಪಯ್ಯ, ದಯಾನಂದ ಪೈ ಹಾಗೂ ಸುರೇಶ್ ರವರ ಸಂಭಾಷಣೆಯಲ್ಲಿ

ಜಾಗತೀಕರಣದ ಕುರಿತ ವಿಶ್ಲೇಷಣೆ, ಪರಿಣಾಮಗಳು ಮುಂದೆ ಹೀಗಾಗುತ್ತವೆಂದು ಕಲ್ಪಿಸುವುದು ಚೆನ್ನಾಗಿಯೇ ಬಂದಿದೆ. ಆದರೆ ಅದು ಇನ್ನೂ ಗಾಢವಾಗಿ ಸಾಮಾನ್ಯ ಓದುಗನಿಗೆ ತಟ್ಟುವಂತೆ ಆಗಬೇಕಿತ್ತು. ಸ್ವಲ್ಪ ಪೇಲವವಾಗಿ, ಜಾಳು ಜಾಳಾಗಿ ಬರುತ್ತದೆ. ಭಾಷಾ ದಾಳಿಯಿಂದ ಎಲ್ಲವೂ ಸುಲಭವಾಗುತ್ತದೆ ಎಂಬ ಸತ್ಯವನ್ನು ಕಾದಂಬರಿಯಲ್ಲಿ ಅತ್ಯಂತ ಗಟ್ಟಿಯಾಗಿ ನಿರೂಪಿತವಾಗಿದೆ. ಪರಿಸರ ನಾಶದ ಕುರಿತು ಸೌಮ್ಯ ಪ್ರತಿಭಟನೆ ಕಾದಂಬರಿಯಲ್ಲಿದ್ದರೂ ಒಂದು ಕಾಲಘಟ್ಟದಲ್ಲಿ ಸಹಜವಾಗಿ ಬದಲಾಗುವ ಕುಟುಂಬ ವ್ಯವಸ್ಥೆಯನ್ನು ಯಶಸ್ವಿಯಾಗಿ ದಾಖಲಿಸುತ್ತದೆ.

ಜಾಗತೀಕರಣದಿಂದಾಗಿ ಸಂಸ್ಕೃತಿ ಹೇಗೆ ನಾಶವಾಗುತ್ತದೆ? ಇದೊಂದು ರೀತಿಯ ವಸಾಹತುಶಾಹಿ, ಇಡೀ ಜಗತ್ತನ್ನು ಅಮೇರಿಕೀಕರಣ ಮಾಡುವುದೇ ಉದ್ದೇಶ ಎನ್ನುವುದನ್ನು ಅರ್ಥಪೂರ್ಣವಾಗಿ ವಿವರಿಸುವ ಕಾದಂಬರಿ, ಅರ್ಥ ಸಾಧನೆಗಾಗಿ ನಾವು ಹೇಗೆ ನಮ್ಮ ಮಣ್ಣಿನ ಗುಣವನ್ನೇ ಕಳೆದುಕೊಂಡು ಪರಂಪರೆ ಕುರಿತು ಅವಜ್ಞೆ ಬೆಳೆಸಿಕೊಳ್ಳುತ್ತೇವೆ ಎಂಬುದನ್ನೂ ಸ್ಪಷ್ಟವಾಗಿ ಹೇಳುತ್ತದೆ. ಅರ್ಥ(ಹಣ) ಸಾಧನೆಗಾಗಿ ಅನರ್ಥಗಳನ್ನೇ ನಡೆಸುತ್ತಿರುವ ಇಂದಿನ ಯುವಜನಾಂಗಕ್ಕೆ ಜಾಗತೀಕರಣವನ್ನು ನಿಖರವಾಗಿ ಅರ್ಥೈಸಿ ಹೇಳುತ್ತದೆ.

ವೈಯಕ್ತಿಕ ಬದುಕನ್ನು ವಿಶ್ಲೇಷಿಸುತ್ತ ಸಾರ್ವಕಾಲಿಕ ಮೌಲ್ಯಗಳನ್ನು ಕಾಣಲು ಕಾದಂಬರಿ ಹುಡುಕಾಟ ನಡೆಸುತ್ತದೆ. ಅಮೇರಿಕಾದಲ್ಲಿದ್ದು ಅರ್ಥಸಾಧನೆಯೇ ಜೀವನದ ಮೌಲ್ಯ ಎಂದುಕೊಂಡ ಸೂರ್ಯ ಹಾಗೂ ಅವನ ಹೆಂಡತಿ, ಅರ್ಥ ಸಾಧನೆಗಾಗಿ ರಿಯಲ್ ಎಸ್ಟೇಟ್ ಬಿಸಿನೆಸ್ ನಡೆಸುತ್ತ ಪರಿಸರ ನಾಶಮಾಡುವ ಫ್ಯಾಕ್ಟರಿ ಹಾಕಲು ತಿಮ್ಮಪ್ಪಯ್ಯನವರ ಆಸ್ತಿಯನ್ನು ಯಾವುದೋ ಕಂಪನಿಗೆ ಕೊಡಿಸಲು ಯತ್ನಿಸುವ ನಾಣಪ್ಪಯ್ಯ, ಅಮೇರಿಕಾದಲ್ಲಿನ ಉದ್ಯೋಗವನ್ನೇ ತ್ಯಜಿಸಿ ಊರಿಗೆ ಬಂದು ಎರಡೆಕರೆ ತೋಟದಲ್ಲೆ ಬದುಕಿನ ಅರ್ಥ ಕಾಣಲು ಯತ್ನಿಸುವ ಸುರೇಶ, ಎಲ್ಲವನ್ನೂ ಮೌನವಾಗೇ ಅನುಭವಿಸುತ್ತ ಅಂತರಂಗವನ್ನೂ ಯಾರಲ್ಲೂ ಬಿಚ್ಚಿಡದೆ ನಿರ್ಲಿಪ್ತವಾಗಿ ಬದುಕುತ್ತಲೇ ಪ್ರತಿಯೊಂದು ಘಟನೆಯಲ್ಲಿ ತನ್ನ ಅಸ್ತಿತ್ವವನ್ನು ಕಾಣಿಸುವ ಪುಟ್ಟಕ್ಕ, ಅನಿರೀಕ್ಷಿತವಾಗಿ ಪರಿಸರವಾದಿಯಾಗಿ ಅದನ್ನೇ ಬದುಕಿಗೆ ಬದ್ಧತೆಯಾಗಿಸಿಕೊಂಡ ದಯಾನಂದ ಪೈ, ಮನೆಯ ಒಂದು ಭಾಗವೇ ಆಗಿ ಸಂಸ್ಕೃತಿಯ ಕುಡಿಯಾಗಿ ಆಸ್ತಿ ಮಾರಾಟಕ್ಕೆ ತನ್ನ ವಿರೋಧವನ್ನು ಸೌಮ್ಯವಾಗೇ ಕಾಣಿಸುವ ಮನೆಯಾಳು ಹಸನಬ್ಬ, ಸಂತಾನಬೇಕೆಂದೇ ಬಯಸಿ ತಿಮ್ಮಪ್ಪಯ್ಯನಿಂದ ಒಮ್ಮೆ ಪಡೆದ ಮೇಲೆ ತಾನು ಕುಂತಿಯಾಗಿ ಸಂತಾನ ಪಡೆದೆನೇ ವಿನಃ ಸೂಳೆಯಾಗಲ್ಲ ಎನ್ನುವ, ಕೊನೆಗೆಂದೂ ಲಕ್ಷ್ಮಣರೇಖೆ ದಾಟದ ಮುಕಾಂಬಿ, ಅಪ್ಪನ ಭಯದಿಂದ ಹೆಂಡತಿಯನ್ನು ಬಿಟ್ಟು ಅಪ್ಪನ ಸಾವಿನ ನಂತರ ಅವಳನ್ನು ಪಡೆಯಲು ಯತ್ನಿಸುವ ಸಹೃದಯೀ ಕಿಟ್ಟಪ್ಪ ಹೀಗೆ ಎಲ್ಲ ಪಾತ್ರಗಳು ಸುಸ್ಪಷ್ಟವಾಗಿ ಮೈದಳೆದಿವೆ ಎನ್ನಲೇಬೇಕು.

ಅಂತಿಮವಾಗಿ–ಅಮೇರಿಕಾದಲ್ಲಿ ವರ್ಲ್ಡ್ ಟ್ರೇಡ್ ಸೆಂಟರ್, ಪೆಂಟಗಾನ್ ಮೇಲೆ ವೈಮಾನಿಕ ದಾಳಿಯಾಗಿ ಕಟ್ಟಡಕ್ಕೆ ಬೆಂಕಿ ಬಿದ್ದಾಗ ಅಲ್ಲಿಯೇ ಉದ್ಯೋಗಿಯಾಗಿದ್ದ ಸೂರ್ಯ ಆಸ್ತಿ ಮಾರಾಟ ಮಾಡೆಂದು ಅಪ್ಪನಿಗೆ ದೂರವಾಣಿಯ ಮೂಲಕ ಸಂಪರ್ಕಿಸಿ ತಿಳಿಸಲು

ಯತ್ನಿಸುವುದರಿಂದಾಗಿ ಕಚೇರಿಗೆ ಹೋಗಲು ತಡವಾಗಿ ಬದುಕುಳಿದ. ಕೂಡಲೇ ಅಲ್ಲಿಂದ ಗಂಟುಮೂಟೆ ಕಟ್ಟಿಕೊಂಡು ಮನೆಗೆ ಮರಳಿ ಇಲ್ಲಿಯೇ ಉಳಿಯಲು ಬಯಸುವುದು ಕೂಡ ಸುಂದರ ನಿರೂಪಣೆಯಾಗಿದೆ. ಕಾದಂಬರಿಯ ಅಂತ್ಯ ಪೂರ್ವ ನಿಯೋಜಿತವಾಗಿದ್ದು, ಅವಸರದಲ್ಲಿ ಮುಗಿಸಿದಂತಾಗಿರುವುದನ್ನೂ ಗುರುತಿಸಲೇಬೇಕು.

ಮೊಗಸಾಲೆಯವರ ನಿರೂಪಣೆ ತುಂಬ ಆಪ್ತವಾಗಿರುವುದರಿಂದ ಓದುಗನಿಗೆ ಖುಷಿ ಕೊಡುತ್ತದೆ. ವಸ್ತುವಿನ ಆಯ್ಕೆ ಕೂಡ. ಮನಸ್ಸಿನಲ್ಲಿ ಕತೆಯ ಹಂದರ ನಿಖರವಾಗಿ ಸೃಷ್ಟಿಯಾಗುವ ಮೊದಲೇ ಮೊಗಸಾಲೆ ಕಾದಂಬರಿ ಬರೆದು ಮುಗಿಸಿದಂತೆನಿಸುತ್ತದೆ. ಹಠಕ್ಕೆ ಬಿದ್ದು ಬರೆದಂತೆ ಕಾದಂಬರಿ ಮುಗಿಸುವ ತವಕದಲ್ಲಿ ಒಳಗಿರುವುದನ್ನು ಹೊರಹಾಕಲು ಯತ್ನ ಮಾಡಿದಂತೆನಿಸುತ್ತದೆ.ಇದೇ ವಸ್ತುವನ್ನು ಇನ್ನೂ ಆಳವಾಗಿ, ವಿಸ್ತೃತವಾಗಿ ವಿಶ್ಲೇಷಿಸಲು ಸಾಧ್ಯವಿತ್ತು. ಮೊಗಸಾಲೆಯವರು ಯಾಕೆ ಗಡಿಬಿಡಿ ಮಾಡಿ, ಮುಗಿಸಿದರೋ ಎನಿಸುತ್ತದೆ.

ತಿಮ್ಮಪ್ಪಯ್ಯ, ಪುಟ್ಟಕ್ಕ, ಸುರೇಶ ಮೊದಲಾದ ಪಾತ್ರಗಳ ಮೂಲಕ ಸಮಷ್ಟಿ ಹಿತವನ್ನು ವಿಶ್ಲೇಷಿಸುವಾಗ ಕಾದಂಬರಿ ಗೆಲ್ಲುತ್ತದೆ. ಅದೇ ಜಿಲ್ಲೆಯ ಪರಿಸರ, ಜಾಗತೀಕರಣಗಳ ಕುರಿತು ಸಮಷ್ಟಿಯಾಗಿ ವಿಶ್ಲೇಷಿಸುವಾಗ ಕಾದಂಬರಿ ಸೋಲುತ್ತದೆ. ವ್ಯಕ್ತಿನಿಷ್ಠ ಅನುಭವಗಳನ್ನು ವಿವರಿಸುವಾಗ ಕಾದಂಬರಿ ತುಂಬ ಕಳೆಕಟ್ಟುತ್ತದೆ. ಪ್ರಾಯಶಃ ಮೊಗಸಾಲೆಯವರು ಜನಪ್ರಿಯ ವೈದ್ಯರಾಗಿರುವುದೇ ಕಾರಣವಾಗಿರಬಹುದು. ಆದರೆ ಬನಾರಿ ಬೆಟ್ಟವನ್ನು ಯಾವುದೋ ಬಹುರಾಷ್ಟ್ರೀಯ ಕಂಪನಿಗೆ ಕೊಟ್ಟರೆ ಏನಾಗಬಹುದೆಂದು ವಿವರಿಸುವಾಗ ಮೊಗಸಾಲೆ ಸೋಲುತ್ತಾರೆ. ಇದು ಮೊಗಸಾಲೆಯವರ ದೌರ್ಬಲ್ಯವೂ ಹೌದು, ಸಾಬಲ್ಯವೂ ಹೌದು.

ಒಟ್ಟಾರೆ ಜನಪ್ರಿಯ ವೈದ್ಯರಾಗಿ ಕಗ್ಗಾಡಿನ ಹಳ್ಳಿಯಲ್ಲಿ ಬದುಕಿನ ಅರ್ಥವನ್ನು ಕಾಣುತ್ತ ಸಾಹಿತ್ಯ, ಸಾಂಸ್ಕೃತಿಕ ಸಂಘಟನೆಯಲ್ಲಿ ಮುಂಚೂಣಿಯಲ್ಲಿದ್ದು ಹೋರಾಡುವ ಮೊಗಸಾಲೆಯವರ ಸಾಹಿತ್ಯದ ಪ್ರತಿಭೆ ಕೂಡ ಅನನ್ಯವಾದದ್ದು. ಅರವತ್ತರ ಕಾಲಘಟ್ಟದಲ್ಲಿ ಒಮ್ಮೆ ಹಿಂದಿರುಗಿ ನೋಡಿ ಶತಮಾನದೆಡೆಗೆ ಸಾಗಲಿ ಎಂದು ಹಾರೈಸುತ್ತ ಇವರ ಸಾಹಿತ್ಯ ಕೃಷಿ ಚಿರಂತನವಾಗಿ ಸಾಗಲಿ ಎಂದು ಆಶಿಸುತ್ತೇನೆ.

O

# ರಾಜಕೀಯ ವಸ್ತು ಹೊಂದಿರುವ ಕಾದಂಬರಿ - ಉಪ್ಪು.

ಡಾ॥ ಬಾಳಾ ಸಾಹೇಬ ಲೋಕಾಪುರ

ಕನ್ನಡದಲ್ಲಿ ಪ್ರಗತಿಶೀಲ ಚಳುವಳಿಯ ಮುಂಚೂಣಿಯಲ್ಲಿ ಕಾದಂಬರಿಕಾರರಾದ ಅನಕೃ, ನಿರಂಜನ, ಬಸವರಾಜ ಕಟ್ಟಿಮನಿ ಮುಂತಾದವರು ಒಂದು ಸಿದ್ಧಾಂತವನ್ನು ಅಥವಾ ಒಂದು ವಿಚಾರಧಾರೆಯನ್ನು ಪ್ರಮುಖ ಹಿನ್ನೆಲೆಯಾಗಿ ಇಟ್ಟುಕೊಂಡು ಕಾದಂಬರಿಗಳನ್ನು ರಚಿಸುತ್ತಿದ್ದ ಕಾಲ ಒಂದಿತ್ತು. ಪ್ರಗತಿಶೀಲ ಚಳುವಳಿ ಮುಗಿದು ಕನ್ನಡಕ್ಕೆ ನವ್ಯ, ಬಂಡಾಯ, ದಲಿತ ಮಾರ್ಗಗಳು ಬಂದ ಹೊತ್ತಿಗೆ ಕನ್ನಡದ ಕಾದಂಬರಿ ವಿನ್ಯಾಸ ಬದಲಾಗಿ ಹೋಯಿತು. ಅಂತಹ ಹೊತ್ತಿನಲ್ಲೆ ಡಾ.ನಾ.ಮೊಗಸಾಲೆಯುವರು ರಾಜಕೀಯು ವಸ್ತುವನ್ನು ಮುಖ್ಯವಾಗಿಟ್ಟುಕೊಂಡು 'ಉಪ್ಪು' ಕಾದಂಬರಿ ಬರೆದರು. ನವೋದಯ, ಪ್ರಗತಿಶೀಲ ಘಾಟಿಗೆ ಹೊರಳಿದ ಈ ಕಾದಂಬರಿಯ ರಚನಾ ಶೈಲಿ ಒಂದು ರಾಜಕೀಯ ಪಕ್ಷದ ಏಳು ಬೀಳು ಹಾಗೂ ಅಂತಹ ಪಕ್ಷವಲ್ಲಿ ಇದ್ದ ವ್ಯಕ್ತಿಯ ಉತ್ಥಾನ, ಅವಸಾನಗಳನ್ನು ಚಿತ್ರಿಸಲು ಮಡಿದಿದೆ.

ಕಾದಂಬರಿಯಲ್ಲಿಯ ಭೌಗೋಳಿಕ ಹರವು ಇಡೀ ಭಾರತವನ್ನೇ ಆಕ್ರಮಿಸಿಕೊಂಡಿದೆ. ಕೇರಳ, ಮುಂಬೈ, ಮಧ್ಯ ಪ್ರದೇಶಗಳನ್ನು ಆವರಿಸಿಕೊಂಡಿರುವುದು ಕರ್ನಾಟಕದ ಮಂಗಳೂರು ಸಮೀಪದ ಉದ್ಯಾವರದಿಂದ ಪ್ರಾರಂಭವಾಗುತ್ತದೆ. ಕಾದಂಬರಿಯ ನಾಯಕ ವಾಮನ ಹೊಳ್ಳ ಬ್ರಾಹ್ಮಣನಾಗಿ ಹುಟ್ಟಿಯೂ ಬ್ರಾಹ್ಮಣ್ಯವನ್ನು ಬಿಟ್ಟವನು. ವಂಶಪಾರಂಪರ್ಯವಾಗಿ ಬಂದ ಅರ್ಚಕ ವೃತ್ತಿಗೆ ವಿದಾಯ ಹೇಳುತ್ತಾನೆ. ಅಷ್ಟೆ ಅಲ್ಲ, ಪೂಜೆ ಮತ್ತು ಶ್ರದ್ಧಾ ಕೇಂದ್ರವಾಗಿದ್ದ ಊರಗುಡಿಗೆ ಬೆಂಕಿ ಇಟ್ಟ ತನ್ನ ಕ್ರಾಂತಿಕಾರಕ ವಿಚಾರಧಾರೆಗಳಿಗೆ ಒಪ್ಪುವ ದಾರಿಯ ಅನ್ವೇಷಣೆಗಾಗಿ ಊರು ಬಿಟ್ಟು ಹೋಗುತ್ತಾನೆ. ಅಲ್ಲಿಂದ ಅವನ ಬದುಕಿನ ಮಹತ್ವಾಕಾಂಕ್ಷೆಯಾಗಿರುವ ಕಮ್ಯುನಿಸ್ಟ್ ವಿಚಾರಧಾರೆಯನ್ನು ಮನಸಾರೆ ಸ್ವೀಕರಿಸಿ ರಾಮರಾಯ ಶೆಣೈ ಎಂಬ ವಿಚಾರವಾದಿಯ ಸಂಪರ್ಕಕ್ಕೆ ಬಂದು ಕಮ್ಯುನಿಸಂ ದೀಕ್ಷೆ ಸ್ವೀಕರಿಸುತ್ತಾನೆ. ಅದು ಸ್ವಾತಂತ್ರ್ಯ ಪೂರ್ವದ ಕಾಲ. ಗಾಂಧೀಜಿಯು ವಿಚಾರಧಾರೆ ಒಂದು ಕಡೆ, ಎಂ.ಎನ್.ರಾಯ್, ಘೋಷ್ ಮುಂತಾದವರ ವಿಚಾರಗಳು ಇನ್ನೊಂದು ಕಡೆ. R.S.S, ಕಾರ್ಮಿಕ ಚಳುವಳಿ, ರೈತ ಚಳವಳಿ, ವಿದ್ಯಾರ್ಥಿ ಚಳುವಳಿ ಹೀಗೆ ಭಾರತದಲ್ಲಿ ಹಲವು ವಿಚಾರಧಾರೆಗಳಿಗೆ ಯುವಕರು ಆಕರ್ಷಿತರಾಗುತ್ತಿದ್ದ ಕಾಲ ಅದು. ಹಾಗಾಗಿ ಕರ್ನಾಟಕದ ಉದ್ಯಾವರದ ಹುಡುಗ ಭಾರತದ ಆ ಮಹಾ ರಾಜಕೀಯ ಸಮುದ್ರದಲ್ಲಿ ಬಿದ್ದು ಬಿಡುತ್ತಾನೆ.

ಕೇರಳಕ್ಕೆ ಹೋಗಿ ಹೋಟೆಲ್ ಕಾರ್ಮಿಕನಾಗಿ ಸೇರಿ ವಿ.ಆರ್ ಎಂಬ ಹೆಸರಿನಿಂದ ಕಮ್ಯುನಿಸ್ಟ್ ಪತ್ರಿಕೆ 'ಒಪಿನಿಯನ್' ಗೆ ಭಾರತದ ಆಗಿನ ಜ್ವಲಂತ ಸಮಸ್ಯೆಗಳ ಬಗ್ಗೆ ಅಗ್ರ ಲೇಖನ ಬರೆಯುತ್ತಾ ಪ್ರಸಿದ್ಧ ಅಂಕಣಕಾರನಾಗಿ ಹೆಸರು ಮಾಡುತ್ತಾನೆ. ಅಲ್ಲಿ ಕ್ಯಾಪಿಟಾಲಿಸ್ಟ್ ಹೆಂಡತಿಯ ವೈಭೋಗದ ಬಂಗ್ಲೆಯಲ್ಲಿ ವಾಸಿಸುತ್ತಿರುವ ಕಮ್ಯುನಿಸ್ಟ್ ನಾಯಕನೊಬ್ಬನ ಪರಿಚಯವಾಗುತ್ತದೆ. ಕಮ್ಯುನಿಸ್ಟ್ ಪಕ್ಷದಲ್ಲಿಯ ಈ ಬಗೆಯ ಸಿದ್ಧಾಂತ ವಿರೋಧಿ ನೆಲೆಗಳು ಗೊತ್ತಾಗುತ್ತಾ ಹೋಗುತ್ತವೆ. ಪೂರ್ಣಾವಧಿ ಪತ್ರಕರ್ತನಾಗುತ್ತಾನೆ. ಮಹತ್ವಾಕಾಂಕ್ಷೆಯನ್ನೇ ತನ್ನ ಜೀವನದ ಗುರಿ ಮಾಡಿಕೊಂಡಿದ್ದ ರೂಪವತಿ ಹೆಣ್ಣು ಮಲ್ಲಿಕಾಳನ್ನು ಮದುವೆ ಆಗುತ್ತಾನೆ. ಆದರೆ ಅವಳು ತನ್ನ ಆಶಯಗಳನ್ನು ಈಡೇರಿಸಿಕೊಳ್ಳಲು ತುಳಿಯುತ್ತಿರುವ ದಾರಿಯನ್ನು ಕಂಡು ಅವಳಿಂದ ದೂರವಾಗುತ್ತಾನೆ. ಪೀಟರ್ ಎಂಬ ರಾಜಕಾರಣಿಯ ಗೆಳೆತನವಾಗಿ ಮಧ್ಯಪ್ರದೇಶದಲ್ಲಿ ಶಾಸಕನಾಗಿ ಆರಿಸಿ ಬರುತ್ತಾನೆ. ಅಲ್ಲಿ ನಡೆಯುವ ಅನೇಕ ರಾಜಕೀಯ ಸ್ಥಿತ್ಯಂತರಗಳಿಂದ ಆ ರಾಜ್ಯವನ್ನೇ ಬಿಟ್ಟು ತಲೆ ಮರೆಸಿಕೊಂಡು ರಾಜಕೀಯ ಸನ್ಯಾಸ ತೆಗೆದುಕೊಳ್ಳುವ ಮನಸ್ಸು ಮಾಡಿ ತನ್ನ ಬಾಲ್ಯದ ಸ್ನೇಹಿತ ವೈದ್ಯ ಮಿತ್ರನನ್ನು ಭೇಟಿ ಮಾಡುತ್ತಾನೆ. ಆದರೆ ರಾಜಕಾರಣ ಅಲ್ಲಿಯೂ ಆತನನ್ನು ಬಿಡುವುದಿಲ್ಲ. ಹೇಗೋ ಅವನನ್ನು ಪತ್ತೆ ಮಾಡಿದ ಅವನ ಕಮ್ಯುನಿಸ್ಟ್ ಗೆಳೆಯರು ಅವನನ್ನು ಮತ್ತೆ ಚುನಾವಣೆಗೆ ಸ್ಪರ್ಧಿಸುವಂತೆ ಮಾಡುತ್ತಾರೆ. ತುಂಬ ತುರುಸಿನ ಚುನಾವಣೆಯಾಗಿ ಅದು ರೂಪುಗೊಂಡ ಹೊತ್ತಲ್ಲೆ ಆಡಳಿತ ಪಕ್ಷದ ಮುಖ್ಯಮಂತ್ರಿಯ ಎದುರಾಳಿಯಾಗಿ ನಿಂತ ಇವನು ಗೆದ್ದು ಬರುವ ಎಲ್ಲ ಸಾಧ್ಯತೆಗಳು ಅವರಿಗೆ ತಿಳಿದಾಗ ಅವನ ಕೊಲೆಯಾಗುತ್ತದೆ. ಸ್ಥೂಲವಾಗಿ ಇದು ಕಥೆ.

ಆದರೆ ಡಾ.ಮೊಗಸಾಲೆ ಅವರಿಗೆ ಈ ಬಗೆಯ ಒಂದು ಕಥೆ ಹೇಳುವಾಗ ಹೇಳುವುದು ಮಾತ್ರ ಉದ್ದೇಶವಲ್ಲ. ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ಸ್ವಾತಂತ್ರ್ಯಾನಂತರದಲ್ಲಿ ದೇಶದಲ್ಲಿ ರಾಜಕೀಯ ಧುರೀಣರು ರೂಪಿಸಿಕೊಂಡಿರುವ ಅನೀತಿ, ಸ್ವಜನ ಪಕ್ಷಪಾತ, ದುರಾಚಾರ, ದುರ್ನಡತೆ ಹಾಗೂ ಭ್ರಷ್ಟಾಚಾರಗಳು ಹೇಗೆ ಸಾಮಾನ್ಯವಾಗತೊಡಗಿವೆ, ಸರ್ವವ್ಯಾಪಿ ಆಗತೊಡಗಿವೆ ಎಂಬುದನ್ನು ಹೇಳುವುದಾಗಿದೆ. ಅಂತಹ ಒಂದು ಸಂಕೀರ್ಣ ವಿಚಾರವನ್ನು ಕಾದಂಬರಿಯಾಗಿಸುವಲ್ಲಿ ಮೊಗಸಾಲೆ ಅವರು ಯಶಸ್ವಿಯಾಗಿದ್ದಾರೆ. ಎಂತಹುದೇ ವಿಷಯವನ್ನು ಲೀಲಾಜಾಲವಾಗಿ ಬರೆಯುವ ಸಾಮರ್ಥ್ಯ ಮೊಗಸಾಲೆ ಅವರ ಲೇಖನಿಗೆ ಇದೆ. ಅವರ ದೀಕ್ಷಾಕಾಲದ ಅನುಭವ ಅವರಿಗೆ ತಂದುಕೊಟ್ಟ ವೈಚಾರಿಕ ವಿವೇಕ ಅವರ ಬರವಣಿಗೆಯನ್ನು ಚೆಂದಗೊಳಿಸಿದೆ. ಕಾದಂಬರಿಯಲ್ಲಿ ವಾಮನ ಹೇಳುವ ಮಾತು ಗಮನಿಸಿ " ದೇವಸ್ಥಾನ ಎನ್ನುವುದು ವ್ಯವಸ್ಥೆಯ ಸಂಕೇತ ಎನ್ನುವ ಭ್ರಮೆ ಆಗ ಇತ್ತು. ಈಗ ಇಲ್ಲ. ದೇವಸ್ಥಾನ ಸುಡೋದರಿಂದ, ದೇವಸ್ಥಾನಕ್ಕೆ ಹರಿಜನ ಪ್ರವೇಶ ಮಾಡಿಸೋದರಿಂದ ಇಲ್ಲಿ ವ್ಯವಸ್ಥೆ ಬದಲಾಗುವುದಿಲ್ಲ. ಅದು ಇನ್ನೊಂದು ಅಸಂಗತ ಆಗುತ್ತೆ ಅಷ್ಟೆ".

ಭಾರತದ ವೈಚಾರಿಕ ಪ್ರಜ್ಞೆ ಆಮೂಲಾಗ್ರವಾಗಿ ಬದಲಾಗಬೇಕು ಎನ್ನುವುದು ಲೇಖಕರ ಆಶಯ.

"ಎಷ್ಟರ ತನಕ ಈ ದೇಶದ ಸಾಮಾನ್ಯ ಪ್ರಜೆಗಳೆಲ್ಲರಿಗೂ ಓದು ಬರಹ ಬರುವುದಿಲ್ಲವೋ

ಅಷ್ಟರ ತನಕ ಈ ದೇಶದ ರಾಜಕೀಯ ಒಂದು ಬಿಸಿಲುಗುದುರೆ".

ಈ ಮಾತನ್ನು ಕಾದಂಬರಿಯಲ್ಲಿ ಒಂದು ಪಾತ್ರ ಹೇಳುತ್ತದೆಯಾದರೂ ಅದು ಒಟ್ಟಾರೆಯಾಗಿ ಲೇಖಕರ ಧೋರಣೆಯಾಗಿದೆ. ರಾಜಕೀಯ ಭ್ರಷ್ಟತೆಯನ್ನು ಹೋಗಲಾಡಿಸುವ ಒಂದೇ ಒಂದು ಅಸ್ತ್ರವೆಂದರೆ ಶಿಕ್ಷಣ ಪ್ರಸಾರ. ಆದರೆ ಇಂದು ಗ್ರಾಮೀಣ ಪ್ರದೇಶದಲ್ಲಿ ಇರುವ ಶಿಕ್ಷಣ ವ್ಯವಸ್ಥೆ ನಮ್ಮ ದೇಶದ ಪ್ರಗತಿಯನ್ನು ದೂರದ ವರೆಗೂ ಕಾಣದೆ ಇರುವ ಅಸಹಾಯಕತೆಯನ್ನು ಸೂಚಿಸುತ್ತದೆ.

ಕಾದಂಬರಿಕಾರರಾದ ಮೊಗಸಾಲೆ ಅವರ ಕಥೆಯ ಬೆಳವಣಿಗೆಯನ್ನು ಮುನ್ನಡೆಸಿಕೊಂಡು ಹೋಗಲು ಇರುವ ಅವರಲ್ಲಿಯ ಸಂಯಮ ಕಾದಂಬರಿಯನ್ನು ಯಶಸ್ವಿಗೊಳಿಸಿದೆ. ಜನಪ್ರಿಯ ಕಾದಂಬರಿ, ಗಂಭೀರ ಕಾದಂಬರಿ ಇತ್ಯಾದಿ ವಿದ್ವತ್ ಚರ್ಚೆ ನಡೆಯುತ್ತಿರುವ ಈ ಸಂದರ್ಭದಲ್ಲಿ ಮೊಗಸಾಲೆಯವರ ಕಾದಂಬರಿಗಳನ್ನು ಬೇರೆಯಾಗಿಯೇ ಚರ್ಚಿಸುವ ಅನಿವಾರ್ಯತೆ ಇದೆ. ರಾಜಕೀಯದಂತಹ ಗಂಭೀರವಾದ ವಿಷಯವನ್ನು ತೆಗೆದುಕೊಂಡು ಸಾಮಾನ್ಯ ಓದುಗನನ್ನು ಗಮನದಲ್ಲಿ ಇಟ್ಟುಕೊಂಡು ಬರೆದಿರುವ ಈ 'ಉಪ್ಪು' ಕಾದಂಬರಿ ಯಶಸ್ವೀ ಎನಿಸುತ್ತದೆ.

o

# "ದಿಗಂತ"ದತ್ತ ಎರಡು ಹೆಜ್ಜೆ

ಪ್ರೊ.ಮಾಲತಿ ಪಟ್ಟಣಶೆಟ್ಟಿ

ಕಾವ್ಯ, ಕತೆ, ಕಾದಂಬರಿ, ಆತ್ಮಕಥನ ಇತ್ಯಾದಿ ಸಾಹಿತ್ಯ ಪ್ರಕಾರಗಳಲ್ಲಿ ಕಳೆದ ನಾಲ್ಕು ದಶಕಗಳಿಂದ ತಮ್ಮನ್ನು ನಿರಂತರವಾಗಿ ತೊಡಗಿಸಿಕೊಂಡಿರುವ ಡಾ॥ನಾ.ಮೊಗಸಾಲೆಯವರು ಒಬ್ಬ ಪ್ರತಿಭಾನ್ವಿತ ಹಾಗೂ ಕನ್ನಡಿಗರಿಗೆ ಚಿರಪರಿಚಿತ ಲೇಖಕರು. ಕಾವ್ಯದ ಮೂಲ ಭಂಡಾರಿಗರಾದರೂ ಗದ್ಯ ಪ್ರಕಾರಗಳಿಗೂ ತಮ್ಮ ಪ್ರತಿಭೆಯ ಸರಕನ್ನು ನೀಡಿದ್ದು ಅವರ ಬಹುಮುಖ ಪ್ರತಿಭೆಗೆ ಸಾಕ್ಷಿ. 1988ರಲ್ಲೇ ಪ್ರಕಟಗೊಂಡ ಇವರ ಕಾದಂಬರಿ "ದಿಗಂತ"ವು ಮೊಗಸಾಲೆಯವರ ಕಥನಕಲಾ ನೈಪುಣ್ಯ ಮತ್ತು ಅವರ ತೀವ್ರ ಸಾಮಾಜಿಕ ಕಳಕಳಿ, ಚಿಂತನಗಳನ್ನು ಪರಿಚಯಿಸುವ ಒಂದು ಚಿಕ್ಕ ಕಾದಂಬರಿ. ಕೃತಿ ಚಿಕ್ಕದಾದರೂ ವಸ್ತು ದೊಡ್ಡದು. ಭಾರತೀಯ ಜನಮನದ ಸಂದರ್ಭದಲ್ಲಿ ವೈಜ್ಞಾನಿಕ ದೃಷ್ಟಿಕೋನವನ್ನು ತಳ್ಳಿ ದುಷ್ಟಸಂಪ್ರದಾಯವು ಅನಾಗರಿಕ, ಅಶಿಕ್ಷಿತರಲ್ಲಷ್ಟೇ ಅಲ್ಲದೇ ಸುಶಿಕ್ಷಿತರಲ್ಲೂ, ರಾಜಕಾರಣಿಗಳಲ್ಲೂ, ಅವಕಾಶವಾದಿಗಳಲ್ಲೂ ಪ್ರಖರವಾಗಿದ್ದುದರಿಂದ ಪ್ರಗತಿ ಎಂಬ ಸೂರ್ಯನ ಉದಯವು ಎತ್ತಂಗಡಿಯ ಪ್ರತೀಕದಂತಿದ್ದ ನಮ್ಮ ಭಾರತ ದೇಶದಲ್ಲಿ ಸಾಧ್ಯವಾಗದ ದುಗುಡವು ಲೇಖಕರನ್ನು ತೀವ್ರವಾಗಿ ಕಾಡಿದ್ದು ಈ ಕಾದಂಬರಿಯ ಮೂಲಪ್ರೇರಣೆ ಎಂದೆನ್ನಿಸುತ್ತದೆ.

ಎತ್ತಂಗಡಿಯು ಇಡಿಯ ಭಾರತೀಯ ಜನಮಾನಸವನ್ನು ಪ್ರತಿನಿಧಿಸುವ ಒಂದು ಹಳ್ಳಿ. ವೈಚಾರಿಕತೆಯನ್ನು ಸತತವಾಗಿ ಎತ್ತಂಗಡಿ ಮಾಡುವ ಇಲ್ಲಿಯ ಕೆಲ ಸ್ವಾರ್ಥಸಾಧಕ ದುಷ್ಟಕೂಟಗಳಿರುವದರಿಂದ ಲೇಖಕರು ಈ ಊರಿಗೆ ಸಾಂಕೇತಿಕವಾಗಿ ಎತ್ತಂಗಡಿ ಎಂದು ಹೆಸರಿಟ್ಟಿರಬಹುದು. ಸುಶಿಕ್ಷಿತ, ಅಶಿಕ್ಷಿತ, ರಾಜಕಾರಣಿ, ಜನಸಾಮಾನ್ಯ, ವೈಜ್ಞಾನಿಕ ಅವೈಜ್ಞಾನಿಕ ಮನೋಭಾವದ ಹಲವು ಜಾತಿ ಪಂಗಡಗಳ ಹಲವು ವೈರುಧ್ಯಗಳನ್ನು ಜನರು ಇಲ್ಲಿ ವಾಸವಾಗಿದ್ದರಿಂದಲೇ ಸಂಘರ್ಷ, ವಾದವಿವಾದಗಳಿಗೆ, ಘರ್ಷಣೆಗಳಿಗೆ ಈ ಸ್ಥಳ ಪ್ರಶಸ್ತವಾಗಿದೆ. ಮಂಗನ ಕಾಯಿಲೆಯಂಥ ಒಂದು ಅಪಾಯಕಾರಿ ಸಾಂಸರ್ಗಿಕ ರೋಗದ ಪ್ರವೇಶದಿಂದಾಗಿ ಇಲ್ಲಿಯ ಚಿಂತನ, ಮಂಥನಗಳು ಕೆಲವು ಗುಂಪುಗಳಲ್ಲಿ ವಿರುದ್ಧ ದಿಸೆಯಲ್ಲಿ ಬೆಳೆದು ಪ್ರಗತಿಯನ್ನೇ ನಾಶಗೊಳಿಸುವ ಹುನ್ನಾರಗಳು ತರುವ ಗಾಢ ನಿರಾಶೆಯನ್ನು ಕಾದಂಬರಿಕಾರರು ಪರಿಣಾಮಕಾರಿಯಾಗಿ ಮೂಡಿಸಿದ್ದಾರೆ. ವೈಚಾರಿಕತೆ ಮತ್ತು ಮೂಢನಂಬಿಕೆಗಳ ನಡುವಿನ ಹಾಗೂ ಸ್ವಾರ್ಥ ಮತ್ತು ಜನಹಿತಗಳ ನಡುವೆ ಏರ್ಪಟ್ಟ ಸಂಘರ್ಷಗಳು ಇಲ್ಲಿ ನಿಖರವಾಗಿ

ಚಿತ್ರಿಸಲ್ಪಟ್ಟಿವೆ. ಹೀಗಿದ್ದಾಗಲೂ ಲೇಖಕರ ಒಲವು ವೈಚಾರಿಕತೆಯ ಕಡೆಗೆ ಇದ್ದದ್ದು ಕಥಾನಕದ ನೇಯ್ಗೆಯಲ್ಲಿ ಸುಸ್ಪಷ್ಟವಿದೆ.

ಎತ್ತಂಗಡಿಯು ಒಂದು ಚಿಕ್ಕ ಹಳ್ಳಿಯಾಗಿದ್ದರೂ ಅಲ್ಲಿ ವೈಚಾರಿಕ ಮನೋಭಾವದ ಡಾ॥ ಸಾರ್ಕುಡೇಲ, ಪತ್ರಕರ್ತ ನವೀನಚಂದ್ರ, ಹೊಸದಾಗಿ ಎತ್ತಂಗಡಿಯ ಕಾಲೇಜಿನಲ್ಲಿ ಲೆಕ್ಚರರ್ ಹುದ್ದೆ ಸೇರಿದ ಡಾ॥ಮುನಿರೆಡ್ಡಿ, ವೆಂಕೋಜಿ, ಫಾದರ ಪಾಯ್ಸ ಹಾಗೂ ವಿದ್ಯಾರ್ಥಿ ಮಿತ್ರರಾದ ಹಫೀದ, ಮಂಚೇಗೌಡ, ಬಾಲಕೃಷ್ಣ ಭಟ್‌ರಂಥವರಿದ್ದರೆ, ಇನ್ನೊಂದೆಡೆ ಸುಶಿಕ್ಷಿತರಿದ್ದರೂ ಸ್ವಾರ್ಥಿ, ಸಂಕುಚಿತ ಮನೋಭಾವದ ಡಾ॥ರಾಜರತ್ನಂ, ಪ್ರೊ॥ಶ್ರೀ ಶೀಂತ್ರಿ ಹಾಗೂ ರಾಜಕಾರಣಿ ಸಿದ್ಧರಾಮಪ್ಪ, ಕಾಂಟ್ರ್ಯಾಕ್ಟರ್ ನರ್ಸಪ್ಪಯ್ಯ, ಕಾಡನ್ನು ಕಡಿದು ದುಡ್ಡು ಮಾಡಿಕೊಂಡ ದೊಡ್ಡ ಮಮ್ಮದೆ ಬ್ಯಾರಿ ಹಾಗೂ ಸಣ್ಣ ಮಮ್ಮದೆ ಬ್ಯಾರಿ – ಇವರೆಲ್ಲ ಸ್ವಲಾಭಕ್ಕಾಗಿ, ಈರ್ಷ್ಯೆಗಾಗಿ ಎತ್ತಂಗಡಿ ಜನರನ್ನು ಮೌಢ್ಯದ ಅಂಧಕಾರದಲ್ಲಿ ಇಡಲು ಬಯಸುತ್ತಾರೆ.

ಮಂಗನ ಕಾಯಿಲೆಯಿಂದ ಜನರು ಸಾಯುತ್ತಿದ್ದರೂ ಆ ಕಾಯಿಲೆಯ ಪ್ರತಿಬಂಧಕೋಪಾಯಗಳನ್ನು ಕುರಿತು ಗಂಭೀರವಾಗಿ ಯೋಚಿಸದೆ, ರೋಗಕ್ಕೆ ಕಾರಣ ಪ್ರಾಣೇಶ ದೇವರ ಕೋಪವಾಗಿದೆ, ಆದ್ದರಿಂದ ಮಾರುತಿ ದೇವಸ್ಥಾನದ ಜೀರ್ಣೋದ್ಧಾರಕ್ಕೆ ಪಟ್ಟುಹಿಡಿದು ಸಿದ್ಧರಾಗಿದ್ದಾರೆ.

ಈ ಇಡೀ ಕಾದಂಬರಿಯ ಮೂಲಾಧಾರವೆಂಬಂತೆ ಡಾ॥ ಸಾರ್ಕುಡೇಲ್ ಅವರು ತಮ್ಮ ಕಮ್ಯುನಿಸ್ಟ್ ವಿಚಾರವಾದದ ನೆಲೆಯಲ್ಲಿ ಜನಹಿತಕಾರ್ಯಗಳಲ್ಲಿ ಯಾವಾಗಲೂ ತೊಡಗಿಕೊಂಡವರು. ಸುಬ್ಬಯ್ಯನಂಥ ಬಡ ಗಿರಿಜನ ಹುಡುಗನನ್ನು ಓದಿಸುತ್ತಾರೆ. ಅವನ ತಾಯಿಗೆ ತೀವ್ರವಾದ ಕಾಯಿಲೆ ಆದಾಗ ರಸ್ತೆಯೇ ಇಲ್ಲದ ಕುಗ್ರಾಮಕ್ಕೆ ತೆರಳಿ ರೋಗಿಯನ್ನು ಎತ್ತಂಗಡಿಯ ಸರಕಾರಿ ಆಸ್ಪತ್ರೆಯಲ್ಲಿ ಡಾ॥ ರಾಜರತ್ನಂರವರ ಮೇಲ್ವಿಚಾರಣೆಯಲ್ಲಿ ದಾಖಲಿಸುತ್ತಾರೆ. ಇಡೀ ಊರಲ್ಲಿ ಇವರೊಬ್ಬ ಗೌರವದ ವ್ಯಕ್ತಿಯಾಗಿ ಎಂಥ ಸಂದಿಗ್ಧ ಪರಿಸ್ಥಿತಿಯಲ್ಲೂ ಕ್ಷೋಭೆಗೊಳಗಾಗದೆ ಸ್ಥಿತಪ್ರಜ್ಞನಂತೆ ದೃಢವಾಗಿ ನೆಲೆ ನಿಲ್ಲುತ್ತಾರೆ. ಎತ್ತಂಗಡಿಯ ಜನತೆಯ ಮೌಢ್ಯವನ್ನು ಕಳೆಯಲು ಡಾ॥ರೆಡ್ಡಿ ಮೊದಲಾದವರ ಸಹಾಯದಿಂದ ಯತ್ನಿಸಿ ಹೊಸ ಅರಿವು ಮೂಡಿಸಬೇಕು, ಮಂಗನ ಕಾಯಿಲೆಯ ಕಾರಣಗಳನ್ನು ಜನರಿಗೆ ತಿಳಿಸಿ ಆ ಮಾರಣಾಂತಿಕ ರೋಗವನ್ನು ಪ್ರತಿಬಂಧಿಸಬೇಕು ಎಂದು ಹಂಬಲಿಸಿದ ಉದಾತ್ತ ವ್ಯಕ್ತಿ ಡಾ॥ಸಾರ್ಕುಡೇಲ್ ಅವರು. ಡಾ॥ಮುನಿರೆಡ್ಡಿಯವರು ಒಬ್ಬ ಉತ್ತಮ ಶಿಕ್ಷಕ, ವಿಜ್ಞಾನಿ, ಕಳಕಳಿಯ ಕೆಲಸಗಾರರಾಗಿ ಮಂಗನಕಾಯಿಲೆಗೆ ವೈಜ್ಞಾನಿಕ ಕಾರಣಗಳನ್ನು ಜನರಿಗೆ ತಿಳಿಯಪಡಿಸಲು ಡಾ॥ಸಾರ್ಕುಡೇಲರ ಬಲಗೈ ಬಂಟನಂತೆ ಪರಿಶ್ರಮ ಪಟ್ಟ ದಿಟ್ಟ ವ್ಯಕ್ತಿ. ಶಿಕ್ಷಕ ವೃತ್ತಿಯಲ್ಲಿಯೇ ಇದ್ದ ಪ್ರೊ॥ಶ್ರೀ ಶೀಂತ್ರಿಯವರು ಮುನಿರೆಡ್ಡಿಯವರ ಪ್ರತಿಭೆ, ಪರಿಶ್ರಮಗಳಿಗೆ ಹೊಟ್ಟೆಕಿಚ್ಚು ಪಟ್ಟುಕೊಳ್ಳುತ್ತ ಅವರ ಯೋಜನೆ, ಕಾರ್ಯಕ್ರಮಗಳನ್ನು ಮಣ್ಣುಪಾಲು ಮಾಡಲು ಸದಾ ಪ್ರಯತ್ನಿಸುವವರಷ್ಟೇ ಅಲ್ಲ; ಮುನಿರೆಡ್ಡಿಯವರನ್ನು ಎತ್ತಂಗಡಿಯಿಂದ ಓಡಿಸಲು ರಾಜಕಾರಣಿಗಳೊಂದಿಗೆ ಸಂಚನ್ನು ಹೂಡುತ್ತಾರೆ.

ಡಾ॥ ಸಾರ್ಕುಡೇಲ ಅವರು ತಮ್ಮ ವೃತ್ತಿಯಲ್ಲಿ, ಸಮಾಜದಲ್ಲಿ ಔದಾರ್ಯವನ್ನು ಮೆರೆದರೆ ಇದೇ ವೃತ್ತಿಯಲ್ಲಿದ್ದ ಡಾ॥ರಾಜರತ್ನಂ ತದ್ವಿರುದ್ಧವಾಗಿ ಅತ್ಯಂತ ಸ್ವಾರ್ಥಿ, ಭ್ರಷ್ಟ, ಸ್ತ್ರೀ ಲಂಪಟ, ಕರ್ತವ್ಯವಿಮುಖರಾದ ಸರಕಾರಿ ಡಾಕ್ಟರು. ಮಂಗನ ಕಾಯಲೆಯಿಂದ ರೋಗಿಗಳು ನರಳಿದರೂ ಡಾ॥ಸಾರ್ಕುಡೇಲರು ಅದು ಮಂಗನ ಕಾಯಿಲೆ ಎಂದು ಗುರುತಿಸಿ ಸಲಹೆ ನೀಡಿದರೂ ಅವರನ್ನು ವಿರೋಧಿಸಲು ಹಾಗೆ ತಮ್ಮ ಪ್ರತಿಷ್ಠೆಯನ್ನು ಹೆಚ್ಚಿಸಿಕೊಳ್ಳಬೇಕು ಎಂಬ ಮೂರ್ಖತನ ತೋರಿದ ವ್ಯಕ್ತಿ. ವಿದ್ಯಾರ್ಥಿಗಳಿಂದ ಈ ಮಂಗನ ಕಾಯಿಲೆಯ ಮುಂಜಾಗ್ರತೆಗಾಗಿ ಹಾಗೂ ಪ್ರತಿಬಂಧಕ ಕ್ರಮಗಳಿಗಾಗಿ ಊರಲ್ಲಿ ಯಶಸ್ವಿ ಬಂದ್ ಆಚರಿಸಿದಾಗ, ಡಾ॥ರಾಜರತ್ನಂ, ಪ್ರೊ.ಶೀಂತ್ರಿ ಮೊದಲಾದ ದುಷ್ಟಕೂಟದ ಜನ ಹೊಟ್ಟೆಕಿಚ್ಚು ಪಡುತ್ತಾರೆ. ಕಲ್ಕತ್ತೆಯಿಂದ ಡಾ॥ ಕೋಲಂಬಸ್ ಎಂಬ ಮಂಗನ ಕಾಯಿಲೆ ಪರಿಣಿತರನ್ನು ಫಾದರ ಪಾಯ್ಸ ಅವರ ಸಹಾಯದ ಮೂಲಕ ಮಾರ್ಚಣರ ಸಾರ್ವಜನಿಕ ಕಾರ್ಯಕ್ರಮಕ್ಕೆ ಒಪ್ಪಿಸಿ, ಈ ಅಪೂರ್ವ ಕಾರ್ಯಕ್ರಮವನ್ನು ಘೋಷಿಸಿದಾಗ ಎತ್ತಂಗಡಿ ಜನರು ಈ ಕಾರ್ಯಕ್ರಮದಲ್ಲಿ ಭಾಗವಹಿಸಬಾರದು ಎಂಬ ಈರ್ಷ್ಯೆಗಾಗಿ ಆ ದಿನದಂದೇ ಪ್ರಾಣದೇವರ ಗುಡಿಯ ಜೀರ್ಣೋದ್ಧಾರದ ಕಾರ್ಯಕ್ರಮವನ್ನು ಪ್ರೊ.ಶೀಂತ್ರಿ ಮೊದಲಾದವರು ಯೋಜಿಸುತ್ತಾರೆ. ಮಂಗನ ಕಾಯಲೆಗೆ ಪ್ರಾಣದೇವರ ಕ್ರೋಧವೇ ಕಾರಣವೆಂದು ಎತ್ತಂಗಡಿಯ ಅಮಾಯಕ ಜನರ ಮನಸ್ಸಿನ ಮೇಲೆ ಪ್ರಭಾವ ಬೀರಲು ಯತ್ನಿಸುತ್ತಾರೆ. ಈ ಹುನ್ನಾರದ ಮುಂಚೂಣಿಯಲ್ಲಿ ರಾಜಕಾರಣಿ ಸಿದ್ಧರಾಮಪ್ಪ, ನರಸಪ್ಪಯ್ಯ, ಪ್ರೊ.ಶ್ರೀ ಶೀಂತ್ರಿ, ಲಾಭಬಡಕ ಮಮ್ಮದೆ ಬ್ಯಾರಿಗಳಿರುತ್ತಾರೆ. ಇವರ್‍ಯಾರಿಗೂ ಮಂಗನ ಕಾಯಿಲೆಗೆ ಬಲಿಯಾಗಿ ಸಾಯುತ್ತಿರುವ ಜನಸಾಮಾನ್ಯರ ಸಮಸ್ಯೆಗಳ ಗಾಂಭೀರ್ಯವು ಕಣ್ಣಿಗೆ ಬೀಳುವುದೇ ಇಲ್ಲ. ಸ್ವಾರ್ಥಸಾಧನೆಯೇ ಪರಮೋಚ್ಚ ಗುರಿ ಎಂಬಂತೆ ಎತ್ತಂಗಡಿಯ ಪ್ರಗತಿಗೆ ಕಂಟಕಪ್ರಾಯರಾಗಿ ನಿಲ್ಲುತ್ತಾರೆ. ಮಂಗನಕಾಯಿಲೆಗಿಂತ ಹೆಚ್ಚು ಅಪಾಯಕಾರಿ ಇಂಥ ಸಮಾಜವಿರೋಧಿ ಶಕ್ತಿಗಳು ಎಂಬ ವಾಸ್ತವಗಳನ್ನು ಎತ್ತಿ ತೋರುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ.

ಕಾರ್ಯಕ್ರಮದ ಹಿಂದಿನ ದಿನ ಪ್ರಕೃತಿ ಘೋರವಾದ ಮಳೆಸುರಿಸಿ ಸಮಾಜ ವಿರೋಧಿ ಶಕ್ತಿಗಳನ್ನು ಬೆಂಬಲಿಸಿದ ದುರಂತವು ಕಾದಂಬರಿಯ ಮುಕ್ತಾಯದ ಹಂತದಲ್ಲಿ ಕೆಲಮಟ್ಟಿಗೆ ನಿರಾಸೆಯ ಛಾಯೆ ತಂದಿದ್ದರೂ ಹಫೀದ, ಮಂಚೇಗೌಡರಂಥ ತರುಣ ಪೀಳಿಗೆಯ ಜನ ದೂರದ ದಿಗಂತದಲ್ಲಿ ಸೂರ್ಯೋದಯವನ್ನು ನಿರೀಕ್ಷಿಸುವ ಸಾಂಕೇತಿಕ ಆಶಾವಾದವು ಓದುಗರ ತಳಮಳವನ್ನು ನೀಗುತ್ತದೆ. ಸಮಾಜ ವಿರೋಧಿ ಶಕ್ತಿಗಳ ಕತ್ತಲನ್ನು ಕಳೆದು ನಮ್ಮ ದೇಶದ ಹೊಸದಿಗಂತದಲ್ಲಿ ಅರಿವಿನ ಸೂರ್ಯ ಮೂಡುತ್ತಾನೆ ಎಂಬ ಲೇಖಕರ ಆಶಯದ ಸುಳಿವನ್ನು ಕತೆಯ ಕೊನೆಗೆ ಕಾಣುತ್ತೇವೆ. ಈ ಅಪೇಕ್ಷಣೀಯ ತಿರುವಿನಿಂದಾಗಿ ಕಾದಂಬರಿಗೆ ಸಾರ್ಥಕತೆಯ ಗರಿ ಮೂಡಿದೆ ಎಂದು ಅಂದುಕೊಳ್ಳಬಹುದಾಗಿದೆ.

O

# ನಾ. ಮೊಗಸಾಲೆಯವರ "ಮಣ್ಣಿನ ಮಕ್ಕಳು"

ವ್ಹಿ.ಆರ್. ದಳವಾಯಿ

ನಾ. ಮೊಗಸಾಲೆಯವರ "ಮಣ್ಣಿನ ಮಕ್ಕಳು" ಕಾದಂಬರಿಯನ್ನು ಅವರು ವೈದ್ಯಕೀಯ ವಿದ್ಯಾರ್ಥಿಯಾಗಿದ್ದಾಗ ಬರೆದು ಮುಗಿಸಿದ್ದು. ಹಲವಾರು ಕಾರಣಗಳಿಗಾಗಿ ತುಂಬ ಮಹತ್ವದ ಕೃತಿ. ಅರವತ್ತು ಎಪ್ಪತ್ತರ ದಶಕಗಳು ಸಾಮಾಜಿಕವಾಗಿ, ರಾಜಕೀಯವಾಗಿ ಕರ್ನಾಟಕದ ಇತಿಹಾಸದಲ್ಲಿ ಅನೇಕ ಹೊಸ ಸಾಧ್ಯತೆಗಳನ್ನು ಹುಟ್ಟು ಹಾಕಿದಂತಹವು. ಸಮಾಜದ, ಕಮ್ಯುನಿಸಂ ಮುಂತಾದ ವಿಚಾರಧಾರೆಗಳು ಜನಸಾಮಾನ್ಯರನ್ನು ಕೇಂದ್ರವಾಗಿಟ್ಟುಕೊಂಡು ಒಂದು ಹೊಸ ರಾಜಕೀಯ ಪ್ರಜ್ಞೆಯನ್ನು ಅವರಲ್ಲಿ ಮೂಡಿಸಿ 'ಸಾಮಾಜಿಕ ನ್ಯಾಯ'ದ ಪರಿಕಲ್ಪನೆಯನ್ನು ಜನಪ್ರಿಯಗೊಳಿಸಲು ಯತ್ನಿಸುತ್ತಿದ್ದ ಕಾಲವದು. ಇಂತಹ ಕಾಲಘಟ್ಟದಲ್ಲಿ ಸಾಹಿತಿಯಾದವನು ತಾನು ನಂಬಿಕೊಂಡ ವಿಚಾರಗಳನ್ನು ಸಮರ್ಥಿಸಹೊರಟಂತೆ ಮೂಡಿ ಬಂದ ಕಾದಂಬರಿ "ಮಣ್ಣಿನ ಮಕ್ಕಳು". ಸಾಮಾಜಿಕ ಬದಲಾವಣೆಯ ಮನಸ್ಥಿತಿ ಅನೇಕ ಸ್ಥಿತ್ಯಂತರಗಳಿಗೆ, ಪಲ್ಲಟಗಳಿಗೆ ಕಾರಣವಾಗಿ ಕೊನೆಗೆ ದುರಂತವನ್ನಪ್ಪುವದೇ ಈ ಕಾದಂಬರಿಯ ಕೇಂದ್ರ ವಿಚಾರ.

'ಮಣ್ಣಿನ ಮಕ್ಕಳು', ಕೋಳ್ಯೂರು ಎಂಬ ಮಲೆನಾಡಿನ ಹಳ್ಳಿಯ ಕಥೆ, ಕೋಳ್ಯೂರಿನ ಜಾತ್ರೆಯ ವಿವರಣೆಯೊಂದಿಗೆ ಕಾದಂಬರಿ ಪ್ರಾರಂಭವಾಗಿ ಸಾವಧಾನವಾಗಿ ಪ್ರಮುಖ ಪಾತ್ರಗಳನ್ನು ಪರಿಚಯಿಸುತ್ತ ಸಾಗುತ್ತದೆ. ಸಂಕಪ್ಪ ಶೆಟ್ಟರು ಆ ಊರಿನ ಜಮೀನುದಾರ. ತನ್ನ ಬಹುಪಾಲು ಜಮೀನನ್ನು ಗೇಣಿಗಾಗಿ ಹಂಚಿ, ತನ್ನ ಒಕ್ಕಲುಗಳನ್ನು ಮಕ್ಕಳಂತೆ ನೋಡಿಕೊಳ್ಳುತ್ತಿರುವ ನಿಗರ್ವಿ ಮನುಷ್ಯ. ಮಂಜಪ್ಪ, ಸಂಕಪ್ಪ ಶೆಟ್ಟರ ಅನೇಕ ಒಕ್ಕಲುಗಳಲ್ಲಿ ಒಬ್ಬ. ಕಾದಂಬರಿ ಈತನ ಕಾಯಕ ಪ್ರೇಮವನ್ನು ವೈಭವೀಕರಿಸುತ್ತಲೇ ಪ್ರಾರಂಭವಾಗುತ್ತದೆ. ಈತನಿಗೆ ದುಡಿಮೆಯೊಂದೇ ಗೊತ್ತು. ತನ್ನ ಮುಗ್ಧತೆ, ಪ್ರಾಮಾಣಿಕತೆ, ಸ್ವಾಮಿನಿಷ್ಠೆಯಿಂದ ಜಮೀನುದಾರರ ಹೃದಯದಲ್ಲಿ ಒಂದು ವಿಶೇಷ ಸ್ಥಾನವನ್ನು ಪಡೆದುಕೊಂಡ ಮಂಜಪ್ಪ ಈ ಕಾದಂಬರಿಯ ಕೇಂದ್ರ ಪಾತ್ರ.

ಮಂಜಪ್ಪ ವಿಧುರ. ಎರಡು ಗಂಡು ಮಕ್ಕಳನ್ನು ಹೆತ್ತು ಈತನ ಹೆಂಡತಿ ಸಾಯುತ್ತಾಳೆ. ಗಂಡನ ಮನೆಯವರಿಂದ ತಿರಸ್ಕೃತಗೊಂಡ ತಂಗಿ ಸುಬ್ಬಿ ಈತನ ಜೊತೆಗಿದ್ದಾಳೆ. ಹಿರಿಯ ಮಗ ಚೋಮ ಮಣ್ಣಿನ ಮಗನಾಗಿ ಮಂಜಪ್ಪನ ಕಾಯಕದಲ್ಲಿ ನೆರವಾದರೆ, ಚಿಕ್ಕವ

ಸುಂದರ ಹಠದಿಂದ ಪಟ್ಟಣದಲ್ಲಿ ಕಾಲೇಜು ಶಿಕ್ಷಣ ಪಡೆಯುತ್ತ ವಿದ್ಯಾವಂತನಾಗುತ್ತಿದ್ದಾನೆ. ಕಾದಂಬರಿಯ ತಿರುವೇ ಈ ಹಂತದಲ್ಲಿ ಪ್ರಾರಂಭವಾಗುತ್ತದೆ.

ಬದುಕನ್ನೆಲ್ಲ ಕೂಲಿ ಮಾಡುತ್ತ, ಕೊನೆಗೆ ಒಕ್ಕಲಾಗಿ ದುಡಿಯುತ್ತಿದ್ದ ಮಂಜಪ್ಪನಿಗೆ ತೀರ ಆಕಸ್ಮಿಕವಾಗಿ ಸ್ವಂತ ಭೂಮಿಯ ಮಾಲೀಕನಾಗುವ ಅವಕಾಶ ಸಿಗುತ್ತದೆ. ತನ್ನ ಕಠಿಣ ದುಡಿಮೆಯಿಂದ ಗುಡ್ಡ ಒಡೆದು, ಹೊಲ ಮಾಡಿ ಹಸಿರ ಬನವನ್ನೇ ಸೃಷ್ಟಿಸುತ್ತಾನೆ. ಸಂಕಪ್ಪ ಶೆಟ್ಟರಿಗೆ ಈ ಕುರಿತು ಎಳ್ಳಷ್ಟೂ ಅಸಮಾಧಾನವಿಲ್ಲ. ಮಂಜಪ್ಪ ಸ್ವಂತ ರೈತನಾಗುವುದಕ್ಕೆ ಎಲ್ಲ ನೆರವನ್ನೂ ನೀಡಿ ಮಾನವೀಯತೆ ಮೆರೆಯುತ್ತಾರೆ. ಈ ನಡುವೆ ಮಂಜಪ್ಪ ಚೋಮನಿಗೆ ಅನುರೂಪಳಾದ ಕನ್ಯೆಯನ್ನು ಹುಡುಕಿ ಮದುವೆ ಮಾಡುತ್ತಾನೆ. ಆಕೆ ಗಂಡು ಮಗುವಿನ ತಾಯಿಯೂ ಆಗುತ್ತಾಳೆ. ಸ್ವಂತ ಭೂಮಿ, ಹಸಿರ ಸಿರಿ ಈ ಹಂತದಲ್ಲಿ ಮಂಜಪ್ಪನದು ಸ್ವರ್ಗಕ್ಕೆ ಕಿಚ್ಚು ಹಚ್ಚುವ ಬದುಕು.

ಮಲೆನಾಡಿನ ಇಂಥ ಬದುಕಿನ ರಮ್ಯ ಚಿತ್ರಣವನ್ನು ಮೊಗಸಾಲೆಯವರು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. ತನ್ನ ಒಕ್ಕಲುಗಳನ್ನು ಮಕ್ಕಳಂತೆ ನೋಡಿಕೊಳ್ಳುವ ಜಮೀನುದಾರ, ಅದೇ ಮಟ್ಟದ ಸ್ವಾಮಿನಿಷ್ಠೆಯ ಒಕ್ಕಲುಗಳು, ಅವರ ಕಾಯಕ ಪ್ರೇಮ, ಜಾತ್ರೆಯ ಗೌಜು ಗದ್ದಲ – ಬದುಕಿನ ಅತ್ಯಾನಂದವನ್ನು ಅನುಭವಿಸಬಹುದಾದ ಸಾಧ್ಯತೆಯನ್ನು ಮೊಗಸಾಲೆಯವರು ಕಾದಂಬರಿಯ ಈ ಹಂತದಲ್ಲಿ ತೋರಿಸುತ್ತಾರೆ.

ಆಗಷ್ಟೇ ಸಮಾಜವಾದ, ಕಮ್ಯುನಿಸ್ಟ್ ವಿಚಾರಗಳು ಜನಪ್ರಿಯವಾಗುತ್ತ ಗ್ರಾಮೀಣ ಪ್ರದೇಶಗಳಲ್ಲೂ ನೆಲೆ ಕಂಡುಕೊಳ್ಳುತ್ತಿದ್ದ ಸಂದರ್ಭ. ಮಲೆನಾಡಿನ ಒಕ್ಕಲುಗಳಲ್ಲೂ ಈ ಬಗೆಯ ವಿಚಾರಗಳು ಹರಡುತ್ತಿರುವದನ್ನು ಕಾದಂಬರಿಯ ಆರಂಭದಲ್ಲಿಯೇ ಸೂಚ್ಯವಾಗಿ ಮೊಗಸಾಲೆಯವರು ಹೇಳಿದರೂ, ಚೋಮನ ಪಾತ್ರದಲ್ಲಿ ಅಮ್ಮ ಅಪ್ಪ ಅನಾವರಣ ಕಂಡುಕೊಳ್ಳುತ್ತವೆ. ಚೋಮನದು ಅವನ ತಂದೆಗಿಂತ ಸ್ವಭಾವದಲ್ಲಿ ತದ್ವಿರುದ್ಧ. ಮಂಜಪ್ಪ ಯಥಾಸ್ಥಿತಿಯಲ್ಲಿ ನಂಬಿಕೆಯಿರುವ ಕಾಯಕಯೋಗಿ. ಆದರೆ ಚೋಮ ಸ್ಥಾಪಿತ ಮೌಲ್ಯಗಳನ್ನು ಧಿಕ್ಕರಿಸಿ ಸಮಾನತೆಗಾಗಿ ತುಡಿಯುವ ಜೀವಿ.

ಮೊಗಸಾಲೆಯವರು ಒಂದು ಬಗೆಯ ಅಸಹನೆಯಿಂದಲೇ ಚೋಮನ ಪಾತ್ರವನ್ನು ಕೆತ್ತಿದಂತಿದೆ. ಎಲ್ಲ ಬುದ್ಧಿವಾದಗಳನ್ನೂ ಮೀರಿ ಚೋಮ ಸಂಕಪ್ಪ ಶೆಟ್ಟರ ವಿರುದ್ಧ ಚುನಾವಣೆಗೆ ಸ್ಪರ್ಧಿಸುತ್ತಾನೆ. ಗೆಲ್ಲುವ ಹಠದಲ್ಲಿ ಸಾಲಗಾರನಾಗುತ್ತಾನೆ. ಈತನ ಮುಗ್ಧತೆ, ಸ್ವಾಭಿಮಾನಗಳನ್ನೇ ಬಂಡವಾಳ ಮಾಡಿಕೊಂಡು ಶೋಷಣೆಯ ಇನ್ನೊಂದು ಮುಖ ಪ್ರತಿನಿಧಿಸುವ ಇಬ್ರಾಹಿಂ ಸಾಹುಕಾರ. ಶೆಟ್ಟರಿಗೆ ಶತಾಯಗತಾಯ ಚೋಮನನ್ನು ಸೋಲಿಸುವ ಹಂಬಲ. ಶೆಟ್ಟರ ಹಣ, ದರ್ಪಗಳ ಮುಂದೆ ಚೋಮ ತರಗಲೆಯಂತೆ ಉದುರಿಹೋಗುತ್ತಾನೆ. ಸೋಲಿನ ಹತಾಶೆ ಆತನನ್ನು ಕಾಡತೊಡಗುತ್ತದೆ. ಸೋಲು ಅವಮಾನಗಳಿಂದ ಜರ್ಜರಿತವಾದ ಆತ ಶೆಟ್ಟರ ಭಾವ ರಾಮಣ್ಣನನ್ನು ಕೊಲೆಗೈಯುತ್ತಾನೆ. ಅಸಹಾಯಕನಾದ, ಆರ್ಥಿಕವಾಗಿ ದುರ್ಬಲನಾದ ಚೋಮ ಸ್ಥಾಪಿತ ಶಕ್ತಿಗಳ ವಿರುದ್ಧ ವೈಚಾರಿಕ ಸಂಘರ್ಷದಲ್ಲಿ ಸೋತ ತಕ್ಷಣ ಹಿಂಸೆಯ ಮಾರ್ಗ ಹಿಡಿಯುವುದನ್ನು ಒಂದು ಬಗೆಯ ವ್ಯಂಗ್ಯದಿಂದಲೇ

ಮೊಗಸಾಲೆಯವರು ಚಿತ್ರಿಸುತ್ತಾರೆ.

ಕಾದಂಬರಿಯ ನಂತರದ ಘಟನಾವಳಿಗಳು ತೀರಾ ನಾಟಕೀಯ ಸ್ವರೂಪವನ್ನು ಪಡೆದುಕೊಳ್ಳುತ್ತವೆ. ಚೋಮನ ಮಗನ ಸಾವು, ಸುಂದರ ತನ್ನ ವಿದ್ಯಾಭ್ಯಾಸಕ್ಕೆ ತಿಲಾಂಜಲಿ ಇಟ್ಟು ಪಟ್ಟಣದ ಹುಡುಗಿಯನ್ನೇ ಮದುವೆಯಾಗಿ ಬಂದು, ತನ್ನ ತಂದೆ ಇದುವರೆಗೆ ರೂಢಿಸಿಕೊಂಡ ಬದುಕನ್ನೇ ಧಿಕ್ಕರಿಸಿ ಹೊರನಡೆಯುವುದು, ಮುರಿದು ಬಿದ್ದ ಬದುಕಿನ ಅವಲಕ್ಷಣಗಳ ನಡುವೆ ಮಂಜಪ್ಪನ ಸಾವು ಕಾದಂಬರಿ ತುಂಬ ಪರಿಣಾಮಕಾರಿಯಾಗಿ ಮಂಜಪ್ಪನ ಬದುಕಿನ ದುರಂತದ ಚಿತ್ರಣ ನೀಡುತ್ತದೆ.

ಕಾದಂಬರಿ ಮೂರು ಬಗೆಯ ಪಾತ್ರಗಳನ್ನು ಒಳಗೊಂಡಿರುತ್ತದೆ. ಯಜಮಾನ ಅಥವಾ ಭೂ ಒಡೆಯರನ್ನು ಪ್ರತಿನಿಧಿಸುವ ಶೆಟ್ಟರು, ಇರುವುದನ್ನು ಒಪ್ಪಿಕೊಂಡು ತನ್ನ ಸೀಮಿತ ಜಗತ್ತಿನಲ್ಲಿಯೇ ಕನಸುಗಳನ್ನು ಹುಟ್ಟಿಸಿಕೊಳ್ಳುವ ಮಂಜಪ್ಪ ಇತ್ಯಾದಿ.... ಆದರೆ ಇರುವುದನ್ನು ಅಸಹನೆಯಿಂದಲೇ ಒಪ್ಪಿಕೊಂಡು ಸದಾ ಕುದಿವ ಮನಸ್ಥಿತಿ ಹೊಂದಿ ಸಾಮಾಜಿಕ, ರಾಜಕೀಯ, ಪರಿವರ್ತನೆಗೆ ತುಡಿವ ಚೋಮ...

ಕಾದಂಬರಿ ಧ್ವನಿಸುವ ಸಂದೇಶ ಈಗಿನ ಸಂದರ್ಭದಲ್ಲಿ ಅಪ್ರಸ್ತುತವೆನ್ನಿಸಿದರೂ ಮೊಗಸಾಲೆಯವರು ಬರವಣಿಗೆ ಕೈಗೊಂಡಾಗಿನ ಕಾಲಘಟ್ಟದಲ್ಲಿ ಅಸಹಜವೇನೂ ಆಗಿರಲಿಲ್ಲ. ಮಂಜಪ್ಪ ಕಾಯಕ ಯೋಗಿಯ ಹಾಗೆ ಒಕ್ಕಲಾಗಿ ದುಡಿಯುತ್ತಲೇ ಸ್ವಂತ ಜಮೀನಿನ ಮಾಲೀಕನಾಗುವ ಕನಸನ್ನು ಕಾಣುವುದು ಮೊಗಸಾಲೆಯವರಿಗೆ ಅರ್ಥಪೂರ್ಣವಾಗಿಯೇ ಕಾಣಿಸುತ್ತದೆ. ಮಂಜಪ್ಪನ ಕನಸಿಗೆ ಶೆಟ್ಟರ ಹಾರೈಕೆ ಬೆಂಬಲಗಳೆಲ್ಲ ಇವೆ. ಆದರೆ ಯಾವಾಗ ಹಕ್ಕು, ಸಮಾನತೆಗಳ ಪ್ರಶ್ನೆಗಳು ಚೋಮನ ಮುಖಾಂತರ ಎತ್ತಲ್ಪಟ್ಟವೋ ಆವಾಗ ಕಾದಂಬರಿ ತನ್ನ ಗತಿಯನ್ನೇ ತೀರಾ ನಿರ್ಣಾಯಕ ಘಟ್ಟಕ್ಕೆ ತಲುಪಿಸಿಬಿಡುತ್ತದೆ. ಎರಡು ವಿಚಾರಗಳ ಸಂಘರ್ಷ ಪ್ರಾರಂಭವಾಗಿ ಕಥೆ ನೇಪಥ್ಯಕ್ಕೆ ಸರಿದು ಬಿಡುತ್ತದೆ. ತೀರಾ ಅವಸರವಸರವಾಗಿ ಬಿಚ್ಚಿಕೊಳ್ಳುವ ಘಟನಾವಳಿಗಳು ಕೇವಲ ಚೋಮ ಹಾಗೂ ಮಂಜಪ್ಪನ ದುರಂತವನ್ನು ಪ್ರತಿಪಾದಿಸುವುದರಲ್ಲೇ ಮುಕ್ತಾಯಗೊಳ್ಳುತ್ತವೆ. ಮೊಗಸಾಲೆಯವರೇ ಮುನ್ನುಡಿಯಲ್ಲಿ ಬರೆದುಕೊಂಡಂತೆ 'ಅವರ ಹಿಂದಿನ ಭಾವನೆಗಳಿಗೂ ಇಂದಿನವುಗಳಿಗೂ ಎಷ್ಟೋ ವ್ಯತ್ಯಾಸವಿದೆ' ಕಾದಂಬರಿ ಪ್ರಾರಂಭದಲ್ಲಿ ಅಪಾರ ಭರವಸೆಗಳನ್ನು ಓದುಗರಲ್ಲಿ ಹುಟ್ಟಿಸಿದರೂ.... ನಂತರ ಒಂದು ತರ್ಕಕ್ಕೆ, ಸೂತ್ರಕ್ಕೆ ಒಡ್ಡಿಕೊಂಡಂತೆ ಘಟನಾವಳಿಗಳು ಹೆಣೆಯಲ್ಪಟ್ಟಿರುವ ಹಾಗೆ ಭಾಸವಾಗುವುದರಿಂದ ಅದೇ ಕಾದಂಬರಿಯ ದೌರ್ಬಲ್ಯವೂ ಆಗಿಬಿಡುತ್ತದೆ.

ಆದರೂ 'ಮಣ್ಣಿನ ಮಕ್ಕಳು' ಕಾದಂಬರಿಗೆ ಮೊಗಸಾಲೆಯವರ ಆರಂಭಿಕ ಕಾದಂಬರಿಯ ಯಶಸ್ಸಿನ ಮನ್ನಣೆಯಂತೂ ಖಂಡಿತ ಇದೆ.

o

# ರೂಢಿಗತ ನಂಬಿಕೆಗೆ ಮೌನ ಪ್ರತಿಕ್ರಿಯೆ - 'ಅನಂತ'

ಮಂದಾಕಿನಿ ಪುರೋಹಿತ



ದಕ್ಷಿಣ ಕನ್ನಡ ಜಿಲ್ಲೆ ಎಂದ ಕೂಡಲೇ ನಮ್ಮ ಕಣ್ಮುಂದೆ ನಿಲ್ಲುವವರು ವಿರಾಟ್ ಪ್ರತಿಭೆಯ ಕಾದಂಬರಿಕಾರ ಶಿವರಾಮ ಕಾರಂತರು. ನಂತರ ಪ್ರೊ. ಕು.ಶಿ.ಹರಿದಾಸಭಟ್ಟ, ಚಿತ್ರಕಲಾವಿದ ಕಟ್ಟಿಂಗೇರಿ ಕೃಷ್ಣ ಹೆಬ್ಬಾರರು, ಧರ್ಮಸ್ಥಳದ ಧರ್ಮಾಧಿಕಾರಿ ಪೂಜ್ಯ ಶ್ರೀ ವೀರೇಂದ್ರ ಹೆಗ್ಗಡೆಯವರಂತಹ ಉನ್ನತ ಚೇತನಗಳು.

ಇದೇ ದ.ಕ. ಜಿಲ್ಲೆಯಲ್ಲಿ ಎಲೆ ಮರೆಯ ಹೂವಾಗಿ ತಮ್ಮಷ್ಟಕ್ಕೆ ಕನ್ನಡ ಪ್ರೀತಿಯನ್ನು ಹಚ್ಚಿಕೊಂಡು ನಾಡಿನ ಮೂಲೆ ಮೂಲೆಯಲ್ಲಿರುವ ಸಾಹಿತ್ಯ ಬಂಧುಗಳೊಡನೆ ಆತ್ಮೀಯವಾಗಿ ತಮ್ಮನ್ನು ಬೆಸೆದುಕೊಂಡು ಕನ್ನಡ ಕೆಲಸವನ್ನು ಮಾಡುತ್ತ ಬಂದಿರುವ ಡಾ. ನಾ. ಮೊಗಸಾಲೆ ಮತ್ತು ಶ್ರೀ ವಿ.ಗ. ನಾಯಕರಂತಹವರು ಕನ್ನಡದ ಸಾಂಸ್ಕೃತಿಕ ಕಂಪನ್ನು ಬೀರುತ್ತಿರುವರು.

ಇದೀಗ ಡಾ. ನಾ. ಮೊಗಸಾಲೆಯವರಿಗೆ ಅರವತ್ತು ತುಂಬಿದೆ. ಅವರದು ಸಾರ್ಥಕ ಬದುಕು. ವೃತ್ತಿಯಿಂದ ವೈದ್ಯರಾಗಿದ್ದು ತಮ್ಮ ಸಾಹಿತ್ಯಿಕ ಪ್ರವೃತ್ತಿಯನ್ನು ಜೀವಂತವಾಗಿ ಕಾಪಾಡಿಕೊಂಡು ಬಂದಿರುವರು. ಲೇಖಕ ಡಾ. ಮೊಗಸಾಲೆಯವರು 'ಅನಂತ' ಕಾದಂಬರಿಯ ಮೊದಲ ಮಾತಿನಲ್ಲಿ ಹೇಳಿಕೊಂಡಿರುವಂತೆ ಇದೊಂದು ಪ್ರಾದೇಶಿಕ ಕಾದಂಬರಿ. ಅವರು ವೈದ್ಯಕೀಯ ವಿದ್ಯಾರ್ಥಿ ಯಾಗಿದ್ದಾಗ 1965ರಲ್ಲಿ ಬರೆದ ಈ ಕಾದಂಬರಿ 1968ರಲ್ಲಿ ಪ್ರಕಟವಾಗಿದೆ.

ದ.ಕನ್ನಡದ ಪುತ್ತೂರು, ಕಾಸರಗೋಡು ಆಸುಪಾಸಿನಲ್ಲಿ ನೆಲೆಸಿರುವ ಹವ್ಯಕ ಜನಾಂಗದ ಸಾಮಾಜಿಕ ಚಿತ್ರಣ ಈ ಕಾದಂಬರಿಯಲ್ಲಿದೆ. ಸ್ವಾತಂತ್ರ್ಯ ಪೂರ್ವದ ದಶಕಗಳಿಲ್ಲಿಯ ಹವ್ಯಕ ಜನಾಂಗದ ರೂಢಿಗತ ನಂಬಿಕೆಗಳು, ಅವರ ಜೀವನ ಕ್ರಮ, ಅವರ ಮಾನವೀಯ ಸಂಬಂಧಗಳು, ಕೌಟುಂಬಿಕ ಸಂಬಂಧಗಳನ್ನು ಈ ಕಾದಂಬರಿ ಸ್ವಾಭಾವಿಕವಾಗಿ ತೆರೆದು ತೋರಿಸುತ್ತದೆ.

ಅರ್ಥರಹಿತ ರೂಢಿಗತ ಸಾಂಪ್ರದಾಯಿಕ ನಂಬಿಕೆಗಳ ಸಂಕೋಲೆಯಲ್ಲಿ ನಿಸರ್ಗ ಸಹಜವಾಗಿ ಹದಿಹರೆಯದ ಗಂಡು ಹೆಣ್ಣಿನ ಆಕರ್ಷಣೆಯಲ್ಲಿ ಅಂಕುರಿಸಿದ ಪ್ರೀತಿ, ಪ್ರೇಮದ ಭಾವನೆಗಳು ಅರಳಿ ನಳನಳಿಸದೇ ಕಮರಿ ಹೋಗುವುದನ್ನು ಲೇಖಕರು ಅತ್ಯಂತ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

ಈ ಕಥಾವಸ್ತು ಹವ್ಯಕ ಜನಾಂಗದ ಹಿನ್ನೆಲೆಯಲ್ಲಿ ಚಿತ್ರಿತವಾಗಿದ್ದರೂ ಒಟ್ಟು ಸಮಾಜದಲ್ಲಿ ರೂಢಿಗತ ನಂಬಿಕೆಗಳು ಅಂಧಶ್ರದ್ಧೆಗಳು ಇರುವವರೆಗೂ ಇಂತಹ ಸಮಸ್ಯೆಗಳು ಉಳಿದುಕೊಂಡೇ ಬಿಡುತ್ತವೆ.

ಸ್ವಾತಂತ್ರ್ಯ ಪೂರ್ವದಲ್ಲೇ ಆರಂಭಗೊಂಡು ತೀವ್ರವಾದ ಶಿಕ್ಷಣ ಪ್ರಸಾರ, ಆಧುನಿಕ ವಿಚಾರಧಾರೆಯಿಂದ ಇಪ್ಪತ್ತೊಂದನೆಯ ಶತಮಾನದವರೆಗೂ ಸಮಾಜ ಬದಲಾಗುತ್ತ ನಡೆದಿದ್ದರೂ ಮದುವೆಯಂತಹ ಸಂಬಂಧಗಳ ವಿಚಾರದಲ್ಲಿ ಇನ್ನೂ ಅನೇಕ ಜನಾಂಗಗಳಲ್ಲಿ ಕಟ್ಟು ಪಾಡುಗಳು ಇದ್ದೇ ಇವೆ.

ಇದೊಂದು ಪ್ರಾದೇಶಿಕ ಹಿನ್ನೆಲೆಯುಳ್ಳ ಕಾದಂಬರಿ. ಪ್ರಾದೇಶಿಕ ಕಥೆ ಕಾದಂಬರಿಯ ಲೇಖಕ ತಾನು ಹುಟ್ಟಿ ಬೆಳೆದ ಪ್ರದೇಶದ ಪ್ರಾಕೃತಿಕ ವೈವಿಧ್ಯ, ಅಲ್ಲಿಯ ಭಾಷೆ, ಸಂಸ್ಕೃತಿ, ಆಚಾರ, ವಿಚಾರ, ನಂಬಿಕೆಗಳು ಜೀವನ ವಿಧಾನ, ವೇಷಭೂಷಣ ಇತ್ಯಾದಿಗಳನ್ನು ಜೀವಂತವಾಗಿ ಚಿತ್ರಿಸಿರುತ್ತಾನೆ. ಇಂತಹ ಪ್ರಾದೇಶಿಕ ಕಾದಂಬರಿಗಳಲ್ಲಿ ಕುವೆಂಪು ಅವರ ಕಾನೂರು ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು, ಕಾರಂತರ ಬೆಟ್ಟದ ಜೀವ, ಕುಡಿಯರ ಕೂಸು, ಭೈರಪ್ಪನವರ ಗೃಹಭಂಗ, ರಾವ್ ಬಹದ್ದೂರರ ಗ್ರಾಮಾಯಣದಂತಹ ಕಾದಂಬರಿಗಳು ಓದುಗರಿಗೆ ಆಯಾ ಪ್ರದೇಶದ, ಆಯಾ ಜನಾಂಗದ ಚಿತ್ರಣವನ್ನು ಒದಗಿಸುತ್ತವೆ. ಎಂ.ಕೆ. ಇಂದಿರಾ ಅವರ ತುಂಗಭದ್ರ, ಫಣೀಯಮ್ಮ, ತಗ್ಗಿನ ಮನೆ ಸೀತೆ ಕಾದಂಬರಿಗಳು, ವೈದೇಹಿ, ಮಿತ್ರಾ ವೆಂಕಟ್ರಾಜ್, ಗಂಗಾ ಪಾದೇಕಲ್‌ರಂತಹ ಲೇಖಕಿಯರ ಕರಾವಳಿ ಪ್ರದೇಶದ ಕಥೆ ಕಾದಂಬರಿಗಳು, ಗೀತಾ ನಾಗಭೂಷಣ, ಶಾಂತಾದೇವಿ ಕಣವಿಯವರ ಕಥಾ ಸಾಹಿತ್ಯ ಉತ್ತರ ಕರ್ನಾಟಕದ ಪ್ರಾದೇಶಿಕತೆಯನ್ನು ಒಳಗೊಂಡಿದೆ.

ಪ್ರಸ್ತುತ ಈ 'ಅನಂತ' ದ.ಕ. ಜಿಲ್ಲೆಯ ಹಳ್ಳಿಯ ಪರಿಸರದ ಹವ್ಯಕ ಕುಟುಂಬದ ಹದಿಹರೆಯದ ಮಕ್ಕಳ ದುರಂತ ಪ್ರೇಮದ ಕಥೆಯಾಗಿದೆ. ಅವರ ಪ್ರೇಮ ದುರಂತವಾಗಲು ಆ ಜನಾಂಗದ ರೂಢಿಗತ ನಂಬಿಕೆಯೇ ಕಾರಣವಾಗಿದೆ. ದ.ಕ.ದಲ್ಲಿ ಯಾವುದೇ ಜನಾಂಗದಲ್ಲಿ ಅಕ್ಕನ ಮಗಳನ್ನು ಸೋದರಮಾವ ಮದುವೆಯಾಗುವುದು ನಿಷಿದ್ಧ. ಏಕೆಂದರೆ ಸೋದರ ಸೊಸೆ ಮಗಳಿಗೆ ಸಮಾನ ಎಂಬ ನಂಬಿಕೆ. ಈ ನಂಬಿಕೆಯೇ ಕಾದಂಬರಿ ಮುಖ್ಯ ಪಾತ್ರಗಳಾದ ಅನಂತ ಭಾರತಿಯರ ಮದುವೆಗೆ ಅಡ್ಡಗೋಡೆಯಾಗುತ್ತದೆ. ಇವರಿಬ್ಬರೂ ಬಾಲ್ಯದಿಂದಲೇ ಕೂಡಿ ಆಡಿ ಬೆಳೆದವರು. ಅಕ್ಕನ ಮನೆಯಲ್ಲಿದ್ದು ಶಾಲಾಭ್ಯಾಸ ಮುಗಿಸಿದ ಅನಂತ ಮೈಸೂರಿನಲ್ಲಿ ವೈದ್ಯಕೀಯ ವ್ಯಾಸಂಗ ಮುಗಿಸಿ ಹಳ್ಳಿಗೆ ಬರುತ್ತಾನೆ. ಬೆಳೆದು ನಿಂತ ಈ ಹದಿಹರೆಯದಲ್ಲಿ ಮನದಲ್ಲಿ ಆಕರ್ಷಣೆ, ಪ್ರೀತಿ, ಪ್ರೇಮವಾಗಿ ಪಲ್ಲವಿಸತೊಡಗುತ್ತದೆ.

ಆಧುನಿಕ ಶಿಕ್ಷಣ ಪಡೆದ ಅನಂತ ನಗರ ಜೀವನದ ಸೊಗಸನ್ನು ಕಂಡವ. ಆಧುನಿಕ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಂಡು ಬಂದವ. ಅದು ಅವನ ವೇಷ ಭೂಷಣದಲ್ಲೂ ವ್ಯಕ್ತವಾಗುತ್ತದೆ. ಮಕ್ಕಳಿಗೆಂದು ತಂದ ಕ್ಯುಟಿಕುರಾ ಪೌಡರ್, ಆಗಿನ ಹಳ್ಳಿಯ ಹೆಂಗಸರಿಗೆ ಗೊತ್ತಿಲ್ಲದ ಬ್ರಾಸರೀಸ್ ಮೊದಲಾದವುಗಳಿಂದ ಆಧುನಿಕತೆಯ ಕುತೂಹಲ ಬೆಳಸುತ್ತಾನೆ.

ಬೆಳೆದು ನಿಂತ ಭಾರತಿಯನ್ನು ಕಂಡಾಗ ಬಾಲ್ಯದ ನೆನಪುಗಳು ಬಿಚ್ಚಿಕೊಳ್ಳುತ್ತವೆ.

ತಾವಿಬ್ಬರೂ 'ಸೂದ್ರರ ಕುಟ್ಟಿಗರ' ಮಕ್ಕಳೊಡನೆ ಆಟವಾಡಿದ್ದು ಅಜ್ಜಿಗೆ ಅಪರಾಧವಾಗಿ ಕಂಡದ್ದು, ಹತ್ತು ವರ್ಷದ ಭಾರತಿಯನ್ನು ಹುಲಿದನ ಆಟದಲ್ಲಿ ಅಪ್ಪಿದ್ದು ಇತ್ಯಾದಿ ಸಂಗತಿಗಳು.

ವಯಸ್ಸಿಗೆ ಬಂದ ಹುಡುಗಿ ಭಾರತಿಗೆ ಅಜ್ಜಿ ಅನಂತನಿಂದ ದೂರ ಹಾಸಿಗೆ ಹಾಸಿ ಮಲಗುವಂತೆ ಸೂಚನೆ ನೀಡಿದ್ದು ಇಬ್ಬರಲ್ಲೂ ಯಾವುದೋ ಅವ್ಯಕ್ತ ಭಾವನೆಗಳಿಗೆ ಎಡೆಮಾಡಿಕೊಡುತ್ತವೆ. ತಮ್ಮಿಬ್ಬರಲ್ಲಿ ಮೂಡಿದ ಭಾವನೆಗಳನ್ನು ಅವರು ಎಂದೂ ಮನಬಿಚ್ಚಿ ಹೇಳಿಕೊಳ್ಳುವುದಿಲ್ಲ ಕೂಡ.

ಹೀಗಿದ್ದಾಗ ಈಶ್ವರಭಟ್ಟರು ತಮ್ಮ ಮಗಳು ಭಾರತಿಗೆ ಕೃಷ್ಣಭಟ್ಟರ ಮಧ್ಯಸ್ಥಿಕೆಯಿಂದ ಎರಡನೆಯ ಸಂಬಂಧದ ಆಸ್ತಿವಂತ ಗಂಡಿಗೆ ಮದುವೆ ಮಾಡಿಕೊಡಲು ನಿರ್ಧಾರ ಮಾಡಿ ಬಿಡುತ್ತಾರೆ.

ಕೆಲವು ದಿನ ಅಜ್ಜನ ಊರಿನಲ್ಲಿ (ಅನಂತನ ಮನೆಯಲ್ಲಿ) ಇರಲು ಬಂದ ಭಾರತಿಯನ್ನು ಕರೆದೊಯ್ಯಲು ಈಶ್ವರಭಟ್ಟರು ಬರುತ್ತಾರೆ. ಅವಳ ಮನಸ್ಸು ಹೇಗೆ? ಅವಳಿಗೆ ಒಪ್ಪಿಗೆ ಇದೆಯೇ? ಎಂಬುದನ್ನು ವಿಚಾರ ಮಾಡುವ ಗೋಜಿಗೇ ಹೋಗದೆ ಮದುವೆ ನಿಶ್ಚಿತ ಮಾಡಿದ ಸಂಗತಿಯನ್ನು ಹಿರಿಯರ ಮುಂದೆ ಪ್ರಸ್ತಾವಿಸುತ್ತಾರೆ.

ಇದಾವುದೂ ಗೊತ್ತಿಲ್ಲದ ಅನಂತ ತಾನು ಭಾರತಿಯನ್ನು ಪ್ರೀತಿಸುವ ವಿಚಾರವನ್ನು ಸ್ನೇಹಿತ ವೆಂಕಟ್ರಮಣನಲ್ಲಿ ಮಾತ್ರ ಹೇಳುತ್ತಾನೆ. ಮರುದಿನ ಅನಂತನ ತಂದೆ (ಮಹಾಬಲಭಟ್ಟ)ಗೆ ಈ ವಿಷಯ ಹೇಳಬೇಕೆನ್ನುವಷ್ಟರಲ್ಲಿ ಭಾರತಿಯ ಮದುವೆ ನಿಶ್ಚಯವಾಗಿ ಬಿಟ್ಟಿರುತ್ತದೆ.

ರೂಢಿಗತ ವ್ಯವಸ್ಥೆಯನ್ನೇ ಒಪ್ಪಿಕೊಂಡ ಪಾರ್ವತಿ ತನ್ನ ಮಗಳ ಮದುವೆಯ ಬಗ್ಗೆ ಯೋಚಿಸುತ್ತಾಳೆ. "ಮದುವೆ ಹೆಣ್ಣಿಗೆ ಬೇಕಾದ್ದು ನಾಲ್ಕು ಮಕ್ಕಳಿಗಾಗಿ..... ಎರಡನೆಯ ಸಂಬಂಧವಾದರೇನು? ಮೊದಲನೆಯ ಹೆಂಡತಿಯಲ್ಲಿ ಅವನಿಗೆ ಮಕ್ಕಳಿಲ್ಲವಷ್ಟೆ? ಹಾಗಿದ್ದರೆ ತಾಪತ್ರಯ. ಆಸ್ತಿ ಪಾಸ್ತಿ ಸಾಕಷ್ಟಿದೆ. ಹುಡುಗನೋ ಚೆನ್ನದಂತಹವನು. ನಿಜವಾಗಿ ನಮ್ಮ ಅಂತಸ್ತಿಗೆ ಮೀರಿದ ಸಂಬಂಧ. ಇದನ್ನೆಲ್ಲ ಮಥಿಸದೆ ಯಾಕೋ ಸುಮ್ಮಸುಮ್ಮನೆ ಏನೇನೋ ಯೋಚಿಸಿ ತಲೆ ಹಾಳು ಮಾಡಿಕೊಂಡಿದ್ದಾಳೆ! ಆದರೆ ಇದೆಲ್ಲ ಎಷ್ಟು ದಿನ? ಮದುವೆ ಯಾಗುವ ತನಕ! ಮದುವೆಯಾದ ಮೇಲೆ ಎಂತಹ ಹುಡುಗಿಯನ್ನಾದರೂ ಗಂಡಸರು ತಮ್ಮ ಕೈವಶ ಮಾಡಿಕೊಳ್ಳದೆ ಇರುತ್ತಾರೆಯೇ?" (ಪುಟ.89)

ಅಜ್ಜಿ ಸರಸ್ವತಿ ಭಾರತಿಗೆ ಉಪದೇಶಿಸಿದ್ದು ಹೀಗೆ "ಗಂಡನ ಮನೇಲಿ ಯಾವಾಗಲೂ ತಗ್ಗಿ ಬಗ್ಗಿ ನಡೆ ಮಗಳೇ! ಎರಡೂ ಕುಲಕ್ಕೂ ಒಳ್ಳೆ ಹೆಸರು ಬಪ್ಪ ಹಾಗೆ ನಡಕ್ಕೊಂಡು ಬಾ" (ಪುಟ. 85)

ಈ ಮಾತುಗಳನ್ನೇ ಮಥಿಸಿದ ಭಾರತಿ ದ್ವಂದ್ವದಲ್ಲಿ ಸಿಕ್ಕು ಹೊರ ಬರುವ ದಾರಿ ಕಾಣದೇ ಅನಂತನನ್ನು ಊರಿಗೆ ಹೊರಡುವ ಮುನ್ನ ನೋಡಲು ಹೋದಾಗ "ಹೋಗು ಹೋಗು" ಎಂದದ್ದು ಅವಳಿಗೆ ತೀರ ನಿರಾಶೆಯನ್ನುಂಟು ಮಾಡುತ್ತದೆ.

ಊರಿಗೆ ಹಿಂತಿರುಗಿದ ಭಾರತಿಗೆ ಯೋಚಿಸುತ್ತಿದ್ದಂತೆ ಶೂನ್ಯತೆಯ ಅರಿವಾಗತೊಡಗಿತು.

ತನ್ನ ಹಾಗೂ ಅನಂತ ಮಾವನ ಸಂಬಂಧ. ಪ್ರೇಮ, ಪ್ರೀತಿ ಎಲ್ಲಾ ಈ ಮದುವೆಯಿಂದಾಗಿ ಮುರಿಯುವುದೇ ಅಲ್ಲದೆ ಒಲ್ಲದ ಈ ಮದುವೆಯಿಂದ ತನಗೆ ಸಿಗುವ ಸುಖವಾದರೂ ಏನು? (ಪುಟ.90)

ರಾತ್ರಿಯಿಡೀ ಯೋಚಿಸಿದ ಭಾರತಿ ನಸುಕಿನಲ್ಲಿ ಹೊಳೆಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಬೇಡವಾದ ಮದುವೆಯಿಂದ ತಪ್ಪಿಸಿಕೊಳ್ಳಲು ಇದು ಅವಳು ಕಂಡುಕೊಂಡ ದಾರಿ.

ಭಾರತಿಯ ಸಾವಿಗೆ ತಾವೇ ಕಾರಣ ಎಂದು ಕೃಷ್ಣಭಟ್ಟರು ಮನದಲ್ಲಿ ಪಶ್ಚಾತ್ತಾಪ ಪಟ್ಟರೆ, ಹೆತ್ತವರು ಅವಳ ಸಾವಿಗೆ ಕಾರಣಗಳನ್ನು ಕಂಡುಕೊಳ್ಳದಷ್ಟು ದಿಗ್ಮೂಢರಾಗಿ ತಲೆಯ ಮೇಲೆ ಕೈಹೊತ್ತು ಕುಳಿತುಕೊಳ್ಳುತ್ತಾರೆ.

ಇತ್ತ ಅನಂತ ತಾನು ಭಾರತಿಯನ್ನು ಮದುವೆಯಾಗುವ ವಿಚಾರವನ್ನು ತಂದೆಗೆ ಹೇಳಬೇಕೆನ್ನುವಷ್ಟರಲ್ಲಿ ಸಿಡಿಲೆರಗಿದಂತೆ ಈ ಘಟನೆ ಅಪ್ಪಳಿಸುತ್ತದೆ. "ತಾನು ಭರವಸೆ ಕೊಡದೆ ಅವಳನ್ನು ಸರಿಯಾಗಿ ನೋಡಿಕೊಳ್ಳದೆ ಕೊಂದೆ! ಭರವಸೆ ಕೊಟ್ಟಿದ್ದರ ಖಂಡಿತ ಬದುಕುತ್ತಿದ್ದಳು. ಹೀಗಾಗುತ್ತಲೇ ಇರಲಿಲ್ಲ" (ಪುಟ.99) ಇದು ಅನಂತನ ತಲೆಯಲ್ಲಿ ಸುತ್ತುತ್ತಿದ್ದ ವಿಚಾರ ಸರಣಿ.

ನಿರಾಶೆಯ ಸುಳಿಯಲ್ಲಿ ಸಿಕ್ಕ ಅನಂತ ತನ್ನ ದುಃಖದ ಬಿಡುಗಡೆಗೆ ದಾರಿ ಕಂಡುಕೊಂಡಿದ್ದು ವೇದಾಂತಿಯಂತೆ. ತಾನು ಯಾವುದೋ ಸತ್ಯವನ್ನು ಕಂಡುಕೊಂಡಂತೆ ಭ್ರಮಿಸುತ್ತಾನೆ. "ಬದುಕಿನಲ್ಲಿ ಸ್ಥಿರತೆ ಇಲ್ಲ, ಬಯಸಿದ್ದು ಅರಸಿದ್ದು ಕೈಗೆ ಎಟಕುವ ಹಾಗಿಲ್ಲ. ಈ ಸತ್ಯದಲ್ಲಿ ತಾನೂ ನಾಳೆ ಲೀನವಾಗಲಿದ್ದೇನೆ. ಸಾವು ಎಂಬುದು ಎಂತಹ ಅಪ್ರಾಸಂಗಿಕ ಘಟನೆ" (ಪುಟ. 101)

ಸಂಪ್ರದಾಯದ ಕಟ್ಟು ಪಾಡುಗಳಲ್ಲಿ ಸಿಕ್ಕ ಅನಂತ ಭಾರತಿ ಅಸಹಾಯಕರಾಗಿ ತಮ್ಮ ಮನದ ಭಾವನೆಗಳನ್ನು ಬಚ್ಚಿಟ್ಟುಕೊಂಡು ಸಮಸ್ಯೆಗಳಿಗೆ ಮುಖಾಮುಖಿಯಾಗುವಲ್ಲಿ ವಿಫಲರಾಗುತ್ತಾರೆ. ವಿದ್ಯಾವಂತನಾದ ಅನಂತ ದುರ್ಬಲನಾಗಿಯೇ ತೋರುತ್ತಾನೆ. ಭಾರತಿಗೆ ತನ್ನ ಮನದಿಚ್ಛೆಯನ್ನು ತಿಳಿಸದೇ ಇರುವುದು ಅವನ ಆತ್ಮವಿಶ್ವಾಸದ ಕೊರತೆಯಾಗಿದೆ.

ಪಾರ್ವತಿಗೆ ಅನಂತ ಭಾರತಿಯಲ್ಲಿರುವ ಭಾವನೆಗಳ ಬಗ್ಗೆ ಎಲ್ಲೋ ಒಂದಿಷ್ಟು ಸಂದೇಹವಿದ್ದರೂ ಅವರನ್ನು ನೇರವಾಗಿ ಕೇಳುವುದಿಲ್ಲ. ಒಟ್ಟಿನಲ್ಲಿ ಎಲ್ಲರ ಹೃದಯಗಳಲ್ಲೂ ಸಂಪ್ರದಾಯದ ಬಾಗಿಲಿಗೆ ಬೀಗ ಜಡಿಯಲ್ಪಟ್ಟಿದೆ.

ಈಶ್ವರ ಭಟ್ಟರು, ಪಾರ್ವತಿ, ಮಹಾಬಲ ಭಟ್ಟರು, ಸರಸೋತಿ, ಕೃಷ್ಣಭಟ್ಟರು 'ಅಜ್ಜ ನೆಟ್ಟ ಆಲದ ಮರ'ಕ್ಕೆ ನೇಣು ಹಾಕಿಕೊಳ್ಳುವ ಮೂಢರು, ರೂಢಿಗತ ವ್ಯವಸ್ಥೆಯ ಪ್ರತಿನಿಧಿಗಳು.

ಇವರ ದೃಷ್ಟಿಯಲ್ಲಿ ಮದುವೆ ಹೆಣ್ಣಿಗೊಂದು ಗಂಡನ್ನು ಗಂಟು ಹಾಕುವುದು. ಇಂತಹ ಸಂಬಂಧಗಳು ಭಾವನಾತ್ಮಕ ನೆಲೆಯಲ್ಲಿ ವಿಫಲವಾಗಿ ಕೇವಲ ಮಕ್ಕಳನ್ನು ಹೆರುವುದಕ್ಕಾಗಿ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಅರ್ಥರಹಿತವಾಗುತ್ತವೆ.

ಸಂಪ್ರದಾಯದ ನಂಬಿಕೆಗಳನ್ನು ಮೆಟ್ಟಿ ನಿಂತು ಸಮಸ್ಯೆಗೆ ಮುಖಾಮುಖಿಯಾಗುವಲ್ಲಿ

ಅನಂತ ಸೋಲುತ್ತಾನೆ. ಪೂರ್ಣತೆಯತ್ತ ಸಾಗಬೇಕು ಎಂದು ಯೋಚಿಸುವ ಭಾರತಿ ತನ್ನ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವಲ್ಲಿ ವಾಸ್ತವತೆಯಿಂದ ದೂರವಾಗುತ್ತಾಳೆ.

ಅನಂತ ಮನೆಯಿಂದ ನಿರ್ಗಮಿಸುವುದೂ, ಭಾರತಿ ಆತ್ಮಹತ್ಯೆ ಮಾಡಿಕೊಂಡು ಮನಸ್ಸು ಒಪ್ಪದ ಮದುವೆಯನ್ನು ನಿರಾಕರಿಸುವುದು ಒಟ್ಟು ರೂಢಿನಂಬಿಕೆಯಿಂದ ಹೊರಬರುವ ಮೌನ ಪ್ರತಿಕ್ರಿಯೆ ಎನ್ನಬಹುದು.

ಏನೇ ಇರಲಿ, ಕಾದಂಬರಿಯಲ್ಲಿ ನಿರೂಪಿತ ವಸ್ತುವಾದ ಗಂಡು ಹೆಣ್ಣಿನ ಆಕರ್ಷಣೆ, ಪ್ರೀತಿ, ಪ್ರೇಮ, ಪ್ರಣಯದ ಬಯಕೆ ಚಿರಂತನವಾದುದು. ಅನಂತವಾದುದು.

O

# ‘ನೆಲ ಮುಗಿಲುಗಳ ಮಧ್ಯೆ’ - ನನ್ನ ಗ್ರಹಿಕೆಯಲ್ಲಿ

ಡಾ. ವಿಜಯಾ ಸುಬ್ಬರಾಜ್

ಕಾದಂಬರಿ, ಕವಿತೆ ಎರಡೂ ಪ್ರಕಾರಗಳನ್ನು ಸಮರ್ಥವಾಗಿ ದುಡಿಸಿಕೊಳ್ಳುತ್ತಾ ಬಂದಿರುವ ಡಾ॥ ನಾ. ಮೊಗಸಾಲೆ ವೃತ್ತಿ. ಪ್ರವೃತ್ತಿಗಳೆರಡಕ್ಕೂ ಸಮರ್ಥವಾಗಿ ನ್ಯಾಯ ಸಲ್ಲಿಸಿದ್ದರೂ, ಕಾದಂಬರಿ ಕ್ಷೇತ್ರದಲ್ಲಿ ಹೆಚ್ಚಾಗಿ ಗುರುತಿಸಿ ಕೊಂಡಿದ್ದಾರೆ. ಮೂರು ನಾಲ್ಕು ದಶಕಗಳಿಗೂ ಹೆಚ್ಚುಕಾಲದಿಂದ ನಿರಂತರವಾದ ಬರವಣಿಗೆಯಲ್ಲಿ ತೊಡಗಿಸಿಕೊಂಡಿದ್ದು, ಕನ್ನಡ ಸಾಹಿತ್ಯ ಓದುಗರಿಗೆ ಚಿರಪರಿಚಿತರಾಗಿರುವ ಮೊಗಸಾಲೆಯವರ ನೆಲ ಮುಗಿಲುಗಳ ಮಧ್ಯೆ ಆರಂಭದ ಕಾದಂಬರಿಗಳಲ್ಲಿ ಒಂದಾಗಿದ್ದು ವಿಭಿನ್ನವೂ ಸಂಕೀರ್ಣವೂ ಆದ ಕಥಾನಕವನ್ನು ಒಳಗೊಂಡಿದೆ. ಮೊಗಸಾಲೆಯವರದು ಅತ್ಯಂತ ಆಪ್ತ ಮತ್ತು ಆಕರ್ಷಕವಾದ ಬರವಣಿಗೆಯಾಗಿದ್ದು, ಆರಂಭದಿಂದ ಅಂತ್ಯದವರೆಗೆ ಓದುಗರ ಕುತೂಹಲವನ್ನು ಕಾಯ್ದಿರಿಸಿಕೊಂಡು ಸಾಗುತ್ತದೆ.

1983ರಲ್ಲಿ ಮೊದಲ ಆವೃತ್ತಿಯಾಗಿ ಬಂದಿರುವ ಕಿರುಕಾದಂಬರಿ ಎನ್ನಬಹುದಾದ ಈ ಕಾದಂಬರಿ 1981ರಲ್ಲಿಯೇ `ಮಯೂರ'ದಲ್ಲಿ ಧಾರಾವಾಹಿಯಾಗಿ ಎರಡು ಕಂತುಗಳಲ್ಲಿ ಪ್ರಕಟವಾಗಿದ್ದು, 83 ರಲ್ಲಿ ಮತ್ತೆ ಇಡಿಯಾಗಿ ಪ್ರಕಟಗೊಂಡಿರುವುದು ಈ ಕಾದಂಬರಿಯ ಜನಪ್ರಿಯತೆಗೊಂದು ನಿದರ್ಶನವಾಗಿದೆ. ವೃತ್ತಿಯಲ್ಲಿ ವೈದ್ಯರಾಗಿರುವ ಮೊಗಸಾಲೆಯವರಿಗೆ ವೈದ್ಯಕೀಯ ಜಗತ್ತಿನಲ್ಲಿ ನಡೆಯುವ ಚರ್ಚೆ, ಹೊಸ ಆವಿಷ್ಕಾರಗಳು ಸಮಸ್ಯೆಗಳು, ಕುತೂಹಲಕ್ಕೆ ಕಾರಣವಾದರೆ ಆಶ್ಚರ್ಯವಿಲ್ಲ. ಸುಮಾರು ವರ್ಷಗಳ ಹಿಂದೆ ವೈದ್ಯಕೀಯ ವಲಯದಲ್ಲಿ ದಯಾಮರಣದ (ಒಜಡಿಛಿಥಿ ಇುಟಟುಟಿಂ, ಇಟಿಣುಚಿಟಿಚಿಭುಚಿ) ಬಗ್ಗೆ ಸಾಕಷ್ಟು ಚರ್ಚೆ ನಡೆಯಿತು. ‘ದಯಾಮರಣ'ಕ್ಕೆ ಕಾನೂನಿನ ಸಮ್ಮತಿ ದೊರಕಿಸಿಕೊಳ್ಳುವುದರ ಬಗ್ಗೆ ವಿಶ್ವಾದ್ಯಂತವಾದ ಪ್ರತಿವಾದ, ಚರ್ಚೆಗಳು ನಡೆದವು. ಕಾನೂನು ಬದ್ಧ ಗೊಳಿಸಿದಲ್ಲಿ ಅದರಿಂದ ಸಂಭವಿಸಬಹುದಾದ ದುರಂತಗಳು, ಅನ್ಯಾಯಗಳು ಮುಂತಾದವುಗಳ ಬಗ್ಗೆ ಯೋಚಿಸಿದ ಮನಸ್ಸುಗಳು ‘ದಯಾಮರಣ'ಕ್ಕೆ ವಿರೋಧವನ್ನು ಸೂಚಿಸಿದವು. ಇದಕ್ಕೆ ಸಂಬಂಧಿಸಿದಂತೆ ವೈದ್ಯವಿದ್ವಾಂಸರ ನಡುವೆ ನಡೆದ ಚರ್ಚೆ, ವ್ಯಕ್ತವಾದ ಅಭಿಪ್ರಾಯಗಳು ಇವೆಲ್ಲವನ್ನೂ ಅತ್ಯಂತ ಸೂಕ್ಷ್ಮವಾಗಿ, ಕೂಲಂಕುಶವಾಗಿ ಪರಿಶೀಲಿಸಿದ ಡಾ॥ ಮೊಗಸಾಲೆಯವರ ಸೃಜನಶೀಲ ಪ್ರತಿಭೆ, ಅಭಿಪ್ರಾಯ ರೂಪದಲ್ಲಿ ಇದರ ಬಗ್ಗೆ ವಿಚಾರಗಳನ್ನು ಪ್ರಸ್ತುತ ಪಡಿಸುವುದಕ್ಕೆ ಬದಲಾಗಿ, ಕಾದಂಬರಿಯ ಚೌಕಟ್ಟಿನಲ್ಲಿ ಈ ಸಮಸ್ಯೆಯ ಗಂಭೀರತೆ ಇದಕ್ಕೆ ಮುಖಾಮುಖಿಯಾದಾಗ ಒಳಗಾಗುವ

ಮಾನಸಿಕ ಸಂಘರ್ಷ, ಅನಿರ್ಧಾರದ ನೆಲೆಯಲ್ಲಿ ಹತಾಶಮನಸ್ಸು ಕೈಗೊಳ್ಳುವ ಅತಿರೇಕದ ತೀರ್ಮಾನಗಳು ಮೊದಲಾದವುಗಳ ಸ್ವರೂಪವನ್ನು ಎಳೆ ಎಳೆಯಾಗಿ ಬಿಡಿಸುತ್ತ ಕಡೆಗೆ ದಯಾಮರಣದ ಬಗೆಗಿನ ತಮ್ಮ ನಿಲುವನ್ನು ಸೂಕ್ಷ್ಮವಾಗಿ ಧ್ವನಿಸಿದ್ದಾರೆ.

ಈ 'ದಯಾಮರಣ'ವೆನ್ನುವುದು ಅತ್ಯಂತ ಸೂಕ್ಷ್ಮ ಮತ್ತು ಸಂಕೀರ್ಣ ಸಮಸ್ಯೆ. 1981ರಲ್ಲಿ ಪ್ರಕಟವಾದ ಮಸಾನಿಯವರ ಲೇಖನವೊಂದರಿಂದ ಪ್ರಭಾವಿತರಾದ ಮೊಗಸಾಲೆ ಅವರು ಈ ಸಮಸ್ಯೆಯನ್ನು ಕಾದಂಬರಿಯ ವಸ್ತುವಾಗಿಸಿಕೊಂಡಿರುವುದರ ಜೊತೆಗೆ, ಇದಕ್ಕೆ ಪೂರಕ ಮಾಹಿತಿಯಾಗುವಂತೆ ಕಾದಂಬರಿಯ ಕಡೆಯಲ್ಲಿ ಎಂ.ಆರ್. ಮಸಾನಿ ಅವರ "ಆಂಥಿ-ಣಾಥಿ ಚಿಟಿಜ ತಿಂಟಿಣಾಟಿಣಚಿಡಿಥಿ ಜಟಿಣ್ಣುಚಿಟಿಭುಚಿ" ಎಂಬ ಲೇಖನವನ್ನೂ ನೀಡಿ ಕಾದಂಬರಿಯನ್ನು ಅರ್ಥೈಸಿಕೊಳ್ಳುವಲ್ಲಿ ಹೆಚ್ಚಿನ ನೆರವನ್ನು ಒದಗಿಸಿದ್ದಾರೆ. 

'ದಯಾಮರಣ' ರೋಗಿಯ ದೃಷ್ಟಿಯಿಂದ ಪ್ರಯೋಜನಕಾರಿ ಮತ್ತು ಉಪಕಾರವಾದ್ದು ಎನಿಸಿದರೂ ಕಾನೂನಿನ ನೆಲೆಯಿಂದ ಅನೇಕ ಸಂದಿಗ್ಧಗಳ ಸೃಷ್ಟಿಗೆ ದಾರಿ ಮಾಡುವಂಥಾದ್ದಾಗಿದೆ. ಪ್ರಪಂಚದಲ್ಲಿ ಒಂದೊಂದು ದೇಶದಲ್ಲಿ, ಕಾನೂನು ಒಂದೊಂದು ರೀತಿಯಲ್ಲಿ ಈ 'ದಯಾಮರಣ'ವನ್ನು ವ್ಯಾಖ್ಯಾನಿಸುತ್ತದೆ, ತರ್ಕೈಸುತ್ತದೆ. ಸ್ಕಾಟ್‌ಲ್ಯಾಂಡಿನಲ್ಲಿ ಆತ್ಮಹತ್ಯೆ ಮತ್ತು ಆತ್ಮಹತ್ಯೆಗೆ ಪ್ರೋತ್ಸಾಹ, ಪ್ರಚೋದನೆಗಳೆರಡೂ ಕಾನೂನುಬದ್ಧ ವೆನಿಸಿದರೆ, ಇಂಗ್ಲೆಂಡಿನಲ್ಲಿ ಆತ್ಮಹತ್ಯೆ ಕಾನೂನು ಬದ್ಧ ಅಥವಾ ನ್ಯಾಯ ಸಮ್ಮತ, ಆದರೆ ಆತ್ಮಹತ್ಯೆಗೆ ಪ್ರೋತ್ಸಾಹ ಕಾನೂನುವಿರುದ್ಧ. ಭಾರತದಲ್ಲಿ ಐಪಿಸಿ ಪ್ರಕಾರ ಈ ಎರಡೂ ಕ್ರಿಯೆಗಳೂ ಕಾನೂನು ಬಾಹಿರವಾದವುಗಳು.

ಬದುಕಿಗಿಂತ ಸಾವೇ ರೋಗಿಗೆ ಪ್ರಯೋಜನಕಾರಿಯಾದ್ದು, ನೋವು ನರಳುವಿಕೆಗಿಂತ ನೆಮ್ಮದಿಯ ಚಿರನಿದ್ರೆ ಸ್ವಾಗತಾರ್ಹ ಎನಿಸಿದಾಗಲೂ ಭಾರತೀಯ ಮನಸ್ಸು ಸಾವಿಗೆ ಒಪ್ಪುವುದೇ ಇಲ್ಲ. ರೋಗಿಯನ್ನು ಚಿಕಿತ್ಸೆಗೆ ಒಳಪಡಿಸುತ್ತಿರುವ ವೈದ್ಯರಾಗಲೀ, ರೋಗಿಯ ಸಂಬಂಧಿಗಳಾಗಲೀ ಅಷ್ಟು ಸುಲಭವಾಗಿ ಈ 'ದಯಾಮರಣ' ಭಿಕ್ಷೆಗೆ ಒಳಗಾಗುವುದಿಲ್ಲ. ನೈತಿಕ ಸಂಘರ್ಷದ ಚಕ್ರಸುಳಿಯಲ್ಲಿ ಮಾರಣಾಂತಿಕ ನೋವನ್ನು ಅನುಭವಿಸಲು ಸಿದ್ಧವಾಗುವುದೇ ಹೊರತು, ಪ್ರಜ್ಞಾಪೂರ್ವಕವಾಗಿ ಸಾವಿಗೆ ದೂಡುವುದು ಸರಳವೆನಿಸುವುದಿಲ್ಲ. ಗಂಟಲಲ್ಲಿನ ಬಿಸಿತುಪ್ಪದಂತೆ ನುಂಗಲೂ ಉಗುಳಲೂ ಆಗದ ಅಸಹಾಯಕ ಸ್ಥಿತಿ ಅದಾಗಿರುತ್ತದೆ. ಹೀಗೆ ಇಷ್ಟೊಂದು ಚರ್ಚೆಗೆ ಎಡೆ ಮಾಡಿರುವ 'ದಯಾಮರಣ'ದ ಕುರಿತು ಗಂಭೀರವಾಗಿ ಯೋಚಿಸುವ ಸನ್ನಿವೇಶ ನಿರ್ಮಾಣ, ಇಂತಹ ಸನ್ನಿವೇಶಕ್ಕೆ ಮುಖಾಮುಖಿಯಾಗಿ ನಿಂತು ಯೋಚಿಸುವ ಪಾತ್ರಗಳ ಸೃಷ್ಟಿಯೇ ಈ ಕಾದಂಬರಿಯ ವಿಶೇಷತೆಯಾಗಿದೆ.



ಕಾದಂಬರಿಯ ಮೊದಲಿಗೆ ಕಾಣಿಸಿಕೊಳ್ಳುವ ಪ್ರಕಾಶ, ಎಲಿಜಾ ಅಪರಿಚಿತರಂತೆ ಎದುರಾದರೂ ಕ್ರಮೇಣ ಒಂದೇ ಹೋಟೆಲಿನಲ್ಲಿ ಉಳಿದುಕೊಳ್ಳುತ್ತಾ, ಪರಸ್ಪರ ನೆನಪುಗಳನ್ನು ಕೆರಳಿಸಿಕೊಳ್ಳುತ್ತಾ ಬಂದಾಗ, ಬಾಲ್ಯದ ಸ್ನೇಹದ ಕ್ಷಣಗಳು ಬಿಚ್ಚಿಕೊಳ್ಳುತ್ತಾ, ಸಲುಗೆ, ಸ್ನೇಹಗಳಿಗೆ ಹತ್ತಿರವಾಗುತ್ತಾರೆ. ವ್ಯಾಪಾರ ವ್ಯವಹಾರ ನಿಮಿತ್ತವಾಗಿ ಪ್ರಕಾಶನ ಆಗಮನವಾಗಿದ್ದರೂ, ಎಲಿಜಾ ಒಂಟಿಯಾಗಿ ಬಂದದ್ದೇಕೆಂಬುದು ಪ್ರಕಾಶನಿಂದ ಅಜ್ಞಾತವಾಗಿ ಉಳಿಯುತ್ತದೆ.

ಎಲಿಜಾಳ ಫ್ಲಾಷ್ ಬ್ಯಾಕ್‌ಗಳಿಂದ, ಅವಳ ಬದುಕಿನ ಎಳೆಗಳು ಬಿಚ್ಚಿಕೊಳ್ಳುತ್ತವೆ. ಆತ್ಮಹತ್ಯೆಗೆ ಬಯಸಿ ಬಂದಿದ್ದರೂ, ಯಾವುದೋ ಒಂದು ಅವ್ಯಕ್ತ ಜೀವನ ಪ್ರೀತಿ, ಸುಪ್ತಕಾಂಕ್ಷೆ, ಆತ್ಮಹತ್ಯೆಯ ಕ್ಷಣಗಳನ್ನು ಮುಂದಕ್ಕೆ ದೂಡುತ್ತವೆ. ಆತ್ಮಹತ್ಯೆಗೆ ಪ್ರಬಲವಾದ ಕಾರಣಗಳು ಇಲ್ಲದೆ ಹೋಗಿ, ಎಲಿಜಾಳ ಆತ್ಮಹತ್ಯೆಯ ನಿರ್ಧಾರ ಹುಸಿ, ಹುಡುಗಾಟಿಕೆ ಎನಿಸುತ್ತದೆ. ದಿನಗಳು ಕಳೆಯುತ್ತಿದ್ದಂತೆ ಆತ್ಮಹತ್ಯೆಯ ನಿರ್ಧಾರ ಕರಗಿಹೋಗುತ್ತದೆ.

ವಾಸ್ತವವಾಗಿ ಎಲಿಜಾ ಈ ನಿರ್ಧಾರಕ್ಕೆ ಬರಲು ಹಲವು ಕಾರಣಗಳು, ಬದುಕಿನಲ್ಲಿ ಸಂಭವಿಸಿದ ಘಟನೆಗಳು, ಬದುಕಿನ ಬಗ್ಗೆ ಒಂದು ಖಚಿತವಾದ ನಿಲುವು ನಂಬಿಕೆಗಳು ಇಲ್ಲದಿರುವುದು ಒಂದೆಡೆಯಾದರೆ, ಬುದ್ಧಿಮಾಂದ್ಯ ಮಗು ಮತ್ತೊಂದು ಕಾರಣವಾಗುತ್ತದೆ. ಆಕೆ ಜೀವನದಲ್ಲಿ ನಲಿವಿಗಿಂತ ನೋವನ್ನು ಹೆಚ್ಚು ಕಂಡವಳು, ಪ್ರಾಯದಲ್ಲಿರುವಾಗ ತನ್ನ ಮಾವನು ಹರಿಜನರನ್ನು ಕ್ರೈಸ್ತ ಮತಾಂತರ ಗೊಳಿಸಿದ್ದಕ್ಕಾಗಿ ಕ್ರುದ್ಧರಾದ ಮಂದಿಯಿಂದ ಲೈಂಗಿಕ ಅತ್ಯಾಚಾರಕ್ಕೆ ಒಳಗಾದವಳು. ಮದುವೆಯ ನಂತರ ಕೈ ಹಿಡಿದ ಗಂಡ ಅಲೆಕ್ಸಾಂಡರನಿಂದ, ತನ್ನ ಇಚ್ಛೆಗೆ ವ್ಯತಿರಿಕ್ತವಾಗಿ, ತನ್ನ ನಿರೀಕ್ಷೆಗಿಂತ ಭಿನ್ನವಾಗಿ ಲೈಂಗಿಕ ಆಕ್ರಮಣಕ್ಕೆ ಒಳಗಾದವಳು. ಇಂತಹ ಸನ್ನಿವೇಶಗಳ ಮೂಲಕವಾಗಿ ಮಾನಸಿಕ ಒತ್ತಡಕ್ಕೆ ಒಳಗಾಗಿಯೋ ಅಥವಾ ಇನ್ನಾವುದೋ ವೈದ್ಯಕೀಯ ಕಾರಣಕ್ಕಾಗಿಯೂ, ತನ್ನ ಬಸಿರಲ್ಲಿ ಬೆಳೆಯುತ್ತಿರುವ ಭ್ರೂಣದ ಸ್ಥಿತಿ ವಿಕೃತವಾಗಿದೆಯೆಂಬ ಅಂಶದ ಅರಿವಾಗುತ್ತಿದ್ದಂತೆಯೇ ಅವಳಲ್ಲಿ ಸಂಘರ್ಷ ಶುರುವಾಗುತ್ತದೆ. ಗಂಡನನ್ನು ಆಕಸ್ಮಿಕದಲ್ಲಿ ಕಳೆದುಕೊಂಡವಳಿಗೆ ಅವನ ನೆನಪಾಗಿ ಉಳಿಯಲಿರುವ ಈ ಮಗುವನ್ನು ಉಳಿಸಿಕೊಳ್ಳಬೇಕೆಂಬ ಉತ್ಕಟವಾದ ಆಸೆ ಮನದಾಳದಲ್ಲಿ ಬೇರು ಬಿಟ್ಟಿರುವಾಗ, ಜೀವಂತ ಶವವಾಗಿ ಬದುಕಿ ಉಳಿಯುವುದಕ್ಕಿಂತ ಸಾವಿನ ಸುಖಾನುಭವಕ್ಕೆ ಒಳಗಾಗಿಸುವುದೇ ಒಳ್ಳೆಯದೆಂಬ ತರ್ಕ ಸಾಧಿಸಲು ಪ್ರಚೋದನೆಯಾದರೂ ಹೃದಯವೇ ಗೆಲ್ಲುತ್ತದೆ. ಡಾ॥ ದಸ್ತೂರ್ ಮತ್ತು ಡಾ॥ ಸೇನ್‌ಗುಪ್ತಾರೊಂದಿಗೆ ಶೀಲಳ ಭವಿಷ್ಯದ ಬಗ್ಗೆ ಚರ್ಚಿಸುವಾಗ, ಅಂತಹ ಸ್ಥಿತಿಯಲ್ಲಿ ಮಗಳು ಬದುಕುವುದಕ್ಕಿಂತ, ಅವಳು ಸಾಯುವುದೇ ಮೇಲೆಂದು ವಾದಿಸುವಾಗಲೆಲ್ಲ ಆ ಕ್ಷಣದ ಆವೇಶ, ಉದ್ವೇಗಗಳೇ ಮುಖ್ಯವಾಗುತ್ತವೆ. ಆ ಮಗು ಬೇಡ, ಅದನ್ನು ಪ್ರೀತಿಸಲಾರೆ ಎಂದು ಎಷ್ಟೇ ಚೀರಿ ಹೇಳಿದರೂ ಅದು ಆತ್ಮವಂಚನೆಯೇ ಹೊರತು, ಅವಳ ಆಂತರ್ಯದ ಉದ್ದೇಶವಾಗಿರುವುದಿಲ್ಲ. ಡಾ॥ ಸೇನ್‌ಗುಪ್ತಾರು ಎಲಿಜಾಳನ್ನು ಅರ್ಥಮಾಡಿಕೊಂಡಂತೆ, ಅವಳು ತನ್ನ ಮಗುವನ್ನು ಉಳಿದ ಯಾವುದೇ ತಾಯಂದಿರಿಗಿಂತ ಹೆಚ್ಚಾಗಿ ಪ್ರೀತಿಸುತ್ತಾಳೆ. ಅಂತಹ ಮಗುವಿನ ಭವಿಷ್ಯದ ಭಯಂಕರ ಕಲ್ಪನೆ, ಮನುಷ್ಯಳಂತೆ ಬದುಕುವ ಸಾಧ್ಯತೆಯೇ ಇಲ್ಲವೆಂಬ ಪ್ರಜ್ಞೆ, ಪ್ರಾಣಿಯಂತೆ ಬದುಕುವ ದುರಂತವನ್ನು ನೋಡಬೇಕಾದೀತೆಂಬ ಭೀತಿ, ಇಂದು ನಾಳೆ ನೆನ್ನೆಗಳಿಂದಲೂ ವಂಚಿತವಾದ ದುಃಸ್ಥಿತಿ – ಇವೆಲ್ಲವೂ, ಮಗಳು ಸಾಯುವುದೇ ಒಳ್ಳೆಯದೆಂಬ ತೀರ್ಮಾನಕ್ಕೆ ದೂಡುತ್ತವೆ. ಆದರೆ ಡಾ॥ ಸೇನ್‌ಗುಪ್ತಾ ಅವರು ಯುಥೇನೇಸಿಯಾ ಬಗ್ಗೆ, ಅದರ ಪೂರ್ವಾಪರಗಳ ಬಗ್ಗೆ, ಪರಿಣಾಮಗಳ ಬಗ್ಗೆ ಸಾಕಷ್ಟು ಅಧ್ಯಯನ ನಡೆಸಿಯೂ, ಅವರು ತಳೆದದ್ದು, ಮಾನವೀಯ ನಿಲುವು.

ರೋಗಿಯ ಸಂಬಂಧಿಗಳ ದೃಷ್ಟಿಯಿಂದ ದಯಾಮರಣ ರೋಗಿಗೆ ಒಂದು ಬಗೆಯ

ಬಿಡುಗಡೆ ಮತ್ತು ಒಳ್ಳೆಯ ಅಥವಾ ಗೌರವಯುತ ಸಾವು ಎನಿಸಿದರೂ, ರೋಗಿ ಸಾಯುವ ಅಥವಾ ಬದುಕುವ ಅಭಿಪ್ರಾಯವನ್ನು ಹೇಳಲಾಗದ ಅಸಹಾಯಕ ಸ್ಥಿತಿಯಲ್ಲಿರುವಾಗ, ದಯಾಮರಣದ ಹೆಸರಿನಲ್ಲಿ, ಪ್ರಾಣಹರಣ ಮಾಡುವುದು ಎಷ್ಟರಮಟ್ಟಿಗೆ ಸಮಂಜಸ ಎನ್ನುವ ಪ್ರಶ್ನೆ ಏಳುತ್ತದೆ. ಎಲಿಜಾ, ಶೀಲಾಳಿಂದಾಗಿ ಇಂತಹ ಪ್ರಶ್ನೆಗೆ ಮುಖಾಮುಖಿಯಾಗುತ್ತಾಳೆ. ಯಾವುದನ್ನೂ ನಿರ್ಧರಿಸಲಾಗದ ಸಂದಿಗ್ಧ ಒಂದೆಡೆಯಾದರೆ, ಶೀಲಾಳ ಸಾವೇ, ಅವಳಿಗೂ ತನಗೂ ನೆಮ್ಮದಿ ಎಂಬ ಆಲೋಚನೆ ಮತ್ತೊಂದೆಡೆ. ಡಾ॥ ಸೇನ್‌ಗುಪ್ತಾ ಅವಳ ವೈಯಕ್ತಿಕ ಸಮಸ್ಯೆಯನ್ನು ವ್ಯಾಖ್ಯಾನಿಸುವ, ವಿವರಿಸುವ, ತರ್ಕೈಸುವ ರೀತಿ, 'ಎಲಿಜಾ'ಳ ಸನ್ನಿವೇಶದಲ್ಲಿರುವ ಪ್ರತಿಯೊಬ್ಬರಿಗೂ ಮಾರ್ಗದರ್ಶನವಾಗಿದೆ. "ಬದುಕೆಂಬುದೇ ಇಲ್ಲದ ಶೀಲಾಳ ನರಕ ಸದೃಶ ಬಾಳಿಗೊಂದು ಕೊನೆತರಬೇಕೆಂಬ ನಿಮ್ಮ ನಿರ್ಧಾರ ತುಂಬಾ ಮಾನವೀಯ. ಆಕೆಗೆ ಆಕೆಯ ಬಾಳ್ವೆ ಹಿಂಸೆಯಾಗಬಾರದೆನ್ನುವ ಕಲ್ಪನೆ ತುಂಬ ಸುಂದರ. ಅಷ್ಟೇ ಅಲ್ಲ, ನಿಜವಾದ ಅರ್ಥದಲ್ಲಿ ಮಾನವೀಯ ಕೂಡ. ಆದರೆ ಆಕೆಯ ಬಾಳ್ವೆ ಹಿಂಸೆಯಾಗಿದೆಯೇ ಇಲ್ಲವೇ ಎಂಬುದನ್ನು.... ಯಾವ ವೈದ್ಯ ಶಾಸ್ತ್ರ ಪ್ರವೀಣನೂ ಹೇಳಲಾರ!" ಎನ್ನುವ ಸೇನ್‌ಗುಪ್ತಾರ ಮಾತಿಗೆ, ಎಲಿಜಾಳಲ್ಲಿ ಉತ್ತರವಿಲ್ಲ. ಅಲ್ಲದೆ ತಾನೇ ಸ್ವತಃ ವೈದ್ಯೆಯಾಗಿದ್ದೂ ರೋಗಿ ಎಂತಹದೇ ಗಂಭೀರ ಸ್ಥಿತಿಯಲ್ಲಿರಲಿ, ಇನ್ನೊಂದೆರಡು ಕ್ಷಣಗಳಲ್ಲಿ ಸಾಯಬಹುದೆಂದೇ ಎಣಿಸಲಿ, ವೈದ್ಯನಾದವನು ಪ್ರಾಣವನ್ನು ಉಳಿಸಲು ಪ್ರಯತ್ನಿಸಬೇಕೆಂಬ ಸರಳ ನೈತಿಕ ಪ್ರಜ್ಞೆ ಅಥವಾ ವೈದ್ಯವೃತ್ತಿಯ ಎಥಿಕ್ಸ್‌ನ್ನೂ ಮರೆತುಹೋಗುವಷ್ಟು ಮಾನಸಿಕವಾಗಿ ಡಿಸ್ಟರ್ಬ್ ಆಗುತ್ತಾಳೆ. ವ್ಯಕ್ತಿ ಸಾಮಾನ್ಯವೇ ಆಗಿರಲಿ, ವೈದ್ಯನೇ ಆಗಿರಲೀ, ರೋಗಿಗೆ ಬದುಕನ್ನು ಕೊಡುವ ಹಕ್ಕನ್ನು ಪಡೆದಿರುತ್ತಾನೆಯೇ ಹೊರತು ಪ್ರಾಣವನ್ನು ತೆಗೆಯುವ ಹಕ್ಕು ಇರುವುದಿಲ್ಲ. ಇನ್ನೊಬ್ಬರ ವಿಚಾರವಾಗಿ ನಿರ್ಧಾರವನ್ನು ತೆಗೆದುಕೊಳ್ಳುವಷ್ಟು ಸ್ವಾತಂತ್ರ್ಯವೂ ಇಲ್ಲ ಸಾಮರ್ಥ್ಯವೂ ಇಲ್ಲ ಎನ್ನುವ ಅರಿವು ಅನಿವಾರ್ಯ.

ಎಲಿಜಾಳ ಸಂದಿಗ್ಧಗಳಲ್ಲಿ ಸಂಕೀರ್ಣ ಸನ್ನಿವೇಶಗಳಲ್ಲಿ ದೇವದೂತನಂತೆ ಪ್ರವೇಶ ಮಾಡಿದ ಡಾ॥ ಸೇನ್‌ಗುಪ್ತಾ ಎಲಿಜಾಳನ್ನು ಜೀವನ ಸಂಗಾತಿಯಾಗಿ ಆಹ್ವಾನಿಸುವುದೇ ಅಲ್ಲದೆ 'ಶೀಲಾ'ಳನ್ನು ತನ್ನ ಸ್ವಂತ ಮಗುವಾಗಿ ಸ್ವೀಕರಿಸಿ, ಅವಳಿಗೆ ಬೇಕಾದ ವಿಶೇಷ ಚಿಕಿತ್ಸೆಗೆ ಪ್ರಯತ್ನಿಸುವ ಭರವಸೆಯನ್ನೂ ನೀಡಿ, ಎಲಿಜಾಳಿಗೆ ಬಹುದೊಡ್ಡ ಆಸರೆಯಾಗಿ, ನೈತಿಕ ಬಲವಾಗಿ ನಿಲ್ಲುತ್ತಾರೆ. ಎಲಿಜಾಳ ಮನಃಸ್ಥಿತಿಯನ್ನು ಸೂಕ್ಷ್ಮವಾಗಿ ಅವರು ಅರ್ಥಮಾಡಿಕೊಂಡ ಹಾಗೆ, ಅವಳು ಮಾನಸಿಕ ಅಸ್ವಸ್ಥತೆಗೆ ಒಳಗಾಗಿದ್ದಾಳೆ. ಶೀಲಾಳನ್ನು ಬೇಡವೆಂದು ತಿರಸ್ಕರಿಸಿ, ಅವಳನ್ನು ಕಳೆದುಕೊಳ್ಳುವುದರಿಂದ ಉಂಟಾಗುವ ಅಪಾಯ, ಅವಳನ್ನು ಉಳಿಸಿಕೊಳ್ಳುವಾಗಿನ ಅಪಾಯಕ್ಕಿಂತ ಗಂಭೀರವಾದ್ದು ಎನಿಸಿ, ಡಾ॥ ಸೇನ್‌ಗುಪ್ತಾ ಶೀಲಾಳನ್ನು ಉಳಿಸುತ್ತ, ಎಲಿಜಾಳನ್ನೂ ಉಳಿಸಿಕೊಳ್ಳುವ ಪ್ರಯತ್ನದೆಡೆಗೆ ಹೊರಳುತ್ತಾರೆ. ಆದರೆ ಅವರ ಪ್ರಯತ್ನ ಫಲಕಾರಿಯಾಗದೆ ಎಲಿಜಾ ಆತ್ಮಹತ್ಯೆಗೆ ಪ್ರಯತ್ನಿಸಬಹುದೆಂಬ ಅನುಮಾನ ನಿಜವಾಗುತ್ತದೆ. ಡಾ॥ ಸೇನ್‌ಗುಪ್ತಾ ಇಲ್ಲದ ಸಮಯದಲ್ಲಿ ಆತನಿಂದ ದೂರ ಹೊರಟು ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಬಯಸಿ ಹೊರಟವಳಿಗೆ ಆತ್ಮಹತ್ಯೆಯ ಆಕಾಂಕ್ಷೆ ಪ್ರಬಲವಾಗಿ ಕಾಡಿ ಶೀಘ್ರವಾಗಿ ಸಾವಿನತ್ತ ದೂಡುವುದಕ್ಕಿಂತ, ಆ ಆಕಾಂಕ್ಷೆ ಕರಗುತ್ತ, ಬದುಕಬೇಕೆಂಬ ತುಡಿತ,

ಜೀವನ ಪ್ರೀತಿಗಳು ಸುಪ್ತ ಮನಸ್ಸಿನಲ್ಲಿ ಚಿಗುರೊಡೆಯ ತೊಡಗುತ್ತದೆ. ಆತ್ಮಹತ್ಯೆಯ ಕ್ಷಣಗಳನ್ನು ನೆಪಗಳೊಡ್ಡಿ ಮುಂದಾಡುತ್ತಾ ಹೋಗುತ್ತಾಳೆ. ತನ್ನ ಹೋಟೆಲಿನಲ್ಲಿಯೇ ಕೋಣೆ ಹಿಡಿದ ಹಳೆಗೆಳೆಯನನ್ನು ಗೆಲುವಿನಿಂದಲೇ ಪರಿಚಯಿಸಿಕೊಳ್ಳುತ್ತಾಳೆ. ಒಂದಿನ ತಮ್ಮ ಗೆಳೆತನದ ಸರಸ ವಿರಸದ ದಿನಗಳನ್ನು ನೆನಪಿಸಿಕೊಳ್ಳುತ್ತಾಳೆ. ತನ್ನ ಗತ ಬದುಕಿನ ಕವಾಟಗಳನ್ನು ತೆಗೆದು ಎಲ್ಲವನ್ನೂ ಚಿತ್ರವತ್ತಾಗಿ ಕಣ್ಮುಂದೆ ತಂದುಕೊಳ್ಳುತ್ತಾಳೆ. ಬದುಕಿನ ಅರ್ಥಗಳನ್ನು ಹೆಕ್ಕಿ ತೆಗೆಯಲು ಪ್ರಯತ್ನಿಸುತ್ತಾಳೆ. ಬಾಳಿಗೊಂದು ಅರ್ಥ, ಗುರಿ, ನಂಬಿಕೆಗಳು ಅನಿವಾರ್ಯವೆಂಬ ಸತ್ಯ, ಪ್ರಕಾಶ್, ಮಾವ, ಮತ್ತು ಸೇನ್‌ಗುಪ್ತಾರ ಗ್ರಹಿಕೆಯಲ್ಲಿ ಮಾತ್ರವಲ್ಲ, ಎಲಿಜಾಳಿಗೂ ಅದೇ ಬಗೆಯಲ್ಲಿ ಅನಿಸಿದ್ದರೂ, ಅವಳ ಬಾಳಿನಲ್ಲಿ ಸಂಭವಿಸಿದ ಘಟನೆಗಳು ಬದುಕಿನ ಬಗೆಗಿನ ಅವಳ ದೃಷ್ಟಿಯನ್ನು ನಿಲುವನ್ನು ಬದಲಾಯಿಸಿಕೊಳ್ಳಲು ಕಾರಣವಾಗಿವೆ ಎಂಬುದೂ ಅವಳ ನಂಬಿಕೆ. ಅವಳಿಗಾದ ಆಘಾತ, ಅವಳಲ್ಲಿ ಉಂಟಾದ ಡಿಪ್ರೆಷನ್ ಆತ್ಮಹತ್ಯೆಗೆ ಕಾರಣವೆಂದು ತರ್ಕೈಸಬಹುದಾದರೂ, ಆತ್ಮಹತ್ಯೆಯ ಮುಂದೂಡಿಕೆಗೆ ಅವಳು ಕೊಟ್ಟುಕೊಳ್ಳುವ ಸಬೂಬುಗಳು. ಬದುಕು ಮತ್ತು ಸಾವಿನ ಬಗ್ಗೆ ಅವಳಲ್ಲಿ ಯಾವುದೇ ಖಚಿತವಾದ, ದೃಢವಾದ ಅಭಿಪ್ರಾಯಗಳಿಲ್ಲವೆಂಬುದನ್ನು ಸ್ಪಷ್ಟಪಡಿಸುತ್ತವೆ.

ಬದುಕಿನಲ್ಲಿ ಖುಷಿಕೊಡುವ ಕ್ಷಣಗಳಿಗೆ ತಿಲಾಂಜಲಿ ಹೇಳುವುದಿಲ್ಲ. ಸಾಯುವ ಮುನ್ನ ಸಂತೋಷವಾಗಿ ಕಾಫಿ ಕುಡಿದು, ತಿಂಡಿತಿಂದು, ಹಳೆಯ ಗೆಳೆಯ ಪ್ರಕಾಶನೊಡನೆ ಊರೆಲ್ಲ ಸುತ್ತಿಬರಲು ಸಿದ್ಧಳಾಗುತ್ತಾಳೆ. ಅವಳಿಗೇ ಒಮ್ಮೊಮ್ಮೆ ತನ್ನ ಆತ್ಮಹತ್ಯೆಯ ನಿರ್ಧಾರದ ಬಗ್ಗೆ ಗುಮಾನಿ ಎನಿಸುತ್ತದೆ. ವ್ಯಾನಿಟಿ ಬ್ಯಾಗಿನಲ್ಲಿ ತುಂಬಿಕೊಂಡ ಗರಿಗರಿನೋಟುಗಳು, "ಸಾಯಲು ಹೊರಟವಳು ಮದುವೆಗೆ ಹೊರಟಿದ್ದೇನೆ" ಎಂದು ತನ್ನನ್ನೇ ವಿಡಂಬಿಸಿಕೊಳ್ಳಲು ಕಾರಣವಾಗುತ್ತವೆ. ನಿದ್ದೆಯ ಮಾತ್ರೆಯ ಬಾಟ್ಲಿ ನೆನಪಾದಾಗ, ಭಯ, ನಡುಕಗಳು ಉಂಟಾಗಿ ಕುಸಿದು ಕುಳಿತುಕೊಳ್ಳುವಂತೆ ಮಾಡುತ್ತವೆ. ಹೋಟೆಲಿನ ವರಾಂಡಾದಲ್ಲಿ ಅಡ್ಡಾಡುತ್ತಿದ್ದಾಗ, ಹೋಟೆಲು ಮುಂದಿನ ರಸ್ತೆಯಲ್ಲಿ ಅಪಘಾತ ಸಂಭವಿಸಿ, ಅವಳ ಕಣ್ಣೆದುರೇ ಬದುಕಿನ ಉತ್ಕಟ ಕ್ಷಣಗಳನ್ನು ಅನುಭವಿಸುತ್ತಿದ್ದ ಎಳೆಯ ಜೀವಗಳು ಕ್ಷಣಮಾತ್ರದಲ್ಲಿ ಕಮರಿ ಹೋದದ್ದು, ಬದುಕಿನ ವೈಚಿತ್ರ್ಯವನ್ನು ಅದರ ಅನಿಶ್ಚಿತತೆಯನ್ನು ಯೋಚಿಸುವಂತೆ ಮಾಡುತ್ತದೆಯೇ ಹೊರತಾಗಿ, ಬದುಕು, ಸಾವಿನ ಬಗ್ಗೆ ಗಾಢ ಚಿಂತನೆಗೆ ದೂಡುವುದಿಲ್ಲ.

ಸಾಯುತ್ತೇನೆ, ಸಾಯುತ್ತೇನೆ ಎಂಬ ಪಲ್ಲವಿಯೊಂದಿಗೆ ಸಾವಿಗೆ ಹತ್ತಿರವಾಗುವುದಕ್ಕೆ ಬದಲಾಗಿ ಸಾವಿನಿಂದ ದೂರ ಸರಿಯುತ್ತ ಬದುಕಿಗೆ ಹತ್ತಿರವಾಗುತ್ತಾಳೆ. ಅವಳಲ್ಲಿ ಆಸೆ, ಆಕಾಂಕ್ಷೆ, ದೈಹಿಕ ಹಸಿವು, ಹಸಿವು ಯಾವುದೂ ಸತ್ತಿಲ್ಲ. ಪ್ರಕಾಶ್‌ನ ಕಂಪನಿಯಲ್ಲಿ ಸುಖದ ಕ್ಷಣಗಳನ್ನು, ಮಧುರವಾದ ಕ್ಷಣಗಳನ್ನೂ ಕಳೆಯುತ್ತಾಳೆ. ಊಟ, ವಿಸ್ಕಿಗಳ ನಂತರ ನಾಳೆ ಭೇಟಿಯಾಗುವ ಭರವಸೆಯೊಂದಿಗೆ ತಮ್ಮ ತಮ್ಮ ಕೋಣೆ ಸೇರುತ್ತಾರೆ. ಆದರೆ ಕಾದಂಬರಿಯ ವ್ಯಂಗ್ಯ ಇರುವುದು ಇಲ್ಲಿಯೇ! ಬದುಕನ್ನು ತೀರಾ ಪಾಸಿಟೀವ್ ಆಗಿ ತೆಗೆದುಕೊಂಡಿದ್ದ, ಬದುಕಿನ ಬಗ್ಗೆ ಅತಿಯಾದ ಭರವಸೆ, ನಂಬಿಕೆ ಇರಿಸಿಕೊಂಡಿದ್ದ, ಭವಿಷ್ಯದ ಸುಂದರ ಕನಸುಗಳನ್ನು ಹೆಣೆದುಕೊಂಡಿದ್ದ, ನಾಳೆ ಎದ್ದು ಬೇಗ ಪ್ರಯಾಣಕ್ಕೆ ಸಿದ್ಧವಾಗಬೇಕೆಂದು

ಯೋಚಿಸುತ್ತಿದ್ದ ಪ್ರಕಾಶ್‌ನ ಸಾವು ಒಂದು ದುರಂತ ವ್ಯಂಗ್ಯವೆನಿಸುತ್ತದೆ.

ಶೀಲಾಳ ಸಾವಿನ ಸುದ್ದಿ ಬರಸಿಡಿಲಿನಂತೆ ಎರಗಿ, ತನ್ನ ಬದುಕು ಯಾರಿಗಾಗಿ? ಎಂಬ ಪ್ರಶ್ನೆ ಬೃಹದಾಕಾರವಾಗಿ ನಿಂತು, ಮಾನಸಿಕ ಕ್ಷೋಭೆಗೆ ಒಳಗಾಗುತ್ತಾಳೆ. ಈ ಕ್ಷೋಭೆ, ಚಡಪಡಿಕೆ ಸಂಘರ್ಷ ಇವೆಲ್ಲವುಗಳಿಂದ ಬಿಡುಗಡೆ ಹೊಂದಲು, ಮತ್ತು ಆತ್ಮಹತ್ಯೆ ಮಾಡಿಕೊಳ್ಳದಿದ್ದರೆ ತಾನು ಹುಚ್ಚಿಯಾಗುತ್ತೇನೆ ಎಂಬ ಭ್ರಮೆಯಿಂದಲೂ ಸಾವಿನಲ್ಲಾದರೂ ತನ್ನ ಜೊತೆಯಾಗಿರಲೆಂದು ಶೀಲಾ ಕರೆಯುತ್ತಿದ್ದಾಳೆಂಬ ಕಲ್ಪನೆಯಿಂದಲೂ ಆತ್ಮಹತ್ಯೆಯೇ ತನಗೆ ಪರಿಹಾರವೆಂದು ಭಾವಿಸಿ ಬಂದವಳಿಗೆ, ಎಳೆದಂಪತಿಗಳ ಅಪಘಾತದಿಂದಾದ ಆಕಸ್ಮಿಕ ಮರಣ, ತನ್ನ ಬದುಕು ಭವಿಷ್ಯಗಳ ಬಗ್ಗೆ ತುಂಬು ಉತ್ಸಾಹ, ಭರವಸೆಗಳಿಂದ ಕೂಡಿ, ನಾಳಿನ ಬೆಳಗಿನ ನಿರೀಕ್ಷೆಯಲ್ಲಿದ್ದ ಹಳೆಯ ಗೆಳೆಯ ಪ್ರಕಾಶ್‌ನ ಆಕಸ್ಮಿಕ ಸಾವು, ಸಾವು ಬದುಕಿನ ನಿಗೂಢತೆಗೆ ಸಾಕ್ಷಿಯಾಗುತ್ತವೆ. ಸಾಯಬೇಕೆಂದುಕೊಂಡವಳಿಗೆ ಈ ಸಾವುಗಳು ಭಯ, ಆತಂಕ, ತಲ್ಲಣಗಳ ನಡುವೆಯೇ ಆತ್ಮವಿಶ್ಲೇಷಣೆ, ಆತ್ಮಶೋಧಕ್ಕೆ ಮುಂದಾದಾಗ, ತನ್ನ ಆತ್ಮಹತ್ಯೆಯ ನಿರ್ಧಾರ, ತನ್ನ ಮತ್ತು ಮಗಳ ಬಾಂಧವ್ಯ. ಬದುಕಿನ ಅರ್ಥ – ಇವುಗಳ ಸ್ವರೂಪ ಸ್ಪಷ್ಟವಾಗುತ್ತ ಹೋಗುತ್ತದೆ. ಅಪ್ರಜ್ಞಾಪೂರ್ವಕವಾಗಿಯೇ ಮುಂದೂಡುತ್ತ ಬಂದ 'ಆತ್ಮಹತ್ಯೆಯ ನಿರ್ಧಾರ' ಒಂದು ಭ್ರಮೆಯಾಗಿರುವುದು, ಬುನಾದಿಯೇ ಇಲ್ಲದಿರುವುದು ನಿಚ್ಚಳವಾಗಿ ಮನವರಿಕೆಯಾಗುತ್ತದೆ. ಪ್ರಕಾಶ್‌ನ ಸಾವು, ಅವಳನ್ನು ಗಾಢವಾಗಿ ಯೋಚಿಸುವಂತೆ ಮಾಡುತ್ತದೆ. ಪ್ರಕಾಶ್‌ನ ಉತ್ಸಾಹ ಪೂರ್ಣ ವ್ಯಕ್ತಿತ್ವ, ಅವನ ಲವಲವಿಕೆ, ಸಾವು ಬದುಕುಗಳನ್ನು ಸಹಜವಾಗಿ ಸ್ವೀಕರಿಸಬೇಕೆಂಬ ಅವನ ನಿಲುವು, ಅವಳಲ್ಲಿ ಯಾವುದೋ ಒಂದು ಸತ್ಯವನ್ನು ಹೊಳೆಸುತ್ತದೆ. ಕೇವಲ ಎರಡು ದಿನಗಳಲ್ಲಿ ಪ್ರಕಾಶ್ ಎಲಿಜಾಳನ್ನು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರಭಾವಿಸಿದ್ದ. ಅದೇ ಅವಳನ್ನು ಆತ್ಮವಿಶ್ಲೇಷಣೆಯ ಕಡೆಗೆ ಸೆಳೆದೊಯ್ದಿತ್ತು. ತನ್ನ ಆತ್ಮಹತ್ಯೆಗೆ ಅರ್ಥವೇ ಇಲ್ಲ; ಆತ್ಮಹತ್ಯೆ ಮಾಡಿಕೊಳ್ಳುವಷ್ಟು ಗಂಭೀರವಾದದ್ದು ಏನೊಂದೂ ನಡೆದಿಲ್ಲ ಎನ್ನುವ ಅರಿವು ಮೂಡುವುದರ ಜೊತೆಗೆ 'ಶೀಲಾ ಇಲ್ಲದ ಬಾಳು ಅಸಾಧ್ಯ, ಅಸಹನೀಯ ಎನ್ನುವುದು ಭ್ರಮೆ' ಎಂಬ ಸತ್ಯವೂ ಮನವರಿಕೆಯಾಗತೊಡಗುತ್ತದೆ. ಜಗತ್ತಿನಲ್ಲಿ ನಡೆಯುವ ಪ್ರತಿಯೊಂದು ಪ್ರಾಕೃತಿಕ ಕ್ರಿಯೆಗೂ ಮನುಷ್ಯನ ಬದುಕಿನಲ್ಲಿ ಸಂಭವಿಸುವ ಘಟನೆಗಳಿಗೂ ಒಂದು ಪೂರ್ವ ನಿಶ್ಚಿತತೆ ಇರುತ್ತದೆ. ಹಾಗೆಯೇ ಈ ನೆಲ ಮುಗಿಲುಗಳ ನಡುವಿನ ಬದುಕಿಗೂ ಒಂದು ಅರ್ಥ, ಒಂದು ನಿಶ್ಚಿತತೆ ಸಹಜವಾಗಿಯೇ ಉಂಟಾಗಿರುತ್ತದೆ. 'ಬದುಕು' ಎನ್ನುವುದು ಹುಟ್ಟು, ಸಾವಿನ ನಡುವಿನ ಸ್ಥಿತಿ. ಇದು ಅನಿವಾರ್ಯ. ಈ ಸ್ಥಿತಿಯ ಮೂಲಕ ಹಾದು ಹೋಗಲೇ ಬೇಕಾದ್ದು ಜೀವ ಧರ್ಮ. ಸೃಷ್ಟಿಯಲ್ಲಿನ ಪ್ರತಿ ಜೀವಿಯೂ 'ಹುಟ್ಟು ಬದುಕು ಸಾವು' ಎಂಬ ಈ ಮೂರು ಅವಸ್ಥಾಂತರಗಳಿಂದ ತಪ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ – ಎನ್ನುವ ಆಲೋಚನೆಗಳ ಬೆಳಕಲ್ಲಿ ತನ್ನ ಆತ್ಮಹತ್ಯೆಯ ಹುಸಿತನ ಅವಳಿಗೇ ವಿಚಿತ್ರವಾಗಿ ವ್ಯಂಗ್ಯವಾಗಿ ಕಾಣುತ್ತದೆ.

ಡಾ॥ ನಾ. ಮೊಗಸಾಲೆ ಅವರ ಈ ಕಾದಂಬರಿ ವಸ್ತುವಿನ ಹೊಸತನ, ನಿರೂಪಣಾ ತಂತ್ರದ ವಿಶೇಷತೆಯಿಂದ ಮನಸೆಳೆಯುವಂತಿದೆ. ಸ್ವಗತಗಳಿಂದ ಫ್ಲಾಷ್ ಬ್ಯಾಕ್‌ಗಳಿಂದ

ಎಲಿಜಾಳ ಬದುಕಿನ ಸುರುಳಿ ಬಿಚ್ಚಿಕೊಳ್ಳುತ್ತಾ 'ದಯಾಮರಣ' ಅಥವಾ ಯಥೇನೇಸಿಯಾ ಸಮಸ್ಯೆಯ ಎಲ್ಲ ಆಯಾಮಗಳೂ ಚರ್ಚೆಗೆ, ವಿಶ್ಲೇಷಣೆಗೆ ಒಳಗಾಗುವುದನ್ನು ಸಮರ್ಥವಾಗಿ ನಿರೂಪಿಸಿದ್ದಾರೆ. ಕಿರು ಕಾದಂಬರಿಯ ಹಂದರದಲ್ಲಿ ಇಂತಹ ಒಂದು ಸಮಸ್ಯೆಯನ್ನು ಕಾದಂಬರಿಯ ಪ್ರಮುಖ ಪಾತ್ರ ವೊಂದರ ಬದುಕಿನ ಭಾಗವಾಗಿಸಿ, ದಯಾಮರಣದ ನೈತಿಕತೆಯ ಸವಾಲುಗಳನ್ನು, ನ್ಯಾಯ ಸಮ್ಮತತೆಯನ್ನು ಚರ್ಚಿಸುವುದರ ಜೊತೆಗೆ ಮಾನವೀಯ ಮೌಲ್ಯವೇ ಕಟ್ಟಕಡೆಯಲ್ಲಿ ಪ್ರಮುಖವಾಗಬೇಕೆಂಬ ಅಂಶವನ್ನು ಡಾ॥ ಸೇನ್‌ಗುಪ್ತಾರ ತರ್ಕ, ವಾದ, ನಿಲುವುಗಳ ಮೂಲಕ ಎತ್ತಿ ಹಿಡಿಯಲು ಪ್ರಯತ್ನಿಸಿದ್ದಾರೆ. ನೆಲ ಮುಗಿಲುಗಳ ನಡುವಿನ ಬದುಕಿಗೆ ಒಂದು ಅರ್ಥವಿದೆ. ಅರ್ಥವಿರಬೇಕು ಎಂಬ ಸತ್ಯದ ಸಾಕ್ಷಾತ್ಕಾರದ ಪ್ರಯತ್ನವೂ ಇಲ್ಲಿದೆ. ಡಾ॥ ನಾ. ಮೊಗಸಾಲೆ ನಮ್ಮ ಸಮಕಾಲೀನ ಕಾದಂಬರಿಕಾರರಲ್ಲಿ ಅತ್ಯಂತ ಜನಪ್ರಿಯರೂ ಮತ್ತು ಬೇಡಿಕೆ ಇರುವವರಲ್ಲಿ ಪ್ರಮುಖರೂ ಆಗಿರುವುದು ಅವರ ವಿಶಿಷ್ಟ ಕಥಾನಕಗಳಿಂದ ಮತ್ತು ಆಕರ್ಷಕ ಬರವಣಿಗೆಯ ಶೈಲಿಯಿಂದ 'ನೆಲ ಮುಗಿಲುಗಳ ಮಧ್ಯೆ' ಈ ಮಾತಿಗೆ ಹೊರತಲ್ಲವೆಂಬುದು ನನ್ನ ಅಭಿಪ್ರಾಯ.

O

# ಕನಸಿನ ಬಳ್ಳಿ - ಗ್ರಾಮಸ್ವರಾಜ್ಯ

ಈರಯ್ಯ ಕಿಲ್ಲೇದಾರ

ವೃತ್ತಿಯಿಂದ ವೈದ್ಯರಾಗಿರುವ ಡಾ॥ ಮೊಗಸಾಲೆ ಅವರ 'ಕನಸಿನಬಳ್ಳಿ' ಕಾದಂಬರಿ ಆರಂಭವಾಗುವುದು ಡಾಕ್ಟರು, ನರ್ಸ್ ಹಾಗೂ ಆಸ್ಪತ್ರೆಯ ವಿವರಗಳೊಂದಿಗೆ. ಪಟ್ಟಣದ ಬದುಕಿನ ಒತ್ತಡಗಳು ಸುಂದರ ಸಂಗತಿಗಳನ್ನು ನುಂಗಿ ಹಾಕುತ್ತವೆ. ಬದುಕಿನ ನಿತ್ಯ ಘಟನೆಗಳಲ್ಲಿ ಅಡಗಿರುವ ಅನುಭವದ ಸಂಕೀರ್ಣತೆಯನ್ನು ಈ ಕಾದಂಬರಿ ದಾಖಲಿಸುತ್ತದೆ. ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' ಮಿರ್ಜಿ ಅಣ್ಣಾರಾಯರ 'ನಿಸರ್ಗ' ಕಾದಂಬರಿಗಳ ಹಾಗೆ ಹಳ್ಳಿಯ ನೆಲ ಹೊಸ ಸಂಸ್ಕೃತಿ, ಗುಡ್ಡಬೆಟ್ಟ, ಬಯಲು, ಹಸಿರು ಮತ್ತು ಹಕ್ಕಿಯ ಹಾಡುಗಳ ವಿವರಗಳು ಇಲ್ಲಿ ಹುಲುಸಾಗಿ ದೊರಕುತ್ತವೆ.

ಬದುಕು ಒಂದು ಸುಂದರವಾದ ಕನಸು. ಮನಷ್ಯ ಕನಸು ಕಾಣುತ್ತಲೇ ಇರುತ್ತಾನೆ. ಕನಸು ಕಾಣುವುದು ತಪ್ಪಲ್ಲ. ಅದು ವ್ಯಕ್ತಿಯ ಚಲನಶೀಲತೆಗೆ ಸಾಕ್ಷಿ ಯಾಗಿದೆ. ಕನಸು ವ್ಯಕ್ತಿಯ ಬದುಕನ್ನು ಸ್ಥಾವರವಾಗಿಸದೆ ಜಂಗಮಗೊಳಿಸುತ್ತದೆ. ಕನಸಿನ ಬಳ್ಳಿ ಮಲ್ಲಿಗೆಯ ಬಳ್ಳಿಯ ಹಾಗೆ, ಮಾಮರದ ಆಸರೆ ಪಡೆದು ಹಬ್ಬಿದಾಂಗುಡಿ ಇಟ್ಟು ಹೂಬಿಟ್ಟು ಪರಿಮಳ ಬೀರುತ್ತದೆ. ಮಲ್ಲಿಗೆಯ ಬಳ್ಳಿಯನ್ನು ಕಡಿದೊಗೆದರೂ ಒಂದಕ್ಕೆ ಮೂರು ನಾಲ್ಕು ಟಿಸಿಲೊಡೆದು ಚಿಗಿತು ಬರುತ್ತದೆ. ಜೀವನದಲ್ಲಿ ಏರು ಪೇರು ಸಹಜ ಅದರಂತೆ ಆಘಾತಗಳೂ, ಆತಂಕಗಳೂ ಸಂಪತ್ತು ವಿಪತ್ತು ಸುಖ ದುಃಖ, ಆಷಾಡ – ಶ್ರಾವಣಗಳು ಬರುತ್ತವೆ ಹೋಗುತ್ತವೆ. ಒಮ್ಮೆ ಗ್ರೀಷ್ಮ ಭೀಷಣತೆಗೆ ಒಣಗಿ ಅಪ್ಪಿದ ಮಾಮರದ ಆಸರೆ ತಪ್ಪಿ ಮಲ್ಲಿಗೆ ಬಳ್ಳಿ ನೆಲಕ್ಕೆ ಬೀಳುತ್ತದೆ.

ಸದಾನಂದ ಈ ಕಾದಂಬರಿಯ ನಾಯಕ. ಪ್ರಗತಿಶೀಲ ಮನೋಭಾವದ ವ್ಯಕ್ತಿ. ಸಮಾಜದ ಕಟ್ಟಳೆಗಳನ್ನು ಮೀರುವ ಸಾಹಸ ಅವನದು. ಪ್ರೀತಿಯ ಎದುರು ಹಳತಾದ ಕಟ್ಟಳೆಗಳು, ಜಾತಿ ಸಂಕೋಲೆಗಳು ತಾವೇ ಕಳಚಿಹೋಗುತ್ತವೆ ಎಂಬ ನಂಬುಗೆಯ ಬೆಂಬಲ ಅವನ ಬೆನ್ನಿಗಿದೆ. 'ಪ್ರಕೃತಿಯ ವಿರುದ್ಧ ಮನುಷ್ಯನ ಹೋರಾಟ ಸೀಮಿತವಾಗಿದೆ, ಆತ ಗೆಲ್ಲಲಾರ' ಎಂಬ ಮಾತನ್ನೂ ನಂಬಿದವ. ನರ್ಸಪ್ಪಯ್ಯ ಕೋರ್ಟಿನಲ್ಲಿ ಮ್ಯಾಜಿಸ್ಟ್ರೇಟ್, ಅವನ ಹೆಂಡತಿ ಸರೋಜಮ್ಮ, ಇವರಿಗೆ ಇಬ್ಬರು ಮಕ್ಕಳು. ಸದಾನಂದ ದೊಡ್ಡವ, ಎಂ.ಬಿ.ಬಿ.ಎಸ್ ಡಾಕ್ಟರ್, ತಮ್ಮ ರಾಘವ ಎಂಜಿನಿಯರ್, ಮ್ಯಾಜಿಸ್ಟ್ರೇಟ್ ಹುದ್ದೆ ಹೊಂದಿ ಹಳ್ಳಿಯಲ್ಲಿ ಸಾಕಷ್ಟು ಜಮೀನು ಇರುವ ತಂದೆ, ಪ್ರತಿಷ್ಠಿತ ಮನೆತನದ ತಾಯಿ; ಮಗನೊಬ್ಬ ಡಾಕ್ಟರು,

ಇನ್ನೊಬ್ಬ ಎಂಜಿನಿಯರ್ ಆಗಿರುವಾಗ ಪ್ರತಿಷ್ಠಿತ ಮನೆತನದ, ಸಾಕಷ್ಟು ವರದಕ್ಷಿಣೆ ತರುವ ಸೊಸೆಯನ್ನು ನಿರೀಕ್ಷಿಸುವುದು ಸಹಜ ಸಂಗತಿಯಾಗಿದೆ. 'ರೋಗಿಗಳ ಸೇವೆ ದೇವರ ಸೇವೆ, ಆಸ್ಪತ್ರೆಯೇ ದೇವಾಲಯ' ಎಂದು ನಂಬಿ ನಿಷ್ಠೆಯಿಂದ ರೋಗಿಗಳ ಸೇವೆ ಸಲ್ಲಿಸುತ್ತಿದ್ದ ಸದಾನಂದ ತನ್ನ ಕೈಕೆಳಗೆ ನರ್ಸ್ ಚಾಕರಿ ಕೆಲಸ ಮಾಡುತ್ತಿರುವ ವಾಸಂತಿಯನ್ನು ಪ್ರೀತಿಸಿ ಮದುವೆಯಾಗುವುದಾದರೆ ಅವಳನ್ನೇ ಮದುವೆಯಾಗಬೇಕೆಂದು ನಿರ್ಧಾರ ಮಾಡಿದ್ದ. ತಂದೆ ತಾಯಿ ಮದುವೆಯ ಪ್ರಸ್ತಾಪವೆತ್ತಿದಾಗ ಸದಾನಂದ ವಾಸಂತಿಯ ಹೆಸರನ್ನು ಹೇಳುತ್ತಾನೆ. ವಾಸಂತಿಗೆ ಈಗಾಗಲೇ ಮದುವೆಯಾಗಿದೆ. ಮದುವೆಯಾದ ಕೇವಲ ಹತ್ತೇ ದಿನಗಳಲ್ಲಿ ಗಂಡ ಸತ್ತು ಹೋಗಿದ್ದ. ವಿಧವೆಯ ಪಟ್ಟ ವಾಸಂತಿಗೆ. ಸಮಾಜದಲ್ಲಿ ವಿಧವೆಗೆ ಸ್ಥಾನವೇ ಇಲ್ಲ!

ವಾಸಂತಿಯೊಡನೆ ಮದುವೆಯಾಗಬೇಕೆಂಬ ಕನಸಿನ ಬಳ್ಳಿ ಹಬ್ಬಿದ್ದರಿಂದಲೇ ಸಂಘರ್ಷ ಪ್ರಾರಂಭವಾಗುವುದು. ಬದುಕು ನಾವಂದುಕೊಂಡಂತೆ ಸಾಗದು. ತಂದೆ ತಾಯಿ ವಿರೋಧಿಸುತ್ತಾರೆ. ಸಮಾಜವು ಸಹಿತ ವಿಧವಾವಿವಾಹ ಪ್ರೋತ್ಸಾಹಿಸಲಾರದು; ಸದಾನಂದನಿಗೆ ತನ್ನ ಮನಸ್ಸಿನ ತಾಕಲಾಟ ನಿಯಂತ್ರಿಸಲಾಗದೆ, ಕನಸನ್ನು ನನಸಾಗಿಸುವ ಎದೆಗಾರಿಕೆ ಇಲ್ಲದೆ ತನ್ನ ಜೀವನ ವಿಧಾನವನ್ನೇ ಬದಲಿಸುತ್ತಾನೆ. ಒಂದೆಡೆ ವಾಸಂತಿಯ ಮೋಹ, ಇನ್ನೊಂದೆಡೆ ಹೆತ್ತವರ ಋಣ, ಇವೆರಡರ ನಡುವೆ ತನ್ನ ಹಳ್ಳಿಗೆ ಹೋಗುವ ನಿರ್ಧಾರ ಮಾಡುತ್ತಾನೆ. ಮನುಷ್ಯನ ಋಣಾನುಭವ ಚಲನಚಿತ್ರದಂತೆ ಮನದ ಮುಂದೆ ಹಾದು ಹೋಗುತ್ತದೆ. ಅದಕ್ಕಾಗಿ ಆತ ವ್ಯಥೆ ಪಡುವುದಿಲ್ಲ. ಬಡ ವಿಧವೆಯ ಜೀವನಕ್ಕೆ ಆಸರೆಯಾಗುವ ಆತನ ನಿರ್ಧಾರ ಅಚಲವಾಗದೆ ಚಂಚಲವಾಗುತ್ತದೆ. ಅವನ ದ್ವಂದ್ವ ಇಲ್ಲಿ ಎದ್ದು ಕಾಣುತ್ತದೆ. ಅವನ ಆದರ್ಶ ಕೊರಡಾಗುತ್ತದೆ. ಒಣಗಿದ ಮರಕ್ಕೆ ಮಲ್ಲಿಗೆ ಬಳ್ಳಿ ಹಬ್ಬುವದೆಂತು? ಅದು ಕನಸಿನ ಮಾತಾಗುತ್ತದೆ. ಆದರೂ ಕೊರಡು ಕೊನರಿಸುವ ಕನಸು ಕಾಣುತ್ತಲೇ ಕನಸಿನ ಬಳ್ಳಿಗೆ ನೀರೆರೆದು ಪೋಷಿಸುತ್ತಾನೆ. ವಾಸಂತಿಯೊಡನೆ ಮದುವೆ ಯಾಗುವ ಆಶಾಭಾವನೆಯಿಂದ ಹಳ್ಳಿಗೆ ಹೋಗುತ್ತಾನೆ.

ಹಳ್ಳಿಯಲ್ಲಿ ಸಂಸ್ಕೃತಿ ಇದೆ. ಪರಂಪರೆ ಇದೆ. ಮೂಢನಂಬಿಕೆಯೂ ಇದ್ದದ್ದೇ. ಮೂಢನಂಬಿಕೆಯನ್ನು ಅಲ್ಲಗಳೆಯಲಾಗದೆ, ಕಾರಂತರ ಸಲಹೆಯಂತೆ ಭಟ್ಟರನ್ನು ಕೇಳಿ ಮುಹೂರ್ತ ನೋಡಿ ಹೊಸ ಆಸ್ಪತ್ರೆ ಪ್ರಾರಂಭಿಸುತ್ತಾನೆ. ಈ ಘಟನೆಯೊಂದನ್ನು ಬಿಟ್ಟರೆ ಸದಾನಂದನ ವಿಚಾರಗಳು ಪ್ರಗತಿಪರವಾಗಿವೆ. ವೈಜ್ಞಾನಿಕವಾಗಿವೆ. ಮಹಾತ್ಮಾಗಾಂಧೀಜಿವರು 'ಹಳ್ಳಿಗೆ ನಡೆಯಿರಿ' ಎಂದು ಕರೆಕೊಟ್ಟಂತೆ ಹಳ್ಳಿಗೆ ಹಿಂತಿರುಗಿ ಅಲ್ಲಿ ಆಸ್ಪತ್ರೆ ಪ್ರಾರಂಭಿಸಿ ಹಳ್ಳಿಯ ಜನರಿಗೆ ವೈದ್ಯಕೀಯ ಸೇವೆ ಸೌಲಭ್ಯ ಒದಗಿಸುವದಾಗಲಿ, ಕೋಳ್ಳೂರನ್ನು ಮಾದರಿ ಗ್ರಾಮ ಮಾಡುವುದಾಗಲಿ, ಅಂತಹ ಕನಸು ನನಸಾಗಿಸುವುದಾಗಲಿ, ಕೃಷಿಯಲ್ಲಿ ಹೊಸ ಪ್ರಯೋಗ ಮಾಡುವುದಾಗಲೀ, ಹೊಲವನ್ನು ಅಭಿವೃದ್ಧಿಪಡಿಸುವುದಾಗಲೀ, ತನ್ನಷ್ಟಕ್ಕೆ ತಾನು ಬೆಳೆದು ಗಳಿಕೆ ಮಾಡದೆ ಉಳಿದ ರೈತರಿಗೂ ಮಾರ್ಗದರ್ಶನ ಮಾಡಲು ಸಲಹೆ ನೀಡಲು 'ಫಾರ್ಮರ್ಸ್ ಕ್ಲಬ್'ಗಳನ್ನು ಮಾಡಿ ರೈತರನ್ನು ಸಂಘಟಿಸುವುದಾಗಲೀ, ಅವನ ತಮ್ಮ ರಾಘವ

ಮತ್ತು ತಾಯಿ ತಂಗಿಯರನ್ನು ಕೋಳ್ಯೂರಿಗೆ ಬರುವಂತೆ ಬಂದು ನೆಲಸುವಂತೆ ಮಾಡುವಲ್ಲಿ ಯಶಸ್ವಿಯಾಗುವುದಾಗಲೀ ಎಲ್ಲ ಕೆಲಸ ಕಾರ್ಯಗಳೂ ಪ್ರಗತಿಪರ ಎನಿಸಿವೆ. ಮತ್ತು ಸದಾನಂದ ಒಬ್ಬ ಆದರ್ಶ ಸಮಾಜ ಸೇವಕ ಎನಿಸುವಲ್ಲಿ ಅವನ ನುಡಿ ನಡೆಗಳು ಎಡಹುವುದಿಲ್ಲ.

ಸದಾನಂದನಲ್ಲಿ ತತ್ವಜ್ಞಾನಿಯ ಮನಸ್ಸು ಸಂನ್ಯಾಸಿಯ ಸರಳ ಮತ್ತು ನಿರಾಡಂಬರ ಅಭಿರುಚಿಗಳು ಮೇಳೈಸಿರುವುದರಿಂದಲೇ ಯಾವುದೇ ಆಕರ್ಷಣೆಗಳಿಲ್ಲದ ಹಳ್ಳಿಯಲ್ಲಿ ನೆಲೆಸಿ ಯಶಸ್ವಿ ಜೀವನ ನಡೆಸಲು ಸಾಧ್ಯವಾಯಿತು. ಅವನ ಸೇವೆ ಮತ್ತು ಕರ್ತವ್ಯಗಳಿಂದ ಅವನಿಗೆ ತೃಪ್ತಿಯಾಗಿದೆ. 'ಓದು ಒಕ್ಕಾಲು ಬುದ್ಧಿ ಮುಕ್ಕಾಲು' ಎಂಬ ಗಾದೆ ಮಾತಿನಂತೆ ಆತ ಎಷ್ಟೇ ಕಲಿತಿದ್ದರೂ ಹಳ್ಳಿಯಲ್ಲಿ ಕಲಿತದ್ದು, ಅನುಭವಿಸಿದ್ದು ಬುದ್ಧಿವಂತನಾದದ್ದು ಹೆಚ್ಚಿನ ಮಾತೇ ಸರಿ. ಹೊಲದ ಮಣ್ಣಿನಲ್ಲಿ ಪರಿಮಳ ತುಂಬಿಸಿದ್ದು ಸಾಮಾನ್ಯ ಮಾತಲ್ಲ.

ಕಾದಂಬರಿ ಕೊನೆಯ ಭಾಗದಲ್ಲಿ ಅನಿರೀಕ್ಷಿತ ತಿರುವುಗಳನ್ನು ಪಡೆದುಕೊಳ್ಳುತ್ತದೆ. ಆತನ ಕನಸಿನ ಬಳ್ಳಿ ಕುಡಿಯೊಡೆದು ಹಬ್ಬಿ ಹರಡಿ ದಿಕ್ಕು ದಿಕ್ಕಿಗೂ ಚಾಚಿದೆ. ಸಂತಸ ಸಂಭ್ರಮಗಳಿಂದ ಹಿತಾನುಭವ ಮೂಡಿಸಿದೆ. ತಂದೆ ತಾಯಿಯರ ಹಾಗೂ ಊರವರ ಮನ ಗೆದ್ದಿದ್ದಾನೆ. ಹಿಂದಿನ ನೋವು ನಿರಾಶೆಗಳು ಇಲ್ಲದಾಗಿವೆ. ಕಾರಂತರ ಮಗಳಾದ ಪಾರ್ವತಿ ಕೋಳ್ಯೂರಿಗೆ ಬಂದಾಗಲೇ ಅವ್ಯಕ್ತವಾಗಿ ಸದಾನಂದನ ಮನಸ್ಸನ್ನು ಆಕರ್ಷಿಸುತ್ತಾಳೆ. ಕಾರಂತರು ಸಾಯುವ ಸಮಯದಲ್ಲಿ " ನನಗೆ ಇನ್ನೂ ಈ ಲೋಕದಲ್ಲಿ ಆಗಬೇಕಾದುದು ಏನೂ ಇಲ್ಲ..... ನನ್ನ ಮುದ್ದು ಮಗಳು ಪಾರ್ವತಿಯ ಕೈಗೆ ಇನ್ನೊಂದು ಕೈ ಬೇಕಾಗಿದೆ ಡಾಕ್ಟ್ರೇ! ನೀವು ಏನೂ ಮಾಡಿ ಹೇಗೂ ಮಾಡಿ ಯಾರನ್ನ ಮರೆತರೂ ನನ್ನನ್ನು ಮರೆಯಬೇಡಿ. ನನ್ನ ಮಗಳ ಕೈಗೆ..." ಮತ್ತೇನೂ ಹೇಳಲಾಗದೆ ಕೊನೆಯುಸಿರು ಬಿಡುತ್ತಾರೆ. ಇದಾದ ಕೆಲವೇ ದಿನಗಳಲ್ಲಿ ರಾಜಮ್ಮ ನರ್ಸಪ್ಪಯ್ಯ ಹಾಗೂ ರಾಘವ ಎಲ್ಲರೂ ವಾಸಂತಿಯನ್ನು ಮದುವೆಯಾಗಲ ಸದಾನಂದನಿಗೆ ಒಪ್ಪಿಗೆ ಸೂಚಿಸುತ್ತಾರೆ. ಹುಗ್ಗಿಯಲ್ಲಿ ಹಾಲು ಸುರಿದಂತೆ ಅವನ ಕನಸು ನನಸಾಗುತದೆ. ಸಂತಸ ಇಮ್ಮಡಿಯಾಗುತ್ತದೆ. ಅದೇ ಸಂಭ್ರಮದಲ್ಲಿ ವಾಸಂತಿಯನ್ನು ಕಾಣಲು ಸದಾನಂದ ಹೋದಾಗ 'ತಾನೊಂದು ಬಗೆದರೆ ದೈವವೊಂದು ಬಗೆದಿರುತ್ತದೆ'. ವಾಸಂತಿ ಸತ್ತು ಹೋಗಿದ್ದಾಳೆ. ಅವಳ ಸಾವು ಅವನ ಕನಸನ್ನು ಬದಿಮೆಯನ್ನು ಬಾಳುವೆಯನ್ನು ಕತ್ತಲಾಗಿಸುತ್ತದೆ.

'ಕನಸಿನ ಬಳ್ಳಿ' ಕನಸೂ ಅಲ್ಲ, ನನಸೂ ಅಲ್ಲ. ಇಲ್ಲಿ ಕನಸು ಮನಸಿನ ಅನಿಸಿಕೆಗಳಿಗೆ ಆಶಯಗಳಿಗೆ ತವಕ ತಲ್ಲಣಗಳಿಗೆ ಹಾಗೂ ಸುಪ್ತ ಚೇತನಕ್ಕೆ ಸಾಂಗತ್ಯವನ್ನು ಏರ್ಪಡಿಸಿದೆ. ಭಾವುಕ ನೆಲೆಯನ್ನು ದಾಟಿದ, ಹೊಸ ಸಂವೇದನೆಯಿಂದ ಕೂಡಿದ ಈ ಪುಟ್ಟ ಕಾದಂಬರಿ ಬದುಕಿನ ನಿಷ್ಠುರತೆ ಮತ್ತು ಸಂಕೀರ್ಣತೆಗಳನ್ನು ಭಾಷೆಯಲ್ಲಿ ಹಿಡಿದಿಡುವಲ್ಲಿ ಯಶಸ್ವಿಯಾಗಿ ಇದರಿಂದಾಗಿ ಈ ಕೃತಿಯ ಮೌಲ್ಯವೂ ಹೆಚ್ಚಾಗಿದೆ.

ಕಾದಂಬರಿ ಪ್ರಕಾರವು ನಮ್ಮ ಸಾಹಿತ್ಯದಲ್ಲಿ ಅತ್ಯಂತ ಪ್ರಭಾವಶಾಲಿ ಸಾಹಿತ್ಯವೆನಿಸಿದೆ. ಸ್ವಾತಂತ್ರ್ಯಪೂರ್ವದ ಕಾದಂಬರಿಗಳಿಗಿಂತ ಸ್ವಾತಂತ್ರ್ಯೋತ್ತರ ಸಂದರ್ಭದಲ್ಲಿ ಬಂದ ಕಾದಂಬರಿಗಳು ಮಹಾತ್ಮಾಗಾಂಧೀಜಿಯವರ ವಿಚಾರ ಪ್ರಣಾಳಿಯನ್ನು ಅರಗಿಸಿಕೊಂಡಿವೆ.

ವೈದ್ಯರಾಗಿಯೂ ಡಾ. ಮೊಗಸಾಲೆಯವರು ಈ ಕಾದಂಬರಿಯಲ್ಲಿ ರೈತರ, ಅದರಲ್ಲಿಯೂ ಹಳ್ಳಿಯ ಜನಜೀವನವನ್ನು ಪ್ರತಿಬಿಂಬಿಸುವಲ್ಲಿ ಯಶಸ್ವಿಯಾಗಿರುವುದಕ್ಕೆ ಅವರು ಅಲ್ಲಿಯ ವಾತಾವರಣದಲ್ಲಿ ಹುಟ್ಟಿ ಬೆಳೆದು ವೃತ್ತಿಯನ್ನು ಮಾಡುತ್ತಿರುವದೇ ಕಾರಣ ಎಂದು ಬೇರೆ ಹೇಳಬೇಕಾಗಿಲ್ಲ. ಕೃಷಿಯಲ್ಲಿ ಎಲ್ಲವೂ ನಾವೆಣಿಸಿಕೊಂಡಂತೆ ಆಗದು. ಸದಾನಂದ ಹಳ್ಳಿಗೆ ಬಂದ ಕೂಡಲೇ ಕೃಷಿಯಲ್ಲಿ ಯಶಸ್ವಿಯಾಗಿರುವ ಹಾಗೂ ಸಾಧನೆ ಮಾಡಿರುವ ಬಗ್ಗೆ ಹೇಳುವುದು ಪ್ರಸ್ತುತ ಸನ್ನಿವೇಶದಲ್ಲಿ ಕೃಷಿಯಿಂದ ಸಿಗುವ ತೃಪ್ತಿ, ಜೀವನದ ನೈಜತೆ, ನಿಸರ್ಗದ ಪ್ರೀತಿಯುತ್ತ ಯುವಕರ ಮನಸ್ಸನ್ನು ಸೆಳೆಯಬಲ್ಲ ಶಕ್ತಿ ಈ ಕಾದಂಬರಿಗಿದೆ, ಒಟ್ಟಿನಲ್ಲಿ ಈ ಕಾದಂಬರಿ ಆರೋಗ್ಯಪೂರ್ಣವಾದ ಅಭಿವ್ಯಕ್ತಿಯಾಗಿದ್ದು, ಗಾಂಧೀಜಿಯ ಗ್ರಾಮಸ್ವರಾಜ್ಯದ ಕನಸನ್ನು ನನಸಾಗಿಸುವಲ್ಲಿ ಯಶಸ್ವಿಯಾಗಿದೆ.

೦

# ಮತಾಂತರ - ಮನುಷ್ಯತ್ವಗಳ ಸುತ್ತ 'ಪಂಥ'

ಕಮಲಾ ಹೆಮ್ಮಿಗೆ

'ವೃತ್ತಿಯಿಂದ ವೈದ್ಯರಾದ ಡಾ. ನಾ. ಮೊಗಸಾಲೆಯವರು ಕಾವ್ಯ, ಕಾದಂಬರಿ, ವೈದ್ಯಕೀಯ ಸಾಹಿತ್ಯಕ್ಕೂ ತಮ್ಮನ್ನು ಕೊಟ್ಟುಕೊಂಡವರು. ಕರ್ನಾಟಕ ಕರಾವಳಿಯ ವಿಶಿಷ್ಟ ಬದುಕನ್ನು, ಸವಾಲು ಸಮಸ್ಯೆಗಳನ್ನು ಸಮರ್ಥದೇಸೀ ನುಡಿಗಟ್ಟಿನ ಭಾಷೆಯ ಮೂಲಕ ಕೆತ್ತಿಟ್ಟವರು. ಸಮಕಾಲೀನತೆಗೆ ಸ್ಪಂದಿಸುತ್ತಿರುವ ಮೊಗಸಾಲೆ, 'ಪಂಥ'ದಲ್ಲಿ 'ಮತಾಂತರ' ದಂಥ ಸಮಸ್ಯೆಯೆತ್ತಿ, ನಿರ್ವಹಿಸಿರುವ ರೀತಿ ಅಪೂರ್ವ.

ಈ ಕಾದಂಬರಿ ಹತ್ತು ಸೀಳುಗಳಾಗಿ ಮೂಡಿದೆ. ನಿರೂಪಕ, ಸರಳ ಆಡುಭಾಷೆಯಲ್ಲಿ, ಕಥೆ ಒಪ್ಪಿಸುತ್ತಾನೆ. ಮೊದಲಭಾಗದಲ್ಲೇ ಉಗ್ರಾಣಿ ವೆಂಕಪ್ಪ, ತನಗೆ ಬಾಳಸಂಗಾತಿಯಾಗದ ಹೊನ್ನಿಯನ್ನು ಅವಳ ರೋಗಪೀಡಿತ ಮಗನನ್ನೂ ಪರಿಚಯಿಸುತ್ತಾನೆ. ಕೇವಲ ಮುಂಬಯಿಗೆ ಹೋಗುವವರೆಗೆ ಆದ್ಯತೆ ಇದ್ದ ಜನಮರುಳು, ವೆಂಕಪ್ಪನ ಭಗ್ನ ಪ್ರೇಮಕ್ಕೆ ಮೂಲವಾಗುವುದು 'ಹಣದ ಸಂಸ್ಕೃತಿ' ಬಗೆಗಿನ ಜನರ ವ್ಯಾಮೋಹವನ್ನು ಕಾಣಿಸುತ್ತದೆ. ಶೀನ, ರಥದಿಂದ ಬಿದ್ದು ಕಾಲುಮುರಿದುಕೊಂಡು ಬೀಡಿಕಟ್ಟುವುದು, ವೆಂಕಪ್ಪನಿಗೆ ಕಳವಳವನ್ನೂ ವಿಚಿತ್ರ ನೆಮ್ಮದಿಯನ್ನೂ ತರುವ ಮನೋವ್ಯಾಪಾರ ಬಹಳ ಸೂಕ್ಷ್ಮವಾಗಿ ಚಿತ್ರಿತವಾಗಿದೆ. ಹೊನ್ನಿ ಮತಾಂತರ ಹೊಂದಿರುವ ಪ್ರಸಂಗವೇ ಕಥಾಬೀಜ. (ಇದು ಅಂಬೇಡ್ಕರರು ಬೌದ್ಧಧರ್ಮಕ್ಕೆ ಶರಣಾದ ರೀತಿಗಿಂತ ಭಿನ್ನ)

ಹೊನ್ನಿಯ ಮತಾಂತರ, ಹೊಗೆಯಂತೆ ಎಲ್ಲೆಡೆ ವ್ಯಾಪಿಸಿ, ಹೆಗ್ಡೆಯವರಿಗೂ ತಿಳಿಯುತ್ತದೆ. 'ಪರ್‌ಪುರಾ' ಎಂಬ ಖಾಯಿಲೆ, ಕ್ರಮೇಣ ವಿಷವಾಗುವುದು ದೇಶದ ರಾಜಕಾರಣದಂತೆ ತೋರುವುದು ಕ್ರೂರ ವ್ಯಂಗ್ಯ. ಇದೇ ಸಂದರ್ಭದಲ್ಲಿ ಜಗಳೂರಿನ ಫಾದರ್ ಕೇವಲ ಪ್ರಾರ್ಥನೆಯಿಂದ ಹೊನ್ನಿಮಗನ ಖಾಯಿಲೆ ವಾಸಿಮಾಡುವ ಯತ್ನದಲ್ಲಿರುವುದೂ, ಲೂವಿಸ್ ಎಂಬ ವೈದ್ಯರು ಅದು ಕೇವಲ ಮನಸ್ಸಿಗೆ ಹೊಂದಿದ್ದೆಂದು ಘಟ್ಟಿಸಿ ಹೇಳುವುದೂ ಇನ್ನಷ್ಟು ಬಿಕ್ಕಟ್ಟನ್ನುಂಟುಮಾಡುತ್ತದೆ. ಉದ್ದ ಹೆಸರಿನ ಕಾಯಿಲೆ, ಇಡೀ ಹಳ್ಳಿಯ ಜನರ ನಾಡಿಯನ್ನು ಅಲ್ಲಾಡಿಸುವುದು ಮುಖ್ಯ ಸಂಗತಿ. 'ಇಡೀ ಇಂಡಿಯಾನೇ ಮತಾಂತರವಾಗಿ ನಾಳೆ ಕ್ರಿಶ್ಚಿಯನ್ ಕಂಟ್ರಿ ಆಗುತ್ತದೆ!' ಎಂದು ಸ್ಕೂಲ್ ಹೆಡ್‌ಮಾಸ್ತ್ರು ಚಿಂತೆಗೀಡಾಗುವುದು ಓರ್ವ ಶಿಕ್ಷಕನ ಕರ್ಮಠತೆಗೆ ಸಾಕ್ಷಿ ಎನಿಸುತ್ತದೆ.

ತಿಮ್ಮನಹಳ್ಳಿಯ ಎಲ್ಲ ಪಾತ್ರಗಳು ತಂತಮ್ಮ ರೀತಿಯಲ್ಲಿ ಪ್ರತಿಕ್ರಿಯಿಸಿರುವ ರೀತಿ, ನಾಟಕೀಯವಾಗಿ ಮೂಡಿದೆ. ಕಾಸಿಂ ಎಂಬ ಮುಸ್ಲಿಂ ಧರ್ಮದವನೂ 'ಪ್ರಾರ್ಥನೆ ಮಹತ್ವ' ಕುರಿತು ಚಿಂತಿಸುವುದು, ಸಾಮಾನ್ಯರಲ್ಲೂ ವಿಮರ್ಶೆ, ವಿಶ್ಲೇಷಣೆ ಮಾಡುವ, ಸಾಮರ್ಥ್ಯವಿರುತ್ತವೆಂಬುದನ್ನು ಸಾಬೀತು ಪಡಿಸುತ್ತದೆ. ಮಗ ಉಳಿದರೆ ಸಾಕೆಂದು ಆರ್ತನಾದ ಮಾಡುವ ಹೊನ್ನಿಯ ಗಂಡ ಶೀನ ಕಾಮತರಿಗಾಗಲೀ, ಮಾಸ್ತರರಿಗಾಗಲಿ, ನೇರವಾಗಿ ತಾವು 'ಕಿರಿಸ್ತಾನರ ಜಾತಿಗೆ' ಸೇರಿದ್ದಾಗಿ ಹೇಳುವುದು ಸಂಪ್ರದಾಯನಿಷ್ಠರಿಗೆ ಹಾಕಿದ 'ಪಂಥ' (ಸವಾಲು) ಎನ್ನಬಹುದು.

ಹೊನ್ನಿಯ ಪಾತ್ರ ತುಂಬ ಗಟ್ಟಿ ಎನಿಸುತ್ತದೆ, ಆಕೆ 'ಜಾತಿಯಲ್ಲಿ ಇದ್ದಾಗ ಯಾವ ನಾಯಿಯೂ ನಮ್ಮ ಮನೆ ಬಾಗಿಲಿಗೆ ಬರಲಿಲ್ಲ' ಎನ್ನುವಾಗ ನಡೆದ ಘಟನೆ, ಹಿಂದೂ ಜನರಲ್ಲಿ ಜಾಗೃತಿ ಮೂಡಿಸಲು ಪ್ರೇರಣೆ ನೀಡುವುದು ವಿಚಿತ್ರ ಸಂದರ್ಭ. ಅದನ್ನು ಚುನಾವಣೆಗೆ ಬಳಸಿಕೊಳ್ಳುವ ಹುನ್ನಾರವೂ ಬೇರೊಂದು ಆಯಾಮ ನೀಡುತ್ತದೆ. ಮುಳ್ಳಿಂದ ಮುಳ್ಳುತೆಗೆಯುವಂತೆ ಡಾ. ಲೂಯಿಸ್‌ಗೂ ತಿಳಿಯದಂತೆ 'ಪ್ರಾರ್ಥನೆ ಕಾಯಿಲೆ ಗುಣ ಮಾಡದು' ಎಂದು ರೆಕಾರ್ಡ್ ಮಾಡಿಕೊಳ್ಳುವವರೆಗೂ ಗ್ರಾಮ ಮುಖಂಡರ ತಲೆ ಓಡುತ್ತದೆ.

ಆದರೆ ಶಾಸ್ತ್ರಿಗಳು, 'ಮತಾಂತರ'ದ ಬಗೆಗೆ ಮಾನವೀಯ ಪ್ರತಿಕ್ರಿಯೆಯನ್ನೇ ತೋರಿಸುವುದು ಬಹು ಮುಖ್ಯ ಘಟನೆ (ಹೊನ್ನಿ ಅವರಲ್ಲಿ ಪ್ರಶ್ನೆ ಕೇಳಿಯೇ ಫಾದರ್‌ರಲ್ಲಿಗೆ ಹೋಗಿರುತ್ತಾಳೆ) ಜೀವ ಉಳಿಯುವುದು ಮುಖ್ಯ ಎಂದು ಅವರು ಎಗ್ಗಿಲ್ಲದೇ ಹೇಳುವ ಸಂದರ್ಭ, ಎಲ್ಲ ಮೇಲ್ವರ್ಗದವರೂ ದುಷ್ಟರಲ್ಲ ಎಂಬುದಕ್ಕೆ ನೀಡಿದ ಒತ್ತು. 'ದೇವರೇ ನನ್ನ ಶಾಸ್ತ್ರ ಸುಳ್ಳಾದರೂ ಚಿಂತಿಲ್ಲ ಆ ಮಗು ಸುಖವಾಗಿರಲಿ' ಎಂಬ ಮಾತಿಗೂ, ಸಂಸ್ಕಾರದ ಪ್ರಾಣೇಶಾಚಾರ್ಯರು ಮಾರುತಿಯ ಪ್ರಸಾದ ಕೇಳುವ ಇಲ್ಲವೇ 'ದಾಟು'ವಿನ ಮೋಹನದಾಸ, ಗುಡಿ ಪ್ರವೇಶಿಸಿ ತಲೆತಿರುಗಿ ಬೀಳುವ ಸಂದರ್ಭಕ್ಕೂ ತದ್ವಿರುದ್ಧವೆನಿಸುತ್ತವೆ. ಅದೇ ದಿಟ್ಟತನ ಔದಾರ್ಯ ಡಾ. ಲೂಯಿಸ್ ಪಾತ್ರವೂ ವ್ಯಕ್ತಪಡಿಸುವುದು ಗಮನಾರ್ಹ. ಇವೆರಡೂ ಪಾತ್ರಗಳೂ ಪರಸ್ಪರ ಗೌರವಿಸುವುದು ಸಹಜ ಚಿತ್ರಣ.

ಶಾಸ್ತ್ರಿಗಳನ್ನು ಬಗ್ಗಿಸಲಾರದ ಪುರ ಪ್ರಮುಖರು ಬೆದರಿಕೆ ಪತ್ರ ಹಾಕಿಸುವುದು, ಶಾಸ್ತ್ರಿಗಳಿಗೇ ಹೊನ್ನಿಯ ಮಗ ಹುಟ್ಟಿರಬಹುದೆಂದು ಗುಮಾನಿ ಹುಟ್ಟಿಸುವುದು, ಅವರಿಗೆ ಲಕ್ವಾ ಹೊಡೆಯುವುದು, ಹೊನ್ನಿಗೆ ಶಾಸ್ತ್ರಿಗಳ ಸಾವಾದಂತೆ, ದುಷ್ಟಕೂಟವೆಲ್ಲಾ ಸೇರಿಶ್ರದ್ಧಾಂಜಲಿ ಸಲ್ಲಿಸಲು ಸೇರಿದಂತೆ, ತಾನು ವೆಂಕಪ್ಪನನ್ನೂ ಸೇರಿದಂತೆ ಎಲ್ಲರಿಗೂ ಚಪ್ಪಲಿಯಲ್ಲಿ ಬಾರಿಸಿದಂತೆ, ಕನಸು ಬೀಳುತ್ತದೆ.

ಆ ಘಟನೆಯನ್ನು ಕಾದಂಬರಿಕಾರರು ಮೊದಲು ಯಥಾರ್ಥದಂತೆ, ನಂತರ ಹೊನ್ನಿಯ ಸುಪ್ತ ಆಕಾಂಕ್ಷೆಯ ಅಭಿವ್ಯಕ್ತಿಯಂತೆ ಚಿತ್ರಿಸಿ ಕೌತುಕಗೊಳಿಸುತ್ತಾರೆ. ತಿಳಿಹಾಸ್ಯಪೂರ್ಣ ಶೈಲಿ, ಕರಾವಳಿಯ ನುಡಿಗಟ್ಟು, ಸತ್ಯಕ್ಕೆ ಸಾವಿಲ್ಲವೆಂಬ ಧೋರಣೆ, ಪುರೋಹಿತಶಾಹಿಯ, ಉಳ್ಳವರ ಸಣ್ಣ ರಾಜಕೀಯ ಹುನ್ನಾರ ಒಳಸಂಚುಗಳು 'ಪಂಥ' ಹಾಕಿದರೂ ಬಡವರಾದ ಶೀನ ಹೊನ್ನಿಯರು ಅದಕ್ಕೆ ಮುಖಾಮುಖಿಯಾಗುವುದು ಈ ಪುಟ್ಟ 148 ಪುಟಗಳ

ಕಾದಂಬರಿಯ ವೈಶಿಷ್ಟ್ಯ. ಕಾದಂಬರಿಕಾರರ ಕ್ಯಾಮರಾ ಕಣ್ಣು, ಚಿತ್ರಿಕೆಗಳ ಸಮೂಹವನ್ನೇ ವಾಚಕರೆದುರು ಪ್ರದರ್ಶಿಸುವುದು ಅವರ ಕೌಶಲಕ್ಕೆ ನಿದರ್ಶನ.

ೞ

# ಕಥಾಪ್ರಪಂಚ:
# ಮೊಗಸಾಲೆ ಎರಡನೆಯ ಅವತಾರ

**ವಿಜಯೇಂದ್ರ ಪಾಟೀಲ್**

ಡಾ. ಮೊಗಸಾಲೆ ಸಾಹಿತ್ಯ ರಚನೆಗೆ ತೊಡಗಿ 44–45 ವರ್ಷಗಳೇ ಸಂದಿದೆ. ಈ ದೀರ್ಘಕಾಲಕ್ಕನುಗುಣವಾಗುವಷ್ಟು ಗಾತ್ರದ ಸಾಹಿತ್ಯವೂ ಅವರಿಂದ ಬಂದಿದೆ. ಮೊಗಸಾಲೆಯವರ ಬರವಣಿಗೆಯ ವಿಶೇಷವೆಂದರೆ ತಮ್ಮನ್ನು ಸೆಳೆದ, ಒಳಗೊಂಡ, ಕಾಡಿದ ಅನುಭವಗಳನ್ನು ಮಾತ್ರವಲ್ಲ, ತಮ್ಮನ್ನು ಕೇವಲ ಸ್ಪರ್ಶಿಸಿದ ಅನುಭವಗಳನ್ನೂ ಆಯಾಕಾಲಘಟ್ಟದಲ್ಲಿ ಹುಸಿ ಹೋಗಲುಬಿಟ್ಟವರಲ್ಲ. ಎಲ್ಲವನ್ನೂ ಅಕ್ಷರಗಳಲ್ಲಿ ಹಿಡಿದಿಡುವ ಅದಮ್ಯ ಉತ್ಸಾಹ ಅವರದು. ಅದು ಕಾದಂಬರಿಯಾಗಿರಬಹುದು, ಕಾವ್ಯವಾಗಿರಬಹುದು. ಕಥೆಯಾಗಿರಬಹುದು ಲೈಂಗಿಕ, ಮನೋವೈಜ್ಞಾನಿಕ ಅಥವಾ ವೈದ್ಯಕೀಯ ಸಾಹಿತ್ಯವೂ ಆಗಿರಬಹುದು. ಇಷ್ಟಾಗಿಯೂ ಅವರ ಅನುಭವದ ತೆಕ್ಕೆಯಿಂದ ಮತ್ತೇನಾದರೂ ಕಳಚಿಕೊಂಡಿದೆಯೇ ಎಂದು ಸಂಶಯವ್ಯಕ್ತಪಡಿಸುವವರ ಮುಂದೆ ತಮ್ಮ 'ಬಯಲುಬೆಟ್ಟ' (ಆತ್ಮಕಥೆ)ವನ್ನೇ ಇಟ್ಟು ಬಿಟ್ಟಿದ್ದಾರೆ. ಇದನ್ನು ಕಾದಂಬರಿಯಾಗಿಯೂ ಓದಬಹುದು ಎಂಬ ಸೂಚನೆ ಅದರಲ್ಲಿರುವುದರಿಂದಲೂ ಮತ್ತು ಕಾದಂಬರಿಗಳು ಎಲ್ಲ ಗುಟ್ಟುಗಳನ್ನು ಬಿಟ್ಟುಕೊಡದೆ ಮತ್ತೊಂದರ ಹುಟ್ಟನ್ನು ಸೂಚಿಸುವ ಗುಣ ಹೊಂದಿರುವುದರಿಂದಲೂ ಅವರ ಅನುಭವದ್ರವ್ಯ ಬಯಲಬೆಟ್ಟದಾಚೆಗೂ ಕಣ್ತಪ್ಪಿ ಉಳಿದಿರಬಹುದೇ ಎಂದು ಸಂಶಯಾತ್ಮಕ ಮಾತ್ರವಲ್ಲದೆ ಅವರಿಂದ ಇನ್ನೂ ವಿಭಿನ್ನವಾದುದನ್ನು ನಿರೀಕ್ಷಿಸುವ ಜನ ಮತ್ತೂ ಅವರತ್ತ ನೋಡುವಂತಾಗಿದೆ. ಈ ರೀತಿಯು 'ಸಾಧ್ಯತೆಯ ಮನುಷ್ಯ' ರಾದ ಮೊಗಸಾಲೆ ಸಾಕಷ್ಟು ಕುತೂಹಲ ಹುದುಗಿಸಿಕೊಂಡಿರುವ ಶಕ್ತಿಯುಳ್ಳ ಲೇಖಕರಾಗಿ ಮುಂದುವರಿದಿದ್ದಾರೆ. ಓರ್ವ ಒಳ್ಳೆಯ ಬರಹಗಾರ ಕಾಲಾಂತರ ಉಳಿಸಿಕೊಂಡು ಸುದೀರ್ಘಕಾಲ ಸಾಹಿತ್ಯ ರಚಿಸಿಕೊಂಡು ಹೋಗಿರುವ ಉದಾಹರಣೆಗಳು ನಮ್ಮಲ್ಲಿ ಸಾಕಷ್ಟು ಸಿಕ್ಕುತ್ತವೆ. ಆದರೆ ಮೊಗಸಾಲೆಯವರಂತೆ ನಿರಂತರವಾಗಿ ಬರವಣಿಗೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು ಕಡಿಮೆ. ಏಕೆಂದರೆ ಅದು ಕಷ್ಟದ ಕೆಲಸ. ಮೊಗಸಾಲೆ ತಮ್ಮಬರವಣಿಗೆಯ ಆರಂಭದ ಕಾಲದಿಂದ ಈವರೆಗಿನ ಯಾವುದೇ ಅವಧಿಯಲ್ಲೂ ಎಲ್ಲ ಸಂಘಟನಾತ್ಮಕ ಕಾರ್ಯಗಳ ಮಧ್ಯೆಯೂ ಚಾಲ್ತಿಯಲ್ಲಿದ್ದ ಲೇಖಕ. ಇದಕ್ಕಾಗಿ ಅವರು ಅನೇಕ ಲೇಖಕರು ಮಾಡಿಕೊಳ್ಳುವಂತೆ ಕವಿತೆಯಿಂದ ಕಥೆಗೆ, ಕಥೆಯಿಂದ ಕಾದಂಬರಿಗೆ ಮತ್ತೆ ಕವಿತೆಗೆ ವೈದ್ಯಕೀಯ ಇತ್ಯಾದಿ ಲೇಖನಗಳಿಗೆ ಹೀಗೆ ಬರವಣಿಗೆಯ ರೂಪವನ್ನು ಬದಲಾಯಿಸುತ್ತ ಹೋಗುವ ತಂತ್ರ ಮಾಡಿಕೊಂಡಿರಬಹುದೆ? ಬಹುಶಃ ಇಲ್ಲ. ಸ್ವತಃ ಮೊಗಸಾಲೆ

ಈ ಶಿಸ್ತಿನ ಅಗತ್ಯ ಕಂಡುಕೊಂಡವರಂತೆ ಕಾಣುವುದಿಲ್ಲ. ಏಕೆಂದರೆ ಡಾ. ಮೊಗಸಾಲೆಗೆ ಬರವಣಿಗೆಯಲ್ಲಿ ತೊಡಗಿಸಿಕೊಳ್ಳುವ ಕ್ರಿಯಾಶೀಲತೆಯೇ ಒಂದು ತಂತ್ರವಾಗಿ ಕಂಡಂತಿದೆಯೇ ಹೊರತು ಪ್ರಕಾರಗಳಿಗಾಗಿ ಯೋಚಿಸುತ್ತ ಕೂರುವ ತಂತ್ರಗಾರಿಕೆ ತಿಳಿದಂತಿಲ್ಲ.

ಓರ್ವ ಚಾಲ್ತಿಯಲ್ಲಿರುವ ಲೇಖಕ ಹಲವು ಪ್ರಶ್ನೆಗಳನ್ನು, ಕುತೂಹಲವನ್ನು ಓದುಗನಲ್ಲಿ ಸಹಜವಾಗಿ ಹುಟ್ಟಿಸುತ್ತಾನೆ. ಮೊದಲನೆಯದು ತನ್ನ ಕೃತಿಗಳಲ್ಲಿ ಹುಟ್ಟಿಸಿ ಬಿಟ್ಟುಬಿಡುವ ಪ್ರಶ್ನೆಗಳು. ಮತ್ತು ಈ ಪ್ರಶ್ನೆಗಳು ಹುಟ್ಟಲು ಕಾರಣವಾಗುವ ಪರಿಸರ. ಮೊದಲ ಪ್ರಶ್ನೆಗೆ ಸಮಾಧಾನವನ್ನು ಕೃತಿಯ ಒಡಲಲ್ಲೇ ಹುಡುಕಬೇಕು. ಹೀಗೆ ಹೊರಟಾಗ ಹಲವು ಸಾಧ್ಯತೆಗಳು, ಮತ್ತಷ್ಟು ಪ್ರಶ್ನೆಗಳು ಒಂದು ಯಶಸ್ವೀ ಕೃತಿಯಲ್ಲಿ ಏಳುವುದು ಸಹಜ. ಹಾಗೆ ನೋಡಿದರೆ ಓದುಗನಿಗೆ ಸಂಬಂಧಪಡಬೇಕಾದ್ದು ಒಂದು ರೀತಿಯಲ್ಲಿ ಇಷ್ಟೇ. ಆದರೆ ಇದರ 'ಹಿಂದಿನದನ್ನು' ತಿಳಿಯುಬಯಸುವ ಕುತೂಹಲಿಗಳು ಇದ್ದೇ ಇರುತ್ತಾರಲ್ಲ. ಅಂಥವರಿಗೆ ಲೇಖಕ 'ಆತ್ಮಕಥೆ'ಯನ್ನೇನಾದರೂ ಬರೆದಿದ್ದರೆ ಮುಗಿಯಿತು, ಪಠ್ಯದ ಜೊತೆಗೆ ಗೈಡ್ ಕೂಡ ಸಿಕ್ಕಂತೆಯೇ! ಮೊಗಸಾಲೆಯವರ 'ಸುಂದರಿಯ ಎರಡನೇ ಅವತಾರ' ಓದಿ ಒಂದು ವರ್ಷದ ನಂತರ 'ಬಯಲ ಬೆಟ್ಟ' ಓದುವಾಗ ಅಲ್ಲೆಲ್ಲಾದರೂ 'ಸುಂದರಿ' ಕಾಣುತ್ತಾಳೆಯೇ ಎಂಬ ವಿಚಾರ ಓದಿನ ನೆರಳಾಗಿ ನನ್ನನ್ನು ಕಾಡುತ್ತಲೇ ಇತ್ತು.

ಅದಾಗಿ 'ಸುಂದರಿ'ಯನ್ನು ಮತ್ತೊಮ್ಮೆ ಓದುವಾಗ 'ಬಯಲಬೆಟ್ಟ'ದ ಯಾವ ಭಾಗದಲ್ಲಿ ಈಕೆ, ಇವಳ ಜೊತೆಯವರು ವಾಸವಾಗಿದ್ದಾರೆ ಎಂಬ ಕುತೂಹಲವೂ ಓದಿನ ಜೊತೆಗೇ ಇತ್ತು. ಆದರೆ ಒಂದು ಯಶಸ್ವೀ ಕೃತಿ ಹಲವು ಪ್ರಶ್ನೆಗಳನ್ನು, ಸಾಧ್ಯತೆಗಳನ್ನು ತನ್ನಲ್ಲಿ ಹುದುಗಿಸಿಕೊಂಡು ಬಿಡುವಂತೆ 'ಬಯಲಬೆಟ್ಟ' ಕೂಡ 'ಸುಂದರಿ'ಗೆ ಸಂಬಂಧಿಸಿದಂತೆ ಏನೆಲ್ಲವನ್ನೂ ಬಿಟ್ಟುಕೊಡುವುದಿಲ್ಲ. ಮೊಗಸಾಲೆಯವರ ಹದಿನಾಲ್ಕು ಅಲ್ಲದಿದ್ದರೂ ಕೆಲಕಾದಂಬರಿಗಳಿಗಾದರೂ ಸಂಬಂಧಿಸಿದಂತೆ ಅಲ್ಲಿ ಸ್ಪಷ್ಟ ಸುಳುಹುಗಳು ದೊರಕುತ್ತವೆ. ತಮ್ಮ ಕೆಲ ಕವಿತೆಗಳ ಕುರಿತೂ ಹೇಳುತ್ತಾರಲ್ಲದೆ ಅದರಲ್ಲಿ ಕೆಲವು ಯಾರನ್ನು ಕುರಿತಾಗಿ ಬರೆದದ್ದು ಎಂಬುದನ್ನೂ, ಸಂದರ್ಭವನ್ನೂ ಹೇಳುತ್ತಾರೆ. ಇತರ ವೈದ್ಯಕೀಯ, ಲೈಂಗಿಕ ಆರೋಗ್ಯ ಕುರಿತಾಗಿ ಬರೆಯಬೇಕಾಗಿ ಬಂದ ಸಂದರ್ಭಗಳನ್ನು ಜ್ಞಾಪಿಸಿಕೊಳ್ಳುತ್ತಾರೆ. ಆದರೆ ಕಥೆಗಳ ಮೂಲಕ್ಕೆ ಸಂಬಂಧಿಸಿದಂತೆ ಅಸ್ಪಷ್ಟ ಚಿತ್ರಣ ಕೂಡ ಬಯಲಬೆಟ್ಟದಲ್ಲಿ ಸಿಗುವುದಿಲ್ಲ. ಆದರೆ ಅವರ ಬಹಳಷ್ಟು ಕಾದಂಬರಿಗಳಲ್ಲಿ ಕಾಣಸಿಗುವ ಸಾಮಾಜಿಕದಲ್ಲಿ ಬೇರ್ಪಡಿಸಲಾಗದಂತೆ ಸೇರಿಕೊಂಡಿರುವ ರಾಜಕೀಯ, ಜಾತೀಯತೆಯ ಕೆಲವು ಕುರುಹುಗಳು ಅವರ ಬಹಳಷ್ಟು ಕಥೆಗಳಲ್ಲೂ ಮುಂದುವರಿಯುವುದರಿಂದ ಕುತೂಹಲಿಗಳು ಈ ಮಾರ್ಗದ ಮೂಲಕ ತಮಗೆ ಬೇಕಾದ ಸಮಾಧಾನ ಕಂಡುಕೊಳ್ಳಬಹುದು!

ಸಾಹಿತ್ಯ ರಚನೆಯ ಏಕಾಂತ ಹಾಗೂ ಸಂಘಟನೆಯಂತಹ ಲೋಕಾಂತಗಳನ್ನು ರಾತ್ರಿ ಹಗಲುಗಳಂತೆ ನಿರಂತರವಾಗಿ ಸುದೀರ್ಘಕಾಲ ನಿಭಾಯಿಸಿಕೊಂಡು ಬಂದ ಡಾ.ಮೊಗಸಾಲೆಯವರಿಗೆ ಸಾಮಾಜಿಕ, ರಾಜಕೀಯ, ಜಾತೀಯ ಸುಳಿಗಳು ಒಂದರೊಳಗೊಂದು ತಳುಕು ಹಾಕಿಕೊಂಡು ಸಮಾಜವನ್ನು ಕಕ್ಕಾಬಿಕ್ಕಿಗೊಳಿಸುವ ಅನುಭವ ಆಗದೆ ಇರಲು

ಸಾಧ್ಯವೇ ಇಲ್ಲ. ಇಷ್ಟಾಗಿಯೂ ಅವರ ಕಾದಂಬರಿ-ಕಥೆಗಳನ್ನು ನೋಡಿದಾಗ ಮೊಗಸಾಲೆಯವರಲ್ಲಿ ಈ ಮೇಲೆ ಹೇಳಿದ ಸಮಸ್ಯೆಗಳು ಅವರ ಅನುಭವ ಒದಗಿಸಿ ಬೆಳೆಸಿದ ಸಹಜ ಸಂಗತಿಗಳಾಗಿರುವುದರ ಜೊತೆಗೆ 'ಇವು ಅವರ ವಿಶೇಷ ಆಸಕ್ತಿಗಳೇ' ಎಂಬ ಸಂದೇಹಕ್ಕೂ ಅವಕಾಶ ಒದಗಿಸುತ್ತವೆ. ಯಾವ ಒಳ್ಳೆಯ ಲೇಖಕರೂ ಜಾತೀಯತೆ, ರಾಜಕೀಯಗಳ ಪ್ರಸ್ತುತ ಪರಿಣಾಮಗಳಿಂದ ವಿಮುಖರಾಗಲು ಸಾಧ್ಯವಿಲ್ಲವೆಂಬುದೇನೋ ನಿಜ. ಆದರೆ ಮೊಗಸಾಲೆಯವರಿಗೆ ಕಾಡಿದಷ್ಟು ಇವು ಬಹುಶಃ ಬೇರೆಯವರಿಗೆ ಕಾಡಿರಲಾರವೋ ಏನೋ. ಇದನ್ನು ಕಥಾಸಂದರ್ಭಗಳಲ್ಲಿ ಮತ್ತೆ ನೋಡಬಹುದು.

ಕಾವ್ಯವನ್ನು ಹೆಣ್ಣಿಗೆ, ಗದ್ಯವನ್ನು ಗಂಡಿಗೆ ಅನೇಕ ಸಾರಿ ಹೋಲಿಸಲಾಗುತ್ತದೆ. ಮೊಗಸಾಲೆಯವರ ಬರವಣಿಗೆಯಲ್ಲಂತೂ ಇದು ತುಂಬ ಹೊಂದಿಕೊಳ್ಳುವ ಮಾತಾಗಿಯೇ ಕಂಡುಬರುತ್ತದೆ. ವಿಶೇಷವೆಂದರೆ ಈ ಎರಡೂ ಪ್ರಕಾರಗಳಲ್ಲಿಯೂ ಸಾಹಿತ್ಯ ಅಕಾಡೆಮಿಯ ಗೌರವವನ್ನೊಳಗೊಂಡಂತೆ ಹಲವಾರು ಪ್ರಶಸ್ತಿಗಳನ್ನು ಲೇಖಕರು ಪಡೆದುಕೊಂಡಿರುವುದು. ಆದರೆ ಇವರ ಕಾವ್ಯಕನ್ನಿಕೆಯರು ಮನೆಯಿಂದ ಹೊರಬೀಳುವಾಗ ಗಮನವಿಟ್ಟು ಅಲಂಕಾರ ಮಾಡಿಕೊಂಡ ಮೇಲೂ ಕಡೆಗೊಮ್ಮೆ ಎಂಬಂತೆ ಮತ್ತೊಮ್ಮೆ ಕನ್ನಡಿ ನೋಡಿಕೊಳ್ಳುವ ಪರಿಪಾಠ ಬೆಳೆಸಿಕೊಂಡಿದ್ದರೆ, ಅವರ 'ಗದ್ಯ ಮಕ್ಕಳು' ಮಾತ್ರ "ಸೀದಾ-ಸಾದಾ; ಆದರೆ ಸ್ವಚ್ಛ ಬಟ್ಟೆ ಹಾಕಿಕೊಂಡಿದ್ದರೆ ಸಾಕು. ಅದರ ಇಸ್ತ್ರಿಯ ಬಗೆಗೆ ತಲೆ ಕೆಡಿಸಿಕೊಳ್ಳಬೇಕಾಗಿಲ್ಲ" ಎಂಬ ಧೋರಣೆ ಬೆಳೆಸಿಕೊಂಡಂತೆ ಕಾಣುತ್ತಾರೆ.

ಹೀಗೆ ಇದ್ದಕ್ಕಿದ್ದ ಹಾಗೆ ಹೊರಬಂದ ಕಥೆ, ಕಾದಂಬರಿಗಳಲ್ಲಿ ಕೆಲವು ಅವುಗಳ ನೇರ ಸೀದಾ-ಸಾದಾ ಗುಣಗಳಿಂದಲೇ ಸಂತೋಷ ಹುಟ್ಟಿಸಿಬಿಟ್ಟರೆ ಇನ್ನು ಕೆಲವು ಮೊಗಸಾಲೆ ತಮ್ಮ 'ಹೆಣ್ಣು ಮಕ್ಕಳಿ'ಗೆ ಕೊಡುವಷ್ಟು ಗಮನವನ್ನು ಗಂಡುಮಕ್ಕಳಿಗೆ ಕೊಡಲಿಲ್ಲವೇನೋ ಎಂಬ ಅನುಮಾನಕ್ಕೆ ದಾರಿಮಾಡಿಕೊಡುತ್ತವೆ. ಹಾಗೆ ಕೆಲ ಹೆಣ್ಣುಮಕ್ಕಳನ್ನು ತಿದ್ದಿ ತೀಡಿದ್ದು ಜಾಸ್ತಿಯಾಯಿತೇನೋ ಎನ್ನಿಸಲೂಬಹುದು. ಆದರೆ ಆ ವಿಷಯವಾಗಿ ನಾನು ಹೆಚ್ಚು ಹೇಳಬಯಸುವುದಿಲ್ಲ. ಅದನ್ನು ಹೇಳಬೇಕಾದವರಿಗೆ ಅದು ಹೊಳೆದರೂ ಹೊಳೆದೀತು!

ಮೊಗಸಾಲೆಯವರ ಗದ್ಯ, ಅದರಲ್ಲೂ ಕಥೆಗಳ ಕುರಿತು ಆಲೋಚಿಸುವಾಗ ಒಂದು ಕುತೂಹಲಕಾರಕ ಸಂಗತಿ ಬೆಳಕಿಗೆ ಬರುತ್ತದೆ. ಕಥೆಗಳ ಕುರಿತಾಗಿ ಇವರದು 'ನಿರ್ಮೋಹಿ' ಗುಣ. ಇದನ್ನು ಎರಡರ್ಥದಲ್ಲಿ ಹೇಳುತ್ತಿದ್ದೇನೆ. ಮೊದಲನೆಯದು- 1965ರ ಸುಮಾರಿಗೆ ತಮ್ಮ ವಿದ್ಯಾರ್ಥಿ ಬದುಕಿನಲ್ಲೇ ಶ್ರೀ ಬಿ.ಎನ್. ಜೋಗಿತ್ತಾಯರ ಐದು ಕಥೆಗಳ ಜೊತೆಗೆ ತಮ್ಮ ನಾಲ್ಕನ್ನು ಸೇರಿಸಿ ತಂದ ಮೊದಲ ಸಂಕಲನ(ಆಶಾಂಕುರ) ವನ್ನಾಗಲೀ, ಅದೇ ವರುಷ ಕೋಣಿ ಕೃಷ್ಣ ಭಂಡಾರಿಯವರು ಇದೇ ರೀತಿ ಬೇರೆ ಲೇಖಕರೊಂದಿಗೆ ಹೊರತಂದ ಮೊದಲವೊಗ್ಗು(ಹಸಿರು ಬಿಸಿಲು)ವನ್ನಾಗಲೀ ತಮ್ಮ ಅಧಿಕೃತ ಸಂಕಲನವೆಂದು ಹೇಳಿಕೊಳ್ಳುವುದಿಲ್ಲ. ಹಾಗೆ, 61-65ರ ಸಮಾರಿನಲ್ಲಿ ಬರೆದು ಕರ್ಮವೀರ, ಜನಪ್ರಗತಿ, ಮಲ್ಲಿಗೆ, ಭವ್ಯವಾಣಿ, ಗೋಕುಲ, ಪ್ರಕಾಶ, ರಾಯಭಾರಿ ಮೂಲಕ ಪ್ರಕಟಿಸಿದ 20-25 ಕಥೆಗಳನ್ನು ಉಳಿಸಿಕೊಳ್ಳುವ ಮೋಹವೂ ಅವರಲ್ಲಿಲ್ಲ. 'ಪ್ರಜಾವಾಣಿ' ಕಥಾಸ್ಪರ್ಧೆಯಲ್ಲಿ

'ಮೆಚ್ಚುಗೆ' ಪಡೆದ 'ತ್ರಿವಿಕ್ರಮ' ಕೂಡ ಅವರ ಬಳಿಯಿಲ್ಲ! ಇನ್ನೊಂದು ಪ್ರಕಾರದ 'ನಿರ್ಮೋಹ' ಒಟ್ಟಾರೆ ಅವರ ಕಥಾಪ್ರಕಾರಕ್ಕೆ ಸಂಬಂಧಿಸಿದುದು. 1977ರಿಂದ 2004ರವರೆಗೆ ಅವರು ಕಳೆದುಹೋದ ಕಥೆ ಸೇರಿ ಬರೆದಿದ್ದು ಒಟ್ಟು ಎಂಟು ಕಥೆಗಳನ್ನು ಮಾತ್ರ. ಅದರಲ್ಲೂ ಎರಡು ಕಥೆಗಳನ್ನು ಪದ್ಮಪ್ರಸಾದರ ಒತ್ತಾಯದಿಂದ ತರಬೇಕಾಗಿ ಬಂದ ಸಂಕಲನಕ್ಕಾಗಿ (ಸುಂದರಿಯ ಎರಡನೆಯ ಅವತಾರ)ಬರೆದುದು. ಮೊಗಸಾಲೆಯವರಿಗೆ ಕಥೆಗಳಿಗಾಗಿ ಮಾತ್ರ ಈ ರೀತಿ 'ಒತ್ತಾಯ' ಮಾಡಬೇಕಾಗುತ್ತದೆಯೇ ಹೊರತು ಕವಿತೆ, ಕಾದಂಬರಿಗಳಿಗಲ್ಲ. ಒಂದು ವಿಷಯ ಗಮನಿಸಬೇಕು– ಈ ಅವಧಿಯಲ್ಲೇ ಅವರು ಉಳಿಸಿಕೊಂಡ ಕಥೆಗಳ ಎರಡರಷ್ಟು ಅಂದರೆ 14 ಕಾದಂಬರಿಗಳನ್ನು ಬರೆದರು. ನೂರಾರು ಕವಿತೆ ಬರೆದರು. ಮೊಗಸಾಲೆ ಆ ಲೆಕ್ಕದಲ್ಲಿ ಕವಿ ಎನ್ನಿಸಿಕೊಳ್ಳುವಲ್ಲಿ ವ್ಯಾಮೋಹಿ. ಕಾದಂಬರಿಕಾರನೆನ್ನಿಸಿಕೊಳ್ಳುವಷ್ಟು ಮೋಹಿ ಹಾಗೂ ಕಥೆಗಾರನೆನ್ನಿಸಿಕೊಳ್ಳುವಲ್ಲಿ ಮಾತ್ರ ಇನ್ನಿಲ್ಲದ ನಿರ್ಮೋಹಿ. ಈ ನಿರ್ಮೋಹಿ ಗುಣ ಯೋಗಿಯಂತೆ ತನ್ನ ಧ್ಯಾನಸ್ಥ ಸ್ಥಿತಿಯಲ್ಲಿದ್ದಾಗ ಒಳ್ಳೆಯ ಕಥೆಗಳನ್ನು ಹೊಮ್ಮಿಸಿದರೆ ಇನ್ನು ಕೆಲಸಾರಿ 'ಅನಾಸಕ್ತಿಯೋಗ' ದಲ್ಲಿದ್ದಾಗ ಬರೆದ ಕಥೆಗಳೇನೋ ಎಂಬ ಸಂಶಯ ಹುಟ್ಟಿಸುತ್ತದೆ. ಮೊಗಸಾಲೆಯವರ ಏಳು ಕಥೆಗಳನ್ನು ಓದಿದಾಗ ಹೀಗಾಗಿರಲೂ ಸಾಕು ಎಂಬ ಭಾವವೇ ಬಂದರೆ ಅದು ಇದೇ ಕಾರಣದಿಂದಲೇ ಇರಬೇಕು.

* * * * *

ಮೊದಲ ಕಥೆ 'ಐಕಾರ್ನಿಯಾ' (1977) ನೀಡುವ ಮೊಟ್ಟಮೊದಲ ಸಂತೋಷವೆಂದರೆ ನಮ್ಮನ್ನು 70ರ ದಶಕದ ಕಾಲಘಟ್ಟಕ್ಕೆ ಕರೆದೊಯ್ದು ಅಂದಿನ ಇಂಥ ಸಾಲು, ಸಾಲು ಕಥೆಗಳನ್ನು ಜ್ಞಾಪಕಕ್ಕೆ ತರುವುದು. ಸಮಾಜ ಹುಟ್ಟುಹಾಕುವ ತಳಮಳ, ಅದನ್ನು ಸರಿಪಡಿಸುವ ಹಂಬಲಕ್ಕೆ ಸಾಟಿಯಾಗದ ಸಾಮರ್ಥ್ಯ, ಕುತಂತ್ರಗಳನ್ನು 'ಎಳಸು ಪ್ರಾಮಾಣಿಕತೆ'ಯಲ್ಲಿ ಎದುರಿಸುವ ಕ್ರಮ, ಇದರಿಂದಾಗುವ ಸೋಲು, ನಿರಾಶೆ, ಹಾಗೂ ಅವು ಉಂಟುಮಾಡುವ ಹತಾಶೆ ಮತ್ತು ಅಸಹಾಯಕತನ. ಇಂಥ ಕಥೆಗಳಿಗೆ ಒಂದು ಮಾದರಿಯೆಂಬಂತೆ ಬರುವ 'ಐಕಾರ್ನಿಯಾ' ಉದ್ದಕ್ಕೂ ದಲಿತ ಯುವಕ ವಿಶ್ವನ ಸಾಮರ್ಥ್ಯವನ್ನು ಪರೀಕ್ಷಿಸುತ್ತಲೇ ಬರುತ್ತದೆ. ಸಂದರ್ಭಗಳು ಬೆಳೆದಂತೆಲ್ಲ ಅವನ ಅಸಹಾಯಕತೆ ಹೆಚ್ಚಾಗುತ್ತಲೇ ಸಾಗುತ್ತದೆ. ಕಡೆಗೆ ಹತಾಶ ಸ್ಥಿತಿ ತಲುಪುವಲ್ಲಿ ಕಥೆ ಮುಕ್ತಾಯ ಕಾಣುತ್ತದೆ.

ಹೊರಗೆ ರಂಗಪ್ಪ ಶೆಟ್ಟಿ ತನ್ನ ವಿರುದ್ಧವೇ ಆಪ್ತನಿಗೆ ದೂರು ಹೇಳುತ್ತಿದ್ದಾನೆ. ಒಳಗೆ 'ಮಲಗಿಕೊಂಡೇ' ಕೇಳುತ್ತ ತಳಮಳಗೊಳ್ಳುತ್ತಿದ್ದಾನೆ, ನಾಯಕ. ಹೊರಗೆ ಬಂದು ಪ್ರತಿಭಟಿಸುವ ಆಸೆಯೂ ಇದೆ. ಆದರೆ ಏಳಲಾಗದ ನಿಷ್ಕ್ರಿಯತೆ. ಶೆಟ್ಟಿ ಏಕವಚನದಲ್ಲಿ ಕರೆದಾಗ 'ಆತನನ್ನು ಹಾಗೇ ಕರೆಯಬೇಕು' ಎಂಬಂತೆ ಆ ಕ್ಷಣ ಹುಟ್ಟಿದ ರೋಷ ಅವನನ್ನು ಸಮೀಪಿಸಿದಾಗ 'ಏಕವಚನದಲ್ಲಿ ಕರೆದ ಮಾತ್ರಕ್ಕೆ ಸಣ್ಣವನಾಗುತ್ತಾನೆಯೇ?' ಎಂಬ ಪಲಾಯನವಾದಕ್ಕೆ ತಿರುಗುತ್ತದೆ.

ವಿಷ್ಣು ಮಾಸ್ತರರ ಮನೆಯ 'ಕಾಫಿ' ಪ್ರಸಂಗ ತರುವ ಅವಮಾನ, ಮಾಸ್ತರನ ತಂತ್ರಗಾರಿಕೆಯ ಅರಿವಿದ್ದಾಗಲೂ ಅವನಿಂದ ಕೇಳಬೇಕಾಗಿ ಬರುವ ಸಹಾಯ–ಸಹಕಾರ, ಕಡೆಗೆ ತನ್ನ ಜಾತಿಯ

ಮುಖಂಡ ಕರಿಯಬೊಂಬ್ರ ಕೂಡ ತನ್ನೊಂದಿಗಿಲ್ಲದಿರುವುದು...... 'ವಿಶ್ವ ಒಂದು ಕ್ಷಣ ಗರಬಡಿದ ಹಾಗೆ ನಿಂತ. ದಣಿವಾಯಿತು. ಒಂದು ಮಾವಿನ ಮರದ ಕೆಳಗೆ ಕುಳಿತ..... ಇಡೀ ಊರು ತನ್ನನ್ನು ಓಡಿಸಲು ಯತ್ನಿಸುತ್ತಿರುವ ಕನಸು....'. ಇಂಥ ಹತಾಶೆಯ ಸ್ಥಿತಿಯಲ್ಲೂ ವಿಶ್ವ ದಲಿತ ಪರ ಚಿಂತನೆಯನ್ನು ನಿಲ್ಲಿಸಲಾರ. ಅಂತೆಯೇ ಅವನಿಗೆ ಇದ್ದ ಬಿದ್ದ ನೀರನ್ನೆಲ್ಲ ಕುಡಿದು ಜಲ ಮೂಲಗಳನ್ನೆಲ್ಲ ಒಣಗಿಸುವ 'ಐಕಾರ್ನಿಯಾ' ಹಗಲಲ್ಲೇ ದುಃಸ್ವಪ್ನವಾಗಿ ಕಾಣಿಸಿಕೊಳ್ಳುತ್ತದೆ. 'ತನ್ನ ಜಾತಿಯವರು ಒಪ್ಪದಿದ್ದರೆ ಹೋಗಲಿ, ದಲಿತರೆಲ್ಲರನ್ನು ಸಂಘಟಿಸಿದರಾಯಿತು' ಎಂಬ ಅವನ ಛಲ, ಆ ಕ್ಷಣ ಆಲೋಚನೆಯ ಹಂತ ತಲುಪಿದರೂ ಮುಂದಿನ ಕ್ಷಣಗಳಲ್ಲೇ ಆತನ ಅವಿವಾಹಿತ ತಂಗಿ ಕೊರಪ್ಪಲು ನಾಲ್ಕು ಮಕ್ಕಳ ತಂದೆ ವಿಷ್ಣು ಮಾಸ್ತರನ ತೋಳತೆಕ್ಕೆಯಲ್ಲಿ – 'ಕುಂಟಲ' ಗಿಡಗಳ ಮರೆಯಲ್ಲಿ– ಇರುವುದನ್ನು ಕಂಡಾಗ ಶಕ್ತಿಪಾತವಾದಂತೆ ಭೂಮಿಗಿಳಿದು ಬಿಡುತ್ತದೆ. ಊರಿಂದ ಹೋಗುವುದೇ ಅಥವಾ ಇವರೊಂದಿಗೆ ಬದುಕಿಯೂ ಸಾಯುವುದೇ ಎಂಬ ದ್ವಂದ್ವದಲ್ಲಿರುವಾಗಲೇ ತಾಯಿ ಕೊಟ್ಟ 'ತನ್ನ ಪಾಲಿಗೆ' ಬಂದ, ಬೆಳಿಗ್ಗೆ 'ಬಿಸಿಯಾಗಿದ್ದು' ಈಗ 'ತಣ್ಣಗಾಗಿ' ಹೋದ ಕಾಫಿಯನ್ನು ಮರುಮಾತಿಲ್ಲದೆ ಕುಡಿಯುತ್ತಾನೆ. ಅಲ್ಲಿಗೆ ಕಥೆ ಹಾಗೂ ವಿಶ್ವನ ಕಥೆಗಳೆರಡೂ ಮುಗಿಯುತ್ತವೆ.

ವಿವರಣೆಯ ಸೂಕ್ಷ್ಮತನದತ್ತ ಉದ್ದೇಶಪೂರ್ವಕವಾಗಿಯೇನೋ ಎಂಬಂತೆ ಸಾಗದ ಕಥೆ. ಉದ್ದುದ್ದ ಮಾತು, ವಾದಗಳತ್ತ ಸಾಗುವುದು ಇಡೀ ವಾತಾವರಣದ ಪೊಳ್ಳುತನದ ನಿರ್ಮಾಣಕ್ಕೆ ಅನುಕೂಲ ಒದಗಿಸಿದೆ. ತಂತ್ರಗಾರಿಕೆ, ಜಾಣತನಗಳು ಮಾತ್ರವಲ್ಲದೆ ಅಜ್ಞಾನ ಕೂಡ ಪ್ರಾಮಾಣಿಕತೆಯನ್ನು ಹೇಗೆ 'ನಿವಾರಿಸಿ'ಕೊಳ್ಳಬಲ್ಲದು ಎಂಬುದನ್ನು ಹೇಳುತ್ತ ಸಾಗುವ ಕಥೆ ಇಡೀ ವಾತಾವರಣವೇ ಇದರಲ್ಲಿ ಪಾಲ್ಗೊಂಡ ಬಗೆಯನ್ನೂ ಚಿತ್ರಿಸುತ್ತದೆ.

'ಐಕಾರ್ನಿಯಾ' ತನ್ನ ಮಾತುಗಾರಿಕೆಯ ಮೂಲಕವೇ ಯಶಸ್ವಿಯಾದರೆ 'ಮುಖಾಮುಖಿ' ತನ್ನ ಸೂಕ್ಷ್ಮ ನಿರೀಕ್ಷಣೆಯಿಂದ ಗೆದ್ದುಬರುತ್ತದೆ. ಆರಂಭ ಕೂಡ ಅಷ್ಟೇ ಪ್ರಭಾವಿಯಾಗಿದೆ. ಇಸ್ಪೀಟು, ಪೋಲೀಜೋಕುಗಳ ಹಗುರ ಲಹರಿಯಲ್ಲಿದ್ದ ವಾತಾವರಣ ಇದ್ದಕ್ಕಿದ್ದಂತೆ ನಿರೂಪಕನ ಅಕ್ಕಭಾವಂದಿರ 'ಜೀವನ್ಮರಣ'ದ ಪ್ರಶ್ನೆಯಾದ ಅವರ ಮಗಳು ಭಾರತಿಯ ಅಂತರ್ಜಾತಿಯ ವಿವಾಹದ ಮುಖಾಮುಖಿಯಿಂದ ಗಂಭೀರ ಸ್ವರೂಪ ಪಡೆದುಕೊಳ್ಳುತ್ತದೆ. 'ಐಕಾರ್ನಿಯಾ'ದ ನಾಯಕನಂತಲ್ಲದ ಇಲ್ಲಿಯ ನಾಯಕ ಸಿರಿಲ್ ಎಲ್ಲವನ್ನೂ ಎದುರಿಸಿ ಗೆಲ್ಲಬಲ್ಲಂತವನಾಗಿದ್ದಾನೆ. ಸಂವೇದನಾಶೀಲನೇ ಆಗಿದ್ದರೂ ಇಂಥ ಒಳ್ಳೆಯ ಗೆಳೆಯನಿಂದ ಭಾರತಿಯನ್ನು ಬೇರ್ಪಡಿಸಿ ಕರೆತರುವ ಕುಟುಂಬ ಒತ್ತಡಕ್ಕೆ ಸಿಲುಕುವ ನಿರೂಪಕ ದ್ವಂದ್ವ ಅನುಭವಿಸುತ್ತಾನೆ. ಆದರೆ ಸಿರಿಲ್ ಭಾರತಿಯರ ಸಹಜ ಒಳ್ಳೆಯತನದಿಂದ ಆ ದ್ವಂದ್ವದಿಂದ ಹೊರಬರುವುದಲ್ಲದೇ ತನ್ನನ್ನೇ ವಿಮರ್ಶೆಗೆ ಒಳಪಡಿಸಿಕೊಳ್ಳುತ್ತಾನೆ.

ಅಂತರ್ಜಾತಿಯ ವಿವಾಹ ಕನ್ನಡ ಕಥಾಲೋಕಕ್ಕೆ ಹೊಸದೇನೂ ಅಲ್ಲ. ಆದರೆ ಒಂದು ಹಳೆಯದೇ ಆಗಿರಬಹುದಾದ ಕಥಾವಸ್ತು ಅದರ ಹೇಳುವಿಕೆಯಿಂದಾಗಿಯೇ ಲೇಖಕನೊಬ್ಬನ ವಿಶಿಷ್ಟ ಕಥೆಯಾಗಿಬಿಡಬಹುದು. ಇಂದಿನ ಸಂದರ್ಭದಲ್ಲೂ ಕಥೆಯ ಪ್ರಸ್ತುತತೆ ಬೆರಗುಗೊಳಿಸುವಷ್ಟು ಸಮಾಜಕ್ಕೆ ಹತ್ತಿರವಾಗುತ್ತದೆ. ಮೊಗಸಾಲೆ ಈ ಕಥೆ ಕಟ್ಟಿದ ರೀತಿಯೇ

ಅತ್ಯಂತ ವಿಭಿನ್ನ. ಇದೊಂದು ಅಂತರ್ಜಾತಿಯ ವಿವಾಹದ ಸಮಸ್ಯೆಯಾಗಿ ಮಾತ್ರ ಭಾರತಿಯ ತಂದೆತಾಯಿಗಳಿಗೆ ಕಾಣುತ್ತದೆ. ನಿರೂಪಕನಿಗೂ, ಓದುಗರಿಗೂ ಕೆಲಕಾಲ ಹಾಗೇ ಕಂಡುಬಂದರೂ ಸಿರಿಲ್ ಪರಿಚಯದೊಂದಿಗೆ ಅದು ಮುಂದುವರಿಯುವುದಿಲ್ಲ. ಸಿರಿಲ್ ಜೀವನದಲ್ಲಿ ಈ ಮದುವೆ ಕೂಡ ಅವನ ಅನೇಕ ಹೋರಾಟಗಳಂತೆ ಒಂದು ಭಾಗ ಮಾತ್ರ. ಅದು ರಾಮಾಚಾರಿಯ ಪ್ರಸಂಗ ಅಥವಾ ಚರ್ಚುಗಳೊಂದಿಗೆ ಹೋರಾಡಿದಂತೆ. ಹೀಗಾಗಿ ಕಥೆ 'ಸಿರಿಲ್ ವಿಜಯ' ಎಂಬ ಕಥಾ ಪ್ರಸಂಗವಾಗುವುದಿಲ್ಲ. ಹಾಗೆ, ಭಾರತಿ ಕೂಡ ಅಷ್ಟೆ ಶಕ್ತ ಪಾತ್ರವಾಗುವುದರಿಂದ ಇದು 'ಭಾರತಿ ಪರಿಣಯ' ಕೂಡ ಆಗುವುದಿಲ್ಲ. ಪ್ರತಿಷ್ಠೆಯದೋ, ಗೋಳಿನದೋ, ದುರಂತದ್ದೋ ಆಗಿಬಿಡಬಹುದಾಗಿದ್ದ ಕಥೆಯನ್ನು ಮೊಗಸಾಲೆ ತುಂಬ ಸಹಜವಾಗಿ ನಡೆಸಿದ್ದಾರೆ. ಅಕ್ಕ-ಭಾವರ 'ಸೆಂಟಿಮೆಂಟ್', ಓದುಗರೂ ಸೇರಿದಂತೆ ಯಾರನ್ನೂ ತಟ್ಟುವುದಿಲ್ಲ. ಆ ಮಟ್ಟಿಗೆ ಸಿರಿಲ್-ಭಾರತಿಯರು ಪ್ರಸ್ತುತವಾಗುತ್ತಾರೆ ಮತ್ತು ಕಥೆ ಹೆಚ್ಚು ವ್ಯಾಪಕವಾಗುತ್ತದೆ.

ಕಥೆ ಓದುತ್ತಿದ್ದಂತೆ ನನಗೊಂದು ಘಟನೆ ನೆನಪಾಯಿತು. ನನ್ನ ಹಿರಿಯ ಗೆಳೆಯರೊಬ್ಬರು ಅಂತರ್ಜಾತಿ ವಿವಾಹವಾದ ತಮ್ಮ ಸಂಬಂಧಿ ಹುಡುಗನನ್ನು 'ಅವಳಿಂದ' ಬಿಡಿಸಿಕೊಂಡು ಬರಲು ಹೋದವರು ಆ ಹುಡುಗಿಯ ಒಳ್ಳೆಯತನಕ್ಕೆ ಪೂರ್ತಿಸೋತು ಸಂತೋಷದಿಂದಲೇ ಬರಿಗೈಯಲ್ಲಿ ಬಂದರು. 'ನಮ್ಮ ಜಾತಿಯಲ್ಲೂ ಅಷ್ಟು ಒಳ್ಳೆಯ ಹೆಣ್ಣುಗಳು ದೊರಕಲಾರವು' ಎಂದು ಅವರು ಹೇಳುತ್ತಿದ್ದರು. ಮೊಗಸಾಲೆ ಇಂಥ ಬದುಕಿಗೆ ಹತ್ತಿರವಾದ ಕಥೆ ಬರೆದುದಕ್ಕೆ ಖಂಡಿತ ಅಭಿನಂದನಾರ್ಹರು.

ಯಾವ ಮಹತ್ವದ ಲೇಖಕನೂ ಜಾತಿ, ಲೈಂಗಿಕತೆ ಮತ್ತು ರಾಜಕೀಯಗಳು ಉಂಟುಮಾಡುವ ಸಂಕೀರ್ಣಗಳಿಂದ ದೂರ ಉಳಿಯಲಾರ. ಅಷ್ಟರ ಮಟ್ಟಿಗೆ ಇಂದು ಅವು ಪ್ರಭಾವ ಬೀರಿವೆ. ಮೊಗಸಾಲೆ ಕೂಡ ಅದಕ್ಕೆ ಹೊರತಲ್ಲ. ಆದರೆ ಕುತೂಹಲದ ಸಂಗತಿ ಎಂದರೆ ಮೊಗಸಾಲೆ ಈ ವಿಷಯದಲ್ಲಿ ಹೊಂದಿದ ವಿಶೇಷ ಆಸಕ್ತಿ. ಅವರ ಕಾದಂಬರಿಗಳು ಕೂಡ ಯಾವುದೋ ಒಂದು ಕ್ಷುಲ್ಲಕ ಕಿಡಿಯನ್ನು ರಾಜಕೀಯದ, ಜಾತಿರಾಜಕೀಯದ ಕಾಳ್ಗಿಚ್ಚಾಗಿಸಿ ಬಹುದೂರ ಸಾಗಿಸುವಲ್ಲಿ ಉತ್ಸಾಹ ತುಂಬಿಕೊಳ್ಳುತ್ತವೆ. ಸಂಕಲನದ ಬಹಳಷ್ಟು ಕಥೆಗಳಲ್ಲಿ ಇದು ಕಂಡುಬರುತ್ತದೆ. 'ಐಕಾರ್ನಿಯಾ'ದಲ್ಲಿ ಕಥೆಯ ಸಹಜ ಭಾಗವಾಗಿ, 'ಸುಂದರಿ...'ಯಲ್ಲಿ ಸಹಜ ಅಗತ್ಯವಾಗಿ, 'ಮುಖಾಮುಖಿ'ಯಲ್ಲಿ ಹೆಚ್ಚು ಉತ್ಸುಕತನದ ಮಧ್ಯೆಯೂ ಸಹ್ಯವಾಗಿ ಇದು ಕಂಡುಬಂದರೆ, 'ಕಿಡ್ನಿ' ಮತ್ತು 'ಹದ್ದು' ಕಥೆಗಳು ಈ ಅಂಶಗಳನ್ನೇ ಕಥೆಗಾಗಿ ಅವಲಂಬಿಸಿಕೊಂಡಿವೆ. ಈ ಕಥೆಗಳು ಯಾವುದೋ ಒಂದು ಮಹತ್ವದ್ದನ್ನು ಶೋಧಿಸುವಂತೆ ಆರಂಭದಲ್ಲಿ ಹೊರಟರೂ ತಲುಪುವುದು, ಬೆಳೆಯುವುದು ಮಾತ್ರ ಅವೇ 'ವಿಶೇಷ ಆಸಕ್ತಿ'ಗಳ ವಿಜೃಂಭಣೆಯೊಂದಿಗೆ.

ದಲಿತನೊಬ್ಬನಿಗೆ ಆಮಿಷವೊಡ್ಡಿ ಕಿಡ್ನಿ ಪಡೆದ ಅಂಶವೇ ರಾಜಕೀಯಗೊಂಡು ಅದು ಎಲ್ಲರನ್ನೂ ಒಳಗೊಳ್ಳುವಂತೆ ಬೆಳೆಯುತ್ತದೆ. ದಲಿತ ಮುಖಂಡ ತಗಡಪ್ಪ, ಅವನಿಗೆ ಸಹಾಯ ಮಾಡಲು ಬರುವ 'ದಲಿತನಲ್ಲದ', ಆದರೆ ದಲಿತೋದ್ಧಾರಕ ಸಂಘದ ರಾಜ್ಯ ಕಾರ್ಯದರ್ಶಿ ಸಿದ್ದಪ್ಪ, ಹೇಗಾದರೂ ಲಾಭ ಎನ್ನುವ ಹೋಟೆಲ್ ಮಾಲಿಕ ಕೃಷ್ಣಯ್ಯ, ದುಡ್ಡು ಕೊಟ್ಟವರತ್ತ

ಸಾಗುವ ಅನಕ್ಷರಸ್ಥ ದಲಿತರು – ಇವರೆಲ್ಲ 'ರಾಜಕೀಯ ಹೋರಾಟ'ದಲ್ಲಿ ಭಾಗಿಗಳೇ. ಕಡೆಗೆ ತೆಪ್ಪಗಿದ್ದ ಜೇನುಹುಟ್ಟಿಗೆ ಯಾರೋ ಕಲ್ಲೆಸೆದು ಎಬ್ಬಿಸುವ ಗೊಂದಲದಿಂದ ಹೋರಾಟ ಒಂದು ಪ್ರಹಸನದ ಮಟ್ಟಕ್ಕೆ ಇಳಿದು ಇಂದಿನ ರಾಜಕೀಯಕ್ಕೆ ಒಂದು ಭಾಷ್ಯ ಬರೆಯುತ್ತದೆ. 'ಅಂಬೇಡ್ಕರ್‌ಗೆ ಜಯವಾಗಲಿ' ಎನ್ನುವ ಗುಂಪಿನ ಸಭೆಯನ್ನು 'ಅಂಬೇಡ್ಕರ್‌ಗೆ ಜಯವಾಗಲಿ' ಎನ್ನುತ್ತ ಬರುವ ಇನ್ನೊಂದು ಗುಂಪು ಹೊಡೆದೋಡಿಸುವುದು ವ್ಯಂಗ್ಯವಾಗಿ ಚಿತ್ರಿತವಾಗಿದೆ. ಆದರೆ ಎಲ್ಲಿಯೂ ವಿಷಾದವನ್ನು ಹುಟ್ಟಿಸದ ಕಥೆ ಪ್ರಹಸನದೀಚೆಯೇ ಉಳಿದುಬಿಡುತ್ತದೆ.

'ಕಿಡ್ನಿ' ಕಥೆ ಗೊಂದಲದಲ್ಲಿಯೇ ಮುಗಿದಂತೆ ಕಂಡಾಗಲೂ ಒಂದು ತಾರ್ಕಿಕ, ಸಂಬದ್ಧ ಅಂತ್ಯವನ್ನಾದರೂ ಅದರಲ್ಲಿ ಕಾಣಬಹುದು. ಆದರೆ 'ಹದ್ದು' ಕಥೆಗೆ ಅಂಥ ಭಾಗ್ಯವಿಲ್ಲ. ಇಂದಿನ ಸ್ಥಳೀಯ ಸಂಸ್ಥೆಗಳಲ್ಲಿ ತಾಂಡವವಾಡುತ್ತಿರುವ ಮೀಸಲಾತಿ ರಾಜಕೀಯವನ್ನು ಗೇಲಿ ಮಾಡುವಷ್ಟಕ್ಕೇ ಅದು ತೃಪ್ತಿಪಟ್ಟುಕೊಳ್ಳುತ್ತದೆ. ಬ್ರಾಹ್ಮಣ ಕುಪ್ಪಣಾಚಾರ್ಯರ ಮಗಳು ರಶ್ಮಿ ದಲಿತ ಡೀಕಯ್ಯನನ್ನು ಮದುವೆಯಾಗಿ ನಾಲ್ಕು ವರ್ಷಗಳ ನಂತರ ಪಂಚಾಯತ್ ಚುನಾವಣೆಯಲ್ಲಿ ಮೀಸಲಾತಿಯಲ್ಲಿ ಹಾಗೂ ಮೀಸಲಾತಿ ಇಲ್ಲದೆ ಎರಡೂ ಗುಂಪಿನಿಂದ ಆರಿಸಿ ಬಂದಿದ್ದಾಳೆ. ಊರಿನ ಜಾತಿ ರಾಜಕೀಯದ ಒತ್ತಾಯಕ್ಕೆ ಮಣಿದು ಚುನಾವಣೆ ಸೆಣಸಬೇಕಾಗಿ ಬಂದ ರಶ್ಮಿಯ ತಾಯಿ ಕೂಡ ಗೆದ್ದು ಬಂದಿದ್ದಾಳೆ. ಈ ಹಿನ್ನೆಲೆಯಲ್ಲಿ ರಾಜಕೀಯ ಲಾಭಕ್ಕಾಗಿ ಅವರವರನ್ನೇ ಎತ್ತಿಕಟ್ಟಿ ಅಧ್ಯಕ್ಷ ಪದವಿ ಸೆಳೆದುಕೊಳ್ಳುವಲ್ಲಿ ನಿರತವಾದ ಗುಂಪುಗಳು ನಡೆಸುವ ನಾಟಕೀಯ ಚಟುವಟಿಕೆಗಳು– ಈ ಮಧ್ಯೆ ತಾಯಿ–ಮಗಳು ರಾಜಕೀಯಕ್ಕಾಗಿ ಒಂದಾಗಬೇಕಾದ ಪ್ರಸಂಗ –ಇಷ್ಟಾದರೂ ಅನುಮೋದಿಸುವವರಿಲ್ಲದೆ ಯಾರಿಗೂ ದೊರಕದ ಅಧ್ಯಕ್ಷ ಪದವಿ– ಹೀಗೆ ಗೊಂದಲದಲ್ಲಿಯೇ ಕಥೆ ಮುಕ್ತಾಯಗೊಳ್ಳುತ್ತದೆ. ಇಂದಿನ ರಾಜಕೀಯದ ಹಲವು ಹುಚ್ಚು ಸಾಧ್ಯತೆಗಳನ್ನು ಮೊಗಸಾಲೆ ವಿಡಂಬನೆ ಮಾಡುತ್ತಾರೆ. ನಿಲುವಿಲ್ಲದ ರಾಜಕಾರಣಿಗಳನ್ನು, ಘಟನೆಗಳನ್ನು ರಾಜಕೀಯ ಲಾಭವಾಗಿಸಿಕೊಳ್ಳುವಲ್ಲಿ ಹಿಂದೆ ಬೀಳದ ಹಳ್ಳಿಗಳನ್ನು ಮೊಗಸಾಲೆ ಕಥೆಯಾಗಿಸಿದ್ದಾರೆ.

ಮೊಗಸಾಲೆ ರಾಜಕೀಯ ನಾಟಕ ಮಾತ್ರ ಗಮನಿಸುತ್ತ ಆ ಭರದಲ್ಲಿ ಈ ಕಾಲದ ಒಟ್ಟು ಸಂದರ್ಭಗಳನ್ನು ಮರೆತಂತೆ ಕಾಣುತ್ತದೆ. ಪಾತ್ರಗಳು ರಾಜಕೀಯಕ್ಕಾಗಿ ಮಾತ್ರ 'ಬಳಕೆ'ಯಾಗುತ್ತವೆ. ರಶ್ಮಿಯಂಥ ಕಾಲೇಜು ಕಲಿತ, ದಲಿತನನ್ನು ಮದುವೆಯಾಗುವ ಸಹಜನಾಯಕತ್ವ ಹೊಂದಿದ ಹೆಣ್ಣುಮಗಳಿಗೂ ಸ್ವಂತ ವ್ಯಕ್ತಿತ್ವವಿಲ್ಲ. ಅವಳ ತಂದೆತಾಯಿಗಳಂತೂ ತರಗೆಲೆಗಳೇ. ರಾಜಕೀಯದಾಟದಲ್ಲಿ ಎಲ್ಲರೂ ಬೊಂಬೆಗಳೇ ಎಂಬ ಸೂಚನೆಯೇನೋ ಕಂಡುಬರುತ್ತದೆ. ಆದರೆ ಯಾವ ವ್ಯಕ್ತಿತ್ವವೂ ಬಿಡಿಬಿಡಿಯಾಗಿಯಾದರೂ ಪ್ರತಿರೋಧ ಒಡ್ಡದೇ, ನಿಲುವು ಪ್ರಕಟಿಸದೆ ಇರುವಷ್ಟು ಕಾಲ ಕೆಟ್ಟಿದೆಯೇ?

ಮೊಗಸಾಲೆ ಐದು ಕಥೆ ಬರೆದು ಮುಗಿಸಿಯಾದ ಮೇಲೆ ಕಾಂತಾವರ ಜಯರಾಮ ಕಾರಂತರು 'ಇನ್ನೊಂದೆರಡು ಕಥೆ ಬರೆಯಿರಿ, ಸಂಕಲನ ತನ್ನಿ' ಎಂದು ಒತ್ತಾಯಿಸತೊಡಗಿದಾಗ, ಬರೆದ ಕಥೆಗಳಲ್ಲಿ ಮೇಲೆ ಚರ್ಚಿಸಿದ ಹದ್ದು ಕೂಡ ಒಂದು. ಇನ್ನೊಂದು – 'ಹಸಿದ ವೇಳೆಗೆ ಸಿಕ್ಕಿದೊಡವೆಯು...'.

ಒಂದು ವೇಳೆ 'ಹಸಿದ ವೇಳೆಗೆ..' ಕಥೆ ಕಸ್ತೂರಿಯ ಪುಸ್ತಕ ವಿಭಾಗದಲ್ಲಿ ಬರುತ್ತಿದ್ದ ಕಾದಂಬರಿಯ ಸಂಕ್ಷಿಪ್ತ ರೂಪದಂತೆ ಭಾಸವಾದರೆ ಅದಕ್ಕೆ ಹಲವು ಕಾರಣಗಳಿವೆ. ಮುಖ್ಯವಾಗಿ ಅಗತ್ಯಕ್ಕಿಂತ ಹೆಚ್ಚು ನಿತಾಂತವಾಗಿ ಕಥೆ ಹೇಳಿಕೊಂಡು ಹೋದ ರೀತಿ. ಮೊದಲ 3–4 ಪುಟಗಳಂತೂ ಮೊಗಸಾಲೆ ಬಿಡುವು ಮಾಡಿಕೊಂಡು ಕಾದಂಬರಿ ಸೃಷ್ಟಿಗೆ ತೊಡಗಿದ್ದಾರೇನೋ ಎಂಬ ಸಂಶಯ ಹುಟ್ಟಿಸುತ್ತವೆ. ಕಥಾವಸ್ತುವೇನೂ ದೊಡ್ಡದಲ್ಲ. ತನ್ನ ವೃದ್ಧ ತಂದೆಯ ಕಡೆಯಾಸೆಯಂತೆ ಮನೆಗೆ ಕರೆಂಟು ಹರಿಸುವ ಬಯಕೆ ಇಟ್ಟುಕೊಂಡ ಮನುಷ್ಯನಿಗೆ ಅದು ಸಾಧ್ಯವಾಗದೆ ಹೋಗುತ್ತದೆ. ಇದು ಒಂದು ಮಗ್ಗಲು. ನಿವೃತ್ತ ತಹಶೀಲ್ದಾರ್ ಶಾಂತಾರಾಮಯ್ಯ ತಮ್ಮ ನ್ಯಾಯನಿಷ್ಠೆಯನ್ನು ಮುನ್ನಿನಂತೆ ಉಳಿಸಿಕೊಳ್ಳುವುದರ ಮೂಲಕ ಕೆಲವರಲ್ಲಿ ತಡವಾಗಿಯಾದರೂ ನೈತಿಕತೆಯ ಹುಟ್ಟಿಗೆ ಕಾರಣರಾಗುತ್ತಾರೆ ಎಂಬುದು ಇನ್ನೊಂದು ಮಗ್ಗಲು. ಇವೆರಡನ್ನೂ ಹಲವಾರು ಪಾತ್ರ, ತಂತ್ರ, ಪ್ರತಿತಂತ್ರಗಳ ಮೂಲಕ ಮೊಗಸಾಲೆ ವಿರಾಮವಾಗಿ ನಿರೂಪಿಸುತ್ತ ಹೋಗುತ್ತಾರೆ. ಹೊಟೇಲಿನ ಹರಟೆ, ಅಲ್ಲಿ ಬರುವ 'ಉಸನೆ ಸಮಾರಾಧನೆ'ಯಂಥ ಮಾತು, ವೆಂಕಪ್ಪಯ್ಯನ ಹೆಂಡತಿ ಗಿರಿಜೆಯೊಂದಿಗಿನ ತಬುರನ ಸಂಬಂಧ, ಕಥೆಗೆ ಯಾವ ರೀತಿಯ ಸಂಬಂಧವನ್ನೂ ಒದಗಿಸುವುದಿಲ್ಲ. ರುದ್ರಪ್ಪ, ಜಾನ್ ಡಿಸಿಲ್ವ ಪಾತ್ರಗಳ ಸೃಷ್ಟಿ, ಸಿನಿಮೀಯ ಎನ್ನುವಂಥ ತಂತ್ರ ಮುಂತಾದವುಗಳನ್ನು ಗಮನಿಸಿದಾಗ ಮೊಗಸಾಲೆ ಯಾಕೆ ಹೀಗೆ ಮಾಡುತ್ತಾರೆ ಎಂಬ ಪ್ರಶ್ನೆ ಮೂಡುತ್ತದೆ.

ಕರೆಂಟಿಗಾಗಿ ಲಕ್ಷಾಂತರ ರೂ. ಖರ್ಚುಮಾಡಲು ಸಿದ್ಧನಾಗುವ ವಿಶ್ವನಾಥ ತಬುರ ಕೇಳುವ 2–3 ಸಾವಿರ ಹೆಚ್ಚಿನ ಹಣ ಉಳಿಸಲು ಎಲ್ಲೆಲ್ಲೋ ಓಡಾಡುವುದು ನಂಬಲಾಗದ ಬೆಳವಣಿಗೆಯಾಗಿ ಬಿಡುತ್ತಗೆ. ನೈತಿಕತೆ, ಮಾನವೀಯತೆಗಳನ್ನು ಸಾಧಿಸಬೇಕಾದ ಕಥೆ ತಂತ್ರಗಾರಿಕೆಯನ್ನು ಮುಂದುಮಾಡಿಕೊಳ್ಳುತ್ತದೆ. ಹೀಗಾಗಿ ಕರೆಂಟು ಸಿಕ್ಕದೇ ಮರಳಿ ಊರಿಗೆ ಹೋಗಬೇಕಾದ ವಿಶ್ವನಾಥನ ಬಗೆಗೆ ನಿರೀಕ್ಷಿಸಿದಷ್ಟು ವಿಷಾದ ಹೊಮ್ಮುವುದಿಲ್ಲ. ಮೊಗಸಾಲೆಯವರ ಮತ್ತೊಂದು ಸಮಸ್ಯೆಯೆಂದರೆ ಕಥೆಯ ಆಶಯಕ್ಕೂ ಮೀರಿ ಯಾವು ಯಾವುದೋ ಪಾತ್ರಗಳ ಹಿನ್ನೆಲೆ–ಸಂಬಂಧಗಳನ್ನು ವಿವರಿಸುತ್ತ ಹೋಗುವುದು. ಇದು ಉಳಿದ ಕಥೆಗಳಲ್ಲಿ ಅಷ್ಟಿಷ್ಟು ಕಂಡಾಗಲೂ ಈ ಕಥೆಯಲ್ಲಿ ತುಸು ಹೆಚ್ಚಾಗಿಯೇ ಮೂಡಿದೆ.

ಆದರೆ ಮೊಗಸಾಲೆ 'ಅಳಿಯುವ ಮೊದಲೆ....' ಥರದ ಸುಂದರ ಕಥೆಗಳನ್ನೂ ಬರೆಯಬಲ್ಲಂಥವರು. ದೇವರ ಸೇವೆಯ ಮನೆತನದಲ್ಲಿ ಹುಟ್ಟಿದರೂ ಚಾರ್ವಾಕನಂಥ ವ್ಯಕ್ತಿತ್ವ ಬೆಳೆಸಿಕೊಳ್ಳುವ ಕುಪ್ಪಣಾಚಾರ್ಯ ಉದ್ದಕ್ಕೂ ಓರ್ವ ಕುತೂಹಲಕರ ವ್ಯಕ್ತಿ. ಆತನ ಗುಣದೋಷಗಳನ್ನು ಹೇಳುತ್ತಲೇ ಇದ್ದಕ್ಕಿದ್ದಂತೆ ಕಥೆ ಕುಪ್ಪಣಾಚಾರ್ಯರ ಸ್ವಭಾವದ ಬಗೆಗೆ ನಿಗೂಢ ಒಂದನ್ನು ಸೃಷ್ಟಿಸಿ ಓದುಗನಲ್ಲಿ ವಿಗ್ರಹ ಭಂಗದ ಭಾವನೆ ಬರಿಸುತ್ತಾರೆ. ಅನುಕೂಲವಂತನಲ್ಲದ ಆದರೂ ಹಣದ ಮೋಹ ಹೊಂದಿರದ ಕುಪ್ಪಣಾಚಾರ್ಯ ತಾನು ಮರಳಿಸಬೇಕಾದ ಸಾಲಕ್ಕಾಗಿ ಕಠೋರನಾಗಿ ದುಷ್ಟನಂತೆ ವರ್ತಿಸುವುದೇ ಕಥೆಯ ಸ್ವಾರಸ್ಯ. ಕುತೂಹಲ ಹುಟ್ಟುವುದೂ ಇಲ್ಲಿಂದಲೇ. ಸಾವಿನ ದವಡೆಯಲ್ಲೂ, ವಿಪರೀತ ಪರಿಸ್ಥಿತಿಯಲ್ಲಿಯೂ ತನ್ನದೇ ಆದ ನಂಬಿಕೆಗೆ ಅಂಟಿಕೊಳ್ಳುವ ಈ ವ್ಯಕ್ತಿತ್ವ ಸಾಲ ತೀರಿಸುವಾಗ ಅದರ ಉದ್ದೇಶವನ್ನು

ಅರ್ಥೈಸುವ ಪರಿ ಮಾತ್ರ ಮಾನವೀಯ ಅಂಶಗಳಿಂದ ತುಂಬಿಕೊಂಡಿರುವಂಥದು. ಹೀಗೆ ವಿಚಿತ್ರ ರೀತಿಯಲ್ಲಿ ಬೆಳೆದರೂ ಕುಪ್ಪಣಾಚಾರ್ಯ ನಮ್ಮ ಅಂತಃಕರಣಕ್ಕೆ ಪಾತ್ರನಾಗುತ್ತಾನೆ.

ಮೊಗಸಾಲೆ ಕುಪ್ಪಣಾಚಾರ್ಯರನ್ನು ಸೃಷ್ಟಿಸುವಾಗ ತೆಗೆದುಕೊಳ್ಳುವ ರಿಸ್ಕ್ ಮೆಚ್ಚುವಂಥದ್ದು. ವ್ಯಗ್ರ ನಡತೆಯ ಹಿನ್ನೆಲೆಯಿಂದಾಗಿ ಆ ಪಾತ್ರವನ್ನು ಓದುಗರ ಮುಂದೆ ನಿಲ್ಲಿಸುವಾಗ ತೋರುವ ತಾಳ್ಮೆ, ತಂತ್ರಗಳೂ ಮೆಚ್ಚುವಂಥವು. ಮೇಲ್ನೋಟಕ್ಕೆ ಈ ಕಥೆ ಕುಪ್ಪಣಾಚಾರ್ಯನ ವಿಚಿತ್ರ ಸ್ವಭಾವದ ಹೊರತಾಗಿಯೂ ಆತ ಹೊಂದಿದ ಸಾಮಾಜಿಕ ಕಳಕಳಿ, ಜವಾಬ್ದಾರಿಯನ್ನು ಪ್ರಚುರ ಪಡಿಸುವ ಉದ್ದೇಶ ಹೊಂದಿದೆ ಎನ್ನಿಸುತ್ತದೆ. ಆದರೆ ಕಥೆಗೆ ನಿರೂಪಕನ ತಾಳ್ಮೆ, ಅಂತಃಕರಣದ ಇನ್ನೊಂದು ಬದಿಯನ್ನೂ – ವಿಜೃಂಭಣೆ ಇಲ್ಲದೆ ಹೇಳುವ ಅಂತರ್ಗತ ಉದ್ದೇಶವೂ ಇದೆ. ಯಾವ ಭಾವಾವೇಶವೂ ಇಲ್ಲದೆ ತುಂಬುಧ್ವನಿಯಲ್ಲಿ ಕಥೆ ಹೇಳುವ ಮೊಗಸಾಲೆಯವರ ಈ ಪರಿ ಅನನ್ಯ.

ಈ ಸಂಕಲನದ ತಲೆಬರಹ ಹೊತ್ತ 'ಸುಂದರಿಯ ಎರಡನೆಯ ಅವತಾರ' ಕೂಡ ಮತ್ತೊಂದು ಶಕ್ತಿಯುತ ಕಥೆ. ನೈತಿಕ ಅಧಃಪತನ ಹೊಂದಿದ ವ್ಯಕ್ತಿಗೆ, ಸೂಳೆ ಎನ್ನಿಸಿಕೊಂಡಾಗಲೂ ಮಾನವೀಯತೆ ಉಳಿಸಿಕೊಂಡ ಹೆಣ್ಣು ತನ್ನ ಲಂಗೋಟಿಯಿಂದ ಬಾರಿಸಿ ಅವನಲ್ಲಿ ನೈತಿಕ ಪ್ರಜ್ಞೆ ಉಂಟಾಗುವಂತೆ ಮಾಡುವುದೇ ಇದರ ಕಥಾವಸ್ತು. ಕಥೆ ಎದೆ ಬಡಿತದ ಸದ್ದಿನೊಂದಿಗೆ ಬೆಳೆಯುತ್ತದೆ. ಕಥೆಗೆ ವೇಗವಿದೆ. ಸಹಜ ಉದ್ವೇಗವಿದೆ. ಈ ಉದ್ವೇಗ ಬಹುಬೇಗ ಓದುಗನ ಒಳಗನ್ನು ಪ್ರವೇಶಿಸಿ ಬೆಳೆಯುತ್ತ ಸಾಗಿ – ಸುಂದರಿ, ರೌಡಿ ಧರ್ನಪ್ಪನನ್ನು ಲಂಗೋಟಿಯಿಂದ ಹೊಡೆದೋಡಿಸುವಾಗ ಭಾರ ಇಳಿಸಿದಂತೆ ಇಳಿದು ಶಾಂತಸ್ಥಿತಿಗೆ ತಲುಪಿಸುತ್ತದೆ.

ರೌಡಿಯ ಪ್ರವೇಶಕ್ಕೆ ಕಾರಣವಾಗುವ ಹಿನ್ನೆಲೆ, ಊರವರ ನೈತಿಕ ಬೆಂಬಲ, ಕಾಳಜಿ, ಜೊತೆ–ಜೊತೆಗೆ ಅಸಹಾಯಕತೆಗಳನ್ನೆಲ್ಲ ಮೊಗಸಾಲೆ ಸತ್ಯಘಟನೆ ಎಂಬಂತೆ ಚಿತ್ರಿಸಿದ್ದಾರೆ. ಕುತೂಹಲ–ಕಲೆಗಾರಿಕೆ ಜೊತೆಜೊತೆಗೇ ಸಾಗುತ್ತವೆ. ಕಥೆ ಹೇಳುವ ಪರಿಗೆ ವಸ್ತುವೂ ಸಹಕಾರಿಯಾಗುವುದರಿಂದ ಕಥೆ ವಿಭಿನ್ನ ಖುಷಿ ಕೊಡುತ್ತದೆ.

ಕಥಾರಚನೆಗೆ ಸಂಬಂಧಿಸಿದಂತೆ ಮೊಗಸಾಲೆಯವರಲ್ಲಿ 'ಕನ್ಸಿಸ್ಟೆನ್ಸಿ'ಯ ಕೊರತೆ ಕಂಡರೂ ಕಾಣಬಹುದು. ಹಾಗಂತ ಅವರ ಪ್ರತಿಭೆಯ ಕುರಿತಂತೆ ಸಂದೇಹ ಪಡಲಾಗುವುದಿಲ್ಲ. ಈ 'ಕನಿಸ್ಟೆನ್ಸಿ' ಕೂಡ ಹಾಗೆ ನೋಡಿದರೆ ನಿರೀಕ್ಷಿಸಬೇಕಾದ ಸಂಗತಿಯೂ ಅಲ್ಲ. ಏಕೆಂದರೆ ಸಾಹಿತ್ಯ ರಚನೆ ಮೂಲತಃ ಗೆಲ್ಲುವ ಉದ್ದೇಶ ಇಟ್ಟುಕೊಂಡು ಹೊರಡುವ ಕ್ರೀಡೆಯಂತಲ್ಲ. ಸೋಲು–ಗೆಲುವುಗಳ ಜೊತೆಜೊತೆಗೇ ಅವೆರಡನ್ನೂ ಮೀರಿದ ಏನನ್ನೋ ಹುಡುಕುವಂಥದು.

o

# ಮೊಗಸಾಲೆ ಒಲವು ನಿಲುವು

ಡಾ॥ ಜಿ.ಎಂ.ಹೆಗಡೆ

ಡಾ.ನಾ.ಮೊಗಸಾಲೆ ಕನ್ನಡದ ಹೆಸರಾಂತ ಲೇಖಕರು. ಕವಿತೆ, ಕಾದಂಬರಿ, ಸಣ್ಣಕಥೆ, ಅಂಕಣ ಸಾಹಿತ್ಯ, ವೈದ್ಯಶಾಸ್ತ್ರ ಹೀಗೆ ಬಹುಮುಖ ನೆಲೆಗಳಲ್ಲಿ ಮೊಗಸಾಲೆ ಸಾಹಿತ್ಯ ಬೆಳೆದಿದೆ. ಸೃಜನಶೀಲತೆ ಅವರ ಪ್ರತಿಭೆಯ ವಿಶಿಷ್ಟತೆಯಾಗಿದೆ. ವೃತ್ತಿಯಲ್ಲಿ ವೈದ್ಯರಾದರೂ ಪ್ರವೃತ್ತಿಯಲ್ಲಿ ಸಾಹಿತಿಯಾಗಿ ಧ್ಯಾನಸ್ಥ ಮನಃಸ್ಥಿತಿಯಲ್ಲಿ ತಮ್ಮ ಅಂತರಂಗವನ್ನು ಅಕ್ಷರ ಸಂಸ್ಕೃತಿಯಲ್ಲಿ ತೆರೆದುಕೊಂಡವರು ಮೊಗಸಾಲೆಯವರು. ಉತ್ಸಾಹದ ಬುಗ್ಗೆಯಾದ ಡಾ.ಮೊಗಸಾಲೆ ವ್ಯಕ್ತಿತ್ವವೇ ಒಂದು ಬೆರಗು ಹುಟ್ಟಿಸುತ್ತದೆ. ಗ್ರಾಮೀಣ ಪರಿಸರದಲ್ಲಿ ಅರಳಿದ ಪ್ರತಿಭೆಗಳು ನಗರಾಭಿಮುಖವಾಗಿ ಹೋದರೆ ಮೊಗಸಾಲೆ ಉಡುಪಿಯಲ್ಲಿ ಕಲಿತು ಕಾಂತಾವರಕ್ಕೆ ತೆರಳಿ ಅಲ್ಲಿ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿಕೊಂಡವರು. ಕುವೆಂಪು ಮಲೆನಾಡಿನಿಂದ ಮೈಸೂರಿಗೆ ನಡೆದರು. ಅವರ ಮಗ ತೇಜಸ್ವಿ ಮೈಸೂರಿನಿಂದ ಮೂಡಿಗೆರೆಗೆ ಬಂದು ನೆಲೆಸಿದರು. ಮೊಗಸಾಲೆ ಗ್ರಾಮಾಭಿಮುಖಿಯಾಗಿ ಹೊರಟದ್ದು ಅವರ ಸಾಮಾಜಿಕ, ಸಾಂಸ್ಕೃತಿಕ ಚೇತನದ ವಿಕಾಸಕ್ಕೆ ವಿಶಿಷ್ಟ ಮೆರಗು ತಂದಿದೆ. ಕಾಂತಾವರದ ಕನ್ನಡ ಸಂಘ ಕಾಲು ಶತಮಾನದಲ್ಲಿ ಮಾಡಿದ ಕನ್ನಡದ ಕೆಲಸ ಕನ್ನಡ ಲೋಕವೇ ಬೆರಗುಗೊಳ್ಳುವಂತೆ ಮಾಡಿದೆ. ಮೊಗಸಾಲೆ ಅದರ ಕ್ರಿಯಾಶೀಲ ಚೇತನವಾಗಿದ್ದಾರೆ. ಮೊಗಸಾಲೆಯವರ ಸೃಜನ ಸಾಹಿತ್ಯ ಕರಾವಳಿಯ ಜನಜೀವನವನ್ನು ವಾಸ್ತವ ಪ್ರಜ್ಞೆಯಿಂದ ತೆರೆದು ತೋರಿಸಿರುವಂತೆಯೇ ಅವರ ವಿಚಾರಧಾರೆ ಅವರ ಅಂಕಣ ಬರಹಗಳಲ್ಲಿ ಅಂತಸ್ಥವಾಗಿದೆ. ಮೊಗಸಾಲೆ ಅವರ ಅರವತ್ತರ ಸಂಭ್ರಮದಲ್ಲಿ ಕಾಂತಾವರ ಕನ್ನಡ ಸಂಘವೇ ಮುಂದಾಗಿ ವಿ.ಗ.ನಾಯಕ ಸಂಪಾದಕತ್ವದಲ್ಲಿ ಅವರ 'ಮೊಗಸಾಲೆ ಒಲವು ನಿಲುವು' ಕೃತಿ ಪ್ರಕಟಿಸಿದೆ. ಇದು ನಿಜಕ್ಕೂ ಕನ್ನಡಸಂಘದ ಅನುಪಮ ಕಾರ್ಯವಾಗಿದೆ.

'ಮೊಗಸಾಲೆ' ಒಲವು ನಿಲುವು(ಡೆಮಿ 207 ಪುಟ) ಮೂವತ್ತು ಲೇಖನಗಳ ಸಂಚಯವಾಗಿದೆ. ಮೊದಲ ಭಾಗದಲ್ಲಿ ವ್ಯಕ್ತಿ ಪರಿಚಯಗಳೂ, ಎರಡನೆಯ ಭಾಗದಲ್ಲಿ ಧೋರಣೆ, ಚಿಂತನೆ, ಕಾವ್ಯ ವಿಚಾರಧಾರೆಯೂ, ಮೂರನೆಯ ಭಾಗದಲ್ಲಿ ಸಮಕಾಲೀನ ಲೇಖಕರ ಕೃತಿಗಳಿಗೆ ಬರೆದ ಮುನ್ನುಡಿಗಳೂ ಅಂತಸ್ಥವಾಗಿವೆ. ಮೊಗಸಾಲೆ ಗದ್ಯ ಶೈಲಿಯ ಸೊಗಸನ್ನು ಪ್ರತಿಮಿಸುವ ಅವರ ಲೇಖನಗಳು ವಸ್ತುವೈವಿಧ್ಯವನ್ನು ಪಡೆದುಕೊಂಡಿವೆ. ಪುಸ್ತಕದ ಶೀರ್ಷಿಕೆಯೇ ಸೂಚಿಸುವಂತೆ ಇವು ಮೊಗಸಾಲೆ ಒಲವು ನಿಲುವನ್ನು

ಅರ್ಥಪೂರ್ಣವಾಗಿ ನೀಡುತ್ತವೆ. ಮೊಗಸಾಲೆ ತೀವ್ರ ಸಂವೇದನಾಶೀಲ ವ್ಯಕ್ತಿ. ಅವರಲ್ಲಿ ಹಿಡಿದ ಕಾರ್ಯವನ್ನು ಮಾಡುವ ಕ್ರಿಯಾಶೀಲತೆ ಇದೆ. ಮೊಗಸಾಲೆ ಅಂತರ್ಮುಖಿಯಲ್ಲ, ಸಮಾಜಮುಖಿ. ಅವರಿಗೆ ಜನರ ಮಧ್ಯದಲ್ಲಿ ಕಾರ್ಯಮಾಡುವುದು ಅತ್ಯಂತ ಪ್ರೀತಿ. ಆದ್ದರಿಂದಲೇ ಅವರ ಹಿಂದೆ ಅಪಾರ ಸ್ನೇಹಿತರ ಬಳಗವಿದೆ. ಸಾಹಿತಿಗಳ ಸಾನಿಧ್ಯದಲ್ಲಿ ಬೆಳೆದ ಮೊಗಸಾಲೆ ನಾಡಿನಾದ್ಯಂತ ಅಭಿಮಾನಿಗಳ ಬಳಗವನ್ನು ಕಟ್ಟಿಕೊಂಡಿದ್ದಾರೆ. ಮೊಗಸಾಲೆ ಸಂಪರ್ಕದಲ್ಲಿ ಬಂದ ಸಾಹಿತಿಗಳು ಪ್ರೀತಿಯ ಬಂಧನದಲ್ಲಿ ಸಿಲುಕಿದ್ದಾರೆ. ಮೊಗಸಾಲೆ ಬರೆದ ವ್ಯಕ್ತಿಚಿತ್ರಗಳು ಕನ್ನಡ ವ್ಯಕ್ತಿಚಿತ್ರ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಗಳಾಗಿವೆ. ಮೊಗಸಾಲೆ ಬದುಕಿಗೆ ಹತ್ತಿರವಾದ ಎತ್ತರದ ವ್ಯಕ್ತಿಗಳ ಬಗ್ಗೆ ಬರೆಯುವಾಗ ತಾಳುವ ಎಚ್ಚರ, ವಸ್ತುನಿಷ್ಠ ಧೋರಣೆ, ಮುಕ್ತ ಮನಸ್ಸಿನ ವಿಚಾರಗಳು ತುಂಬ ಗಮನಾರ್ಹವಾಗುತ್ತವೆ. ಮೊಗಸಾಲೆ ಸಾಧನೆಯ ಹಿಂದೆ ಯಾವ ಯಾವ ದೊಡ್ಡಶಕ್ತಿಗಳು ಇವೆ ಎಂಬುದು ಇವುಗಳನ್ನೋದಿದಾಗ ಗೊತ್ತಾಗುತ್ತದೆ. 'ಮನಸ್ಸಿದ್ದಲ್ಲಿ ಮಾರ್ಗವಿದೆ' ಎಂಬಂತೆ ಮೊಗಸಾಲೆ ಜನಸಂಪರ್ಕ ಸಾಧಿಸಿ ಹೇಗೆ ಮಹತ್ತರವಾದುದನ್ನು ಸಾಧಿಸುತ್ತಾರೆ ಎಂಬುದು ನಮ್ಮ ಅರಿವಿಗೆ ಬರುತ್ತದೆ. ಮೊಗಸಾಲೆ ದೊಡ್ಡವರ ಸಂಪರ್ಕದಲ್ಲಿ ಹೇಗೆ ನಡೆದುಕೊಳ್ಳುತ್ತಾರೆ, ಅವರ ಧೋರಣೆಯನ್ನು ಪ್ರಶ್ನಿಸುವ, ವಿಚಾರಕ್ಕೆ ಹಚ್ಚುವ ಎದೆಗಾರಿಕೆಯೂ ಅವರಿಗಿದೆ ಎಂಬುದು ನಮಗೆ ಉದಿತವಾಗುತ್ತದೆ.

**ಶುಭ್ರ ಸುಂದರ ವ್ಯಕ್ತಿತ್ವ:** ಶ್ರೀ ವೀರೇಂದ್ರ ಹೆಗ್ಗಡೆ ಬಗ್ಗೆ ಬರೆಯುತ್ತ ಅವರು ಗದ್ಯ ಪದ್ಯವನ್ನು ಮೀರಿರುವ ಆಕಾಶ ಎಂದು ಆರಂಭಿಸಿ ರಾಜರ್ಷಿ ಡಾ.ವೀರೇಂದ್ರ ಹೆಗ್ಗಡೆಯವರ ಸಾಹಿತ್ಯ ಪ್ರೀತಿ, ಮೌಲ್ಯಪ್ರಜ್ಞೆ, ಮಾನವೀಯ ಗುಣಾದರ್ಶಗಳನ್ನು ವಿವರಿಸುತ್ತಾರೆ. ವರ್ಧಮಾನ ಸಾಹಿತ್ಯ ಪ್ರಶಸ್ತಿ ಪೀಠದ ಅಧ್ಯಕ್ಷರಾಗಿ ಅವರು ಮಾಡಿದ ಮಾರ್ಗದರ್ಶನ, ಧನಸಹಾಯ ಜೊತೆಗೆ ಹಿರಿಯ ಲೇಖಕರ ಜೊತೆ ತರುಣರಿಗೂ ಪ್ರಶಸ್ತಿ ನೀಡಿ ಪ್ರೋತ್ಸಾಹಿಸಬೇಕೆಂಬ ವಿಚಾರವನ್ನೂ ದಾಖಲಿಸುತ್ತಾರೆ. ವರ್ಧಮಾನ ಸಾಹಿತ್ಯ ಪ್ರಶಸ್ತಿ ಪೀಠದ ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ಕೊಡುವದಕ್ಕಿಂತ ಅದರಿಂದ ಕೆಳಗಿಳಿಯುವ ನಿರ್ಧಾರ ಪ್ರಕಟಿಸಿದ್ದನ್ನು ಉಲ್ಲೇಖಿಸಿ ಸಾರ್ವಜನಿಕ ಜೀವನದಲ್ಲಿ ಮಾಧ್ಯಮಗಳಲ್ಲಿ ಟೀಕೆ ಬಂದಾಗ ಮಹಾವ್ಯಕ್ತಿಗಳು ಹೇಗೆ ನಡೆದುಕೊಳ್ಳುತ್ತಾರೆಂಬುದನ್ನು ಮಾರ್ಮಿಕವಾಗಿ ವ್ಯಕ್ತಪಡಿಸುತ್ತಾರೆ.

**'ಉರುಳಿಬಿದ್ದ ಹೆಮ್ಮರ ಹಾ.ಮಾ.ನಾ.'** ಡಾ.ಮೊಗಸಾಲೆಯವರ ನೆನಪಿನಂಗಳದಲ್ಲಿ ಒಡಮೂಡಿದ ಹಾ.ಮಾ.ನಾ ಚಿತ್ರವಾಗಿದೆ. ಕನ್ನಡದ ನಾಯಕರಾಗಿದ್ದ ಹಾ.ಮಾ.ನಾಯಕರು ಡಾ.ಮೊಗಸಾಲೆ ಹೃದಯಕ್ಕೆ ಹತ್ತಿರವಾದವರು. ಆಗಾಗ ಕಾಗದ ಬರೆದು ಕಾಂತಾವರದ ಕನ್ನಡ ಚಟುವಟಿಕೆ, ವರ್ಧಮಾನ ಸಾಹಿತ್ಯ ಪ್ರಶಸ್ತಿಯ ಬಗ್ಗೆ ಮಾರ್ಗದರ್ಶನ ಮಾಡಿದವರು. ಡಾ.ಮೊಗಸಾಲೆ ಅವರು–ಹಾ.ಮಾ.ನಾಯಕರು ನಿರೀಶ್ವರವಾದಿಯಾದರೂ ದೇವರನ್ನು ನಂಬುವವರನ್ನು ಗೌರವಿಸುತ್ತಿದ್ದರು. ಅವರು ನಿರೀಶ್ವರವಾದಿಯಾದ ಎ.ಎನ್.ಮೂರ್ತಿರಾಯರಲ್ಲಿ ಹೊಂದಿರುವಷ್ಟೇ ಗೌರವವನ್ನು ಈಶ್ವರವಾದಿಯಾದ ಡಾ.ಮಾಸ್ತಿಯವರ ಬಗೆಗೂ ಹೊಂದಿದ್ದರು ಎಂದು ಬರೆದಿದ್ದಾರೆ. ಹಾಮಾನಾರ ಪ್ರೀತಿ, ಅಂತಃಕರಣಗಳನ್ನು ಅವರ ಪತ್ರಗಳನ್ನು ಆಕರವಾಗಿಟ್ಟುಕೊಂಡು ಆರ್ದ್ರಭಾವವನ್ನು ಡಾ.ಮೊಗಸಾಲೆ ವ್ಯಕ್ತಪಡಿಸುತ್ತಾರೆ. ಬದುಕಿನ

ಅಮೃತಕ್ಷಣಗಳು ಮಿಂಚಿ ಮರೆಯಾಗದಂತೆ ದಾಖಲಿಸುವ ವಿಶಿಷ್ಟತೆ ಡಾ.ಮೊಗಸಾಲೆಯವರದಾಗಿದೆ.

**ಕನ್ನಡದ ಅನನ್ಯ ಕವಿ ಸು.ರಂ.ಎಕ್ಕುಂಡಿ** ಅವರ ಮುಗ್ಧತೆ, ನಿಷ್ಕಪಟತೆ, ಮಾನವಪ್ರೀತಿಯನ್ನು ವರ್ಣಿಸುತ್ತ ಡಾ.ಮೊಗಸಾಲೆ ಅವರು 'ಸಂಸಾರದಲ್ಲಿ ಅರಳಿದ ಸಂತ' ಎಕ್ಕುಂಡಿ ಎಂದು ಉದ್ಗರಿಸಿದ್ದಾರೆ. ನೀರ್ಪಾಜೆ ಭೀಮಭಟ್ಟರ ಬಗ್ಗೆ ಡಾ.ಮೊಗಸಾಲೆ ಲೇಖನ ಭಾವಪೂರ್ಣವಾಗಿದೆ. ನೀರ್ಪಾಜೆ ಭೀಮಭಟ್ಟರು ಕಲ್ಹಣನ ರಾಜತರಂಗಿಣಿಯನ್ನು ಕನ್ನಡಕ್ಕೆ ತಂದ ಧೀಮಂತರು. ವಿದ್ವಾಂಸ, ಪತ್ರಕರ್ತ ನೀರ್ಪಾಜೆಯವರಿಗೆ ರಾಜಕೀಯ ಏಕೆ ಬೇಕಿತ್ತು ಎಂಬ ಪ್ರಶ್ನೆ ಡಾ.ಮೊಗಸಾಲೆ ಅವರಿಗೆ ಕಾಡಿದ್ದಿದೆ. ಕಾಂಗ್ರೆಸ್ ಪಕ್ಷ ನಿರಂತರ ಚಳವಳಿಯ ಹಾಗಿರದೆ ವ್ಯವಸ್ಥಾರೂಪದಲ್ಲಿ ಬದಲಾದುದು ನೀರ್ಪಾಜೆ ಪಕ್ಷ ರಾಜಕೀಯದಿಂದ ಹಿಂದೆ ಸರಿಯಲು ಕಾರಣವಾಯಿತು ಎಂದು ಡಾ.ಮೊಗಸಾಲೆ ಸರಿಯಾಗಿಯೇ ಗುರುತಿಸಿದ್ದಾರೆ. ರಾಜಕೀಯ ಬಿಟ್ಟು ವಿದ್ವತ್ಪೂರ್ಣವಾದ ರಾಜತರಂಗಿಣಿಯನ್ನು ಕನ್ನಡಕ್ಕೆ ಕೊಟ್ಟದ್ದರಿಂದ ನೀರ್ಪಾಜೆ ಹೆಸರು ಚಿರಸ್ಮರಣೀಯವಾಗಿದೆ. ಅವರ ಕೊನೆಯ ದಿನಗಳ ಬಗ್ಗೆ ಮೊಗಸಾಲೆ ಬರಹ ಓದುವಾಗ ಕಣ್ಣುಗಳಲ್ಲಿ ನೀರು ಉಕ್ಕುತ್ತದೆ. ಇಂಥ ಘಟನೆಗಳನ್ನು ಮೊಗಸಾಲೆ ಒಬ್ಬ ಸೃಜನಶೀಲ ಲೇಖಕರಾಗಿ ಓದುಗರನ್ನು ಸೆರೆಹಿಡಿಯಬಲ್ಲರು ಎಂದೇ ಹೇಳಬಹುದು. 'ಇದ್ದೂ ಇಲ್ಲದಂತೆ' ಬದುಕಿದ ರಂಗನಾಥ ಶೆಣೈ, ಬೇಲಾಡಿ ಚಿನ್ನ ಮಾರಣ್ಣ ಮಾಡರ ಬಗ್ಗೆ ಬರೆಯುವಾಗಲೂ ಡಾ.ಮೊಗಸಾಲೆ ಅಸಾಮಾನ್ಯ ಗುಣಗಳನ್ನು ಮೆಚ್ಚುವ ಪರಿ. ಶಿಕ್ಷಣ ತಜ್ಞರು, ಸಮಾಜಸುಧಾರಕರು, ಶಾಲೆ ಕಟ್ಟಿದವರು ಒಂದು ಊರಿನಲ್ಲಿ ಸಂಸ್ಕೃತಿಯ ದೀಪ ಹಚ್ಚಿದವರು ನಮ್ಮ ಸ್ಮರಣೆಯಲ್ಲಿ ಸದಾ ಇರಬೇಕು ಎಂಬುದನ್ನು ಡಾ.ಮೊಗಸಾಲೆ ಪ್ರತಿಪಾದಿಸುತ್ತಾರೆ. ಗ್ರಾಮೀಣ ಬದುಕಿನ ಹಿರಿಯ ಚೇತನಗಳನ್ನು ನಾವು ನಮ್ಮ ಚಿಂತಕರ ಸಾಲಿನಲ್ಲಿ ನೆನೆಯಬೇಕೆಂಬ ಉದಾತ್ತತೆಯೂ ಡಾ.ಮೊಗಸಾಲೆಯವರದಾಗಿದೆ.



ಪುತ್ತೂರು ಕರ್ನಾಟಕ ಸಂಘದ ಮೂಲಕ ಕನ್ನಡದ ಅಮೂಲ್ಯ ಗ್ರಂಥಗಳನ್ನು ಪ್ರಕಾಶನಗೊಳಿಸಿ ಕನ್ನಡ ಪ್ರಕಟಣ ಪ್ರಪಂಚದಲ್ಲಿ ವಿಸ್ಮಯವನ್ನುಂಟುಮಾಡಿದ ಧೀಮಂತಿಕೆಯ ಶ್ರೀಮಂತ ಬೋಳಂತಕೋಡಿ ಈಶ್ವರ ಭಟ್ಟರ ವ್ಯಕ್ತಿತ್ವ ಸಾಧನೆ, ಆದರ್ಶಗಳನ್ನು ಮೊಗಸಾಲೆ ಬಿಚ್ಚಿಟ್ಟ ಬಗೆಯೂ ಇಲ್ಲಿ ಗಮನಾರ್ಹವಾಗುತ್ತದೆ. ಮೊಗಸಾಲೆಯವರು ತಮ್ಮ ಸ್ನೇಹ ಬಂಧದಲ್ಲಿ ಬಂದ ಸಾಹಿತಿಗಳನ್ನು ಅವಿಸ್ಮರಣೀಯ ಪ್ರಸಂಗಗಳನ್ನು ದಾಖಲಿಸುತ್ತ ಅವರ ವ್ಯಕ್ತಿತ್ವದ ಬಗ್ಗೆ ಆಲೋಚಿಸುವಂತೆ ಮಾಡುತ್ತಾರೆ. ಕಥೆಗಾರ, ಕಾದಂಬರಿಕಾರ ಸೂರ್ಯನಾರಾಯಣ ಚಡಗರು ಪ್ರೀತಿಯ ಬೆಟ್ಟವಾಗಿ ಡಾ.ಮೊಗಸಾಲೆಯವರಿಗೆ ಕಾಣುತ್ತಾರೆ. ಹರಿಕೃಷ್ಣ ಪುನರೂರು ಅವರನ್ನು ಸಾಧನೆಯ ಸರದಾರ ಎಂದು ವರ್ಣಿಸುತ್ತ ಕನ್ನಡವೆನೆ ಕುಣಿದಾಡುವುದೆನ್ನದೆ ಎಂದು ಕುವೆಂಪು ಹೇಳಿದ ಹಾಗೆ ಪುನರೂರು ಎಂದಾಕ್ಷಣ ನನ್ನ ಎದೆ ಕುಣಿಯುತ್ತದೆ, ಮನಸ್ಸು ಅರಳುತ್ತದೆ! ಇದು ಮೊಗಸಾಲೆ ಉದ್ಗರಿಸುವ ಪರಿ! ಯಾರನ್ನೇ ಆಗಲಿ ತನ್ನ ಹೃದಯದ ತೆಕ್ಕೆಗೆ ತಂದುಕೊಂಡು ಅಂತಃಕರಣ ಪ್ರಜ್ಞೆಯಿಂದ ಅವರ ಬಗ್ಗೆ ಬರೆಯುವ ಔದಾರ್ಯ ಡಾ.ಮೊಗಸಾಲೆಯವರದಾಗಿದೆ. ಆದ್ದರಿಂದಲೇ ಕವಿ ಪ್ರಕಾಶಕ ವಿಷ್ಣು ನಾಯಕರಲ್ಲಿ ರಕ್ತ

ಸಂಬಂಧವನ್ನು ಮೀರಿದ ಆರ್ದ್ರತೆಯನ್ನು ಡಾ.ಮೊಗಸಾಲೆ ಅನುಭವಿಸುತ್ತಾರೆ. ಹೊನ್ನಾರ ಜಾಜಿ ವಿ.ಗ.ನಾಯಕರು ಅಡ್ಡನಡ್ಕದಲ್ಲಿ ಕನ್ನಡ ಸಾಹಿತ್ಯದ ಪರಿಮಳ ಹರಡಿದ್ದನ್ನು ಮನದುಂಬಿ ವರ್ಣಿಸುತ್ತಾರೆ. ಸಮಕಾಲೀನ ಸಾಹಿತಿಗಳ ಬಗ್ಗೆ ಡಾ.ಮೊಗಸಾಲೆ ಸ್ಪಂದಿಸಿ ಬರೆಯುವ ರೀತಿ ಅವರ ಮನಸ್ಸಿನ ಆಳದಲ್ಲಿ ಹರಿಯುತ್ತಿರುವ ಪ್ರೀತಿಯ ಪ್ರವಾಹವೇ ಕಾಣುತ್ತದೆ. ಡಾ.ಮೊಗಸಾಲೆ ಅವರಿಗೆ ವ್ಯಕ್ತಿಯ ಸಣ್ಣತನ ಮುಖ್ಯವಲ್ಲ. ಮನುಷ್ಯ ಸಹಜವಾದ ಗುಣಗಳನ್ನು ಮೀರಿಯೂ ಲೇಖಕ ಹೇಗೆ ಆದರ್ಶವನ್ನು ಸಾಧಿಸಬಲ್ಲ ಎಂಬುದರ ಕಡೆಯೇ ಮೊಗಸಾಲೆ ದೃಷ್ಟಿ ಇರುತ್ತದೆ. ಕಹಿ ಪ್ರಸಂಗಗಳನ್ನು ಅವರು ಮರೆತು ನೆನಪಿನಾಳದಲ್ಲಿ ಉಳಿಯುವ ಅಮೃತ ಕ್ಷಣಗಳನ್ನು ಇಲ್ಲಿ ದಾಖಲಿಸಿದ್ದಾರೆ.

ಡಾ.ಮೊಗಸಾಲೆಯವರ ಚಿಂತನಶೀಲತೆ, ಸಾಹಿತಿಯ ಆತ್ಮಜಿಜ್ಞಾಸೆ, ಸಾಹಿತ್ಯ ಮೀಮಾಂಸೆಯ ವಿಚಾರಧಾರೆ ಈ ಪುಸ್ತಕದ ಪ್ರಮುಖ ಭಾಗವಾಗಿದೆ. 'ಐವತ್ತಕ್ಕೆ ಮೊಗಸಾಲೆ ಮುಖಾಮುಖಿ' ಅತ್ಯಂತ ಸೊಗಸಾದ ಸಾಹಿತ್ಯ ಜಿಜ್ಞಾಸೆಯಾಗಿದೆ. ಸಾಹಿತ್ಯದ ಪರಿಕಲ್ಪನೆ, ಸಾಹಿತ್ಯಕ್ಕೆ ಬದ್ಧತೆ, ಸಾಹಿತ್ಯದಲ್ಲಿ ಶ್ರೇಷ್ಠತೆಯ ಪ್ರಶ್ನೆ, ಸಾಹಿತ್ಯ ಮತ್ತು ಸೃಜನಶೀಲತೆ, ಸಾಹಿತ್ಯ ಮತ್ತು ವೈಚಾರಿಕತೆ, ಇವೆಲ್ಲವುಗಳ ಬಗ್ಗೆ ಡಾ.ಮೊಗಸಾಲೆ ಚಿಂತನಶೀಲತೆ ಬಹಳ ಚೆನ್ನಾಗಿ ಪ್ರಕಟವಾಗಿದೆ. ಸಾಹಿತ್ಯ ಮಾತ್ರ ಜಾತ್ಯತೀತ ನಿಲುವನ್ನು ಪ್ರಕಟಿಸುತ್ತ ಮಾನವತಾವಾದವನ್ನು ಎತ್ತಿಹಿಡಿದಿರುವದನ್ನು ಡಾ.ಮೊಗಸಾಲೆ ವ್ಯಕ್ತಪಡಿಸುತ್ತ ನಾವೆಲ್ಲ ಸ್ವಾತಂತ್ರ್ಯ ಪಡೆದೂ ಪಡೆಯದವರಾಗಿದ್ದೇವೆ. ರಾಜಕೀಯ ಕ್ಷೇತ್ರದ ಅರಾಜಕತೆ ನಮ್ಮನ್ನು ದಾಸ್ಯಕ್ಕೆ ಎಡೆಮಾಡಿಕೊಟ್ಟಿದೆ. ಒಳ್ಳೆಯ ಬದುಕನ್ನು ಬದುಕಲು ಸಾಹಿತ್ಯ ಹೊಸದೃಷ್ಟಿಯನ್ನು ಕೊಡಬಲ್ಲುದಾಗಿದೆ. ಸುತ್ತಲಿನ ನಿಸರ್ಗಪ್ರಪಂಚ, ಪರಿಸರ ಮನುಷ್ಯಕುಲವನ್ನು ಅರ್ಥೈಸಲು ತೊಡಗಿಸುವಂತೆ ಮಾಡುವುದನ್ನು ನಾವು ಕಲಿಯಬೇಕಾಗಿದೆ. "'ಧರ್ಮಕ್ಕಿಂತ ನನಗೆ ಸಾಹಿತ್ಯ ಶ್ರೇಷ್ಠ ಮತ್ತು ಹತ್ತಿರ. ದೇವರಿಗಿಂತ ದೇವರನ್ನು ನಂಬುವವ ಹೆಚ್ಚು ಆಪ್ತ'. 'ಸಾವು ಒಂದೇ ಈ ಜಗತ್ತಿನಲ್ಲಿ ಇರುವ ಪರಿಪೂರ್ಣತೆ. ಅಮರತ್ವ ಇರುವುದು ಸಾವಿನಾಚೆಗಲ್ಲ, ಈಚೆಗೇ ಎನ್ನುವುದೇ ಈ ಜಗತ್ತಿನ ಕಠೋರ ಸತ್ಯ'. ಮನುಷ್ಯ ಬುದ್ಧಿ ಭಾವನೆಯನ್ನು ಬಿಟ್ಟರೆ ನಿಜವಾದ ಪ್ರಾಣಿ. ಪ್ರಾಣಿಯ ಸಹಜ ಗುಣಗಳೆಲ್ಲ ಅವನಲ್ಲಿವೆ. ಸಾಹಿತ್ಯ ಮನುಷ್ಯನ ಕ್ರೌರ್ಯ, ಅಹಂಕಾರವನ್ನು ಅರ್ಥೈಸಲು ಪ್ರಯತ್ನಿಸುತ್ತದೆ. ಕವಿಯಾಗದ ಕವಿ ಹೃದಯವಿಲ್ಲದ ಯಾವೊಬ್ಬ ಮನುಷ್ಯನೂ ಜಗತ್ತಿನಲ್ಲಿ ಇರಲಾರ. ಈ ಜಗತ್ತಿಗೆ ತನ್ನ ಅಗತ್ಯ ಎಷ್ಟಿದೆ, ತನ್ನನ್ನು ತಾನು ಅರಿಯುವ, ತನ್ನನ್ನು ತಾನು ಗೆಲ್ಲುವ ಚಿಂತನೆ ಪ್ರತಿಯೊಬ್ಬರದಾಗಬೇಕು" ಎಂದು ಡಾ.ಮೊಗಸಾಲೆ ಮಾರ್ಮಿಕವಾಗಿ ಹೇಳಿದ್ದಾರೆ.

ಡಾ.ಮೊಗಸಾಲೆ ಅವರು ಕಾರ್ಕಳ ತಾಲೂಕು ಏಳನೆಯ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಮಾಡಿದ ಭಾಷಣವೂ ಈ ಪುಸ್ತಕವಲ್ಲಿ ಸೇರಿದೆ. ಇದೊಂದು ಮಾದರಿಯ ಸಮ್ಮೇಳನಾಧ್ಯಕ್ಷ ಭಾಷಣವಾಗಿದೆ. ಡಾ.ಮೊಗಸಾಲೆ ಅವರು ಸಮಕಾಲೀನ ಸಾಹಿತ್ಯದ ಸ್ಥಿತಿಗಳ ಬಗೆಗೆ ಸಂಸ್ಕೃತಿಯ ಪರಿಕಲ್ಪನೆಯ ಬಗ್ಗೆ ಹೇಳಿದ ಮಾತುಗಳು ಅತ್ಯಂತ ಮಾರ್ಮಿಕವಾಗಿದೆ. ಆಧುನಿಕ ಜೀವನ ವಿಧಾನ ನಮ್ಮ ಸಂಸ್ಕೃತಿಯ ಬೇರುಗಳನ್ನು ಕತ್ತರಿಸುತ್ತದೆಯೆಂಬ ಕಳವಳವನ್ನು ಅವರು ವ್ಯಕ್ತಪಡಿಸುತ್ತಾರೆ. ರಾಜಕೀಯವನ್ನು, ರಾಜಕಾರಣಿಗಳನ್ನು ನಿರಂತರವಾಗಿ ಟೀಕಿಸುವ

ನಾವು ರಾಜಕೀಯವನ್ನು, ಸಾಹಿತ್ಯಕ್ಷೇತ್ರಕ್ಕೆ ತಂದಿದ್ದೇವೆ. ಸಾಹಿತಿಗಳಲ್ಲಿ ಪ್ರಾಮಾಣಿಕತೆ, ನೈತಿಕತೆ ಕುಸಿಯುತ್ತಿದೆ ಎಂಬ ಸತ್ಯಸಂಗತಿಯನ್ನು ಬಯಲಿಗೆಳೆಯುತ್ತಾರೆ. ಸಾಹಿತ್ಯ ಕ್ಷೇತ್ರದಲ್ಲಿ ಜಾತೀಯತೆಯ ಕುರಿತೂ ಚರ್ಚಿಸುತ್ತಾರೆ. ನಿಜವಾದ ಲೇಖಕ ಬರವಣಿಗೆಯಲ್ಲಿ ಜಾತ್ಯಾತೀತನಾಗಿರುತ್ತಾನೆ. ಲೇಖಕರು ಜಾತೀಯ ಸಂಘಟನೆಗಳಲ್ಲಿ ತೊಡಗಿಕೊಳ್ಳಬಾರದು ಮತ್ತು ಜಾತೀಯ ಸಂಘಟನೆಗಳು ಕೊಡುವ ಪ್ರಶಸ್ತಿಗಳನ್ನು ತಿರಸ್ಕರಿಸಬೇಕು ಎಂದೂ ದೃಢವಾದ ನಿಲುವನ್ನು ಮೊಗಸಾಲೆ ಪ್ರತಿಪಾದಿಸುತ್ತಾರೆ. ನಮ್ಮ ಸಾಹಿತ್ಯ ಅಭಿಪ್ರಾಯ ಭೇದಗಳನ್ನು ಅರಗಿಸಿಕೊಂಡು ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಬೇಕು. ಅಂತರಂಗಕ್ಕೆ ಸಲ್ಲುವ ಸಾಹಿತ್ಯವು ಬಹಿರಂಗದಲ್ಲೂ ಮನುಷ್ಯ ಪ್ರೀತಿಗೆ ಸಾಕ್ಷೀಭೂತವಾಗಬೇಕು. ಇದು ಡಾ.ಮೊಗಸಾಲೆ ಸಾಹಿತ್ಯ ದೃಷ್ಟಿ.

ಮೂಡಬಿದಿರೆಯಲ್ಲಿ ಜರುಗಿದ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷ ಭಾಷಣದಲ್ಲೂ ಡಾ.ಮೊಗಸಾಲೆ 'ನನ್ನ ಕಾವ್ಯ ಪ್ರೀತಿಯ ಮೂಲಸೆಲೆ ಮನುಷ್ಯನಲ್ಲಿ. ನಮ್ಮೊಳಗಿನ ತಲ್ಲಣಗಳು ಹೇಗೆ ಕಾವ್ಯಕ್ಕೆ ಕಾರಣವೋ ನಮ್ಮೊಳಗಿನ ಪ್ರೇಮ, ಕಾಮ, ಸಣ್ಣತನ, ಅಹಂಕಾರ, ಆಷಾಡಭೂತಿತನ, ರಾಜಕಾರಣ, ಶೋಷಣೆ, ಬಂಡಾಯ ಎಲ್ಲವೂ ಕಾವ್ಯ ವಸ್ತುಗಳೇ. ಕಾವ್ಯ ಮನುಷ್ಯ ಸಂಬಂಧಗಳನ್ನು ಬೆಸೆಯುವ ಅದರ ಅರ್ಥವನ್ನು ಹುಡುಕುವ ಅನ್ವೇಷಣೆಯ ಪ್ರತಿರೂಪ. ಆಸ್ತಿಕನ ಪಾರಮಾರ್ಥಿಕ ತುಡಿತವನ್ನು ನಾಸ್ತಿಕನ ವಾಸ್ತವದ ಎಚ್ಚರವನ್ನು ನನಗೆ ಏಕಕಾಲಕ್ಕೆ ಕರುಣಿಸಿರುವ ಕಾವ್ಯ ನನಗೆ ಯಾವತ್ತೂ ಸವಾಲೇ ಆಗಿದೆ' ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಕಾವ್ಯ ಹುಟ್ಟುವ ಬಗೆ ಹೇಗೆ** ಎಂಬ ಡಾ.ಮೊಗಸಾಲೆ ಕಾವ್ಯ ಜಿಜ್ಞಾಸೆ ಅತ್ಯಂತ ರೋಚಕವಾಗಿದೆ. ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ಕಾವ್ಯವೇ ಕೇಂದ್ರಬಿಂದು. ಕಾವ್ಯಕ್ಕೆ ಜೀವನವೇ ಸಾಮಗ್ರಿಯನ್ನೊದಗಿಸುತ್ತದೆ. ಕಾವ್ಯದಲ್ಲಿ ಬೇರೆ ಬೇರೆ ಭಾವನೆಗಳ ಒಂದು ಸಂಕೀರ್ಣಸ್ಥಿತಿಯನ್ನು ಪ್ರತಿಭಾವಂತ ಕವಿ ನಿರ್ಮಿಸಬಲ್ಲ. ಆದ್ದರಿಂದ ಕವಿಯ ನಿಲುವು ಅತಾರ್ಕಿಕವಾಗಿರುತ್ತದೆ. ಕಾವ್ಯ ಎಂದರೆ ಬರಿ ಕವನವಲ್ಲ. ಬದುಕು! ಇದು ಡಾ.ಮೊಗಸಾಲೆ ಅವರ ಹೃದ್ಯವಾದ ವಿಶ್ಲೇಷಣೆ. ಕಾವ್ಯಕ್ಕೆ ಸಾಮೂಹಿಕ ಬದ್ಧತೆ ಬೇಕು ಮತ್ತು ಕವಿಗೆ ಸಾಮಾಜಿಕ ಜವಾಬ್ದಾರಿ ಪ್ರಸ್ತುತವಾಗುವ ಬಗೆಗೂ ಡಾ.ಮೊಗಸಾಲೆ ಆಲೋಚಿಸುತ್ತಾರೆ. ಮನುಷ್ಯ ಪ್ರೀತಿಯಿಂದ ವಂಚಿತರಾಗುತ್ತಿರುವ ಈ ದಿನಗಳಲ್ಲಿ ನಮಗೆ ಜೀವನಪ್ರೀತಿಯನ್ನು ನೀಡುವದೇ ಕಾವ್ಯ ಎಂದು ಡಾ.ಮೊಗಸಾಲೆ ಕಾವ್ಯಸಮರ್ಥನೆ (Defence of Poetry) ಮಾಡಿದ್ದಾರೆ.

ಡಾ.ಮೊಗಸಾಲೆಯವರ ಸಾಮಾಜಿಕ ಚಿಂತನೆಯ ಲೇಖನಗಳೂ ಗಮನಾರ್ಹವಾಗುತ್ತವೆ. ವಿವಾಹ ತೀರ ವೈಯುಕ್ತಿಕ ವಿಚಾರ:ಸಾಮಾಜಿಕ ಸಮಸ್ಯೆ ಹೇಗೆ ಎಂಬ ವಿಶ್ಲೇಷಣೆ ಅರ್ಥಪೂರ್ಣವಾಗಿದೆ. ಮದುವೆ ಎಂಬುದು ಜಾತಿ ವ್ಯವಸ್ಥೆಯನ್ನು ಪೋಷಿಸಿ ಬೆಳೆಸುವ ಒಂದು ವ್ಯವಸ್ಥೆಯಾಗಿರುವುದರಿಂದ ಅದು ಕ್ರೂರವಾಗಿದೆ. ವರದಕ್ಷಿಣೆ ಸಮಸ್ಯೆ ನಾಗರಿಕತೆಗೆ ಶಾಪವಾಗಿ ಬೆಳೆಯಲು ಅದೂ ಒಂದು ಉದ್ಯಮವಾಗಿ, ಸ್ವಪ್ರತಿಷ್ಠೆಯಾಗಿ ಬೆಳೆಯಲು ಪರಿಣಮಿಸಿದೆ. ಲೈಂಗಿಕ ಅಸಮಾನತೆ ಅದರ ವೈಜ್ಞಾನಿಕ ದೃಷ್ಟಿಕೋನದ ಬಗ್ಗೆ ಸರಿಯಾದ

ತಿಳುವಳಿಕೆ ಇಲ್ಲದಿರುವುದು, ಅದರಿಂದಲೇ ಯಾವ ವಿವಾಹದಿಂದ ಕೌಟುಂಬಿಕವಾದ ಸುಖಶಾಂತಿ ಸಿಗಬೇಕಾಗಿತ್ತೋ ಅದು ಸಿಗದೆ ವ್ಯಕ್ತಿಬದುಕು ನಿರಾಶೆಯಲ್ಲಿ ತೊಳಲಾಡು ವಂತಾಗಿದೆ ಎಂಬುದನ್ನು ಡಾ.ಮೊಗಸಾಲೆ ವಿಶ್ಲೇಷಿಸುತ್ತಾರೆ. ಜಾತಿಸಂಘಟನೆಯ ಹೆಸರಲ್ಲಿ ರಾಜಕೀಯ ಲಾಭ ಪಡೆಯುವುದು, ಸ್ವಜಾತಿಯ ಜನರನ್ನೇ ಶೋಷಿಸುವುದು ಸಾಮಾನ್ಯವಾಗಿದೆ. ಜಾತೀಯತೆ ಜಾತ್ಯಾತೀತ ರಾಷ್ಟ್ರದಲ್ಲಿ ಉಳಿದುಕೊಂಡಿರುವುದಕ್ಕೆ ಆರ್ಥಿಕ ಮತ್ತು ಮೀಸಲಾತಿ ಲಾಭ ಪಡೆದುಕೊಳ್ಳುವದಕ್ಕೆ, ಅಧಿಕಾರ ಗಿಟ್ಟಿಸಲಿಕ್ಕೆ, ಅದರಿಂದ ಸಕಲ ಭೋಗಗಳನ್ನು ಅನುಭವಿಸಲಿಕ್ಕೆ ಕಾರಣವಾಗಿದೆ. ಜಾತೀಯ ಸಂಘಟಕರಿಗೆ ಎಚ್ಚರದಿಂದ ಪಾಲಿಸಬೇಕಾದ ದಶಸೂತ್ರಗಳನ್ನು ಡಾ.ಮೊಗಸಾಲೆ ಉಪದೇಶಿಸುತ್ತಾರೆ.

'ನಮ್ಮ ದೇಶ ಉಳಿಸುವ ಬಗೆ..' ಎಂಬ ಲೇಖನದಲ್ಲಿ ಡಾ.ಮೊಗಸಾಲೆ ರಾಷ್ಟ್ರಚಿಂತನೆಯನ್ನೂ ಮಾಡಿದ್ದಾರೆ. ಭಾರತದಲ್ಲಿ ಅಮೇರಿಕಾದ ಹಾಗೆ ಅಧ್ಯಕ್ಷೀಯ ಆಡಳಿತ ಪದ್ಧತಿ ಬಂದರೆ ಹೆಚ್ಚು ವಾಸ್ತವವಾಗುತ್ತದೆ. ಪಕ್ಷಾಂತರ ಮಾಡಿದರೆ ಅವನ ಸದಸ್ಯತ್ವ ರದ್ದಾಗಬೇಕೆಂಬ ಅವರ ವಾದ ಸರಿಯಾದದ್ದಾದರೂ ಮೊಗಸಾಲೆ ಹೇಳುವಂತೆ ಈಗಿರುವ ಎಲ್ಲಾ ಕಾಲೇಜುಗಳನ್ನು ಹತ್ತು ಹದಿನೈದು ವರ್ಷ ಮುಚ್ಚಬೇಕು ಎಂಬ ಮಾತು ಸರಿಯಾದದ್ದಲ್ಲ. ಸ್ವಾತಂತ್ರೋತ್ತರ ಭಾರತದಲ್ಲಿ ಶಿಕ್ಷಣ ಮೂಲಭೂತ ಹಕ್ಕಾಗಿದ್ದರೂ ಸಂಪೂರ್ಣ ಸಾಕ್ಷರತೆಯನ್ನು ನಾವು ಸಾಧಿಸಲಾಗಿಲ್ಲ. ಶಿಕ್ಷಣ ವ್ಯವಸ್ಥೆಯಲ್ಲಿ ಯಾವ ರೀತಿಯ ಬದಲಾವಣೆ ಆಗಬೇಕು ಎಂಬುದನ್ನು ಡಾ.ಮೊಗಸಾಲೆ ಸೂಚಿಸಬಹುದಿತ್ತು. ಆದರೆ ಎಲ್ಲಾ ಕಾಲೇಜುಗಳನ್ನು ಮುಚ್ಚುವುದರಿಂದ ಮುಂದೇನು ಎಂಬ ದಾರಿಯನ್ನು ಅವರು ಹೇಳಿದಂತಾಗಿಲ್ಲ. ವೈದ್ಯರಾಗಿ ಡಾ.ಮೊಗಸಾಲೆಯವರು ಲೈಂಗಿಕ ಶಿಕ್ಷಣದ ಪ್ರಯೋಜನವನ್ನು ಪಟ್ಟಿಮಾಡಿಕೊಟ್ಟಿರುವುದೂ ಪ್ರತ್ಯೇಕ ಲೇಖನದಲ್ಲಿ ಮಂಡಿತವಾಗಿದೆ. 'ಆಧ್ಯಾತ್ಮ ಜೀವನ ವಿಧಾನ'ವೇ ಸ್ವಾತಂತ್ರ್ಯದ ನಿಜವಾದ ಅರ್ಥ ಎಂದು ಗಾಂಧಿ, ವಿನೋಬಾ, ಜೆಪಿ ಮೊದಲಾದವರ ಆದರ್ಶ ಆಗಿತ್ತು. ಇಂದು ಬುದ್ಧಿಜೀವಿಗಳಾದವರು ರಾಜಕಾರಣಿಗಳನ್ನು ದೂಷಿಸುವುದು ಸಾಮಾನ್ಯ. ಆದರೆ ಈ ವ್ಯವಸ್ಥೆಯನ್ನು ಸರಿಪಡಿಸಲು ಬುದ್ಧಿಜೀವಿಗಳು ಹೇಗೆ ಸಕ್ರಿಯರಾಗಿದ್ದಾರೆ ಎಂಬುದೂ ಅಷ್ಟೇ ಮುಖ್ಯವಾಗುತ್ತದೆ. ಬುದ್ಧಿಜೀವಿಗಳು ವ್ಯವಸ್ಥೆಯ ಭಾಗವಾಗಿರುವದನ್ನು ಡಾ.ಮೊಗಸಾಲೆ ಪ್ರಸ್ತಾಪಿಸಿರುವುದು ಅವರ ವಸ್ತುನಿಷ್ಠ ಚಿಂತನಕ್ರಮದ ಪ್ರತೀಕವಾಗಿದೆ.

ಯಕ್ಷಗಾನ ಶುದ್ಧ ಜನಪದ ಕಲೆ ಎಂಬುದು ಡಾ.ಮೊಗಸಾಲೆ ಅವರ ರಂಗಚಿಂತನೆ ಯಾಗಿದೆ. ಯಕ್ಷಗಾನದ ಸಂಪ್ರದಾಯವನ್ನು ಸಂರಕ್ಷಣೆ ಮಾಡಬೇಕು. ಸುಧಾರಣಾವಾದಿಗಳು ನಡೆಸುವ ಪ್ರದರ್ಶನಗಳು ಕಥಾಮೌಲ್ಯಗಳನ್ನು ಬೆಳೆಸಲಾರವು. ಯಕ್ಷಗಾನದಲ್ಲಿ ಭೂತದ ಪ್ರದರ್ಶನವಾಗಲಿ, ಕೀಳು ಅಭಿರುಚಿಯಾಗಲಿ ಕಲೆಯ ಬೆಳವಣಿಗೆಗೆ ಸಹಾಯಕವಾಗಲಾರದು. ಅನಂತಮೂರ್ತಿಯವರ ಘಟಶ್ರಾದ್ಧದ ನಿದರ್ಶನ ನೀಡಿ ಕಲೆಯನ್ನು ಚಾರಿತ್ರಿಕ ಸಂದರ್ಭದಲ್ಲಿ ಪರಿಭಾವಿಸುವ ಅಗತ್ಯವನ್ನು ಡಾ.ಮೊಗಸಾಲೆ ಪ್ರತಿಪಾದಿಸುತ್ತಾರೆ.

ಡಾ.ಮೊಗಸಾಲೆ ಅವರು ಯುವ ಲೇಖಕರನ್ನು ಪ್ರೀತಿಯಿಂದ ಉತ್ತೇಜಿಸಿದರು. ಹೊಸ ಪ್ರತಿಭೆಗಳಿಗೆ ಚಾಲನೆ ಕೊಡುವ ಕಾರ್ಯವನ್ನು ಮಾಡುತ್ತ ಬಂದ ಡಾ.ಮೊಗಸಾಲೆ ಅವರು

ಬರೆದ ಮುನ್ನುಡಿಗಳೂ ಈ ಗ್ರಂಥದಲ್ಲಿವೆ. ಡಾ.ಮೊಗಸಾಲೆ ಕವಿ, ಕಾದಂಬರಿಕಾರರಾಗಿರುವುದರಿಂದ ಸಹಜವಾಗಿಯೇ ಅವರು ರಾಧಾಕೃಷ್ಣ ಬೆಳ್ಳೂರರ 'ಅಗ್ನಿಜಿಹ್ವಾ', ಡಾ.ರಾಜೇಂದ್ರ ಅವರ 'ಕ್ಷೇಮ', ಗಣಪತಿ ದಿವಾಣರ 'ದಿವಾಣ ದರ್ಪಣ' , ವಿಷ್ಣುನಾಯಕರ 'ಮುಚ್ಚಿದ ಬಾಗಿಲು ಮರಿಗುಬ್ಬಿ', ರಾಮಚಂದ್ರ ಪೈ ಅವರ 'ವಾಸ್ತವತೆಯ ತೆಕ್ಕೆಯಲ್ಲಿ' ಈ ಎಲ್ಲ ಕವಿತಾ ಸಂಕಲನಗಳಿಗೆ ಮುನ್ನುಡಿ ಬರೆದಿದ್ದಾರೆ. ಇವುಗಳಲ್ಲಿ ಪ್ರತಿಯೊಂದು ಕವಿತಾ ಸಂಕಲನದ ವಿಮರ್ಶಾತ್ಮಕ ವಿಚಾರಗಳು, ಡಾ.ಮೊಗಸಾಲೆ ಕವಿಗಳಿಗೆ ನೀಡುವ ಮಾರ್ಗದರ್ಶನದ ಮಾತುಗಳು, ಕವಿತೆಯ ವಿಶ್ಲೇಷಣೆ ಗಮನಾರ್ಹವಾಗುತ್ತವೆ. ವಸಂತಕುಮಾರ ಪೆರ್ಲರ ಕಥಾಸಂಕಲನದ ಬಗೆಗೂ ಅಜಿತಪ್ರಸಾದರ 'ಉಂಗುರದ ಗುಲಾಮ' ಕಾದಂಬರಿ ಕುರಿತ ಮೌಲಿಕ ಮಾತುಗಳೂ ಇಲ್ಲಿವೆ. ಡಾ.ಮೊಗಸಾಲೆ ಕೃತಿ ವಿಮರ್ಶೆಯ ಮಾದರಿಗಳಾಗಿಯೂ ಈ ಮುನ್ನುಡಿಗಳಿವೆ. ತರುಣ ಕವಿಗಳ ಕಾವ್ಯ ಸಂವೇದನೆಯನ್ನು ಕವಿಯಾಗಿ, ವಿಮರ್ಶಕರಾಗಿ ಆಸ್ವಾದಿಸುವ ಡಾ.ಮೊಗಸಾಲೆ ಅವರು ಕೃತಿ ಮತ್ತು ಕೃತಿಕಾರರನ್ನು ಸಹೃದಯತೆಯಿಂದ ಕಾಣುತ್ತಾರೆ. ವ್ಯಕ್ತಿ ಟೀಕೆ, ಕೃತಿ ನಿಂದೆಯ ಸಣ್ಣತನ ಅವರ ಬರವಣಿಗೆಯಲ್ಲಿ ಕಾಣಿಸುವುದಿಲ್ಲ. ಸಾಹಿತ್ಯದ ಶುದ್ಧ ರುಚಿ –ಅಭಿರುಚಿ ಡಾ.ಮೊಗಸಾಲೆಯವರದಾಗಿದೆ.

'ಡಾ.ಮೊಗಸಾಲೆ ಒಲವು–ನಿಲುವು' ಅವರ ಚಿಂತನಶೀಲತೆಯನ್ನು ವಿಚಾರಧಾರೆಯನ್ನು ಅರ್ಥಪೂರ್ಣವಾಗಿ ಪ್ರತಿನಿಧಿಸುತ್ತದೆ. ಕವಿ, ಕಾದಂಬರಿಕಾರರಾದ ಡಾ.ಮೊಗಸಾಲೆ ಸಾಹಿತ್ಯ ಸ್ಪಂದನ, ಕಾವ್ಯ ಜಿಜ್ಞಾಸೆ, ಸಾಮಾಜಿಕ ಚಿಂತನೆ, ಸಹೃದಯತೆಯನ್ನು ಪ್ರಕಟಿಸುವಲ್ಲಿ ಯಶಸ್ವಿಯಾಗಿದೆ. ಡಾ.ಮೊಗಸಾಲೆ ಜಾತ್ಯಾತೀತವಾದ ಮಾನವತಾವಾದಿ ಆಶಯವನ್ನು ಇಟ್ಟುಕೊಂಡ ಪ್ರಗತಿವಾದಿ ಲೇಖಕರು. ಅವರ ಕವಿತೆ, ಕಥನ ಸಾಹಿತ್ಯದಲ್ಲಿ ಕಾಣುವ ಸೃಜನಶೀಲತೆ, ಗದ್ಯ ಬರಹಗಳಲ್ಲೂ ಕಾಣಿಸುತ್ತದೆ. ಭಾವುಕರಾಗದೆ ಮುಕ್ತ ಮನಸ್ಸಿನಿಂದ, ವಸ್ತುನಿಷ್ಠ ದೃಷ್ಟಿಯಿಂದ ವಿಚಾರ ವಿವೇಚನೆ ಮಾಡುವ ಡಾ.ಮೊಗಸಾಲೆ ಒಲವು ನಿಲುವು ಅವರ ಧ್ಯಾನಸ್ಥ ಮನಸ್ಸಿನ ಬರವಣಿಗೆಗೆ ಮಾದರಿಯೂ ಆಗುತ್ತದೆ. ಇದನ್ನು ಸಂಪಾದಿಸಿ ವಿಸ್ತಾರವಾದ ಪ್ರಸ್ತಾವನೆ ಬರೆದ ವಿ.ಗ.ನಾಯಕರು ಸಾರ್ಥಕವಾದ ಕಾರ್ಯಮಾಡಿದ್ದಾರೆ.

o

# ಬಯಲು ಬೆಟ್ಟ
# ವಿಕಸಿತ ವ್ಯಕ್ತಿತ್ವದ ಸ್ವಭಾವ ಚಿತ್ರಣ

ಡಾ. ಶ್ಯಾಮಸುಂದರ ಬಿದರಕುಂದಿ

ತನಗೆ ಅರವತ್ತೊಂದರ ಹರಯ ದಾಟಿದ ಮೇಲೆ, ಡಾಕ್ಟರ್ ನಾರಾಯಣ ಭಟ್ಟ ಮೊಗಸಾಲೆಯವರು ಪ್ರಕಟಿಸಿದ 'ಬಯಲುಬೆಟ್ಟ', ಸಾಹಿತಿಯೊಬ್ಬನ ಸ್ವಭಾವ ಚಿತ್ರವಾದ ಸುಂದರ ಕಥನ. ಯಾವುದೇ ಆತ್ಮವೃತ್ತಾಂತದ ಮೂಲದ್ರವ್ಯ ನೆನಪು. ಈ ತನಕ ತಾನು ನಡೆದು ಬಂದ ದಾರಿಯನ್ನು ಹೊರಳಿ ನೋಡುವಾಗ ಮರುಕಳಿಸುವ ಹೆಜ್ಜೆಗಳು ಹೇಗೆ ದಿಟವಾಗಿವೆ; ಮತ್ತು ಎಷ್ಟು ದಿಟ್ಟವೂ ಆಗಿದೆ – ಎನ್ನುವುದನ್ನು ಮನವರಿಕೆ ಮಾಡಿಕೊಳ್ಳುತ್ತ ನೆನಪಿನ ಗಣಿಯನ್ನು ಅಗೆಯುವ ಕುಶಲ ಕೆಲಸ ಇದು. ಕವಿಯಾಗಿ, ಕಾದಂಬರಿಕಾರನಾಗಿ, ತನ್ನ ಪರಿಸರದ ಸಂಸ್ಕೃತಿ ನಿರೂಪಕನಾಗಿ ಪ್ರವೃತ್ತಿಯಲ್ಲಿ ತೊಡಗಿರುವ ಮೊಗಸಾಲೆಯವರು, ವೈದ್ಯವೃತ್ತಿಯನ್ನು ಹೊಟ್ಟೆಪಾಡಿಗಾಗಿ ಮಾತ್ರ ಮಾಡಿ ಮುಗಿಸಿದವರಲ್ಲ. ಅದನ್ನು ಒಂದು 'ಸೇವೆ'ಯೆಂದೇ ಪರಿಗಣಿಸಿ ನಿರ್ವಹಿಸುತ್ತ, ಬದುಕಿನ ಅರ್ಥವಂತಿಕೆಯನ್ನು ಹೆಚ್ಚಿಸಿಕೊಂಡವರು. ಸಾಹಿತ್ಯ, ಅವರ ಬಾಳನ್ನು ರೂಪಿಸಿದ್ದರೆ, ವೈದ್ಯಕೀಯ, ಅವರಿಗೆ ಬದುಕನ್ನು ಕಟ್ಟಿಕೊಟ್ಟಿದೆ. ಹೀಗಾಗಿ ಮೊಗಸಾಲೆಯವರ ನೆನಪಿನ ಅಗೆತ, ದಣಿವಿಲ್ಲದೆ ನೆರವೇರಿ ತಣಿವನ್ನು ತನಗೂ ಓದುಗನಿಗೂ ಒಟ್ಟಿಗೇ ಈಯುವಷ್ಟು ಆತ್ಮೀಯವಾಗಿದೆ. ಈ ಬರಹದ ಮೂಲಕ ತಾನು "ವರ್ತಮಾನದಲ್ಲಿ ನಿಂತು, ಗತಕಾಲದ ನೆನಪಿನ ಜೊತೆಗೆ ಕಳೆದ ಕ್ಷಣಗಳನ್ನು ಹಂಚಿ ಕೊಳ್ಳುತ್ತಿದ್ದೇನೆ"ಂದು ಅವರು ಹೇಳಿರುವುದು ಪ್ರಾಮಾಣಿಕನೊಬ್ಬನ ಸಕಾಲಿಕ ನಿವೇದನೆ. ಗತದಿನಗಳ ನೆನಪು ಅವರ ಆರೋಗ್ಯ ಪೂರ್ಣ ವರ್ತಮಾನದ ಬೆಳಕಿನೊಂದಿಗೆ ಸಂವಾದಿಸುತ್ತಿರುವುದರಿಂದ ಕಳೆದುಕೊಂಡಿದ್ದು ಅವರಿಗೆ ಕಾಡಿಸುವುದಿಲ್ಲ. ಹಳಹಳಿಸಲೂ ಹಚ್ಚುವುದಿಲ್ಲ ಅದು. ಮೊಗಸಾಲೆಯವರ ಸ್ವಭಾವ ಮತ್ತು ಪರಿಸರದಿಂದ ಅವರು ಪಡೆದ ಪ್ರಜ್ಞೆಗಳ ನಡುವೆ ಬಿರುಕಿಲ್ಲ; ಬದಲು ಹಾರ್ದಿಕವಾದ ಹೊಂದಾಣಿಕೆಗಳಿವೆ. ಬಯಲಿನ ಮುಕ್ತತೆ. ವೈಶಾಲ್ಯವನ್ನವರು ಹೇಗೆ ಅಳವಡಿಸಿಕೊಳ್ಳಬಲ್ಲರೋ ಹಾಗೆಯೇ ಬೆಟ್ಟದ ಕಡಿದಾದ ಎತ್ತರವನ್ನೂ ಸಂಕುಚಿತ ಹಾದಿಗುಂಟ ನಡೆದೂ ಅನಾಯಾಸ ಏರಿ, ಸವೆಸಬಲ್ಲವರಾಗಿದ್ದಾರೆ ಅವರು.

ಮೊಗಸಾಲೆಯವರು ಪರಿಸರದಿಂದ ಪಡೆದ ಪ್ರಜ್ಞೆ, ಸ್ವಭಾವತಃ ಸಾತ್ವಿಕರೂ ಪ್ರತಿಭಾವಂತರೂ ಮಹತ್ವಾಕಾಂಕ್ಷಿಯೂ ಆದ ಅವರನ್ನು ರೂಢಿಸಿದೆ ಮತ್ತು ಬೆಳೆಸಿದೆ. ವ್ಯಕ್ತಿಯಾಗಿ ಅವರು

ಎಂದೂ ಏಕಾಂಗಿಯಾಗಲಿಲ್ಲ, ಪರಿಸರದಿಂದ ಭಿನ್ನನಾಗಿ ಅವರೆಂದೂ ದೂರ ಉಳಿಯಲಿಲ್ಲ. ಅವರ ಕತೆ, ಕವನಗಳು ರಚನೆಗೊಂಡದ್ದು ಮುಖ್ಯವಾಗಿ 'ನವ್ಯ ಸಾಹಿತ್ಯ'ದ ಉಚ್ಛ್ರಾಯ ಕಾಲದಲ್ಲಿ. ನವ್ಯರ ಭಾವುಕ, ಬೌದ್ಧಿಕ ಪ್ರವೃತ್ತಿ ಯಾವುದೂ ಮೊಗಸಾಲೆಯವರನ್ನು ಆವರಿಸದಿರುವುದು ಗಮನಾರ್ಹ ಸಂಗತಿ. ಇಂಗ್ಲಿಷ್ ಸಾಹಿತ್ಯವನ್ನುವರು ಓದಲಿಲ್ಲವೆನ್ನುವುದು ಇದಕ್ಕೊಂದು ನೆಪವಾಗಿರಬಹುದು. ಒಂದು ವೇಳೆ ಅದನ್ನವರು ಓದಿದ್ದಿದ್ದರೆ ಅನಾಥಪ್ರಜ್ಞೆ, ಅಸ್ತಿತ್ವವಾದ, ಅಸಂಗತ ಕಲ್ಪನೆಗಳಿಂದ ಅವರು ಪ್ರಭಾವಿತರಾಗುತ್ತಿರಲಿಲ್ಲ ಎಂದೇ ಅನ್ನಿಸುತ್ತದೆ. ಓದದಿದ್ದುದು ಅವರ ಆಯ್ಕೆಯ ಮರ್ಜಿ ಕೂಡ ಆಗಿದೆಯೆಂದು ವಿಶ್ವಾಸಪೂರ್ವಕವಾಗಿ ಹೇಳಬಹುದು. ಈ ಆತ್ಮವೃತ್ತಾಂತದ "ಬೆಟ್ಟದ ತಪ್ಪಲಿನ ನೆರಳಲ್ಲಿ ನಿಂತು" ಭಾಗ(4)ವನ್ನು ಓದಿ ಮುಗಿಸಿದಾಗ ಯಾರಾದರೂ ಮನಗಾಣುವ ಗಮನಾರ್ಹ ಅಂಶವಿದು. ಮುನ್ನುಡಿಯಲ್ಲೇ ಅವರು ಹೇಳುವುದು ಇದನ್ನೇ.

"ನೀನಿಲ್ಲದೆ ನಾನಿಲ್ಲ! ಎಂಬುದನ್ನು ಒಪ್ಪಿಕೊಂಡ ಬದುಕು ನನ್ನದು. ಈ ಕಾರಣದಿಂದ ನನ್ನ ವೃತ್ತಾಂತದ ಜತೆಗೆ ಇಲ್ಲಿ ಅನೇಕರ ವೃತ್ತಾಂತಗಳೂ ಅನಾವರಣಗೊಳ್ಳುತ್ತವೆ. ಇನ್ನೊಬ್ಬರಿಂದ ನಾನು ಏನು ಪಡೆಕೊಂಡೆ, ನನ್ನೆದುರಿಗೆ ನಾನೇ ಹೇಗೆ ಬದಲಾಗುತ್ತ ಹೋದೆ, ನನ್ನ ಕಣ್ಣ ಮುಂದಿನ ಲೋಕ ಹೇಗೆ ಬದಲಾಗುತ್ತ ಹೋಗುತ್ತಿದೆ ಎಂಬುದನ್ನೆಲ್ಲ ನಾನು ಮತ್ತೆ ಕುಳಿತು ನೋಡುವ ಅವಕಾಶವನ್ನು ಈ ಕೃತಿ ಕೊಟ್ಟಿದೆ" (ಮುನ್ನುಡಿ). ಅರವತ್ತೊಂದರ ಹರೆಯದ ನಾ.ಮೊಗಸಾಲೆಯವರ ಜೀವನವೃತ್ತಾಂತಕ್ಕೆ ಅವರ ಜ್ಞಾಪಕ ಶಕ್ತಿಯ ಸತ್ತ್ವವು ವಿಶಾಲವಾದ ಒಂದು ತಳಹದಿಯನ್ನೇ ಒದಗಿಸಿದೆ. ತನ್ನ ಇರುವಿನ ಅರಿವು ಮತ್ತು ಅರಿವಿನ ಇರುವು ಇವೆರಡನ್ನೂ ಅಭೇದಗೊಳಿಸಿ ಅವಲೋಕಿಸುವ ಮೊಗಸಾಲೆಯವರ ಪ್ರತಿಭೆ ಆತ್ಮವೃತ್ತಾಂತವನ್ನು ಒಂದು ಕಾದಂಬರಿಯಷ್ಟೇ ಲಲಿತ ಸಾಹಿತ್ಯವಾಗಿಸಿದೆ.

ನಾಲ್ಕು ಅಧ್ಯಾಯಗಳಲ್ಲಿ ನಿರೂಪಣೆಗೊಂಡ ಆತ್ಮವೃತ್ತಾಂತಕ್ಕೆ ಮೊಗಸಾಲೆಯವರು ಇಟ್ಟ ಹಸರು: 'ಬಯಲು ಬೆಟ್ಟ' ಅವರ ಸ್ವಭಾವಕ್ಕೂ ಆ ಸ್ವಭಾವದಿಂದ ವಿಕಸಿತಗೊಂಡ ಅವರ ಪ್ರಜ್ಞೆಗೂ ಒಂದು ಸಮರ್ಪಕ ರೂಪಕ. 'ಹೊಳೆಯ ಮೇಲೆ ಮಳೆ', 'ಹೊಲಕೆ ಹರಿದ ನಾಲೆ', 'ಬಿತ್ತಿ ಬೆಳೆದ ಬೆಳೆ' ಹಾಗೂ 'ಬೆಟ್ಟದ ತಪ್ಪಲಿನ ನೆರಳಲ್ಲಿ ನಿಂತು' ಈ ನಾಲ್ಕು ಭಾಗಗಳು 'ಬಯಲು ಬೆಟ್ಟ'ದ ರೂಪಕವನ್ನು ಅನುಸರಿಸುವ ಮನೋಜ್ಞ ಕಲ್ಪನೆಗಳಾಗಿವೆ.

'ಹೊಳೆಯ ಮೇಲೆ ಮಳೆ', ಮೊಗಸಾಲೆಯವರ ಜೀವನ ಪ್ರವಾಹದ ಆರಂಭವನ್ನು ಕಲ್ಪಿಸುತ್ತದೆ. 'ಹೊಳೆ' ಗೆ 'ಮಳೆ'ಯ ಹಂಗು ಬೇಕೇಬೇಕು. ಕೋಳ್ಯೂರಿನ 'ಮೊಗಸಾಲೆ' ಎನ್ನುವ ಕುಟುಂಬದ ಹೊಳೆಯ ಹರಿವಿಗೆ ಮಳೆಯಾಗಿ ಬಂದು ಸೇರಿದ್ದು ನಾರಾಯಣ ಎಂಬ ಒಂದು ಬಿಂದು, ಹನಿ. ನಾರಾಯಣನೆಂಬ ಜೀವಕ್ಕೆ ದೇಹ ಮತ್ತು ಪರಿಸರವನ್ನು ಒದಗಿಸಿದ ಮೊಗಸಾಲೆ ಕುಟುಂಬ (ಮನೆ)ದಕತೆ, ಅಧ್ಯಾಯ 1ರಲ್ಲಿ ಪರೋಕ್ಷವಾಗಿ (ಹಿಮ್ಮಿಂಚು ತಂತ್ರದಿಂದ) ನಿರೂಪಿತವಾಗಿದೆ. "ಇನ್ನೂ ಐದು ತುಂಬದ, ವಿಠಲಭಟ್ಟರ ಮೂರನೆಯ ಮಗನಾದ ನನಗೆ, ಎಲ್ಲರೂ ಅಳುವುದೇಕೆ, ಎಂದು ಆತಂಕ. ನಾನೂ ಇತರರಂತೆ ಅತ್ತೆ, ಆದರೆ ಅದು ಸಹಜವಾದ ಅಳು ಆಗಿರದ ಕಾರಣ, ಪ್ರೀತಿಯ ಪುಟ್ಟತ್ತೆಯ ತೊಡೆಯೇರಿ

'ಯಾಕೆ ಅಳುತ್ತೀರಿ?' ಎಂದೆ, ಅನಿವಾರ್ಯವಾಗಿ.

"ನಿನ್ನ ಅಪ್ಪ ಇನ್ನಿಲ್ಲ ಮಗೂ" ಎಂದರು ಅವರು. ನನಗೆ ಅದು ಅರ್ಥ ಆಗಲಿಲ್ಲ. "ಇನ್ನಿಲ್ಲ ಅಂದರೆ ಏನು?" ಎಂದೆ ಮತ್ತೆ. ಆಕೆ ನಯವಾಗಿ ನನ್ನನ್ನ ತೊಡೆಯಿಂದ ಇಳಿಸಿ "ಹೋಗು, ದೇವರಿಗೆ ಜಾಮಿ ಮಾಡು, ಆಮೇಲೆ ಹೇಳುತ್ತೇನೆ" ಎಂದರು ನಯವಾಗಿ.

ನಾನೊಬ್ಬನೇ ಹೋಗಿ ದೇವರಿಗೆ ಈಗ ಯಾಕೆ ಜಾಮಿ ಮಾಡಬೇಕು, ಅನಿಸಿತು ನನಗೆ........ (ಪು.18)

ನೆನಪಿನ ಈ ನಿರೂಪಣೆಯಲ್ಲಿ, ಲೇಖಕನ ಪ್ರಜ್ಞೆ ವಾಸ್ತವಕ್ಕೆ ತೆರೆದುಕೊಂಡಿದ್ದರ ಅನುಭವ ಇದೆ. ಅಲ್ಲಿಯವರೆಗಿನ ಕಥನ, ಲೇಖಕ ತನ್ನ ಹಿರಿಯರಿಂದ ಕೇಳಿ ತಿಳಿದುದರ ದಾಖಲೆ. ಅಪ್ಪನ ಸಾವಿನ ಆ ಗಳಿಗೆ, ನಾರಾಯಣನನ್ನು ಪರಿಸರಕ್ಕೆ ದೂಡುತ್ತದೆ. ದೇವರಿಗೆ ನಾನೊಬ್ಬನೇ ಈಗ ಯಾಕೆ ಜಾಮಿ ಮಾಡಬೇಕು, ಎನ್ನುವ ಪ್ರಶ್ನೆಯ ನಾರಾಯಣನಿಗೆ ತನಗೊಂದು ವ್ಯಕ್ತಿತ್ವವಿದೆ ಮತ್ತು ಅದಕ್ಕೆ ವಿಶಿಷ್ಟ ಅಸ್ತಿತ್ವವಿದೆ ಎಂಬುದರ ಅಭಿವ್ಯಕ್ತಿ ರೂಪ. ಸಾವಿನ ಬಗೆಗಿನ ಪ್ರಶ್ನೆ ಬದುಕಿನ ಅರ್ಥ ಶೋಧನೆಯ ಆರಂಭ. ಅತ್ತೆಯಿಂದ ನಾರಾಯಣನಿಗೆ ಈ ಸತ್ಯದ ಬೋಧೆ ಆಗಿದೆ; ಬೋಧವಾದ ಮೇಲೆ ಹುಟ್ಟು ಬದುಕು ಸಾವು ಇವುಗಳ ಬಗ್ಗೆ ಕುತೂಹಲ ಆರಂಭವಾಗಿದೆ. ಭಾಷೆಯ ಮೂಲಕ ತನ್ನನ್ನು ಲೋಕಕ್ಕೆ ತೋರಿಸಿಕೊಳ್ಳಬೇಕೆಂಬ ನಾರಾಯಣನ ಪ್ರಜ್ಞೆ, ಸುಪ್ತವಾಗಿ ನೆಲೆಗೊಂಡದ್ದು ಈಗಳಿಗೆಯಲ್ಲಿ. ಮುಂದೆ, ಉಡುಪಿಯಲ್ಲಿ ಆಯುರ್ವೇದ ವಿದ್ಯಾರ್ಥಿಯಾಗಿದ್ದಾಗ ನಾರಾಯಣಭಟ್ಟ, ಪ್ರಬಂಧ, ಕವಿತೆ ಬರೆಯಲಾರಂಭಿಸಿದ ಆ ಪ್ರಜ್ಞಾ ವಿಕಾಸದ ಮೊದಲ ಹೆಜ್ಜೆಗಳು.

ತನ್ನನ್ನು, ತನ್ನ ಸುತ್ತಣ ವ್ಯಕ್ತಿಗಳನ್ನು ಪ್ರತ್ಯಕ್ಷವಾಗಿ ನೋಡಲಾರಭಿಸಿದ ನಾರಾಯಣನಿಗೆ, ತನಗೊಂದು ಸಂವೇದನಶೀಲ ನೋಟವಿದೆ ಎಂಬುದು ಮನವರಿಕೆಯಾದುದು ಅಧ್ಯಾಯ ಎರಡರಲ್ಲಿ ನಿರೂಪಣೆಗೊಂಡ ನೆನಪಿನಿಂದ. ತೀರಿಕೊಂಡ ತಂದೆಯ ಶವವನ್ನು ಕಟ್ಟಿಗೆಯ ರಾಶಿಯ ಮೇಲೆ ಮಲಗಿಸಿದ್ದುದನ್ನು ಕಂಡ ನಾರಾಯಣ, 'ಅಯ್ಯೋ'ಅಂದು ಕೊಂಡದ್ದು, ಕಟ್ಟಿಗೆ ರಾಶಿಗೆ ಬೆಂಕಿ ಹಚ್ಚಿದಾಗ ಚೀರಿದ್ದು– ಸಂವೇದನಶೀಲ ಪ್ರಜ್ಞೆಯ ಗುರುತುಗಳು. ಮುಗ್ಧ ಸಂವೇದನೆಯ ಐದು ವರುಷದ ನಾರಾಯಣ, "ಅಪ್ಪನನ್ನ ದೇವರೇ ಕೊಂದದ್ದು ಅಂದಿದ್ದಾರೆ ಅಮ್ಮ, ಅದಕ್ಕೆ" ಎಂದು ಪುಟ್ಟತ್ತೆಗೆ ಅನ್ನುವ ಮಾತು ಸಹಜ ಸುಂದರ ನೆನಪಾಗಿ ನಮ್ಮ ಅನುಭವಕ್ಕೆ ಬರುವುದಿಲ್ಲ. ದೇವರಿಗೆ ಜಾಮಿ (ನಮಸ್ಕಾರ) ಮಾಡದ ಹುಡುಗ, ಎಷ್ಟೊಂದು ಚುರುಕಾಗಿದ್ದಾನೆ; ಪ್ರೌಢನಾಗಿದ್ದಾನೆ – ಎಂದೂ ಗ್ರಹಿಸಲಿಕ್ಕೆ ಕಷ್ಟವಾಗುತ್ತದೆ. ದೇವರ ನಿರ್ಘೃಣತೆ ಬಾಲಕನನ್ನು ತಟ್ಟಿರಬೇಕು. ಸಖೇದಾಶ್ಚರ್ಯ ಚಕಿತಗೊಳಿಸಿರಬೇಕು. ಆದರೆ, ಸ್ಪಷ್ಟ ಮತ್ತು ದಿಟ್ಟ ವಾಕ್ಯರೂಪದಲ್ಲಿ ಅವನನ್ನು ಪ್ರಚೋದಿಸಿತೇ ಎಂದು ಅನುಮಾನ ಆಗುತ್ತದೆ. ಇಂತಹ ಕೆಲವು ನೆನಪುಗಳ ಸಂದರ್ಭಗಳ ಚಿತ್ರಣ ಅಲ್ಲಲ್ಲಿ ಅತಾರ್ಕಿಕ, ಅಸಂಭವನೀಯವಾಗಿ ಅನ್ನಿಸಿದಾಗ ಮೊಗಸಾಲೆಯವರು ಸತ್ಯವನ್ನು ಉತ್ಪ್ರೇಕ್ಷೆಗೊಳಿಸುತ್ತಿದ್ದಾರೆ ಎಂಬ ಸಮಾಧಾನ ನಮ್ಮನ್ನ ಕೃತಿ ವಾಚನಕ್ಕೆ ಮುನ್ನೋಡಿಸುತ್ತದೆ.

"ಹೊಲಕ್ಕೆ ಹರಿದ ನಾಲೆ" (ಭಾಗ2) ಕುಟುಂಬ, ಊರು ತನ್ನವರ ಸೀಮಿತ ನೆಲೆಯಿಂದ ನಾರಾಯಣನನ್ನು ಉಡುಪಿಯ ಹೊರ ಪ್ರಪಂಚಕ್ಕೆ ಹರಿದು ಹೊಮ್ಮುವಂತೆ ಮಾಡಿದ ನಿರೂಪಣೆ. ಸಂಕುಚಿತ ಆರ್ಥಿಕ ಪರಿಸರದಿಂದ ಮಹತ್ತ್ವಾಕಾಂಕ್ಷೆಯ ಸಾಮಾಜಿಕ ವಲಯಕ್ಕೆ ವರ್ಗಾಂತರವಾಗುವ ಸಂದರ್ಭಗಳ ಚಿತ್ರಣ ಹೃದಯಸ್ಪರ್ಶಿಯಾಗಿದೆ. ಈ ಭಾಗಕ್ಕೆ ಸ್ವಲ್ಪ ಮುಂಚಿತವಾಗಿ ಬರುವ, ಊಟ ವಸತಿಗಾಗಿ ಉಡುಪಿಮಠದಲ್ಲಿ ಪ್ರವೇಶ ಪಡೆಯುವ ಸನ್ನಿವೇಶದ ನಿರ್ವಹಣೆ, ಕವಿ, ಕಾದಂಬರಿಕಾರ ಮೊಗಸಾಲೆಯವರ ಕಲಾತ್ಮಕ ನೋಟದ ಹೃದಯಸ್ಪರ್ಶಿ ಶೈಲಿಗೆ ಉದಾಹರಣೆ. ಯೌವನದ ದಿನಗಳನ್ನು ಶಿಸ್ತು, ಸಂಯಮಗಳ ಚೌಕಟ್ಟಿನಲ್ಲಿ ಬುದ್ಧಿವಂತ ಹಿರಿಯರ, ಗೆಳೆಯರ ಸಹವಾಸದಲ್ಲಿ ನಿರ್ವಹಿಸಿದ ರೀತಿ, ಅದರ ಆದರ್ಶ ವ್ಯಕ್ತಿತ್ವ ರೂಪುಗೊಳ್ಳಲಿಕ್ಕೆ ಆಧಾರವಾಗಿದೆ. ಮೊಗಸಾಲೆಯವರು ತಮ್ಮ ಸಂವೇದನೆಗಳನ್ನು ಸೂಕ್ಷ್ಮವಾಗಿ, ಪ್ರಜ್ಞೆಯನ್ನು ಮಾನವೀಯವಾಗಿ ರೂಡಿಸಿಕೊಳ್ಳುವುದಕ್ಕೆ ತಕ್ಕುದಾದ ಸ್ಥಿತಿ ಗತಿಗಳನ್ನು ನಿರ್ಮಿಸಿಕೊಳ್ಳುತ್ತಿದ್ದರೆಂಬುದಕ್ಕೆ ಇಲ್ಲಿ ಅನೇಕ ನಿದರ್ಶನಗಳಿವೆ. ಸಾಮಾಜಿಕ ಜೀವನದ ಹೊಲಕೆ, ಉತ್ಪಾದಕ (ಪರಿಪೂರಕ) ಶಕ್ತಿ ಯಾಗುವಂತೆ ತನ್ನ ಜೀವನದ ಹೊಳೆಯನ್ನು ತಿಳಿವಳಿಕೆಯ ನಾಲೆ (ಕಾಲುವೆ) ಮೂಲಕ ಹರಿಸಿದ ಅನೇಕ ಸಂಗತಿಗಳು ಇಲ್ಲಿವೆ.

ಬಿತ್ತಿ ಬೆಳೆದ ಬೆಳೆ (ಮೂರನೇ ಭಾಗ)ಯು ಮೊಗಸಾಲೆಯವ ವೃತ್ತಿ ಜೀವನ ಮತ್ತು ಕಾಂತಾವರದ ಸಾಂಸ್ಕೃತಿಕ ಜೀವನದ ನೆನಪುಗಳ ಗಣಿ. ವೈದ್ಯಕೀಯ ಸೇವೆಯನ್ನು ಕುಗ್ರಾಮದಲ್ಲಿ ಸಾರ್ಥಕಗೊಳಿಸಿಕೊಳ್ಳುವುದರ ಕಷ್ಟ ನಷ್ಟಗಳ ವಿವರಣೆಗಳು ಮತ್ತು ಗ್ರಾಮವನ್ನು ತನ್ನ ಸಾಂಸ್ಕೃತಿಕ ದೃಷ್ಟಿಗೆ ತಕ್ಕಂತೆ ಬದಲಿಸಬೇಕೆಂಬ ಹಟದ ಕತೆಗಳು ಇಲ್ಲಿವೆ. ಸ್ವಭಾವತಃ ಸಜ್ಜನ, ಸಾತ್ತ್ವಿಕ ಸಂವೇದನಶೀಲನಾದ ವ್ಯಕ್ತಿಯ ವ್ಯಕ್ತಿತ್ವವಿಕಾಸವಾದುದೇ ವಿಷಮ ಸಂಗತಿ, ಸನ್ನಿವೇಶಗಳನ್ನು ಧೀಮಂತಿಕೆಯಿಂದ ಎದುರಿಸಿದಾಗ ಮತ್ತು ವಿಧಾಯಕ ಬುದ್ದಿಯಿಂದ ಇಂದು ನಾಳೆಗಳನ್ನು ಕಟ್ಟಿಕೊಳ್ಳುವ ಸಂಕಲ್ಪದಿಂದ ಮೊಗಸಾಲೆಯವರು, ಪರಿಸರದ ಅತ್ಯುತ್ತಮ ಶಕ್ತಿಗಳನ್ನು ಪ್ರಾಮಾಣಿಕ ಯುಕ್ತಿಗಳನ್ನು ಬಳಸಿಕೊಂಡು ಊರನ್ನು ಬೆಳೆಸುತ್ತಾರೆ.

ಕೊನೆಭಾಗ "ಬೆಟ್ಟದ ತಪ್ಪಲಿನ ನೆರಳಲ್ಲಿ ನಿಂತು" ನಿವೃತ್ತನಾದ, ಆದರೆ ಪ್ರವೃತ್ತಿಯಿಂದ ಎಂದೂ ವಿಶ್ರಾಂತಿ ಬಯಸದ ಚೈತನ್ಯದ ಕಥನ. ಕೃತಜ್ಞತೆಯ ಬುದ್ಧಿ ಮೊಗಸಾಲೆಯವರನ್ನು ಜಾಗೃತಗೊಳಿಸಿದೆ. ತಾನು ಉಳಿದು, ಬೆಳೆದು ನಿಂತುದಕ್ಕೆ ಅನ್ಯರ ಸಹಕಾರ, ಸಹಯೋಗಗಳೇ ಮೂಲವೆಂಬ ಕೃತಜ್ಞಾ ತಿಳಿವಳಿಕೆ ಅವರದು. ಕಟ್ಟುವ, ಗುರಿಮುಟ್ಟುವ ತನ್ನ ಹಟ ಈಡೇರಿದುದರ ಧನ್ಯತೆಯೂ ಇಲ್ಲಿದೆ.

18799

ಮೊಗಸಾಲೆಯವರ ವ್ಯಕ್ತಿತ್ವ ಸ್ವತಃ ವಿಕಸಿತ ಹಾದಿಯನ್ನು ಅರಸಿ ಹೊರಟದ್ದು, ತನ್ನ ಸ್ವಭಾವಕ್ಕೆ ಅನುಗುಣವಾದ ಗುರಿಯನ್ನು ಅದು ತಲುಪಿದ್ದು, 'ಬಯಲ ಬೆಟ್ಟ'ದಲ್ಲಿ ಚಿತ್ರಿತವಾದ ಬಗೆ ಹಾರ್ದಿಕವೂ ವಾಚನೀಯವೂ ಆಗಿದೆ.

O



# ಹಸಿರು ಆತ್ಮಕಥೆ - ಬಯಲುಬೆಟ್ಟ

ಡಾ॥ಎಸ್.ಪಿ.ಪದ್ಮಪ್ರಸಾದ್

ಡಾ.ನಾ.ಮೊಗಸಾಲೆಯವರ ಆತ್ಮಕಥನವೆಂದರೆ ಅವರನ್ನು ಬಲ್ಲವರೆಲ್ಲ ಕುತೂಹಲದಿಂದ ನಿರೀಕ್ಷಿಸುವ ಒಂದು ಕೃತಿಯಾಗಿರುತ್ತದೆ. ಅದಕ್ಕೆ ಕಾರಣಗಳು ಹಲವು. ಅವರೊಬ್ಬ ಒಳ್ಳೆಯ ಲೇಖಕ ಹಾಗೂ ಕವಿಯಾಗಿರುವುದು, ಕನ್ನಡದ ಒಳ್ಳೆಯ ಕಾರ್ಯಕರ್ತನಾಗಿರುವುದು, ಕಾಂತಾವರದಂಥ ಒಂದು ಕಗ್ಗಾಡಿನ ಹಳ್ಳಿಯಲ್ಲಿ ಬಾಳಿಯೂ ಅಲ್ಲಿ ತಾವು ಸಂಘಟಿಸಿದ ಕನ್ನಡ ಸಂಘದ ಹೆಸರು ರಾಜ್ಯಕ್ಕೆ ಸುಪರಿಚಿತವಾಗುವಷ್ಟು ಮಟ್ಟಿಗೆ ಅವರು ಅದನ್ನು ಹೇಗೆ ಜನಪ್ರಿಯ, ಜನಮಾನ್ಯಗೊಳಿಸಿದರು ಎಂಬ ಬಗ್ಗೆ ಅದರಲ್ಲಿ ಏನಾದರೂ ಮಾಹಿತಿ ಸಿಗಬಹುದು ಎಂಬ ನಿರೀಕ್ಷೆ; ಸಾಕಷ್ಟು ದೊಡ್ಡ ಲೇಖಕರ ಬಳಗದ ಸಂಪರ್ಕ ಹೊಂದಿರುವ ಇವರ ಕೃತಿಯಲ್ಲಿ ಅನೇಕ (ಹಾಗೂ ಅನೇಕರ) ಸ್ವಾರಸ್ಯಕರ ಸಂಗತಿಗಳು ಸಿಗಬಹುದೆಂಬ ಸಹಜ ನಿರೀಕ್ಷೆ, ಎಲ್ಲಕ್ಕಿಂತ ಮಿಗಿಲಾಗಿ – ದಕ್ಷಿಣ ಕನ್ನಡದ ಗ್ರಾಮೀಣ ಜನಜೀವನ, ಸಂಪ್ರದಾಯಗಳು– ಇತ್ಯಾದಿಗಳ ಬಗ್ಗೆ ವಿಪುಲ ಮಾಹಿತಿ ಸಿಗುವ ಆಕರ ಅದಾಗಿರುವ ಸಾಧ್ಯತೆ – ಹೀಗೆ ಹಲವಾರು ಸಂಗತಿಗಳು ಮೊಗಸಾಲೆಯವರಂಥ ಸಜ್ಜನ ಮಿತ್ರರ ಆತ್ಮವೃತ್ತಾಂತವನ್ನು ಕುತೂಹಲದಿಂದ ಎದುರುನೋಡುವಂತೆ ಮಾಡುತ್ತವೆ.

ಮತ್ತು – 'ಬಯಲಬೆಟ್ಟ' ವೆಂಬ ಅವರ ಆತ್ಮಕತೆ ಈ ಯಾವ ನಿರೀಕ್ಷೆಯನ್ನೂ ಹುಸಿಗೊಳಿಸುವುದಿಲ್ಲ. ಅವೆಲ್ಲಕ್ಕಿಂತ ಇನ್ನೂ ಹೆಚ್ಚಿನದೊಂದಷ್ಟನ್ನು, ಅಂದರೆ ಉತ್ತಮ ಓದು ನೀಡುವ ನಿರುಪಾಧಿಕವಾದ ಸಂತೋಷವನ್ನೂ ಬೊಗಸೆಬೊಗಸೆಯಾಗಿ ನೀಡುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಹಲವಾರು ಸಾರ್ವಜನಿಕ ವ್ಯಕ್ತಿಗಳ ಆತ್ಮಕಥೆಗಳು ಈಗಾಗಲೇ ಬಂದಿವೆ. ಅವು ಸಾಕಷ್ಟು ಚೆನ್ನಾಗಿಯೂ ಇವೆ. ಅವುಗಳ ನಡುವೆಯೂ ಡಾ.ನಾ.ಮೊಗಸಾಲೆಯವರ ಈ ಆತ್ಮಕಥೆ (ಇದನ್ನು ಅವರು ಕೇವಲ 'ವೃತ್ತಾಂತ' ಎಂದು ಕರೆದಿದ್ದಾರೆ.) ಕೆಲವು ಸ್ವಾರಸ್ಯಕರ ವಿಷಯಗಳನ್ನು ನಿರೂಪಿಸುತ್ತಾ ಓದುಗರಿಗೆ ಹೊಸದೊಂದಿಷ್ಟು ಸಂಗತಿಗಳನ್ನು ಪ್ರಯೋಜನಕಾರಿಯಾದ ರೀತಿಯಲ್ಲಿ ತೆರೆದಿಡುತ್ತದೆ. ಬಹುಶಃ ಮೊಟ್ಟಮೊದಲಬಾರಿಗೆ ಕಾಸರಗೋಡು ಪರಿಸರದಲ್ಲಿನ ಹವ್ಯಕ ಬ್ರಾಹ್ಮಣರ ಪಾರಂಪರಿಕ ನಂಬಿಕೆಗಳು, ಆಚರಣೆಗಳು, ಸಂಪ್ರದಾಯಗಳು ಇಲ್ಲಿ ದಾಖಲಿಸಲ್ಪಟ್ಟಿವೆ. ಸುಮಾರು 70 – 80 ವರ್ಷಗಳ ಹಿಂದಿನ ಆ ಎಲ್ಲ ಸಂಗತಿಗಳನ್ನು, ಅಂದರೆ ಲೇಖಕರ ಹಿರಿಯರು ನಂಬಿದ್ದ

ಸಂಗತಿಗಳು, ಅವರ ನಡವಳಿಕೆಗಳು ಹಾಗೂ ಆ ಕಾಲದ ಕಾಸರಗೋಡಿನ ಅರಣ್ಯ ಪರಿಸರ – ಇವೆಲ್ಲವುಗಳ ಚಿತ್ರಣ ಇಲ್ಲಿ ದೊರೆಯುತ್ತದೆ. ಆ ವಿವರಣೆಗಳನ್ನು ಕೊಡುವಾಗ ಈಗ ಬಹುಮಟ್ಟಿಗೆ ರೂಢಿಯಿಂದ ಮರೆಯಾಗಿಯೇ ಹೋಗಿರಬಹುದಾದ ಎಷ್ಟೋ ದೇಸೀ ಶಬ್ದಗಳು ಇಲ್ಲಿ ಮರುಹುಟ್ಟು ಪಡೆದಿರುವಂತೆನಿಸುತ್ತದೆ. ವಯಪ್ರೆ, ಎಲೆವಸ್ತ್ರ, ಅಯನ, ಕೊಡಿ (ಧ್ವಜಸ್ತಂಭ) – ಇವು ಇಂಥ ಶಬ್ದಗಳಲ್ಲಿ ಕೆಲವು.

ಈ ಆತ್ಮಕತೆ ಒಂದೇ ಸಂಪುಟವಾಗಿದ್ದರೂ ನಾಲ್ಕು ಭಾಗಗಳಾಗಿ ಲೇಖಕರು ವಿಭಾಗಿಸಿದ್ದಾರೆ. ಈ ಭಾಗಗಳಿಗೆ ಕ್ರಮವಾಗಿ –'ಹೊಳೆಯ ಮೇಲೆ ಮಳೆ', 'ಹೊಲಕ್ಕೆ ಹರಿದ ನಾಲೆ', 'ಬಿತ್ತಿಬೆಳೆದ ಬೆಳೆ', 'ಬೆಟ್ಟದ ತಪ್ಪಲಿನ ನೆರಳಲ್ಲಿ ನಿಂತು' – ಎಂದು ಸರಿಯಾದ ಶೀರ್ಷಿಕೆಗಳನ್ನಿಟ್ಟಿದ್ದಾರೆ.

ಮೊದಲ ಭಾಗದಲ್ಲಿ ಲೇಖಕರ ಬಾಲ್ಯಜೀವನ, ಕುಟುಂಬದ ಹಿರಿಯರು, ಆಗಿನ ಅಲ್ಲಿನ ಪರಿಸರದ ಚಿತ್ರಗಳಿವೆ. ಕಾಸರಗೋಡು ಪ್ರದೇಶದ ಕಾಡು, ಅಲ್ಲಿನ ಮಳೆ, ಆಗ ಇದ್ದ ಹುಲಿಯ ಹಾವಳಿ, ಹುಲಿಬೇಟೆ, ಯಕ್ಷಗಾನದ ಪ್ರಭೃತಿಗಳು, ಪ್ರಾಥಮಿಕ ಶಾಲೆಗೆ ಹೋಗಲು ಇದ್ದ ತೊಂದರೆಗಳು, ತೀರ ಚಿಕ್ಕಂದಿನಲ್ಲೇ ನಡೆದ ತಂದೆಯ ಸಾವು, ಪುಟ್ಟತ್ತೆ, ಮಾಪಣ್ಣನಂಥ ವ್ಯಕ್ತಿಗಳ ಆಪ್ತವೆನಿಸುವ ಚಿತ್ರಣ – ಇಂಥ ಅದೆಷ್ಟೋ ವಿಷಯಗಳು ಇಲ್ಲಿ ತುಂಬ ಸಹಜ ಶೈಲಿಯಲ್ಲಿ ನಿರೂಪಿತವಾಗಿವೆ. (ಪದ್ಯದ ವಿನಃ ಡಾ.ಮೊಗಸಾಲೆಯವರ ಯಾವುದೇ ಗದ್ಯಬರಹದಲ್ಲಿ ಈ ಸಹಜತೆ ತುಂಬ ಮುಖ್ಯವಾದ ಗುಣವಾಗಿ ಎದ್ದು ಕಾಣುತ್ತದೆ.) ಐದುನೂರು ಪುಟಗಳ ಈ ಆತ್ಮಕಥೆಯಲ್ಲಿ ಈ ಬಾಲ್ಯದ ಭಾಗವೇ 195 ಪುಟಗಳಷ್ಟಿದೆ. ಇದು ಮೊದಲಿಂದಲೂ ತಿಳಿದಿರುವ ಒಂದು ಅಂಶವನ್ನು ಪುನಃ ಸಾಬೀತು ಪಡಿಸುತ್ತದೆ. ಅದೆಂದರೆ – ಮನುಷ್ಯನಿಗೆ ತನ್ನ ಬಾಲ್ಯವೇ ಎಲ್ಲಕ್ಕಿಂತ ಆಪ್ತವಾದುದು ಎಂಬುದನ್ನು. ಅಷ್ಟೇ ಅಲ್ಲ, ಇಡೀ ಕೃತಿಯಲ್ಲಿ ತುಂಬ ಹಸಿರಾಗಿರುವ ಭಾಗವೂ ಅದೇ.

ಲೇಖಕರು ವಿದ್ಯಾಭ್ಯಾಸ ಮಾಡಲು ಪಟ್ಟ ಕಷ್ಟವನ್ನು, ಉಡುಪಿಯ ಮಠದಲ್ಲಿ ಅನ್ನ, ಆಶ್ರಯಗಳನ್ನು ಪಡೆಯಲು ಅಲ್ಲಿನ ವ್ಯವಸ್ಥಾಪಕರ ಕಾಲು ಹಿಡಿದು ಬೇಡಿದ ಪ್ರಸಂಗ – ಇವನ್ನೆಲ್ಲ ನಿರುದ್ವಿಗ್ನವಾಗಿ ವಿವರಿಸಿದ್ದಾರೆ. ಅದನ್ನು ಓದುವಾಗ ನಮಗೆ ಒಂದು ಕ್ಷಣ ಆಶ್ಚರ್ಯವಾಗುತ್ತದೆ. 'ಎಂಥ ದೀನ, ಅಸಹಾಯಕ ಅವಸ್ಥೆಗಳನ್ನೆಲ್ಲ ಈ ಮನುಷ್ಯ ದಾಟಿ ಬಂದಿದ್ದಾನೆ' ಎಂದು. ಇದೇ ಕಾರಣಕ್ಕೆ ಲೇಖಕರ ಬಗ್ಗೆ ಮೆಚ್ಚುಗೆಯೂ ಆಗುತ್ತದೆ. ಬ್ರಾಹ್ಮಣರ ಬದುಕು ಸುಖವಾಗಿ ಕಳೆದುಬಿಡುತ್ತದೆ– ಎಂದು ತಿಳಿದವರು ಹಲವರಿದ್ದಾರೆ. ಅದು ಹಾಗೇನೂ ಅಲ್ಲ ಎಂಬುದನ್ನು ಸಾಬೀತುಪಡಿಸಲು ಇಂಥ ಎಷ್ಟೋ ನೈಜ ಕತೆಗಳಿವೆ.

ಲೇಖಕರು ಉಡುಪಿಯಲ್ಲಿ ಆಯುರ್ವೇದ ಕೋರ್ಸಿಗೆ ಸೇರುವವರೆಗಿನ ಕತೆ ಈ ಮೊದಲಭಾಗದಲ್ಲಿ ಬಂದಿದೆ.

ಎರಡನೆ ಭಾಗ – 'ಹೊಲಕೆ ಹರಿದ ನಾಲೆ'. ಇಲ್ಲಿ ಲೇಖಕರ ವೈದ್ಯ ಓದಿನ ಆರಂಭದಿಂದ ಹಿಡಿದು, ಅದನ್ನು ಮುಗಿಸಿ, ತಮ್ಮ ಸ್ವಂತ ಊರಿನಲ್ಲಿ ಸ್ವಲ್ಪಕಾಲ ಪ್ರಾಕ್ಟೀಸು ಮಾಡಿ, ಅನಂತರ ದೂರದ ಕಾಂತಾವರಕ್ಕೆ ಸರ್ಕಾರಿ ಆಸ್ಪತ್ರೆಯ ವೈದ್ಯರಾಗಿ ನೇಮಕಗೊಂಡು ಬಂದು ಸೇರಿಕೊಳ್ಳುವವರೆಗಿನ ಎಲ್ಲ ಆಗುಹೋಗುಗಳ ವಿವರವಾದ ನಿರೂಪಣೆಯಿದೆ. ಒಂದುನೂರಾ ಐದು ಪುಟಗಳ ವ್ಯಾಪ್ತಿಯ ಈ ಭಾಗದಲ್ಲಿಯೂ, ಹಿಂಜರಿಕೆ ಸ್ವಭಾವದ, ಭವಿಷ್ಯದ ಬಗ್ಗೆ

ಆತಂಕದಿಂದಲೇ ದಿನತಳ್ಳುವ, ತಗ್ಗಿ ನಡೆಯುವ ಕಥಾನಾಯಕ ಕಾಣುತ್ತಾರೆ. ಉಡುಪಿ ಮಠಗಳಲ್ಲಿ ಛಾತ್ರರಾಗಿ ವಾಸಿಸುವ ವಿದ್ಯಾರ್ಥಿಗಳು ಪಾಲಿಸಬೇಕಾದ ನಿಯಮಗಳು, ನಲವತ್ತೈದು ವರ್ಷಗಳ ಹಿಂದೆ ಇದ್ದ ಉಡುಪಿ ಮಠಗಳ ಪರಿಸರ, ಆಗ ಚಾಲ್ತಿಯಲ್ಲಿದ್ದ ಸಂಪ್ರದಾಯಗಳು, ಈಗ ಅವು ತುಸು ಸಡಿಲಾಗಿರುವ ರೀತಿ – ಇವೆಲ್ಲವುಗಳ ಪರಿಚಯವಾಗುವುದು ಇಲ್ಲಿಯೇ. ಉಡುಪಿ ಮಠಗಳಲ್ಲಿರುತ್ತಿದ್ದ ವಿದ್ಯಾರ್ಥಿಗಳು ಪಾಲಿಸಬೇಕಾಗಿದ್ದ ನಿಯಮಗಳೆಂಥಹವಿತ್ತು, ಅವರ ಮೇಲೆ ಮೇಲ್ವಿಚಾರಕರು ನಡವಳಿಕೆಗಳಿಗೆ ಸಂಬಂಧಿಸಿದಂತೆ ಎಂಥ ಹದ್ದಿನ ಕಣ್ಣು ಇಟ್ಟಿರುತ್ತಿದ್ದರು ಎಂಬುದರ ವಿವರ ಓದುಗರಿಗೆ ಇಷ್ಟೊಂದು ದೀರ್ಘವಾಗಿ ಸಿಗುವುದು ಬಹುಶಃ ಇದೊಂದೇ ಕೃತಿಯಲ್ಲಿ ಎನಿಸುತ್ತದೆ. ಆ ದಿನಗಳಲ್ಲಿ ಬಹುಶಃ ಎಲ್ಲ ಧರ್ಮದವರೂ ತಮ್ಮ ವಿದ್ಯಾರ್ಥಿನಿಲಯಗಳಲ್ಲಿನ ವಿದ್ಯಾರ್ಥಿಗಳ ನಡವಳಿಕೆಗಳ ಮೇಲೆ ಹೀಗೊಂದು ಕಣ್ಣಿಟ್ಟಿರುತ್ತಿದ್ದರು. ಅದು ಒಳ್ಳೆಯದೇ ಆಗಿತ್ತು. ಈಗ ಯಾವ ಧರ್ಮದವರಲ್ಲೂ ಅಷ್ಟು ಬಿಗಿ ಇಲ್ಲ. ಯಾಕೆಂದರೆ ಯಾರ ಮಾತನ್ನೂ ಯಾರೂ ಕೇಳುವುದಿಲ್ಲ ಇಂದು.

ಈ ಭಾಗದಲ್ಲಿನ ಇನ್ನೊಂದು ಗಮನಾರ್ಹ ಓದು ಎಂದರೆ ಲೇಖಕರು ಕೊಡುವ ತಮ್ಮ ಸಹಾಧ್ಯಾಯಿಗಳ ವ್ಯಕ್ತಿಚಿತ್ರಗಳು. ಕೆ.ವಿ.ಭಟ್ಟ, ರಾಮಕೃಷ್ಣ ಆಚಾರ್ ಮೊದಲಾದ ಗೆಳೆಯರು, ಡಾ.ಸವಣೂರು, ಡಾ.ನಾಗೇಶ ರಾವ್‌ರಂತಹ ವೈದ್ಯ ಪ್ರಾಧ್ಯಾಪಕರ ವ್ಯಕ್ತಿ ಚಿತ್ರಗಳಿಲ್ಲಿ ಸೊಗಸಾಗಿ ಮೂಡಿ ಬಂದಿವೆ. ಈ ಪರಿಸರದಲ್ಲಿ ವೈದ್ಯಕೀಯ ವಿದ್ಯಾಭ್ಯಾಸವನ್ನು ಮುಂದುವರೆಸುತ್ತಲೇ ತಮ್ಮಲ್ಲಿ ಸಾಹಿತ್ಯಾಭಿರುಚಿ ಬೆಳೆದುಬಂದ ಬಗೆಯನ್ನೂ ವಿವರಿಸಿದ್ದಾರೆ ಲೇಖಕರು. ಅದೂ ಸ್ವಾರಸ್ಯವಾದ ಭಾಗವೇ. ಒಟ್ಟಾರೆ ಈ ಭಾಗದಲ್ಲಿ – ಮೆಲ್ಲಗೆ, ಆದರೆ ದೃಢವಾಗಿ ವಿಕಾಸವಾಗುತ್ತಾ ಬಂದ ಚೇತನವೊಂದನ್ನು ಕಾಣುತ್ತೇವೆ.

ಮೂರನೆಯ ಭಾಗವೇ – 'ಬಿತ್ತಿ ಬೆಳೆದ ಬೆಳೆ'. 145 ಪುಟಗಳ ವಿಸ್ತಾರದ ಈ ಭಾಗದಲ್ಲಿ ಲೇಖಕರ ಬದುಕಿನ ಬಹುಮುಖ್ಯವಾದ ದಿನಗಳ, ಆಗುಹೋಗುಗಳ, ಘಟನಾವಳಿಗಳ ವಿವರ ಬಂದಿದೆ. ಕಾಂತಾವರದಲ್ಲಿ ಇವರು ವೈದ್ಯರಾಗಿ ಬಂದು ಸೇರಿದ್ದು, ತಾತ್ಕಾಲಿಕವೆಂದುಕೊಂಡ ಆ ಗ್ರಾಮವೇ ಅವರ ಇಡೀ ಬದುಕಿನ ಖಾಯಂ ಕರ್ಮಭೂಮಿಯಾಗಿ ಮಾರ್ಪಟ್ಟಿದ್ದು, ತಮ್ಮ ವಿವಾಹ, ಮಕ್ಕಳು, ಕನ್ನಡದ ಕೈಂಕರ್ಯವನ್ನು ಆರಂಭಿಸಿದ್ದು, ಕನ್ನಡ ಸಂಘದ ಸ್ಥಾಪನೆ, ಅದಕ್ಕೆ ದೊರೆಕೊಂಡ ಬಹುದೊಡ್ಡ ಲೇಖಕರ ಬಳಗದ ಸಾಹಚರ್ಯ – ಇಂಥ ಅನೇಕ ವಿಚಾರಗಳನ್ನು ಲೇಖಕರು ಇಲ್ಲಿ ನಿರೂಪಿಸುತ್ತಾ ಹೋಗುತ್ತಾರೆ. ಇಲ್ಲೆಲ್ಲ ನಾವು ಮೊಗಸಾಲೆಯವರ ಸ್ವಭಾವದ ಒಂದು ಲಕ್ಷಣವನ್ನು ಗುರುತಿಸುತ್ತೇವೆ. ಅದೆಂದರೆ – ತಮಗೆ ಯಾರೊಬ್ಬರಾಗಲೀ ನೋಯಿಸಿದರೆಂದು ಅವರು ಬರೆಯುವುದೇ ಇಲ್ಲ. ತಾವು ಗಮನಿಸಿದ ಸಾಹಿತಿಗಳಲ್ಲಿ ಕಂಡುಬರುವ ಸಣ್ಣತನದ ಬಗ್ಗೆಯಾಗಲೀ, ಭ್ರಮನಿರಸನದ ಬಗ್ಗೆಯಾಗಲೀ ಅವರು ಹೇಳುವುದಿಲ್ಲ. ಹಲವು ಲೇಖಕರು ತಮ್ಮ ಆತ್ಮಕಥೆಗಳಲ್ಲಿ ಅಂಥ ಪ್ರಸಂಗಗಳನ್ನು ವಿವರಿಸಿರುವುದನ್ನು ಕಾಣುತ್ತೇವೆ. ಅವರು ಹೇಳಿರುವುದರಲ್ಲಿ ತಪ್ಪೇನೂ ಇಲ್ಲ, ನಿಜ. ಆದರೆ ಅದನ್ನೂ ಹೇಳುವುದು ಬೇಡವೆನ್ನುವುದರಲ್ಲಿ ಹೆಚ್ಚಿನ ಸೌಜನ್ಯವಿದೆ. ಡಾ.ನಾರಾಯಣ ಮೊಗಸಾಲೆಯವರು ಅಂಥ ಸೌಜನ್ಯವನ್ನಿಲ್ಲಿ ಮೆರೆದಿದ್ದಾರೆ. ಅವರು ಹಾಗೆ ಹೇಳುವ ಒಂದೇ ಒಂದು ಪ್ರಸಂಗವೆಂದರೆ ಅವರ ಕವನವೊಂದು ಕಾಂತಾವರದ ಜನರಲ್ಲಿ

ಅಚಾತುರ್ಯದಿಂದ ಎಂಥ ರೊಚ್ಚನ್ನೆಬ್ಬಿಸಿಬಿಟ್ಟಿತ್ತು, ಹಾಗೂ ಅದನ್ನು ತಿಳಿಗೊಳಿಸಲು ತಾವೆಷ್ಟು ಶ್ರಮಪಡಬೇಕಾಯಿತೆಂಬುದನ್ನು ವಿವರಿಸಿರುವುದು. ಅದನ್ನು ಇಡಿಯಾಗಿ ಓದಿದಾಗ ನನಗನ್ನಿಸಿದ್ದು ಈ ಭೋಳೇ ಡಾಕ್ಟರದ್ದೇ ಹೆಡ್ಡತನ ಎಂದು. ಆ ಕವಿತೆಯ ಶೀರ್ಷಿಕೆಯನ್ನು ಬೇರೆಯಾಗಿಸಿಟ್ಟಿದ್ದಿದ್ದರೆ ಏನೂ ಗಲಾಟೆಯಾಗುತ್ತಿರಲಿಲ್ಲ. ಒಂದು ಗ್ರಾಮದ ಸಾಮಾನ್ಯ ಜನರೆಲ್ಲಾ ಸಾಹಿತಿಗಳಷ್ಟೇ ಪ್ರಬುದ್ಧವಾಗಿ ಅರ್ಥಮಾಡಿಕೊಳ್ಳಬೇಕೆಂದು ನಿರೀಕ್ಷಿಸಿದರೆ ಹೇಗಾಗುತ್ತದೆ?

ಇದೇ ಭಾಗದಲ್ಲೇ ಅವರ ಕೃತಿಗಳು ಪ್ರಕಟಗೊಂಡ ಸಂದರ್ಭ, ಅದಕ್ಕೆ ಒದಗಿದ ನೆರವು, ಪ್ರಕಾಶಕರಿಂದ ಆದ ಮೋಸ ಅಥವಾ ಸಹಕಾರ ಇವುಗಳನ್ನೂ ಮೊಗಸಾಲೆಯವರು ನೆನೆದಿದ್ದಾರೆ. ತಾವು ಮನೆಕಟ್ಟಲು ಪಟ್ಟ ಕಷ್ಟ, ಒಡವೆಗಳನ್ನು ಮಾರಿದ್ದು ಇವನ್ನೆಲ್ಲ ಓದುವಾಗ, ಅವರ ಗೆಳೆಯರಾದ ನನ್ನಂಥವರು ಮೊಗಸಾಲೆಯವರಿಗೆ ಬಹುಶಃ ಹೆಂಡತಿಯ ಊರಲ್ಲಿ ತೋಟ, ತುಡಿಕೆ ಸಿಕ್ಕಿದ್ದಿರಬೇಕು ಎಂದು ಇದುವರೆಗೂ ತಿಳಿದುಕೊಂಡಿದ್ದು ಸುಳ್ಳಾಯಿತಲ್ಲಾ ಎಂದು ನಿರಾಸೆಯಾಗುತ್ತದೆ.

ಕೊನೆಯ ಭಾಗ 'ಬೆಟ್ಟದ ತಪ್ಪಲಿನ ನೆರಳಲ್ಲಿ ನಿಂತು....'. ಇಡೀ ಕೃತಿಯ ಉಪಸಂಹಾರದಂತಿದೆ. ಕೇವಲ ಐವತ್ತು ಪುಟಗಳಷ್ಟು ವಿಸ್ತಾರವಾದ ಈ ಭಾಗ ಕೇವಲ ಮುಕ್ತಾಯದ ಸಾರಾಂಶ ಸಂಗ್ರಹ ಮಾತ್ರ ಮಾಡುವುದಿಲ್ಲ; ಬದಲಾಗಿ ತಮ್ಮ ಬದುಕಿನ ಶಾಂತ ಸಮಯದ ಆಗುಹೋಗುಗಳನ್ನು ತುಂಬ ಆಪ್ತವಾಗಿ ಪ್ರಸನ್ನತೆಯಿಂದ ನಿರೂಪಿಸುತ್ತಾರೆ. ಬದುಕಿನಲ್ಲಿ ಸೆಟಲ್ ಆಗಿರುವ ತಮ್ಮ ವಿನಯವಂತ ಮಕ್ಕಳ ಬಗ್ಗೆ, ಸುಶೀಲರಾದ ಸೊಸೆಯರ ಬಗ್ಗೆ, ಇತ್ತೀಚಿನ ಪ್ರಕಟಣೆಗಳ ಬಗ್ಗೆ ಪ್ರೀತಿಯಿಂದ ಇಲ್ಲಿ ಹೇಳಿಕೊಂಡಿದ್ದಾರೆ. ಎಲ್ಲಿಯೂ ಅತಿಶಯೋಕ್ತಿಯಾಗಲೀ, ಉತ್ಪ್ರೇಕ್ಷೆಯಾಗಲೀ ಇದೆ ಎಂದೆನಿಸುವುದಿಲ್ಲ. ಅವರು ನಿರೂಪಿಸುವ ಘಟನೆಗಳು, ಅಂಶಗಳು ನಮಗೂ ಪ್ರಿಯವೆನಿಸುತ್ತವೆ. ಅವರ ಕೌಟುಂಬಿಕ ನೆಮ್ಮದಿಯನ್ನು ತಿಳಿಯುವಾಗ – 'ಈ ಮನುಷ್ಯನ ಪುಣ್ಯ ಎಷ್ಟು ದೊಡ್ಡದು' ಎನಿಸುತ್ತದೆ. ಆದರೆ 'ಆ ಪುಣ್ಯ ಪುಕ್ಕಟೆ ಬಂದದ್ದಲ್ಲ, ಉದ್ದಕ್ಕೂ ನಿಷ್ಕಲ್ಮಶವಾಗಿ ಬದುಕಿದ್ದರ ಫಲವದು' – ಎಂದೂ ಅನಿಸುತ್ತದೆ.

ಒಟ್ಟಿನಲ್ಲಿ 'ಬಯಲ ಬೆಟ್ಟ' ಒಂದು ಸುಸಂಸ್ಕೃತ, ಸಂಭಾವಿತ ಜೀವದ ಸ್ವಗತದಂತಿದೆ. ಇಲ್ಲಿ ಎಲ್ಲಿಯೂ ರೋಷಾವೇಶವಿಲ್ಲ, ತಾತ್ಸಾರ, ಮತ್ಸರಗಳಿಲ್ಲ, ತನಗೆ ಸಿಗಬೇಕಾದ್ದು ಸಿಗಲಿಲ್ಲ ಎಂಬ ಹಪಹಪಿಕೆಯಿಲ್ಲ; ಬದುಕನ್ನು ಅದು ಬಂದ ಹಾಗೆ ಸ್ವೀಕರಿಸುತ್ತಾ ತನಗೆ ತಿಳಿದ ರೀತಿಯಲ್ಲಿ ಎಲ್ಲರೊಡನೊಂದಾಗಿ ಬದುಕಿದ ಲೇಖಕರೊಬ್ಬರ ನಿರ್ಮಲ ಚರಿತೆಯಿದು; ಎಲ್ಲರೂ ಓದಿ ಸಂತೋಷಿಸಬಹುದಾದದ್ದು.

O



# ‘ಬಯಲುಬೆಟ್ಟ’- ಒಂದು ಅವಲೋಕನ

ಡಾ॥ಬಸವರಾಜ್ ಡೋಣೂರ್

ಕನ್ನಡದಲ್ಲಿ ಆತ್ಮವೃತ್ತಾಂತಗಳ ಸಂಖ್ಯೆ ಬಹಳ ಕಡಿಮೆ. ಆತ್ಮವೃತ್ತಾಂತ ಅಥವಾ ಆತ್ಮಚರಿತ್ರೆ ಒಂದು ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ಬೆಳೆದು ಬಂದಿಲ್ಲವೆಂದು ಹೇಳಿದರೆ ಅವಸರದ ಅಥವಾ ಬೇಜವಾಬ್ದಾರಿ ಹೇಳಿಕೆಯಾಗದು. ಆದರೆ ಸಂಖ್ಯೆಯಲ್ಲಿ ಆತ್ಮಚರಿತ್ರೆಗಳು ಕಡಿಮೆ ಇದ್ದರೂ ಅವು ಓದುಗರ ಹಾಗೂ ವಿಮರ್ಶಕರ ಗಮನ ಸೆಳೆಯುವಲ್ಲಿ ಯಶಸ್ಸು ಕಂಡಿವೆ. ಮರಾಠಿಯಲ್ಲಿ ಪ್ರಕಟಗೊಂಡಿರುವ ಆತ್ಮಚರಿತ್ರೆಗಳಿಗೆ ಹೋಲಿಸಿದರೆ ಕನ್ನಡ ಆತ್ಮಚರಿತ್ರೆಗಳು ಬಹಳ ಸಪ್ಪೆಯಾಗಿ ಕಾಣುತ್ತವೆ. ಇದಕ್ಕೆ ಕಾರಣಗಳು ಇಲ್ಲದಿಲ್ಲ. ಆದರೆ ಈ ಕಾರಣಗಳನ್ನು ಪಟ್ಟಿ ಮಾಡುವುದಾಗಲೀ, ಅವುಗಳನ್ನು ವಿಶ್ಲೇಷಿಸುವುದಾಗಲೀ ಪ್ರಸ್ತುತ ಲೇಖನದ ಉದ್ದೇಶ ಅಲ್ಲ.

ಕುವೆಂಪುರವರ ‘ನೆನಪಿನ ದೋಣಿಯಲ್ಲಿ’, ಕಾರಂತರ ‘ಹುಚ್ಚು ಮನಸ್ಸಿನ ಹತ್ತು ಮುಖಗಳು’, ಶ್ರೀರಂಗರ ‘ರಂಗಕರ್ಮಿಯ ಆತ್ಮಜಿಜ್ಞಾಸೆ’, ಲಂಕೇಶರ ‘ಹುಳಿ ಮಾವಿನ ಮರ’, ಸಿದ್ಧಲಿಂಗಯ್ಯನವರ ‘ಊರು ಕೇರಿ’, ಮಾಲಗತ್ತಿಯವರ ‘ಗೌರ್ನಮೆಂಟ್ ಬ್ರಾಹ್ಮಣ’ ಮತ್ತು ಭೈರಪ್ಪನವರ "ಭಿತ್ತಿ" ಕನ್ನಡದಲ್ಲಿನ ಮಹತ್ವದ ಆತ್ಮಚರಿತ್ರೆಗಳಾಗಿವೆ. ಈ ಕೃತಿಗಳ ಸಾಲಿನಲ್ಲಿ ನಾ.ಮೊಗಸಾಲೆಯವರ ‘ಬಯಲುಬೆಟ್ಟ’ ಆತ್ಮವೃತ್ತಾಂತವನ್ನು ಸೇರಿಸಬಹುದು.

ಮೊಗಸಾಲೆ ಕನ್ನಡದ ಒಬ್ಬ ಪ್ರಜ್ಞಾವಂತ ಹಾಗೂ ಪ್ರತಿಭಾವಂತ ಲೇಖಕರಾಗಿ ಹೇಗೆ ರೂಪುಗೊಂಡರು ಮತ್ತು ಕನ್ನಡ ನಾಡು–ನುಡಿ ಹಾಗೂ ಸಂಸ್ಕೃತಿಯನ್ನು ಕಟ್ಟುವ, ಕಾಪಾಡುವ ಕೆಲಸವನ್ನು ಹೇಗೆ ಮಾಡಿಕೊಂಡು ಬಂದರು ಎಂಬುದನ್ನು ‘ಬಯಲುಬೆಟ್ಟ’ದಲ್ಲಿ ವಿವರವಾಗಿ ಹೇಳಿದ್ದಾರೆ. ಅವರು ಇಷ್ಟು ಮಾತ್ರ ಮಾಡಿದ್ದಿದ್ದರೆ ‘ಬಯಲುಬೆಟ್ಟ’ಕ್ಕೆ ಅಷ್ಟೊಂದು ಪ್ರಾಮುಖ್ಯತೆ ಪ್ರಾಪ್ತವಾಗುತ್ತಿರಲಿಲ್ಲ. ತಮ್ಮ ಬದುಕಿನಲ್ಲಿ ನಡೆದ ಘಟನೆಗಳ ವಿವರ ನೀಡುವುದರ ಜೊತೆಗೆ ಮೊಗಸಾಲೆ ಆ ಕಾಲಘಟ್ಟದಲ್ಲಿ ಮತ್ತು ಆ ಪ್ರದೇಶದಲ್ಲಿ ನಡೆದ ಸಾಹಿತ್ಯಿಕ, ಸಾಂಸ್ಕೃತಿಕ ಬೆಳವಣಿಗೆಗಳ, ಸ್ಥಿತ್ಯಂತರಗಳ ಹಾಗೂ ವಿದ್ಯಮಾನಗಳ ಜತೆಗೆ ನಮ್ಮನ್ನು ಮುಖಾಮುಖಿಗೊಳಿಸುತ್ತಾರೆ. ಹೀಗಾಗಿ ಓದುಗರಿಗೆ ಒಂದು ನಿರ್ದಿಷ್ಟ ಕಾಲಘಟ್ಟದ ಸಾಹಿತ್ಯಿಕ, ಸಾಂಸ್ಕೃತಿಕ ಲೋಕದಲ್ಲಿ ಮುಕ್ತವಾಗಿ ಪರ್ಯಟನ ಮಾಡಿದ ಅನುಭವ ಉಂಟಾಗುತ್ತದೆ. ಮೊಗಸಾಲೆ ಆತ್ಮ ವೃತ್ತಾಂತ ಬರೆಯುವ ನೆಪದಲ್ಲಿ ಒಂದು ಪ್ರದೇಶದ ಸಂಸ್ಕೃತಿಯನ್ನು ನಮಗೆ ಪುನಃ ಕಟ್ಟಿಕೊಡುತ್ತಾರೆ. ಈ ಕಾರಣಕ್ಕಾಗಿಯೇ ಕುವೆಂಪು, ಕಾರಂತ, ಲಂಕೇಶ,

ಸಿದ್ಧಲಿಂಗಯ್ಯ, ಭೈರಪ್ಪ ಮುಂತಾದವರ ಆತ್ಮಚರಿತ್ರೆಗಳು ಸಾಹಿತ್ಯಕ, ಸಾಂಸ್ಕೃತಿಕ ಚರಿತ್ರೆಗಳಾಗಿ ತೋರುತ್ತವೆ.

ಕಾಸರಗೋಡು, ಮೂಡುಬಿದಿರೆ, ಪುತ್ತೂರು, ಮಂಗಳೂರು ಮುಂತಾದ ಪಟ್ಟಣಗಳು ಹಾಗೂ ವಡಿಯೂರು, ಕನ್ಯಾನ, ಸಾರ್ಕುಡೇಲು, ವಿಟ್ಲಗಳಂಥ ಚಿಕ್ಕಪುಟ್ಟ ಗ್ರಾಮಗಳು ಪ್ರಸ್ತುತ ಗ್ರಂಥದಲ್ಲಿ ಜೀವಂತಿಕೆಯಿಂದ ಪುಟಿಯುತ್ತವೆ. ಅದರಲ್ಲೂ ಸಾರ್ಕುಡೇಲು ಮತ್ತು ಕಾಂತಾವರ (ಲೇಖಕರ ಜನ್ಮಭೂಮಿ ಮತ್ತು ಕರ್ಮಭೂಮಿ) ಬಯಲಬೆಟ್ಟದ ತುಂಬಾ ಮೇಲಿಂದ ಮೇಲೆ ಪ್ರಸ್ತಾಪಗೊಳ್ಳುತ್ತಲೇ ಇರುತ್ತವೆ. ಮೊಗಸಾಲೆಯವರ ವ್ಯಕ್ತಿತ್ವ ಈ ಪ್ರದೇಶಗಳಲ್ಲಿ, ಹಳ್ಳಿಪಟ್ಟಣಗಳಲ್ಲಿ ರೂಪುಗೊಂಡಿರುವುದರಿಂದ ಅವು ನಮ್ಮ ಹೃದಯಕ್ಕೆ ತೀರ ಹತ್ತಿರವಾಗಿ ಬಿಡುತ್ತವೆ. ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಮತ್ತು 'ಕಾನೂರು ಹೆಗ್ಗಡತಿ' ಕಾದಂಬರಿಗಳನ್ನು ಓದಿದಾಗ ಮಲೆನಾಡಿಗೆ ಹೋಗಿ ಆ ಪ್ರದೇಶವನ್ನು, ಆ ಹಳ್ಳಿಗಳನ್ನು ಹಾಗೂ ಆ ಜನರನ್ನ ಹೇಗೆ ನೋಡಬೇಕು ಅಂತ ಅನ್ನಿಸುತ್ತದೆಯೋ ಹಾಗೇ 'ಬಯಲಬೆಟ್ಟ' ಓದಿದಾಗ ಕಾಸರಗೋಡು ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಕ್ಕೆ ಭೆಟ್ಟಿ ನೀಡಬೇಕೆಂಬ ಆಸೆ ಮನಸ್ಸಿನಲ್ಲಿ ಮೂಡುತ್ತದೆ. ಇಲ್ಲಿ ಕಾಣಿಸಿಕೊಳ್ಳುವ ಕೆಲವು ಸ್ಥಳಗಳು ನಮ್ಮ ಮನಸ್ಸಿನಲ್ಲಿ ನೆಲೆ ನಿಂತು ಬಿಡುತ್ತವೆ.

'ಬಯಲಬೆಟ್ಟ' ಮೊಗಸಾಲೆಯವರ ಜೀವನಾನುಭವಗಳ ಕಥಾನಕವಾಗಿದೆ. ಅವರ ಬಾಲ್ಯದಿಂದ ಹಿಡಿದು ಇಲ್ಲಿಯವರೆಗಿನ ಬದುಕಿನಲ್ಲಿ ಕಂಡುಂಡ ಸುಖದುಃಖಗಳ ಚಿತ್ರಣ ಚಿತ್ತಾಕರ್ಷಕವಾಗಿ ಇಲ್ಲಿ ಅನಾವರಣಗೊಂಡಿದೆ.

ಇಲ್ಲಿ ಚಿತ್ರಣಗೊಂಡ ಕೆಲವು ಘಟನೆಗಳು ನಮ್ಮನ್ನು ತೀವ್ರವಾದ ಚಿಂತನೆಗೆ ಹಚ್ಚಿದರೆ ಇನ್ನು ಕೆಲವು ಸಂಗತಿಗಳು ನಮ್ಮ ಸಂವೇದನೆಗಳನ್ನು ಕೆಣಕುತ್ತವೆ. ಅವು ನಮ್ಮ ಸಂವೇದನಾಶೀಲ ಮನಸ್ಸಿನ ಮೂಸೆಯಲ್ಲಿ ಸ್ಥಾಯಿಯಾಗಿ ನಿಲ್ಲುತ್ತವೆ.

'ಬಯಲಬೆಟ್ಟ' ಓದುತ್ತಾ ಹೋದಂತೆಲ್ಲಾ ಕಾದಂಬರಿಯೊಂದನ್ನು ಓದುತ್ತಿರುವಂತೆ ಭಾಸವಾಗುತ್ತದೆ. ಇದರ ನಿರೂಪಣಾ ಶೈಲಿ ಕಾದಂಬರಿಯೊಂದರ ನಿರೂಪಣಾ ವಿಧಾನವನ್ನು ಬಹುಮಟ್ಟಿಗೆ ಹೋಲುತ್ತದೆ. ಲೇಖಕರು ಘಟನೆಗಳನ್ನು ವಿವರಿಸುವ ಕ್ರಮ, ಸಂಗತಿಗಳನ್ನು ವಿಶ್ಲೇಷಿಸುವ ರೀತಿ ಮತ್ತು ಭಾಷೆಯ ಬಳಕೆ– ಎಲ್ಲವೂ ಕಾದಂಬರಿಯನ್ನು ನೆನಪಿಗೆ ತರುತ್ತವೆ. ಈ ಕುರಿತು ಮೊಗಸಾಲೆ ಹೀಗೆ ಹೇಳುತ್ತಾರೆ : "ಬಯಲಬೆಟ್ಟವನ್ನು 'ಆತ್ಮಕತೆಯಾಗಿಯೂ ಓದಬಹುದು; ಕಾದಂಬರಿಯಾಗಿಯೂ ಅನುಭವಿಸಬಹುದು! ಅಥವಾ ವೃತ್ತಾಂತವಾಗಿ ಕೂಡ." ಆದರೆ ಆತ್ಮವೃತ್ತಾಂತ ಕಾದಂಬರಿಯಾಗಿ ರೂಪುಗೊಳ್ಳುವುದು ಸರಿಯೋ ಅಲ್ಲವೋ ಎಂಬುದನ್ನು ವಿಮರ್ಶಕರು ಹೇಳಬೇಕು.

'ಬಯಲ ಬೆಟ್ಟ' ದಟ್ಟ ವಿವರಣೆಯಿಂದಾಗಿ ನಮ್ಮ ಸ್ಮೃತಿಯಲ್ಲಿ ಬಹುಕಾಲ ನಿಲ್ಲುತ್ತದೆ. ಲೇಖಕರು ತಾವು ಕಂಡುಂಡ ಬದುಕನ್ನು ಕಟ್ಟಿಕೊಡುವ ರೀತಿ ಅದ್ವಿತೀಯವಾದುದು. "ಈಗ ಕೇರಳಕ್ಕೆ ಸೇರಿರುವ ಕಾಸರಗೋಡು ಜಿಲ್ಲೆಯ ಕೋಳ್ಯಾರು ಎಂಬ ಹಳ್ಳಿಯ ಮೊಗಸಾಲೆ ಎಂಬ ಪ್ರದೇಶದಲ್ಲಿ ಹುಟ್ಟಿ ಕೋಳ್ಯಾರು, ಕನ್ಯಾನ ಮತ್ತು ಉಡುಪಿಯಲ್ಲಿ ಅಧ್ಯಯನ ನಡೆಸಿ ಆಯುರ್ವೇದ ವೈದ್ಯರಾಗಿ, ಕೋಳ್ಯಾರನ್ನು ನೆನಪಿಗೆ ತರುವಂತಹ ಕಾರ್ಕಳ ತಾಲೂಕಿನ ಕಾಂತಾವರ ಎನ್ನುವ ಹಳ್ಳಿಯನ್ನು ಒಪ್ಪಿ ಕಳೆದ ನಲವತ್ತು ವರ್ಷಗಳಿಂದ ಅಲ್ಲೇ ನೆಲೆ

ನಿಂತುಕೊಂಡು ಡಾ.ಮೊಗಸಾಲೆಯವರು ಹೆಗ್ಗೋಡನ್ನು ನೆನಪಿಗೆ ತರುವ ಹಾಗೆ ಕಾಂತಾವರಕ್ಕೆ ಸಾಂಸ್ಕೃತಿಕ ಸ್ವರೂಪ ಕೊಟ್ಟು, ಅದನ್ನು ಅಖಂಡ ಕರ್ನಾಟಕಕ್ಕೆ ಪರಿಚಯಿಸಿದ ರೂವಾರಿ" ಎಂದು ನಾರಾಯಣ ಮಾಳ್ಕೋಡರವರು ಬಯಲಬೆಟ್ಟದ ಬೆನ್ನುಡಿಯಲ್ಲಿ ಹೇಳಿರುವುದು ಸರಿಯಾಗಿದೆ.

ಬಯಲಬೆಟ್ಟ ಹತ್ತು ಹಲವು ಕಾರಣಗಳಿಂದಾಗಿ ಓದುಗರ ಹಾಗೂ ವಿಮರ್ಶಕರ ಬುದ್ಧಿ ಮತ್ತು ಭಾವಗಳ ಮೇಲೆ ಗಟ್ಟಿಯಾಗಿ ಅಚ್ಚೊತ್ತುತ್ತದೆ. ಈ ಸುದೀರ್ಘವಾದ ಕೃತಿಯನ್ನು ಓದುತ್ತಾ ಹೋದಂತೆ ನಾವು ಮೊಗಸಾಲೆಯವರ ವೈವಿಧ್ಯಮಯವೂ ವರ್ಣಮಯವೂ ಆದ ಬದುಕಿನ ಪಯಣದಲ್ಲಿ ವಿಹರಿಸಿದ ಅನನ್ಯ ಅನುಭವ ನಮ್ಮದಾಗುತ್ತದೆ. ಮೇಲುನೋಟಕ್ಕೆ ಮೊಗಸಾಲೆಯವರ ಬದುಕು ಸರೋವರದ ನೀರಿನಂತೆ ಕಂಡರೂ ಅಲ್ಲಿ ನದಿಯ ಸೆಳೆತವಿದೆ, ಕಡಲಿನ ಆಳ, ಭೋರ್ಗರೆತ ಹಾಗೂ ತರಂಗಗಳೂ ಇವೆ. ಮೊಗಸಾಲೆ ಅತ್ಯಂತ ಸಂಘರ್ಷಮಯವಾದ ಬದುಕನ್ನು ನಡೆಸದಿದ್ದರೂ ಅವರು ತಮ್ಮದೇ ಆದ ರೀತಿಯಲ್ಲಿ ತಮ್ಮ ಸುತ್ತಮುತ್ತಲಿನ ಜನರು ಹಾಗೂ ಪರಿಸರದೊಂದಿಗೆ ನಿರಂತರವಾಗಿ ಹೋರಾಟವನ್ನು ಮಾಡುತ್ತಾ ಬಂದವರು.

ನಾ.ಮೊಗಸಾಲೆ ಅವರದು ತುಂಬಾ ಚಟುವಟಿಕೆಯುಳ್ಳ ವ್ಯಕ್ತಿತ್ವ. ಸೃಜನಶೀಲವಾದ ಮನಸ್ಸು ಸದಾಕಾಲ ಒಂದಲ್ಲಾ ಒಂದು ಚಟುವಟಿಕೆಯಲ್ಲಿ ತೊಡಗಿಕೊಂಡಿರುತ್ತದೆಂಬುದಕ್ಕೆ ಮೊಗಸಾಲೆ ಒಂದು ಜೀವಂತ ನಿದರ್ಶನ. ಅವರು ಎಂದೂ ಒಂದೇ ವಿಷಯಕ್ಕೆ ಅಂಟಿಕೊಂಡು ಇರುವಂಥವರಲ್ಲ. ಅವರ ವ್ಯಕ್ತಿತ್ವದಲ್ಲಿ 'ಜಂಗಮ' ಗುಣವಿದೆ.

ಮೊಗಸಾಲೆ 1978ರಲ್ಲಿ ಕಾಂತಾವರದಲ್ಲಿ 'ಮುದ್ದಣ್ಣ ಕಾವ್ಯ ಪ್ರಶಸ್ತಿ'ಯನ್ನು ಪ್ರಾರಂಭಿಸಿದರು. ಈ ಪ್ರಶಸ್ತಿಯನ್ನು ಸ್ಥಾಪಿಸುವುದರ ಮೂಲಕ ಅವರ ಕನ್ನಡ ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದ ಮಹನೀಯರನ್ನು ಸತ್ಕರಿಸುವ, ಸನ್ಮಾನಿಸುವ ಅನುಪಮ ಕೆಲಸ ಮಾಡಿದರು.

ಮುದ್ದಣ್ಣನ ವಂಶಜರಾದ ನಿಟ್ಟೆಕೆಮ್ಮಣ್ಣಿನ ನಾರಾಯಣ ರಾಯರೆಂಬ ಹೋಟೆಲ್ ಉದ್ಯಮಿಯವರು ಈ ಪ್ರಶಸ್ತಿಗಾಗಿ ಆರ್ಥಿಕ ಸಹಾಯ ಮಾಡಿದರು ಮತ್ತು ಅವರ ನಿಧನದ ತರುವಾಯ ಅವರ ಸಹೋದರ ಶಂಕರರಾಯರು ಅದನ್ನು ಮುಂದುವರಿಸಿದರು.

1990ರಲ್ಲಿ ಧರ್ಮದರ್ಶಿ ಹರಿಕೃಷ್ಣ ಪುನರೂರು 'ಮುದ್ದಣ್ಣ ಕಾವ್ಯ ಪ್ರಶಸ್ತಿ'ಗೆ ಆರ್ಥಿಕ ಸಹಾಯ ನೀಡಲು ಮುಂದೆ ಬಂದರು. ಸಾಹಿತ್ಯಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಲು ಮುಕ್ತವಾಗಿ ಆರ್ಥಿಕ ಸಹಾಯ ಒದಗಿಸುತ್ತಾ ಬಂದಿರುವ ಪುನರೂರು 'ಮುದ್ದಣ್ಣ ಕಾವ್ಯ ಪ್ರಶಸ್ತಿ'ಯ ನೆರವಿಗೆ ಬಂದದ್ದು ಸಹಜವೇ. ಪ್ರಶಸ್ತಿಯ ಮೊತ್ತವನ್ನು ಐಳೂವರೆ ಸಾವಿರಕ್ಕೆ ಪುನರೂರರು ಏರಿಸಿದ್ದನ್ನು ಮೊಗಸಾಲೆ ಕೃತಜ್ಞತಾಭಾವದಿಂದ ಸ್ಮರಿಸುತ್ತಾರೆ. ಪುನರೂರರೊಂದಿಗಿನ ತಮ್ಮ ಮಧುರವಾದ ಸ್ನೇಹ ಸಂಬಂಧವನ್ನು ಮೊಗಸಾಲೆ ಪ್ರೀತಿಯಿಂದ ಸ್ಮರಿಸಿಕೊಳ್ಳುತ್ತಾರೆ.

ಕಾಂತಾವರದಲ್ಲಿ ಕನ್ನಡ ಸಂಘವನ್ನು ಸ್ಥಾಪಿಸಿ ರಾಜ್ಯದಲ್ಲಿನ ಬಹುತೇಕ ಶ್ರೇಷ್ಠ ಹಿರಿ–ಕಿರಿಯ ಸಾಹಿತಿಗಳನ್ನು ಅಲ್ಲಿಗೆ ಕರೆಸಿ ಕವಿಗೋಷ್ಠಿ, ವಿಚಾರಗೋಷ್ಠಿ ಮತ್ತು ಸಾಹಿತ್ಯ ಸಮ್ಮೇಳನವನ್ನು ನಡೆಸಿದ ಕೀರ್ತಿ ಮೊಗಸಾಲೆಯವರಿಗೆ ಸಲ್ಲುತ್ತದೆ.

'ಮುದ್ದಣ್ಣ ಕಾವ್ಯ ಪ್ರಶಸ್ತಿ' ಮತ್ತು 'ಕನ್ನಡ ಸಂಘ'ಗಳನ್ನು ಸ್ಥಾಪಿಸಿ ಕನ್ನಡ ಸಾಹಿತ್ಯ ಹಾಗೂ ಸಾಹಿತಿಗಳನ್ನು ಸನ್ಮಾನಿಸುವ ಕೆಲಸ ಮಾಡಿದ ಮೊಗಸಾಲೆ ಮುಂದೆ ಜ್ಞಾನಪೀಠದ ಮಾದರಿಯಲ್ಲಿ 'ವರ್ಧಮಾನ ಪ್ರಶಸ್ತಿ ಪೀಠ'ವನ್ನು ಸ್ಥಾಪಿಸಲು ಅಣಿಯಾದರು. ಧರ್ಮಸ್ಥಳದ ಧರ್ಮದರ್ಶಿ ಶ್ರೀ ವೀರೇಂದ್ರ ಹೆಗ್ಗಡೆಯವರು ಪೀಠದ ಪ್ರಥಮ ಅಧ್ಯಕ್ಷರಾದರು. ಆದರೆ ಪೀಠದ ದಶಮಾನೋತ್ಸವದ ಸಂದರ್ಭದಲ್ಲಿ ಪ್ರಜಾವಾಣಿಯ ವರದಿಗಾರರಾದ ಜಿ.ಪಿ.ಬಸವರಾಜರು ಪೀಠದ ಅಧ್ಯಕ್ಷರಾದ ಹೆಗ್ಗಡೆ ಅವರೇ ಪ್ರತಿವರ್ಷ ಪ್ರಶಸ್ತಿ ಪ್ರದಾನ ಮಾಡುತ್ತಿದ್ದುದಕ್ಕೆ ಅಪಸ್ವರ ಎತ್ತಿದ ಕಾರಣಕ್ಕೆ ಹೆಗ್ಗಡೆಯವರು ಪೀಠದ ಅಧ್ಯಕ್ಷಗಿರಿ ತೊರೆಯಲು ನಿರ್ಧರಿಸಿದರು. ಆ ಹೊತ್ತಿಗೆ ಮೊಗಸಾಲೆಯವರು ಪೀಠದ ಸದಸ್ಯರ ಜತೆಗೂಡಿ ಧರ್ಮಸ್ಥಳಕ್ಕೆ ತೆರಳಿ ಹೆಗ್ಗಡೆ ಅವರನ್ನು ಕಂಡು ತಮ್ಮ ನಿರ್ಧಾರ ಬದಲಿಸಲು ಅವರನ್ನು ಪರಿಪರಿಯಾಗಿ ಕೇಳಿಕೊಂಡರು. ಊಟದ ಸಮಯದಲ್ಲಿ ಬಂದ ಅತಿಥಿಗಳಿಗೆ ಊಟ ಮಾಡುವಂತೆ ಹೆಗ್ಗಡೆಯವರು ಹೇಳಿದಾಗ "ನಾವು ಊಟ ಮಾಡಬೇಕಾದರೆ ತಮ್ಮ ನಿರ್ಧಾರ ಬದಲಿಸುವ ಆಶ್ವಾಸನೆ ಕೊಡಬೇಕು" ಎಂದರು. ಆಗ ಮುಗುಳ್ನಗೆ ನಕ್ಕ ಹೆಗ್ಗಡೆ, "ನಿಮ್ಮ ಊಟಕ್ಕಾಗಿ ನನ್ನ ನಿರ್ಧಾರ ಬದಲಿಸುತ್ತೇನೆ" ಎಂದು ಹೇಳುತ್ತಾ ಪ್ರಶಸ್ತಿ ಪ್ರದಾನ ಮಾಡುವ ಬಗ್ಗೆ ಎದ್ದ ವಿವಾದಕ್ಕೆ ತೆರೆ ಎಳೆದರು. ಆದರೆ ದಶಮಾನೋತ್ಸವದ ತರುವಾಯ ಮೊಗಸಾಲೆಯವರನ್ನು ಧರ್ಮಸ್ಥಳಕ್ಕೆ ಕರೆಸಿ, "ಹನ್ನೊಂದು ವರ್ಷದಿಂದ ಪೀಠದ ಅಧ್ಯಕ್ಷನಾಗಿದ್ದೇನೆ.ಇನ್ನು ನಾನು ಈ ಸ್ಥಾನದಲ್ಲಿ ಇರುವುದು ಸರಿಯಲ್ಲ. ಎಲ್ಲರಿಗೂ ಅವಕಾಶ ಇರಲಿ. ನಮ್ಮ ಪೀಠ ಯಾವೊಬ್ಬನ ಸ್ವತ್ತೂ ಅಲ್ಲ. ಆಗಿರಲೂ ಬಾರದು. ಹೊಸಬರನ್ನು ಅಧ್ಯಕ್ಷರನ್ನಾಗಿ ಮಾಡಿ. ನನ್ನ ಪ್ರೋತ್ಸಾಹ ಮೊದಲಿನ ಹಾಗೆ ಇರುತ್ತದೆ" ಎಂದು ಹೇಳಿ ಹೆಗ್ಗಡೆಯವರು ಪೀಠದ ಅಧ್ಯಕ್ಷ ಸ್ಥಾನಕ್ಕೆ ವಿದಾಯ ಹೇಳಿದರು.

ಪೀಠದ ಅಧ್ಯಕ್ಷ ಸ್ಥಾನಕ್ಕೆ ಸಂಬಂಧಿಸಿದಂತೆ ಹೆಗ್ಗಡೆಯವರು ತೆಗೆದುಕೊಂಡ ನಿರ್ಧಾರ ನಮಗೆಲ್ಲಾ ಮಾದರಿಯಾದುದು.ಇದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅವರು ಇಟ್ಟಿರುವ ಅಚಲ ನಂಬಿಕೆಯ ದ್ಯೋತಕವಾಗಿದೆ.

ಮೊಗಸಾಲೆಯವರು ತಮ್ಮ ಸಂಪರ್ಕದಲ್ಲಿ ಬಂದು ಹೋದ ಹಲವು ಮಹನೀಯರ ಬಗ್ಗೆ 'ಬಯಲಬೆಟ್ಟ'ದಲ್ಲಿ ಪ್ರಸ್ತಾಪಿಸಿರುತ್ತಾರೆ. ಅಂಥ ಮಹನೀಯರಲ್ಲಿ ಹಾ.ಮಾ.ನಾಯಕರು ಒಬ್ಬರು. ನಾಯಕರೊಂದಿಗಿನ ಮೊಗಸಾಲೆಯವರ ಸ್ನೇಹಸಂಬಂಧದ ಕುರಿತ ಬರಹ ಓದುಗರ ಮನಸ್ಸಿಗೆ ಮುದ ನೀಡುತ್ತದೆ. ನಾಯಕರು ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಬಹಳ ತೂಕದ ಅಷ್ಟೇ ಮಹತ್ವದ ವ್ಯಕ್ತಿಗಳಾಗಿದ್ದರು. ಅವರು ತಮ್ಮ ಬರಹ ಹಾಗೂ ಬದುಕು ಎರಡರಿಂದಲೂ ಸಾಹಿತಿಗಳ ಹಾಗೂ ಜನಸಾಮಾನ್ಯರ ಪ್ರೀತಿ, ವಿಶ್ವಾಸ ಗಳಿಸಿದ್ದರು. ಈ ಕಾರಣದಿಂದಾಗಿ ನಾಯಕರು ಎಲ್ಲಾ ವಯೋಮಾನದ ಹಾಗೂ ಎಲ್ಲಾ ಪಂಥದ ಸಾಹಿತಿಗಳ ಪ್ರೀತಿಯ ನಾಯಕರಾದರು.

ನಾಯಕರು ಕನ್ನಡ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ನಾ.ಮೊಗಸಾಲೆಯವರನ್ನು ಕೋ ಆಪ್ಟ್ ಮೆಂಬರ್ ಮಾಡಿದರು. ಹೀಗಾಗಿ ನಾಯಕರ ಜತೆಗೂಡಿ ಕನ್ನಡ ಕಟ್ಟುವ ಕೆಲಸವನ್ನು ಮಾಡುವ ಅವಕಾಶ ಮೊಗಸಾಲೆಯವರಿಗೆ ಒದಗಿಬಂತು. ಈ ಅವಧಿಯಲ್ಲಿ

ನಾಯಕರ ಘನವ್ಯಕ್ತಿತ್ವವನ್ನು ಚೆನ್ನಾಗಿ ತಿಳಿದುಕೊಳ್ಳಲು ಮೊಗಸಾಲೆಯವರಿಗೆ ಸಾಧ್ಯವಾಯಿತು. ವಯಸ್ಸಿನಲ್ಲಿ ಕಿರಿಯರಾದ ತಮ್ಮ ಸಲಹೆ, ಸೂಚನೆಯನ್ನು ಕ್ರೀಡಾಮನೋಭಾವದಿಂದ ಸ್ವೀಕರಿಸಿ ತಮ್ಮ ಮಾತಿಗೆ ತಕ್ಕ ಮನ್ನಣೆ ಕೊಟ್ಟು ತಾವು ಹೆಸರಿಸಿದ ಸಾಹಿತಿಗಳಿಗೆ ಅಕಾಡೆಮಿ ಪುರಸ್ಕಾರ ನೀಡಿದ್ದುದನ್ನು ಮೊಗಸಾಲೆ ಧನ್ಯತಾಭಾವದಿಂದ ಸ್ಮರಿಸುತ್ತಾರೆ.

ತಮಗೆ ಐವತ್ತು ವರ್ಷ ತುಂಬಿದ ಸಂದರ್ಭದಲ್ಲಿ ತಮ್ಮ ಕುರಿತು ಸಮಾರಂಭ ಮಾಡಲು ತಮ್ಮ ಅಭಿಮಾನಿಗಳಿಗೆ ನಾಯಕರು ಹೇಳಿದ್ದನ್ನು, ತಮ್ಮ ಕುರಿತು ನಾಯಕರು ಅಂಕಣದಲ್ಲಿ ಬರೆದದ್ದನ್ನು ಮತ್ತು ತಾವು ಅನಾರೋಗ್ಯಕ್ಕೆ ತುತ್ತಾಗಿದ್ದಾಗ ಚಿಕಿತ್ಸೆಗಾಗಿ ಆರ್ಥಿಕ ನೆರವು ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದನ್ನು ಮೊಗಸಾಲೆ ಪ್ರೀತಿಯಿಂದ ಸ್ಮರಿಸುತ್ತಾರೆ.

ಕಾಂತಾವರದಂಥ ಕುಗ್ರಾಮ ಕರ್ನಾಟಕದ ಸಾಹಿತ್ಯಕ, ಸಾಂಸ್ಕೃತಿಕ ಭೂಪಟದ ಮೇಲೆ ಕಾಣಿಸಿಕೊಳ್ಳಲು ಪ್ರಮುಖ ಕಾರಣ ಮೊಗಸಾಲೆಯವರೇ ಆಗಿದ್ದಾರೆ ಎಂದರೆ ಉತ್ಪ್ರೇಕ್ಷೆಯ ಮಾತಾಗದು. ಆದರೆ ಅವರು ಈ ಮಾತನ್ನು ವಿನಯದಿಂದ ತಳ್ಳಿಹಾಕುತ್ತಾರೆ. "ಇದು ನನ್ನಿಂದ ಆಯಿತೇ ಎಂದರೆ, ಖಂಡಿತ ಅಲ್ಲ. ನಾನಲ್ಲದಿದ್ದರೆ ಆಗುತ್ತಿತ್ತೇ ಎಂದರೆ ಖಂಡಿತ ಆಗುತ್ತಿರಲಿಲ್ಲ! ಹಾಗಾದರೆ ಕಾಂತಾವರ ಹೀಗೆ ಆಗಬೇಕು ಎನ್ನುವುದರಲ್ಲಿ ನನ್ನ ಪಾತ್ರ ಇತ್ತಾದರೂ, ಜನ ಇದನ್ನು ಆಗಗೊಳಿಸಿದರು ಎನ್ನುವುದು ಪೂರ್ತಿ ಸತ್ಯ" ಎಂಬುದು ಮೊಗಸಾಲೆಯವರ ಅಭಿಮತ. ಅವರ ಈ ವಿನಯ ಬಸವಣ್ಣನ 'ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ' ಎಂಬ ಮಾತನ್ನು ಜ್ಞಾಪಕಕ್ಕೆ ತರುತ್ತದೆ.

ನೌಕರಿಗೆ ಸೇರುವ ಸಮಯದಲ್ಲಿ ಹಳ್ಳಿಯಲ್ಲೇ ಸೇವೆ ಸಲ್ಲಿಸುತ್ತೇನೆಂದು ಮುಚ್ಚಳಿಕೆ ಬರೆದು ಕೊಟ್ಟು ಸರ್ಕಾರಿ ನೌಕರಿ ಗಿಟ್ಟಿಸಿಕೊಂಡ ಮೇಲೆ ಹಳ್ಳಿಯ ಸಮೀಪ ಸುಳಿಯದವರೇ ತುಂಬಿರುವ ಈ ದಿನಗಳಲ್ಲಿ ಹಳ್ಳಿಯನ್ನೇ ಆಯ್ಕೆ ಮಾಡಿಕೊಂಡು, ಅಲ್ಲಿಯೇ ತಮ್ಮ ವೃತ್ತಿಜೀವನದ ಕೊನೆಗಾಣಿಸಿದ ಮೊಗಸಾಲೆ ವಿರಳರಲ್ಲಿ ವಿರಳರು. ಸರ್ಕಾರ ಹಾಗೂ ಸಾರ್ವಜನಿಕರಿಗೆ ಮೋಸ ಮಾಡುವ ನಮ್ಮ ಸರ್ಕಾರಿ ನೌಕರರು ಮೊಗಸಾಲೆಯವರಿಂದ ಒಳ್ಳೆಯ ಪಾಠ ಕಲಿಯಬೇಕು.

ಮೊಗಸಾಲೆ ಮತ್ತು ಪೂರ್ಣಚಂದ್ರ ತೇಜಸ್ವಿಯವರಂಥ ಲೇಖಕರು ಹಾಕಿಕೊಟ್ಟ ಸಂಪ್ರದಾಯವನ್ನು ನಮ್ಮ ಯುವಪೀಳಿಗೆಯ ಲೇಖಕರು ಹಾಗೂ ನೌಕರರು ಅನುಸರಿಸಬೇಕಿದೆ. Go back to your villages ಎಂದು ಗಾಂಧಿ ಪದೇ ಪದೇ ಹೇಳುತ್ತಿದ್ದರು. ಶಿಕ್ಷಣ ಪೂರೈಸಿದ ವಿದ್ಯಾವಂತರು ತಂತಮ್ಮ ಹಳ್ಳಿಗಳಿಗೆ ಹಿಂತಿರುಗಿ ಹೋಗಬೇಕೆಂದು ಅವರು ತೀವ್ರವಾಗಿ ಬಯಸುತ್ತಿದ್ದರು. ಪ್ರಾಯಶಃ ಮೊಗಸಾಲೆ ಗಾಂಧೀಜಿಯ ಮಾತನ್ನು ಸರಿಯಾಗಿ ಗ್ರಹಿಸಿದ್ದರು ಅಂತ ಕಾಣುತ್ತೆ. ಕಾಂತಾವರದ ಬಗ್ಗೆ ಅಪಾರವಾದ ಪ್ರೀತಿ, ಅಭಿಮಾನ ಮೊಗಸಾಲೆ ಇರಿಸಿಕೊಂಡಿದ್ದಾರೆ. ಅವರು ತಮ್ಮ ಜನ್ಮಭೂಮಿಗಿಂತ ತಮ್ಮ ಕರ್ಮಭೂಮಿಗಾಗಿ ಹೆಚ್ಚು ಶ್ರಮಿಸಿದ್ದಾರೆ. "ನಿಜ ಹೇಳಬೇಕೆಂದರೆ ಕಾಂತಾವರದ ನೆಲಕ್ಕೆ ಒಂದು ಸಾಂಸ್ಕೃತಿಕ ಇತಿಹಾಸ ಇದೆ..... ಹೆಗ್ಗೋಡಿನ ಜನಸಾಮಾನ್ಯರು ಅಲ್ಲಿರುವ ನೀನಾಸಂಗೆ ತೆರೆದುಕೊಂಡ ಹಾಗೆ, ಕಾಂತಾವರದ ಮಂದಿ ತಮ್ಮ ಎದೆಯೊಳಗೆ ಒಂದು ಸಂಸ್ಕೃತಿ ಪ್ರೀತಿಯನ್ನು ಪಕ್ಕದ ಹಳ್ಳಿಗಳ ಮಂದಿಗಳಿಗಿಂತ ತುಸು ಹೆಚ್ಚು ಎನ್ನುವಷ್ಟು ಕಾಪಾಡಿಕೊಂಡು ಬಂದಿದ್ದಾರೆ ಎಂಬ ಅನುಭವ ನನ್ನದು! ನಮ್ಮ

ಗ್ರಾಮ ಭಾರತದ ಎಲ್ಲ ಹಳ್ಳಿಗಳಲ್ಲೂ ಕಾಂತಾವರದ ಜನಸಾಮಾನ್ಯರ ಹಾಗೆ ಸಂಸ್ಕೃತಿ ಪ್ರೀತಿ ಇರಬಹುದಾದರೂ ಅದಕ್ಕೊಂದು ಸಾರ್ವಜನಿಕ ವೇದಿಕೆಯನ್ನು ಒದಗಿಸುವ ಕಿನ್ನರ ಜೋಗಿ ಎಲ್ಲ ಕಡೆ ಇರಲು ಸಾಧ್ಯವಿಲ್ಲ ತಾನೇ?"

ಮೊಗಸಾಲೆಯವರು ಹಣೆಬರಹ, ವಿಧಿ, ದೈವ ಎಂಬ ಕಲ್ಪನೆಗಳನ್ನು ಅಷ್ಟಾಗಿ ಒಪ್ಪುವುದಿಲ್ಲ. ಜೀವನದಲ್ಲಿ ಎಲ್ಲವೂ ಆಕಸ್ಮಿಕವಾಗಿ ಜರುಗುತ್ತದೆಂಬುದು ಅವರ ನಂಬುಗೆ. Life is full of accidents ಎಂದು ಇಂಗ್ಲಿಷಿನಲ್ಲಿ ಹೇಳುತ್ತಾರೆ. ಇಂಗ್ಲಿಷ್ ಕಾದಂಬರಿಕಾರ ಹಾರ್ಡಿ ಇದನ್ನೇ Chance ಎಂದು ಕರೆಯುತ್ತಾನೆ. ಆಕಸ್ಮಿಕ ಅಥವಾ Chance ಎಂಬ ಶಬ್ದ ವಿಧಿ, ದೈವ ಅಥವಾ ಹಣೆಬರಹ ಎಂಬುದಕ್ಕೆ ಸಮನಲ್ಲವೇ? "ಕೆಲವರು ಇದನ್ನು ಹಣೆಬರಹ, ವಿಧಿ, ದೈವ ಎನ್ನುತ್ತಾರೆ. ನಾನು ಈ ಮೂರನ್ನೂ ಒಪ್ಪುವುದಿಲ್ಲ. ಹಣೆಬರಹ, ವಿಧಿ ಎನ್ನುವುದು ನಮ್ಮ ಕ್ರಿಯಾಶೀಲತೆಯನ್ನು ಕೀಳಂದಾಜಿಸುವ ಮಾತು. ದೈವ ಎನ್ನುವುದು ವಿನಯದ ದೊಡ್ಡ ಮಾತು" ಎಂದು ಮೊಗಸಾಲೆ ಬರೆಯುತ್ತಾರೆ. ಆದರೆ ನಾವು ಒಪ್ಪಲಿ, ಒಪ್ಪದಿರಲಿ ಜೀವನದಲ್ಲಿ ಘಟನೆಗಳು ಒಮ್ಮೊಮ್ಮೆ ಅನಿರೀಕ್ಷಿತವಾಗಿ ಮತ್ತು ಒಮ್ಮೊಮ್ಮೆ ಪೂರ್ವನಿರ್ಧರಿತವಾದಂತೆ ಜರಗುತ್ತವೆ. ಈ ಸಂದರ್ಭದಲ್ಲಿ ಶೇಕ್ಸಪಿಯರ್‌ನ ಒಂದು ಮಾತು ನೆನಪಿಗೆ ಬರುತ್ತದೆ: ಜುಲಿಯಸ್ ಸಿಝರ್ ನಾಟಕದಲ್ಲಿ ಸಿಝರ್ ಬ್ರುಟಸ್‌ನಿಗೆ ಹೀಗೆ ಹೇಳುತ್ತಾನೆ :"Men at sometime are masters of their fates. The fault, dear Brutus, is not in our stars, But in ourselves, that we are underlings."

ಆದರೆ ನಾವು ನಿರೀಕ್ಷಿಸಿದಂತೆ ಅಥವಾ ಅಂದುಕೊಂಡಂತೆ ಘಟನೆಗಳು ನಡೆಯುತ್ತವೆ ಎಂದೇನಿಲ್ಲ. ನಮ್ಮ ಬದುಕಿನಲ್ಲಿ ಜರಗುವ ಘಟನೆಗಳು – ಒಳ್ಳೆಯ ಘಟನೆಗಳಾಗಲಿ, ಕೆಟ್ಟ ಘಟನೆಗಳಾಗಲಿ ಆಕಸ್ಮಿಕವಾಗಿಯೇ ಇರಬಹುದು. "ಪ್ರಾಯಶಃ ಅನೇಕ ಸಂದರ್ಭಗಳಲ್ಲಿ ಆಕಸ್ಮಿಕ ಎನ್ನುವುದು ನಮಗೆ ಮುಖ್ಯವಾಗುತ್ತದೆ. ನಾವು ಹುಟ್ಟುವುದು ಹೇಗೆ ಆಕಸ್ಮಿಕವೋ ನಮ್ಮ ತಂದೆ ತಾಯಿಗಳೂ ಕೂಡ, ನಮ್ಮ ತಂದೆ ತಾಯಿಗಳಾಗುವುದು ಆಕಸ್ಮಿಕವೇ. ನಾವು ಇಂಥವರ ಮಗನೋ ಮಗಳೋ ಆಗಬೇಕೆಂದು ಅರ್ಜಿ ಹಾಕದೆ ಹುಟ್ಟುತ್ತೇವೆ. ಲಾಟರಿಯಲ್ಲಿ ಬಹುಮಾನ ಬಂದ ಹಾಗೆ. ನಮ್ಮ ನಿರೀಕ್ಷೆಗೂ ಮೀರಿ, ನಾವು ಹೊರಟ ಕೆಲಸ ಕೆಲವು ಸಲ ತೀರಾ ಯಶಸ್ವಿಯಾಗುತ್ತದೆ. ಕೆಲವು ಸಲ ಅತ್ಯಂತ ಕರಾರುವಕ್ಕಾಗಿ ಹಾಕಿದ ಯೋಜನೆಯೂ ಅಸಫಲವಾಗುತ್ತದೆ" ಎಂದು ಮೊಗಸಾಲೆ ಬರೆಯುತ್ತಾರೆ. ಈ ಮಾತುಗಳು ಮೊಗಸಾಲೆಯವರ ಜಾತ್ಯತೀತ ನಿಲುವಿಗೆ, ಅವರ ಪ್ರಖರ ವೈಚಾರಿಕ, ವೈಜ್ಞಾನಿಕ ದೃಷ್ಟಿಕೋನಕ್ಕೆ ಹಿಡಿದ ಕನ್ನಡಿಯಂತಿವೆ.

ಮೊಗಸಾಲೆಯವರು ತುಂಬಾ ಸ್ವಾಭಿಮಾನದ ವ್ಯಕ್ತಿ. ಅವರು ಎಂಥ ಸಂದರ್ಭದಲ್ಲೂ ತಮ್ಮ ಸ್ವಾಭಿಮಾನಕ್ಕೆ ಚ್ಯುತಿ ಬರದ ಹಾಗೆ ಬದುಕಿದವರು. ಸ್ವಾಭಿಮಾನ ಹಾಗೂ ವಿನಯ ಎರಡನ್ನೂ ಸಮಸಮವಾಗಿ ನೋಡಿಕೊಂಡು ಬಂದವರು. ತಮ್ಮ ಅಭಿಮಾನವನ್ನು ಎತ್ತಿ ಹಿಡಿಯುವ, ವಿನಯವನ್ನು ಪ್ರಕಟಿಸುವ ಸಂದರ್ಭಗಳನ್ನು ಮೊಗಸಾಲೆ 'ಬಯಲಬೆಟ್ಟ'ದಲ್ಲಿ ಅಲ್ಲಲ್ಲಿ ಪ್ರಸ್ತಾಪಿಸಿರುತ್ತಾರೆ.

ಮೊಗಸಾಲೆಯವರು ಲಗ್ನವಾದಾಗ ಮಾವನ ಮನೆಯಲ್ಲಿ ಮನೆಯ ಅಳಿಯನಾಗಿ ಇರುವಂತೆ ಆಹ್ವಾನ ಬಂದಾಗ ಅವರು ಅದನ್ನು ವಿನಯದಿಂದ ತಳ್ಳಿಹಾಕಿ ತಮ್ಮ ಸ್ವಂತದ ಮನೆಯಲ್ಲಿ ಸ್ವತಂತ್ರವಾಗಿ, ಸ್ವಾಭಿಮಾನದಿಂದ ಬದುಕಲು ಇಷ್ಟಪಡುತ್ತಾರೆ.

ಮೊಗಸಾಲೆಯವರು ಅನಾರೋಗ್ಯಕ್ಕೆ ತುತ್ತಾಗಿ ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳಬೇಕಾಗಿ ಬಂದಾಗ ಹಾ.ಮಾ.ನಾಯಕರು ಅವರ ಮುಂದೆ ಒಂದು ಪ್ರಸ್ತಾಪ ಇಟ್ಟರು. ಅದೇನೆಂದರೆ ಅನಾರೋಗ್ಯಕ್ಕೆ ತುತ್ತಾದ ಸಾಹಿತಿಗಳಿಗೆ ಆರ್ಥಿಕ ಸಹಾಯ ನೀಡುವ ಸತ್ಸಂಪ್ರದಾಯವನ್ನು ಸಾಹಿತಿ ಎಸ್.ಎಲ್.ಭೈರಪ್ಪ ಇಟ್ಟುಕೊಂಡಿದ್ದು, ಅವರೀಗ ಮೊಗಸಾಲೆಯವರಿಗೆ 10 ಸಾವಿರ ರೂಪಾಯಿ ಕೊಡಲು ಮುಂದೆ ಬಂದಿದ್ದಾರೆಂದು ಹಾ.ಮಾ.ನಾಯಕರು ಮೊಗಸಾಲೆಯವರಿಗೆ ತಿಳಿಸುತ್ತಾರೆ. ಆದರೆ ಮೊಗಸಾಲೆ ಭೈರಪ್ಪನವರ ಆರ್ಥಿಕ ಸಹಾಯವನ್ನು ವಿನಯದಿಂದ ನಿರಾಕರಿಸಿ ಸರ್ಕಾರದ ಸಹಾಯಕ್ಕೆ ಮೊರೆ ಹೋಗುತ್ತಾರೆ.

ಮೊಗಸಾಲೆಯವರು ನಿವೃತ್ತರಾದಾಗ ಅವರ ಸನ್ಮಿತ್ರರಾದ ವಸಂತರಾಯರು ಅವರ ಮನೆಗೆ ಭೇಟಿ ಕೊಟ್ಟು ಅವರ ಕೈಯಲ್ಲಿ ಐದು ಸಾವಿರ ರೂಪಾಯಿಗಳನ್ನು ಇರಿಸಿ ನಿವೃತ್ತಿಯ ನಂತರ ಮೊಗಸಾಲೆ ಆರ್ಥಿಕ ತೊಂದರೆಗೆ ಸಿಲುಕಬಾರದೆಂದು ಅವರು ಆರ್ಥಿಕ ಸಹಾಯ ಮಾಡುತ್ತಿದ್ದುದಾಗಿ ಹೇಳುತ್ತಾರೆ ಮತ್ತು ಪ್ರತಿ ತಿಂಗಳು ಅವರು ಮೊಗಸಾಲೆಯವರಿಗೆ ಐದು ಸಾವಿರ ರೂಪಾಯಿ ಕೊಡುತ್ತಾ ಹೋಗುವುದಾಗಿ ತಿಳಿಸುತ್ತಾರೆ. ಆದರೆ ಮೊಗಸಾಲೆ "ಬೇಕಾದಾಗ ನಾನೇ ಕೇಳುವೆ, ಅಷ್ಟರತನಕ ಇದು ನಿಮ್ಮ ಅಕೌಂಟಿನಲ್ಲೇ ಇರಲಿ" ಎಂದು ಹೇಳುತ್ತಾ ವಸಂತರಾಯರ ಆರ್ಥಿಕ ಸಹಾಯವನ್ನು ನಿರಾಕರಿಸುತ್ತಾರೆ. ಹಣದ ರೂಪದಲ್ಲಿ ಆರ್ಥಿಕ ಸಹಾಯ ನೀಡಲು ಮುಂದಾದಾಗ ಅದನ್ನು ನಿರಾಕರಿಸುವ ವ್ಯಕ್ತಿಗಳು ಬಹಳ ವಿರಳ. ಮೊಗಸಾಲೆ ಇಂಥ ವಿರಳರ ಸಾಲಿನಲ್ಲಿ ನಿಲ್ಲುತ್ತಾರೆ.

ಅನಾರೋಗ್ಯಕ್ಕೆ ತುತ್ತಾದ ಸಾಹಿತಿಗಳಿಗೆ ಆರ್ಥಿಕ ಸಹಾಯ ನೀಡುವಂಥ ಪರಿಪಾಠ ಇಟ್ಟುಕೊಂಡಿರುವ ಸಾಹಿತಿ ಭೈರಪ್ಪನವರಿಂದ ನಾವು ಅನುಕೂಲಸ್ಥ, ಶ್ರೀಮಂತ ಸಾಹಿತಿಗಳು ಪಾಠ ಕಲಿಯಬೇಕಿದೆ. ಮಾನವೀಯತೆ ಮೆರೆಯುವ, ಹೃದಯ ವಿಶಾಲತೆ ತೋರಿಸುವ ಭೈರಪ್ಪನವರನ್ನು ಅಭಿನಂದಿಸಬೇಕಿದೆ ಮತ್ತು ಲೇಖಕನಾದವನಿಗೆ ಸ್ವಾಭಿಮಾನ ಅಗತ್ಯವಾಗಿ ಇರಬೇಕೆಂಬುದನ್ನು ಸಾರಿ ಹೇಳಿದ ಮೊಗಸಾಲೆಯವರನ್ನು ಸ್ಮರಿಸಬೇಕಿದೆ.

ಮೊಗಸಾಲೆಯವರು ತಮ್ಮದೇ ಆದ ರೀತಿಯಲ್ಲಿ ಪ್ರತಿಭಟನೆ ಮಾಡುತ್ತಾ ಬಂದವರು. ಅವರ ಜಾತ್ಯತೀತ ನಿಲುವು ಹಾಗೂ ಮಾನವೀಯ ಕಾಳಜಿಗಳನ್ನು ನಿರೂಪಿಸುವಂಥ ಘಟನೆಗಳು 'ಬಯಲಬೆಟ್ಟ'ದ ಉದ್ದಕ್ಕೂ ನಮಗೆ ಎದುರಾಗುತ್ತವೆ. ಉಡುಪಿಯಲ್ಲಿ ಆಯುರ್ವೇದ ಶಿಕ್ಷಣವನ್ನು ಪೂರೈಸಿ ಸಾರ್ಕುಡೇಲಿಗೆ ಬಂದಾಗ ಕೆಲಕಾಲ ಅವರು ತಮ್ಮ ಮನೆಯಲ್ಲೇ ರೋಗಿಗಳಿಗೆ ಚಿಕಿತ್ಸೆ ನೀಡುತ್ತಾರೆ. ಕೀಳು ಜಾತಿಗೆ ಸೇರಿದ ರೋಗಿಗಳಿಗೆ ಮನೆಯ ಹೊರಗಡೆ ಚಿಕಿತ್ಸೆ ನೀಡಬೇಕು ಮತ್ತು ಅಂಥವರಿಗೆ ಚಿಕಿತ್ಸೆ ನೀಡಿದ ತರುವಾಯ ಬಟ್ಟೆ ಬದಲಿಸಿ ಸ್ನಾನ ಮಾಡಿ ಶುಚಿಯಾಗಬೇಕೆಂದು ಅವರ ಪುಟ್ಟತ್ತೆ ಹೇಳಿದಾಗ ಮೊಗಸಾಲೆ ತಮ್ಮ ಪುಟ್ಟತ್ತೆಯ ಸಂಪ್ರದಾಯದ ವಿರುದ್ಧ ಧ್ವನಿ ಎತ್ತುತ್ತಾರೆ. ಬಿಲ್ಲವ ಜನಾಂಗಕ್ಕೆ ಸೇರಿದವರನ್ನು ಮುಟ್ಟಕೂಡದೆಂಬ ಪುಟ್ಟತ್ತೆಯ ವಾದವನ್ನು ಮೊಗಸಾಲೆ ಒಪ್ಪುವುದಿಲ್ಲ. ಜಾತಿಯ ಆಧಾರದ ಮೇಲೆ ತಾರತಮ್ಯ

ಮಾಡುವುದಕ್ಕೆ ಮೊಗಸಾಲೆ ಪ್ರತಿರೋಧ ವ್ಯಕ್ತಪಡಿಸುತ್ತಾರೆ. ಈ ಕಾರಣಕ್ಕಾಗಿಯೇ ಕಾಂತಾವರದಲ್ಲಿ ನೌಕರಿ ಮಾಡುವ ಸಂದರ್ಭ ಒದಗಿ ಬಂದಾಗ ಮೊಗಸಾಲೆಯವರಿಗೆ ಬಹಳ ಖುಷಿಯಾಗುತ್ತದೆ.

ಆದರೆ ಕಾಂತಾವರದಲ್ಲೂ ಎಲ್ಲಾ ಜಾತಿಯ ರೋಗಿಗಳನ್ನು ಸಮಾನವಾಗಿ ಕಾಣುವ ಕಾರಣಕ್ಕಾಗಿ ಕೆಲವೊಮ್ಮೆ ಮೊಗಸಾಲೆ ಸಂಪ್ರದಾಯಸ್ಥ ಬ್ರಾಹ್ಮಣರ ಟೀಕೆಗೆ ಗುರಿಯಾಗಬೇಕಾಗಿ ಬರುತ್ತದೆ. ಆದರೆ ಅದರಿಂದ ಮೊಗಸಾಲೆ ಹಿಂಜರಿಯುವುದಿಲ್ಲ. ಕಾಂತಾವರದಲ್ಲಿಯ ಬ್ರಾಹ್ಮಣರು ಒಳಪಂಗಡಗಳ ಕಾರಣಕ್ಕಾಗಿ ಪರಸ್ಪರ ದ್ವೇಷಿಸುತ್ತಿದ್ದುದಕ್ಕೆ ಮೊಗಸಾಲೆ ಖೇದ ವ್ಯಕ್ತಪಡಿಸುತ್ತಾರೆ. ತಮ್ಮ ಒಳಪಂಗಡಕ್ಕೆ ಸೇರದ ಮಹಿಳೆಯನ್ನ ವಿವಾಹ ಮಾಡಿಕೊಳ್ಳುವುದರ ಮೂಲಕ ಬ್ರಾಹ್ಮಣರ ಒಳಪಂಗಡಗಳ ಮಧ್ಯೆ ಇದ್ದ ಅಂತರವನ್ನು ಕಾಂತಾವರದ ಮಟ್ಟಿಗಾದರೂ ಇಲ್ಲವಾಗಿಸಿದರು.

ಕಾಂತಾವರದಲ್ಲಿಯ ಮೊಗಸಾಲೆಯವರ ಮನೆ ಒಂದು ರೀತಿಯಲ್ಲಿ ಬಸವಣ್ಣನ 'ಮಹಾಮನೆ'ಯನ್ನು ಜ್ಞಾಪಕಕ್ಕೆ ತರುತ್ತದೆ. ಸಾಹಿತ್ಯದಲ್ಲಿ ಆಸಕ್ತಿಯುಳ್ಳ ಎಲ್ಲರಿಗೂ ಅವರ ಮನೆಯಲ್ಲಿ ಮುಕ್ತ ಅವಕಾಶ ಇದೆ. ಕನ್ನಡ ಸಾಹಿತ್ಯ, ಸಂಸ್ಕೃತಿಯ ಅಭಿವೃದ್ಧಿಗಾಗಿ ಕೆಲಸ ಮಾಡಿದ ಬಹುತೇಕ ಲೇಖಕರು, ವಿದ್ವಾಂಸರು ಮೊಗಸಾಲೆಯವರ ಮನೆಗೆ ಭೇಟಿ ಕೊಟ್ಟು ಮೊಗಸಾಲೆ ದಂಪತಿಗಳ ಪ್ರೀತಿಯ ಆತಿಥ್ಯ ಸ್ವೀಕರಿಸಿ ಹೋಗಿದ್ದಾರೆ.

ಪ್ರೀತಿ, ವಿಶ್ವಾಸ, ಸಹಾನುಭೂತಿ ಮತ್ತು ಅನುಕಂಪವನ್ನು ಮೊಗಸಾಲೆ ಎಲ್ಲರಿಂದ ಧಾರಾಳವಾಗಿ ಪಡೆದುಕೊಂಡವರು ಮತ್ತು ತಮ್ಮ ಸಂಪರ್ಕದಲ್ಲಿ ಬಂದವರಿಗೆಲ್ಲ ಅವುಗಳನ್ನು ಅಷ್ಟೇ ಧಾರಾಳವಾಗಿ ಉಣಬಡಿಸಿದವರು.

ಚಿಕ್ಕ ವಯಸ್ಸಿನಲ್ಲೇ ತಂದೆಯನ್ನು ಕಳೆದುಕೊಂಡ ಮೊಗಸಾಲೆ ಚಿಕ್ಕಪ್ಪನ ಕಕ್ಕುಲಾತಿಯಲ್ಲಿ ಬೆಳೆದರು. ಸೋದರ ಮಾವಂದಿರ ಹಾಗೂ ಅವರ ಹೆಂಡಂದಿರ ಸಹಾಯದಿಂದ ವಿದ್ಯಾಭ್ಯಾಸ ಪೂರೈಸಿ, ತಾಯಿ, ಪುಟ್ಟತ್ತೆ ಹಾಗೂ ಸಹೋದರರ ತ್ಯಾಗ ಹಾಗೂ ಹರಕೆಯಿಂದ ತಮ್ಮ ಬದುಕನ್ನು ರೂಪಿಸಿಕೊಂಡವರು.

ಪ್ರಾಮಾಣಿಕವಾಗಿ ಬದುಕಿದ, ನಿಷ್ಠೆಯಿಂದ ಸಾಹಿತ್ಯ ರಚಿಸಿದ, ಪ್ರತಿಫಲಾಪೇಕ್ಷೆಯಿಲ್ಲದೆ ಕನ್ನಡದ ಕೆಲಸ ಮಾಡಿದ, ಪ್ರೀತಿ, ವಿಶ್ವಾಸ ಹಾಗೂ ಮಾನವೀಯತೆ ಮೆರೆದ ಮೊಗಸಾಲೆಯವರ ಆತ್ಮವೃತ್ತಾಂತದ ಅಧ್ಯಯನ ಪುಣ್ಯಕ್ಷೇತ್ರವೊಂದಕ್ಕೆ ತೀರ್ಥಯಾತ್ರೆ ಕೈಕೊಂಡಂತೆಯೇ ಸೈ.

ನಮಗೆಲ್ಲ ಮಾದರಿಯಾಗಿರುವ, ಸ್ಫೂರ್ತಿಯ ಸೆಲೆಯಾಗಿರುವ ಮೊಗಸಾಲೆಯವರು ನಮ್ಮೊಡನೆ ನೂರ್ಕಾಲ ಬದುಕಿ ಕನ್ನಡ ನಾಡು-ನುಡಿಯ ಸೇವೆಯನ್ನು ಇನ್ನೂ ಹೆಚ್ಚು ವ್ಯಾಪಕವಾಗಿ ಮತ್ತು ಅರ್ಥವತ್ತಾಗಿ ಮಾಡುವಂತಾಗಲಿ ಎಂದು ನಾನು ಈ ಸಂದರ್ಭದಲ್ಲಿ ಆಶಿಸುತ್ತೇನೆ.

●



# ಬಯಲು ಬೆಟ್ಟ (ವೃತ್ತಾಂತ)

**ಜನಾರ್ಧನ ಗುರ್ಕಾರ**

'ಪುಟ್ಟ ಬಯಲೊಂದು ಬೆಟ್ಟವಾಗುವ ಕನಸು ಇಲ್ಲಿದೆ! ಎಂಬುದು ಮೊಗಸಾಲೆ ಯವರು ಮುನ್ನುಡಿಯಲ್ಲಿ ಈ ಬೃಹತ್ ಕೃತಿಯನ್ನು ನಿರ್ಮಿಸಿದ ಮೇಲೆ ತಾವೇ ಅದನ್ನು ತೂಳೆದು ಅಳೆದು ಹೇಳಿದ ಮಾತು. ಅದರ ನಿಲುವು ಚೆಲುವು ನಾಡು ನೋಡಿ ಒಲಿದು ನುಡಿದರೆ ಅವರು ಧನ್ಯ! ಅದರ ಓರೆಕೋರೆಗಳನ್ನು ತಿಳಿದು ತೋರಿಸಿದರೂ ಅವರಿಗೆ ಮಾನ್ಯ. ಏಕೆಂದರೆ ಇಲ್ಲಿ ಯಾರೂ ಯಾವುದೂ ಪರಿಪೂರ್ಣ ಇಲ್ಲವೆಂಬುದು ಅವರೂ ಬಲ್ಲರು. ಈ ಕೃತಿಯಲ್ಲಿ ಬಯಲು ಚಾಚಿದ ಹಾಗೆ ಬೆಟ್ಟವೂ ಚಾಚಿಕೊಂಡು ಬಯಲಿನ ಮಾನದಂಡದಂತೆ ನಿಂತಿದೆ ಕುಂತಿದೆ! ಹಾಗೆನೆ ಇಲ್ಲಿನ ಹೊಳೆ, ಮಳೆ, ಹೊಲ, ನಾಲೆ, ಬೆಳೆ, ಬೆಟ್ಟದ ನೆರಳು ಕನ್ನಡಾಂಬೆಗೆ ತೊಡಿಸಿದ ಒಡವೆಗಳು.

ಕನ್ನಡದಲ್ಲಿ ಆತ್ಮವೃತ್ತಾಂತಗಳು ಅತ್ಯಂತ ವಿರಳ. ಜಿ.ಪಿ. ರಾಜರತ್ನಂ ಅವರ 'ಹತ್ತು ವರುಷ' ಬಹುಶಃ ಮೊದಲ ಸ್ವಶೋಧನಾ ಆತ್ಮವೃತ್ತಾಂತವಾಗಿರಬೇಕು. ಇದನ್ನು ರಾಜರತ್ನಂ 'ಮಹಾ ಹರಟೆ' ಎಂದೂ ಕರೆದಿದ್ದಾರೆ. ಇದರ ಪ್ರಸ್ತಾಪ ನಮ್ಮ ಶಿವರಾಮ ಕಾರಂತರ 'ಹುಚ್ಚು ಮನಸ್ಸಿನ ಹತ್ತು ಮುಖಗಳು' ಗ್ರಂಥದಲ್ಲಿ ಮುಖ ತೋರಿಸಿದೆಯಷ್ಟೇ. ಅನಂತರ ಸಾಹಿತ್ಯಲೋಕದಲ್ಲಿ ಕುವೆಂಪು ಅವರ 'ನೆನಪಿನ ದೋಣಿಎಯಲ್ಲಿ' ಅತ್ಯದ್ಭುತ ಅಪೂರ್ವದ ಮೇರುಕೃತಿ. ಇದರ ತರುವಾಯ ಈ ಕ್ಷೇತ್ರದಲ್ಲಿ ಭೈರಪ್ಪನವರ 'ಭಿತ್ತಿ' ಇಂಥ ಜೀವನವೈವಿಧ್ಯದ ಜೀಸಿನಲ್ಲಿ ನೆಲನಿಂತ, ಗಟ್ಟಿ ಕೃತಿಯೆಂದು ಹೇಳಬಹುದು. ಕನ್ನಡದ ಆಸ್ತಿ ಮಾಸ್ತಿ ಅವರ 'ಭಾವ' ಇನ್ನೊಂದು ಗಹನ ಜೀವನ ಗ್ರಂಥ. ಇವುಗಳ ಲಗುಬಿಗು, ಲಾವಣ್ಯ, ಲೋಕದ ವಿಹಂಗಮವಲೋಕನದ ಕಿಂಚಿತ್ ವಿಹಾರವನ್ನು ನೆನಪಿನಲ್ಲಿಟ್ಟುಕೊಂಡು ಮೊಗಸಾಲೆ ತಮ್ಮ 'ಬಯಲು ಬೆಟ್ಟ' ಕ್ಕೆ ಹತ್ತಿದ್ದಾಗಿದೆ. ಅಟ್ಟ ಹತ್ತಿದವನು ಬೆಟ್ಟ ಹತ್ತುಬಹುದಲ್ಲವೇ? ಮೂರ್ತಿರಾಯರ 'ಸಂಜೆಗಣ್ಣಿನ ಹಿನ್ನೋಟ' ಇಲ್ಲಿ ಸ್ಮರಿಸುವ ಕೃತಿ.

ಈ 'ಬಯಲು ಬೆಟ್ಟ' ನಾಡ ಮುಂದಿಡಲು ಮೊಗಸಾಲೆ ಅವರಿಗೆ ಪೂರ್ವಪ್ರೇರಣೆ ದೊರಕಿದ್ದು ಕನ್ನಡ ಕುಲಪುಣ್ಯ ಪಂಕ್ತಿಯಲ್ಲಿ ಪ್ರತಿಷ್ಠಿತರಾದ ಹಾ.ಮಾ. ನಾಯಕರೊಂದಿಗಿನ ಮಾತುಕತೆಯ ಮೂಲಕವಾಗಿದೆ. ಇವರು ಮೊಗಸಾಲೆಯವರ ಮೊದಲ ಗುರುವರೇಣ್ಯರು.

ಹಾ.ಮಾ.ನಾ ಅವರ 'ಬಾಳ್ನೋಟ' ಕೂಡ ಅವರ ಸಾಹಿತ್ಯಕ ಬಾಳಿನ ಪ್ರಪ್ರಥಮ ಆತ್ಮಾವಲೋಕನ ಪ್ರಣೀತವಾದ ಗಣ್ಯ ಪುಟ್ಟ ಕೃತಿಯಾಗಿದೆ. 'ಬಯಲು ಬೆಟ್ಟ'ದ ಮೊದಲ ಖಂಡದ ನಾಂದಿಯಾಗಿ ಹಾ.ಮಾ.ನಾ ಸಾಕ್ಷಾತ್ಕಾರವಾಗುತ್ತದೆ. ಅವರ ಬೆಂಬಲ ಪ್ರವಾಹವಾಗಿ ತಮ್ಮನ್ನು ಮುನ್ನಡೆಸಿದುದನ್ನು ಮೊಗಸಾಲೆ ಹಲವಾರು ಸಲ ಮೆಲುಕು ಹಾಕುವುದನ್ನು ಗಮನಿಸುವಂತಿದೆ. ಇದೊಂದು ಮೊಗಸಾಲೆ ಬಾಳಿಗೆ ಒದಗಿದ ಅದೃಷ್ಟ ಅಷ್ಟಬಂಧ!

ಐನೂರು ಪುಟಗಳ ಸುದೀರ್ಘ ವೃತ್ತಾಂತದಲ್ಲಿ ಮೊದಲ ಭಾಗ 'ಹೊಳೆಯ ಮೇಲ ಮಳೆ' ಇನ್ನೂರು ಪುಟಗಳಷ್ಟು ವಿವರ ಹೊಂದಿದೆ. ಬಾಲ್ಯ ಜೀವನದ ಜಂಜಾಟದ ಜಾಲರಿಯಲ್ಲಿ ಇದು ಸೋಸಿ ಸೂಸಿ ಬಂದಿದೆ. ಇಲ್ಲಿ ಹವ್ಯಕ ಬ್ರಾಹ್ಮಣ ಪರಂಪರೆಯ ಸಂಸ್ಕಾರ ಸಂಸ್ಕೃತಿಯ ತೌಲನಿಕ ಚಿತ್ರಣ ಚಿತ್ತರಗೊಂಡು ಗತಕಾಲದ ವೈಭವ, ವಿರಾಮ, ನಂಬಿಕೆ ನೀತಿನಿಯಮಗಳ ಕೊತ್ತಳ ಕೋಟೆಗಳ ಜಿಗಿನಿಗಿಗಳನ್ನು ತಮ್ಮ ಚುರುಕಿನ ವೈಚಾರಿಕ ಶಕ್ತಿಯನ್ನು ಸಮರ್ಥವಾಗಿ ವಿನಿಯೋಗಿಸಿ ವಿವೇಚನೆ ಮಾಡಿದ್ದಾರೆ ಮೊಗಸಾಲೆ. ತೋಟ, ಬೇಸಾಯ, ದುಡಿಮೆ, ಕಾಯಕ ಮಡಿಮೈಲಿಗೆಯ ಅಂದಿನ ಪ್ರಚಲಿತ ಸ್ಥಿತಿಗತಿಗಳ ಘೋರಗೋಟಾಲಿಗಳ ಮಂಥನವಿಲ್ಲಿ ಮೂಡಿ ಬಂದಿದೆ. ಮನ ಕರಗಿಸುವ ಹಾಗೆ ಬಯಲ ರಂಗಸ್ಥಳ ನಿರ್ಮಾಣಗೊಂಡಿದೆ.

ಇನ್ನೂ ಪ್ರೌಢಶಾಲೆಯ ಶೈಕ್ಷಣಿಕ ಅಂಗಳದಿಂದ ಹೊರಕ್ಕಿಳಿಯದ ಮೊಗಸಾಲೆ, ಜಗತ್ತು, ಸಾಹಿತ್ಯ, ಸಂಸಾರ, ಸ್ವಾತಂತ್ರ್ಯ, ಸಾವು ನೋವುಗಳ ಹೊಳೆಯಲ್ಲಿ ಮೇಲಿನ ಮಳೆಯಲ್ಲಿ ಎಲ್ಲೆಲ್ಲೂ ಏನೇನೂ ಕಂಡು ತಬ್ಬಿಬ್ಬಾಗಿ ನೋಡಿಯೇ ನೋಡಿದ್ದಾರೆ. ಅವರ ದೃಷ್ಟಿ ದಶ ದಿಕ್ಕುಗಳಲ್ಲಿ ಆಗಲೇ ಹರಿಹಾಯ್ದಿದೆ. ಇಂದಿನ ಬಿಗ್ ಬಜಾರಿನ ಸುಸಂಗ್ರಹದ ಅಂಗಡಿಯಲ್ಲಿ ಅದೆಷ್ಟು ಸರಕನ್ನು ಸಂಗ್ರಹಿಸಿ ಗಿರಾಕಿಗೆ ವಾಚಕನಿಗೆ ಎಲ್ಲಿಂದ ಏನು ಬೇಕೋ ಅದನ್ನು ನೀಡುವಷ್ಟು ಸಿರಿವಂತ ವ್ಯವಹಾರಿಯಾಗಿ ಕಾಣಿಸುತ್ತಾರೆ ಮೊಗಸಾಲೆ! ಇಲ್ಲಿ ಈ ಬಯಲಲ್ಲಿ ಬಜಾರಿನಲ್ಲಿ ಮೊಗಸಾಲೆ ಕವಿಯಾಗಿ ಕವನ ಬರೆದು ಪತ್ರಿಕೆಗಳಲ್ಲಿ ಪ್ರಕಟಿಸಿ ಅವಿಚಾರಿತರಮಣೀಯ ಸಂತಸಗೊಂಡದ್ದು ಅವರ ದೊಡ್ಡ ಭಾಗ್ಯವೆನ್ನಬೇಕು! ಈ ಬಟಾಬಯಲಿನಲ್ಲಿ ಅವರಿಗೆ ವಾತ್ಸಲ್ಯದ ನೆರವು ಪ್ರೀತಿಯಿಂದ ನೀಡಿ ನೋಡಿಕೊಂಡಿರಬೇಕು ಅವರ ಪುಟ್ಟತ್ತೆ. ಸಾಹಿತ್ಯ ಲೋಕದ ಅಂದಿನ ಗಣ್ಯರ ಕೃತಿಗಳನ್ನು ಸಂಗ್ರಹಿಸಿಟ್ಟ ಅವರ ಅಕ್ಕರೆಯ ಗೌರವಕ್ಕೆ ಪಾತ್ರರಾದ ಸೋದರಮಾವ ಗೋಪಾಲಕೃಷ್ಣ ಭಟ್ಟರನ್ನು ನೆನೆದು ಮತ್ತೆ ಮತ್ತೆ ನಲಿಯುತ್ತಾರೆ–ಮೊಗಸಾಲೆ. ಧಾರವಾಡದ ಮನೋಹರ ಗ್ರಂಥಮಾಲೆ, ಸಮಾಜ ಪುಸ್ತಕಾಲಯ, ಮಿಂಚಿನಬಳ್ಳಿ ಪ್ರಕಾಶನಗಳ ಗದ್ಯ ಗ್ರಂಥಗಳು ಮೊಗಸಾಲೆಯವರಿಗೆ ದಾರಿದೀಪವಾಗಿ ಮುನ್ನಡೆಸುತ್ತವೆ. ಆದರೆ ಹತ್ತಿರದ ಪುತ್ತೂರಿನ ಶಿವರಾಮ ಕಾರಂತರ ಕೆಲ ಕಾದಂಬರಿಗಳು ಗೋಪಾಲಕೃಷ್ಣ ಭಟ್ಟರಿಗೆ 'ಬೋರು! ಅನಿಸಿದ್ದನ್ನು ಮುಚ್ಚುಮರೆಯಿಲ್ಲದೆ ತೋರಿಸಿದ್ದಾರೆ– ಹಾಗೆ ಅವರ ಬಗ್ಗೆ ಗೌರವದ ಗೋಪುರ ಮೊಗಸಾಲೆಯಲ್ಲಿ ಮೇಲೆದ್ದು ನಿಂತಿದೆ. ನಿರಂಜನರ ಬರಹಗಳು ಮೊಗಸಾಲೆಯವರಿಗೆ ಬಹಳ ಇಷ್ಟ. ಆ ಹುಮ್ಮಸ್ಸು–ಪ್ರೀತಿ–ನೆನಪು ಅಭಿಮಾನದಿಂದ ತಮ್ಮ ಹಿರಿಯ ಮಗನಿಗೆ 'ನಿರಂಜನ' ನಾಮಕರಣ

ಮಾಡಿದ್ದನ್ನು ಅವರು ಇನ್ನೊಂದು ಕಡೆ ಬಹಿರಂಗಪಡಿಸಿದ್ದಾರೆ.

ಕವಿ ಜನ್ಮ ಮೊಗಸಾಲೆಯವರದ್ದು. ನಂತರದ್ದು ಗದ್ಯ-ಕಥೆ ಕಾದಂಬರಿಕಾರನ ಜನನ. ಅಂದು ಅವರು ಮೊದಲು ಮಾರುಹೋದದ್ದು ಸು.ರಂ. ಎಕ್ಕುಂಡಿ ಅವರ 'ಉಭಯ ಸರಸ್ವತಿ' ಕವಿತೆಗೆ.

'ಮೂಡಲ ಕಂಪಿನ ಬೆಳಕಿನ ಕೆಂಪಿನ। ಬಂಗಾರದ ಹೂವರಳಿತ್ತು! ... ಜ್ಞಾನದ ಹೊಳೆ ಕೆಳಗಿಳಿಯಿತು ಹರಿಸು। ರಿಂಗಣ ಗುಣಿಸುತ ತತ್ವಮಸಿ।' ಇಂಥ ಆ ಕವಿತೆಯ ಸಾಲುಗಳನ್ನು ಆತನಕ ಅವರು ಓದಿರಲಿಲ್ಲ. ಅದೇ ಗುಂಗಿನಲ್ಲಿ-ಗತಿಯಲ್ಲಿ ಮೊಗಸಾಲೆ ನಡೆದು ಓಡಿ ತಾವು ಕವಿತೆ ಹೊಸೆದರು. ಅದೊಂದು ಕುಸುಮ ಷಟ್ಪದಿಯ ಕವನ. 'ಕುಡುಕತನವನು ಬಿಟ್ಟು! ನಡತೆಯ ನೀ ತಿಳಿದು। ನಾಡಿನೊಳಿತಿಗೆ ದುಡಿದು ಮಡಿಯೋ ಕುಡುಕ।' ಎಂಬ ಸಾಲು ಮಾತ್ರ ಕವಿತೆಗೂ, ಅವರು ಈಗ ಸೇರಿದ-ಏರಿದ ಶಿಖರ ಕವಿತೆಗಳ ಭಾವಗಂಗೆಗೂ ಏನೆಂಥ ಓಟ-ವಿಚಾರ ಪ್ರಭಾವಳಿ: "ನನ್ನ ಕವಿತೆಯೇ ಹೋಗು-ಜನತೆಯ ಮಾತಾಗು!" ಅವರ ಕವಿತಾ ಕಾಣಿಕೆಯ ಏಣಿ ಎಲ್ಲಿಗೆ ಮೆಟ್ಟಲೇರಿ ಮುಟ್ಟಿದೆಯಲ್ಲವೇ? ಈ ಸಾಲಿನ ಶೀರ್ಷಿಕೆಯಲ್ಲಿ ಹಾ.ಮಾ.ನಾ. ಅವರು ಮೊಗಸಾಲೆಯವರು ಐವತ್ತರ ತೇರು ಏರಿದ ಸಂದರ್ಭದಲ್ಲಿ 'ತರಂಗ'ದಲ್ಲಿ ತೊಡಿಸಿದ ಅಂಕಣ-ಕಂಕಣ ಅದೆಷ್ಟು ಅರ್ಥಪೂರ್ಣವಾಗಿದೆಯಲ್ಲ! ಇದನ್ನು ಧನ್ಯತೆಯಿಂದ ನೆನಪಿಸುತ್ತಾರೆ ಈ ಕವಿ ಮೊಗಸಾಲೆ!

ತಂದೆ ವಿಠಲರ ಸಾವಿಗೆ ಕಾರಣವೆಂದು ಮುಗ್ಧ ಮೊಗಸಾಲೆ ಮನಸ್ಸಿನಲ್ಲಿ ವಿಚಾರಕುಡಿ-ಕಿಡಿಯುಗಿ ಹುಟ್ಟಿದ್ದು ಮುಂದೆ ಅವರ ಕೃತಿಗಳಲ್ಲಿ ಶೋಧನೆಯ ವೈಚಾರಿಕ ವಾಹಿನಿಯಾಗುತ್ತ ಹರಿಯುವುದನ್ನು ಸಹೃದಯರು ಕಾಣದಿರಲಿಕ್ಕೆ- ಅದಕ್ಕೆ ಮಣಿಯದಿರಲಿಕ್ಕೆ ಸಾಧ್ಯವಿಲ್ಲ.

ಈ ಪ್ರಥಮ ಭಾಗದಲ್ಲಿ ಕವಿತಾ ಪ್ರಕಟಣೆಯಿಂದ ಜಗತ್ತನ್ನೇ ಗೆದ್ದಂಥ ಸಂತೋಷಪಟ್ಟಿದ್ದಾರೆ ಅಂದೊಮ್ಮೆ ಮೊಗಸಾಲೆ. ವಿಸ್ತಾರ ಪ್ರಸ್ಥಾನ ಹೆಚ್ಚಾಗಿ ಹರಡಿದ್ದರೂ, ಕಟ್ಟಡವಲ್ಲದ ಪೆಟ್ಟಿ. ಬೆಳೆಯಲು ಯಾವುದರ ಗೊಡವೆ ಏಕೆ ಬೇಕು? ಆದರೂ ಮೊಗಸಾಲೆ 'ವೃತ್ತಾಂತ' 'ಅಯ್ಯೋ' ಎಂಬ ಭಾವನೆಯನ್ನು, ಅವರ ಮನಸ್ಸಿನಲ್ಲಿ ಬೆಟ್ಟವಾಗಿ-ಬಯಲಲ್ಲಿ ಮುಂದೆ ಮುಂದೆ ಹೋಗಿದೆ. ಅದಕ್ಕೆ ಸಾವಿಲ್ಲ. ಹಾಗೆ ಸಂತೋಷಕ್ಕೂ ಸಾವಿಲ್ಲ.

ಎಸ್.ಎಸ್.ಎಲ್.ಸಿ.ಯನ್ನು ಬಡತನದಲ್ಲೇ ಪೂರೈಸಿ ಯಶಸ್ಸು ಪಡೆದು ಮುಂದಿನ ಶಿಕ್ಷಣಕ್ಕೆ ಉಡುಪಿ ಸೇರಿದ ಹುಡುಗ ಮೊಗಸಾಲೆ ಶ್ರೀಕೃಷ್ಣ ಪರಮಾತ್ಮನಲ್ಲಿ ಪ್ರಾರ್ಥಿಸಿದ್ದು: ನನ್ನ ಕವಿತಾ ಶಕ್ತಿಯನ್ನು ಹೆಚ್ಚು ಮಾಡು! ಹೀಗೆಂದು ಕೈಮುಗಿದದ್ದು ಅವರ ಅಜ್ಜನ ಒತ್ತಾಯಕ್ಕೆ. ಈ ಪ್ರಾರ್ಥನೆಯ ಬಗ್ಗೆ ಮೊಗಸಾಲೆಗೆ ಪಚ್ಚಿನ ತಿಳುವಳಿಕೆ ಇರಲಿಲ್ಲ. ಈ ದೈವಭಕ್ತಿಯ ಕುರಿತು ಮೊಗಸಾಲೆಯ ಮನದಲ್ಲಿ ಮನೆಮಾಡಿರುವ ದ್ವಂದ್ವ ಇದಮಿತ್ಥಂ ಎಂದೂ ಇಂದೂ ಸ್ಪಷ್ಟವಾಗಿ ಪುರಾವೆ ಸಿಗುವುದಿಲ್ಲ. ಇರಲಿ- ಅದಾವುದೋ ಶಕ್ತಿ ಅವರನ್ನುಆಯುರ್ವೇದ ವೈದ್ಯಕೀಯ ಶಿಕ್ಷಣಕ್ಕೆ ಸೆಳೆದೊಯ್ದು ಬಿಟ್ಟು-ಬಿಟ್ಟ ಹತ್ತಿಸಿವೆ. ಇದಕ್ಕೆ ಉಡುಪಿ ಪೇಜಾವರ ಮಠದ ಉಚಿತ ವಸತಿ ಊಟದ ನೆರವು. ಮತೀಯ ರಾಜಕಾರಣ,

ಮಡಿ ಮೈಲಿಗೆಯ ಆಚಾರ-ವಿಚಾರಗಳಿಗೆ ವಿದ್ಯಾರ್ಥಿ ಮೊಗಸಾಲೆ ಮನಸ್ಸಿಲ್ಲದೆ ಹೊಂದಿಕೊಂಡರು. ಹೀಗೆ ಬಯಲು ಬೆಟ್ಟವಾಗುತ್ತ ಹೊರಡುವುದು ಸಾಂಕೇತಿಕವಾಗಿ ಕಾಣಿಸುತ್ತದೆ. ತಂತಾನೆ ಹೊಲಕ್ಕೆ ಹರಿದ ನಾಲೆಯೂ ಇದಾಗುವುದು. ಇದೆಲ್ಲ ಮುಂದಿನ ದ್ವಿತೀಯ  ಭಾಗ-ಬೆಟ್ಟ ಕಟ್ಟಿಕೊಂಡು ಮೈದಾಳಲು ಸನ್ನದ್ಧವಾಗುವ ರಾಗ, ತ್ಯಾಗ-ಭೋಗ... ಭಾಗ್ಯ! ಹರಿಯುವಂಥ ತೊರೆಯ ಪ್ರವಾಹಕ್ಕೆ ಯಾರ ಹಂಗು!

ಕಾಣದ ಕಸರತ್ತು ಮೊಗಸಾಲೆಯವರನ್ನು ಅವರು ಬಯಸದ ಡಿ.ಎಸ್.ಎ.ಸಿ. ಆಯುರ್ವೇದ ಕ್ಷೇತ್ರಕ್ಕೆ ತಂದು-ತುಂಬಿಸಿತು! ಇದಕ್ಕಾಗಿ ಅವರು ತುಸು ನೊಂದರೂ ಬೆಂದು ಬಾಡಿಹೋಗಲಿಲ್ಲ. ದೈವದೊಲುಮೆಯೋ ಹಿರಿಯರ ಹರಕೆಯೋ ನಾಡಿನ ಬೇಡಿ-ಬೇಡಿಕೆಯೋ ಈ ಕ್ಷೇತ್ರವೇ ಕ್ಷಾತ್ರತೇಜವನ್ನು ಮೊಗಸಾಲೆಯನ್ನು ಪಾವನಗೊಳಿಸಿ-ಪರ್ವತ ಮುಟ್ಟಿಸಿ-ಪರಿಸಿ ತೃಪ್ತವಾಯಿತು! ಇದೊಂದು ಸೋಜಿಗದಂತೆ ಕಂಡರೂ ಇಲ್ಲಿ ಸಾಹಸದ ಸಿದ್ಧಿಯೂ ಅಡಗಿರುವುದೂ ಅಷ್ಟೇ ನೈಜವಾದದ್ದು.

ಅದೊಂದು ಪರ್ವತ ಪ್ರವಾಹವೆನ್ನಬಹುದು-ಇಂಗ್ಲೀಷ್‌ನಲ್ಲಿ ಮೌಂಟನ್ ಟೊರೆಂಟ್ ಅಂತಾರಲ್ಲ ಹಾಗೆ. ಅದೆಷ್ಟು ಜ್ಞಾನವಿಜ್ಞಾನದ ಬಂಡಗೊಂಡೆಗಳು ಈ ತೊರೆ-ನೆರೆಯಲ್ಲಿ ತಂಪರಸಿಕೊಂಡು ಮೇಲೆ ಮೇಲೆ ಮಿನುಗಿ ಬಂದವು. ಅದರಲ್ಲಿ ಒಂದೂ ಮೊಗಸಾಲೆಯ ಕ್ಷಾತ್ರತ್ರಾಣವನ್ನು ಅಡೆ ತಡೆಯಲಾಗಲಿಲ್ಲ. ಅವರ ಕೊರಳಿಗೆ ಸ್ವರ್ಣಪದವಿ-ಮಾಲೆಗಳನ್ನು ಅರ್ಪಿಸುತ್ತ ಅವೇ ನಿಂತವು. ಇದರಿಂದ ಬಂಡೆದಂಡೆಗಳ ಬೆಳಕು ಬಲ ಬೆಳಗಿತು. ಏನಂಥ ಅಚ್ಚರಿ!

ಈ ದ್ವಿತೀಯ ಭಾಗ ಪೂರ್ತಿ ವಿಸ್ತಾರದಲ್ಲಿ ನೂರೈದಷ್ಟೆ. ಆದರೆ ಇಲ್ಲಿಯ ಮೊಗಸಾಲೆ ಸಾಹಿತ್ಯ ಸಾಮ್ರಾಜ್ಯದ ಸರ್ವಾಂಗೀಣ ಸಾಧನೆಗೈದು ಶೈಶವಾವಸ್ಥೆಯನ್ನು ದಾಟಿ ಪ್ರಬುದ್ಧಾವಸ್ಥೆಗೆ ದಾಪುಗಾಲು ಹಾಕಿ-ನಡೆದದ್ದನ್ನು, ಪಡೆದದ್ದನ್ನು ನಿಚ್ಚಳವಾಗಿ ನೋಡಬಹುದು. ಮಠದ ಉಚಿತ ನಿಲಯದಲ್ಲಿ ಈ ಕಾಲದ ಕೇಡಾಟದ ರ್‍ಯಾಗಿಂಗ್‌ನ ಸೌಮ್ಯರೂಪದ 'ಹೈಲ್' ಶಿಕ್ಷೆಗೆ ಗುರಿಯಾದರೂ ಗೆದ್ದು ಗಟ್ಟಿಗೊಳ್ಳುತ್ತಾರೆ. ಸಾಹಿತ್ಯದ ದಿಗ್ದಂತಿಗಳ ದರ್ಶನ ಅವರಿಗಾಗುವುದು. ಅವರ ಪ್ರಭಾವ ಶಕ್ತಿಪಾತ ಇವರ ಮೇಲೆ ಸುರಿಯುತ್ತದೆ. ಇದರಿಂದ ಶಿಖರ ಪ್ರಾಯವಾಗಿ ಇವರ ಸಾಹಿತ್ಯ ರಚನೆ-ಪ್ರಕಟಣೆ ಫೋಟೋ ಸಮೇತ ಪ್ರಭಾವಿತರಾದವರ ಬೆಂಬಲದ ದಂಡು ಇವರಿಗೆ ಸೇರಿ ಬರುತ್ತದೆ. ಸಾಹಿತ್ಯ ಕೃತಿಗಳನ್ನು ಮೆಚ್ಚಿದವರು ಇವರ ಕೃತಿ ಪ್ರಕಟಣೆಗೂ ಕೈಚಳಕ ತೋರಿಸಿ-ನಾಪಿತನ ಸ್ಥಾನದಿಂದ ಸಾಹಿತ್ಯ ಪರಿಚಾರಕ-ಪಿತನ ಸ್ಥಾನಕ್ಕೇರಿ ಮೆರೆದು ಮೊಗಸಾಲೆಯವರನ್ನೂ ಮೆರೆಸಿ ಕೊಂಡಾಡುವುದು ಅತ್ಯಂತ ಗಣನೀಯ ಸಂದರ್ಭ ಸೃಷ್ಟಿಯಾಗುವುದು! ಇದಕ್ಕಿಂತ ಸೋಜಿಗ ಇನ್ನೇನು ಉಂಟು? ಇಷ್ಟರಲ್ಲೇ ಮೊಗಸಾಲೆ 'ಮಣ್ಣಿನ ಮಕ್ಕಳು' ಕಾದಂಬರಿ, 'ಹಸಿರು ಬಿಸಿಲು' ಕಥಾಸಂಕಲನ-ಗ್ರಂಥ ಅಚ್ಚಾಗಿ ಜನಮನಕ್ಕೆ ಅಚ್ಚುಮೆಚ್ಚಾಗುತ್ತವೆ. ಇದಲ್ಲವೇ ಯೋಗಾಯೋಗ!

ಸುಕವಿ ವಿಮರ್ಶಕ ಸುಬ್ರಾಯ ಚೊಕ್ಕಾಡಿ, ರಾಮಚಂದ್ರ ದೇವ, ಜಿ.ಎಸ್. ಉಬರಡ್ಕ-

ಮೊದಲಾದ ಖ್ಯಾತ ಸಾಹಿತ್ಯಕಾರರೊಡನೆ ಓಡಾಟ-ಒಡನಾಟ ಹಾಗೂ ಸಾಹಿತ್ಯಿಕ ಚಿಂತನ-ಮಂಥನ ನಡದೇ ನಡೆದಿರುತ್ತದೆ. ಇವರೊಡನೆ ದಾರಿ ನಡೆದು ಹೋದದ್ದು-ಬಂದಿದ್ದಲ್ಲಿ ಕೇವಲ ಸಾಹಿತ್ಯ ಅನ್ನುತ್ತಾರೆ ಮೊಗಸಾಲೆ.

ಉನ್ನತ ಶ್ರೇಣಿಯಲ್ಲಿ ಆಯುರ್ವೇದ ವೈದ್ಯಕೀಯ ಪದವಿ ಡಿ.ಎಸ್.ಎ.ಸಿ. ಮುಗಿಸಿ ಉಡುಪಿಯಿಂದ ಮರಳಿ ಕೋಳ್ಯೂರು, ಕನ್ಯಾನ, ಸಾರ್ಕದೇಲುಗಳಿಗೆ ಬಂದು ಮುಂದೇನೆಂದು ಜೀವನದ ಉಪಾಯ. ಮಾರ್ಗಪರೀಕ್ಷೆ, ಪರಿಶೋಧನೆಯಲ್ಲಿ ತೊಡಗಿದರೂ ಮೊಗಸಾಲೆಗೆ ಸಾಹಿತ್ಯವೂ ಅಪ್ಪಿಕೊಂಡು ಅಲೆದಾಡಿಸುತ್ತಲೇ ಹೋಯಿತು! ಅದೊಂದು ಸಮಸ್ಯೆಯಾಗಿ ಅವರನ್ನು ಕೊರಗಿಸಲಿಲ್ಲ. ಕಂದಾಚಾರಗಳಾಚೆ ಬದುಕಬೇಕೆಂಬ ಸಂಕಲ್ಪ ಅವರಲ್ಲಿ ಶಾಶ್ವತವಾಗಿ ನೆಲೆಗೊಂಡಿತ್ತು.

ಎರಡನೆಯ ಭಾಗದ ಮುಕ್ತಾಯ ಹಂತ ಮೊಗಸಾಲೆ ಉದ್ಯೋಗಸ್ಥರಾಗಲು ಹೆಣಗಾಡುವಂಥದ್ದು. ಎಲ್ಲಿ ವೃತ್ತಿನಿರತನಾಗಿ ನೆಲೆಸುವುದು-ಪ್ರೈವೇಟ್ ಕ್ಲಿನಿಕ್ ಇಡುವುದೇ... ಎಲ್ಲಿ ಏನೆಂಬ ವಿಚಾರ ಸಮರ! ಈ ಗೊಂದಲದಲ್ಲಿ ಅವರಿಗೆ ಕಾಂತಾವರದ ಕಾನನ ಮಧ್ಯದಲ್ಲಿ ಸರಕಾರದ ರೂರಲ್ ಡಿಸ್ಪೆನ್ಸರಿಯ ಕೆಲಸ ಖಾಲಿಯಾಗಿ ಅಲ್ಲಿಗೆ ವೈದ್ಯಾಧಿಕಾರಿಯ ನೇಮಕದ ಕುರಿತು ಜಾಹೀರಾತಾದಾಗ ಅದಕ್ಕೆ ಅರ್ಜಿ ಗುಜರಾಯಿಸುತ್ತಾರೆ ಮೊಗಸಾಲೆ. ಸರಿ-ಅವರನ್ನು ಕಾಲಾನಂತರ ಸಂದರ್ಶನಕ್ಕೂ ಆಹ್ವಾನಿಸಲಾಗುತ್ತದೆ. ಆರ್ಥಿಕ ಸಂಕಷ್ಟದಲ್ಲಿ ಈ ಹುದ್ದೆಯ ಸಂದರ್ಶನ ಎದುರಿಸುತ್ತಾರೆ. ಅಲ್ಲಿ 29 ಜನ ಅಭ್ಯರ್ಥಿಗಳು ಒಬ್ಬರಿಗಿಂತ ಇನ್ನೊಬ್ಬರು ಪೈಪೋಟಿಯಲ್ಲಿ-ವಶೀಲಿಯಲ್ಲಿ ವ್ಯಥಪೇಕರಿಸಿಕೊಂಡು ಹಾಜರಾಗಿರುತ್ತಾರೆ. ಮೊಗಸಾಲೆಗೆ ಯಾವ ವಶೀಲಿಭಾಜಿಯೂ ಇರುವುದಿಲ್ಲ. ಆದರೆ ಕಾಲಮಹಿಮೆ. ಅವರೇ ಸಂದರ್ಶನ ಸಮಿತಿಯಿಂದ ಆಯ್ಕೆಯಾಗುತ್ತಾರೆ. ಮನೆಯವರ ಆಶೀರ್ವಾದ ಹರಕೆಯೇ ಅವರಿಗೆ ಸರ್ವಸ್ವವಾಗಿತ್ತು.

ಮುಂದಿನ ಮೂರನೆಯ ಖಂಡ 141 ಪುಟಗಳಷ್ಟು ಹಬ್ಬಿದೆ. ಇದು ಚಿತ್ತಿ ಬೆಳೆವ ಬೆಳೆ. ಇಲ್ಲಿ ಮೊಗಸಾಲೆ ಸಹಸ್ರಾಕ್ಷ, ಸಹಸ್ರಪಾದರಾಗಿ ಭೂಮಿಗಿಂತ ದಶಾಂಗುಲ ಮೇಲೆ ನಿಂತಿದ್ದಾರೆ. ನಡೆದಾಡಿದ್ದಾರೆ. ನೀಡಿದ್ದಾರೆ-ಪಡೆದಿದ್ದಾರೆ ಸಹ! ಬಡಪತ್ತಿನಿಂದ ಆಯುರ್ವೇದ ಶಿಕ್ಷಣ ಪೂರೈಸಿದ ಮೇಲೆ ದೂರದ ಕಾಂತಾವರದಲ್ಲಿ ಕೆಲಸವೊಂದು ಸಿಕ್ಕಿತು. ಇದು ಹೆಸರಿಗೆ ಮಾತ್ರ ಸರಕಾರಿ ಕೆಲಸವೆನ್ನುವ ಸಕಲ ಲಕ್ಷಣಗಳಿಂದ ಕೂಡಿತ್ತು. ಔಷಧ, ಸಲಕರಣೆಗಳಾವುವೂ ಇಲ್ಲದ ಡಿಸ್ಪೆನ್ಸರಿಯದು. ಕಾಂತಾವರಕ್ಕೊಂದು ಟ್ರಂಕನ್ನು ಹೊತ್ತುಕೊಂಡು ಕೇವಲ ಮೂವತ್ತು ರೂಪಾಯಿ ಇಟ್ಟುಕೊಂಡು ಸೋದರನ ಸಂಗಡ ಬಂದಿದ್ದರು ಮೊಗಸಾಲೆ. ಆಗಿನ್ನೂ ಹುಡುಗ-ಪ್ರಬುದ್ಧಪ್ರಾಯನೇ. ಮೊಟ್ಟಮೊದಲಿಗೆ ಕಾಂತಾವರಕ್ಕೆ ಅವರಿಗೆ ದಾರಿ ತೋರಿಸಿ ಸಹಕರಿಸಿದ್ದು ಗೂಡಂಗಡಿಯ ಒಬ್ಬ ಮುಸ್ಲಿಂ ಗೃಹಸ್ಥ. ಬುಡಾನ್ ಸಾಹೇಬ ಎಂಬುದು ಅವರ ಹೆಸರು. ಮೊಗಸಾಲೆಗೆ ಇವರ ಸ್ನೇಹ ಅಲ್ಲಿನ ಬ್ರಾಹ್ಮಣರ ಸಂಗಡಗಳಿಗಿಂತ ಬೇರೆ ತೆರನಾಗಿತ್ತು. ಆದರೆ ಕಾಂತಾವರದಲ್ಲಿ ವಸತಿ ಊಟದ ಸಮಸ್ಯೆ ಬ್ರಾಹ್ಮಣ್ಯದ ಹೆಸರಿನಲ್ಲಿ ಮುಜುಗರಕ್ಕೆ ಇಟ್ಟುಕೊಂಡಿತ್ತು.

ಇಲ್ಲಿನ ಬೆರಳೆಣಿಕೆಯಷ್ಟು ಬ್ರಾಹ್ಮಣರಲ್ಲಿ ಕೋಟ, ಸ್ಥಾನಿಕ. ಕರಾಡ, ಶಿವಳ್ಳಿ, ದೇಶಸ್ಥ ಪಂಗಡದವರ ಮೇಲು ಕೀಳಾಟದಲ್ಲಿ ಮೊಗಸಾಲೆ ಜಾಣಚಕ್ರತೆಯಿಂದ ಬ್ರಾಹ್ಮಣ್ಯದ ಮಹತ್ತಿಗೆ ಮರ್ಯಾದೆ ಕೊಟ್ಟರೂ ಅವರಲ್ಲಿನ ನಾನಾ ತರಹದ ತಾರತಮ್ಯ, ಸಹಪಂಕ್ತಿ ನಿಷೇಧ, ಅಷ್ಟಪಂಕ್ತಿ ಮೊದಲಾದ ವಿಧಿವೈಚಿತ್ರ್ಯ ಮೂಢಮೂರ್ಖ ನಂಬಿಕೆಗಳನ್ನು ಸಾವಧಾನದಿಂದ ವೈಚಾರಿಕವಾಗಿ ತರ್ಕಿಸುತ್ತ, ಕ್ರಮೇಣ ದೂರಮಾಡಿ ಸಂಭಾಳಿಸಿಕೊಂಡು ಗಣನೀಯ ಮಟ್ಟದಲ್ಲಿ ಹೋಗಲಾಡಿಸಿದ್ದು ಸಾಮಾನ್ಯ ಸಂಗತಿಯಾಗುವುದಿಲ್ಲ. ಈ ದಿಸೆಯಲ್ಲಿ ಮೊಗಸಾಲೆ ಕಾಂತಾವರದಲ್ಲಿ ಒಂದು ವಿಶಿಷ್ಟ ಕ್ರಾಂತಿಯನ್ನೇ ಮಾಡಿದವರೆಂಬುದರಲ್ಲಿ ಎರಡು ಮಾತಿಲ್ಲ. ಬಿಲ್ಲವರು, ಬಂಟರು, ಮ್ಯೊಲಿ, ಮಾದಿಗರಾದಿಯಾಗಿ ಎಲ್ಲರನ್ನು ಜಾತಿ ವೈಷಮ್ಯ, ಮಡಿಮೈಲಿಗೆ ಮುಟ್ಟುಚಟ್ಟು ಮೊದಲಾದ ಮೌಢ್ಯ-ಕಂದಾಚಾರಗಳನ್ನು ದೂರ ಮಾಡಿ ಮೌನ ಸಮರ ಸಾರಿ-ಯಶಸ್ಸು ಗಳಿಸಿದ್ದು ಬಲು ದೊಡ್ಡ ಸಾಹಸವೇ ಆಗಿದೆ.

ಒಮ್ಮೆ ಇದು ನನಗೆ ಹೇಳಿದ ಊರಲ್ಲ ಎಂದು ಹತಾಶೆಗೂ ತಲುಪಿದ ಮೊಗಸಾಲೆ ಕಾಂತಾವರ ಕೇವಲ ತನ್ನ ಊರು ಮಾತ್ರವಲ್ಲ ಎಲ್ಲ ಮಾನವರ ಊರಾಗುವಂತೆ ಅದನ್ನು ಪರಿವರ್ತಿಸಲು ಎಸಗಿದ ಸಾಹಿತ್ಯ ಪ್ರವೃತ್ತಿಗೆ ಪ್ರೋತ್ಸಾಹದ ನೀರು-ಗೊಬ್ಬರ ತುಂಬಿತುಳುಕುತ್ತ ಬಂದದ್ದು! ಕಾಂತಾವರ ಮೊಗಸಾಲೆಯನ್ನು ಬಿಡಲಿಲ್ಲ. ಅವರಿಗೆ ಕಾಂತೆಯೂ ಪ್ರೇಮಲತಾ ಕಾಂತಾವರದಲ್ಲೇ ಕೊರಳಿಗೆ ಹೂಹಾರ ಹಾಕಿ ಕೈ ಹಿಡಿದರು. ಮೊಗಸಾಲೆ ಗದ್ಯಪದ್ಯ ಸಾಹಿತ್ಯ ಮೆಚ್ಚಿದ್ದ ಮಡದಿ ಕಾಂತಾವರಕ್ಕೆ ಪ್ರೇಮಕ್ಕ ಅನಿಸಿಕೊಂಡರು. ಧನಿಕ ಕುಟುಂಬದಿಂದ ಬಂದ ಪ್ರೇಮಕ್ಕ ಮೊಗಸಾಲೆಯ ಗೃಹಸ್ಥಾಶ್ರಮಕ್ಕೆ ಸಹಚರೆ-ಸಹಧರ್ಮಿಣಿಯಾಗಿ ಸಂಸಾರ ಸಾಗರದಲ್ಲಿ ಸುಖ ದುಃಖ ನುಂಗಿ ಒಲಿದು-ನಲಿದು ತೇಲಾಡುತ್ತ ಬಂದಿದ್ದಾರೆ. ಅವರು ಮೊಗಸಾಲೆಯೊಂದಿಗೆ 'ಕವಿತಾ' ಗೃಹ ಬೆಳಗಿ ಬಾಳುತ್ತಿದ್ದಾರೆ. 18799

ಕಾಂತಾವರ ಮೊಗಸಾಲೆಯವರನ್ನು ಮೆಚ್ಚಿ ಮೊಳಗಿಸಿತೋ ಅಥವಾ ಮೊಗಸಾಲೆಯವರು ಕಾಂತಾವರನ್ನು ನೆಚ್ಚಿ ನಾಡಿನಲ್ಲಿ ನಲಿದಾಡಿಸಿದರೋ ಎಂಬುದನ್ನು ನಿರ್ಧರಿಸುವುದು ಸುಲಭವಲ್ಲ. ಆದರೆ ಇವೆರಡೂ ಸತ್ಯ-ಸ್ತುತ್ಯ ಎಂಬುದಂತೂ ಖಂಡಿತವಾಗಿ ಕಂಡವರಿಗೆ ಕಾಣಿವುದು ಸುಲಭವಲ್ಲ! ಸಾಹಿತ್ಯ, ಸಂಘಟನೆ, ಸಂಸ್ಕೃತಿ. ಸೇವೆ, ಶಿಕ್ಷಣ-ಹೀಗೆ ಸಕಲಕ್ಕೆಲ್ಲ ಕಾಂತಾವರ ಸದ್ಯಕ್ಕೆ ಸಿರಿ-ಸ್ಥಾನವೆನಿಸಿದೆ.

ಈಗ ಮೊಗಸಾಲೆ ಅರವತ್ತು ದಾಟಿದ ವಯಸ್ಸಿನಲ್ಲಿ ಹಲವಾರು ಗಂಡಾಂತರಗಳಿಂದ ಮೇಲೆದ್ದು ಪರಿಪಕ್ವಗೊಂಡಿದ್ದಾರೆ. ಹಿಂದೂ ಶಾಸ್ತ್ರ-ಸಂಸ್ಕಾರ ಪ್ರಕಾರ ಅವರು ಉಗ್ರರಥ ಶಾಂತಿಯನ್ನು ಸಂಪನ್ನಗೊಳಿಸಿ ಅಗ್ರಮಾನ್ಯರಾಗಬೇಕು-ಆಗಿದ್ದಾರೆ. ಇವರ ಧರ್ಮಕ್ಷೇತ್ರ-ಕುರುಕ್ಷೇತ್ರ ಕಾಂತಾವರವಾದರೂ ಕರ್ನಾಟಕಕ್ಕೆಲ್ಲ ಅವರ ಕೀರ್ತಿ-ಪ್ರೀತಿ-ಕ್ಷೇತ್ರ ಹಬ್ಬಿದೆ. ಕನ್ನಡ ಕುಲಕುಟುಂಬದ ದಂಡು ಸಾಹಿತ್ಯ-ಕಲಾ ಸಾಧಕರ ಪಾದಧೂಳಿಯಿಂದ ಪಾವನಗೊಂಡ ಕಾಂತಾವರವು ಪುಣ್ಯಕ್ಷೇತ್ರವಾಗಿದೆ. 'ಕನ್ನಡಭವನ' ಕರ್ನಾಟಕ ಏಕೀಕರಣದ ನೇತಾರರಲ್ಲಿ ಪ್ರಮುಖರಲ್ಲೊಬ್ಬರಾದ ಕೆ.ಜಿ. ಜಿನರಾಜಹೆಗ್ಡೆ ಜನ್ಮಶತಮಾನೋತ್ಸವ ಸ್ಮಾರಕ ಹತ್ತಿರದ ಕಾರ್ಕಳ

ಗೋಮಟೇಶ್ವರನ ದಿವ್ಯ ನಿಲುವಿಗೆ ಸರಿಮಿಗಿಲಾಗಿ ನೆಲಗೊಂಡಿದೆ. 'ಕನ್ನಡ ಭವನ'ದ ಹಿಂದಿನ ಬಲು ದೊಡ್ಡ ಶಕ್ತಿಭವನ ಈ ಮೊಗಸಾಲೆ- ಎಂದರೆ ತಪ್ಪಾಗಲಾರದು. ಅವರ ನಿಲುವಿಗೆ ಕಿಂಚಿದೂನವಾಗುವಂತೆ ಮೊಗಸಾಲೆ ತುಸು ವಾಚಾಳಿಯೆಂದು ಕರೆಸಿಕೊಂಡರೂ- ಮೌನಮೂರ್ತಿಯಾಗಿ ಕಾಂತಾವರದಲ್ಲೆ ನೆಲ ನಿಂತಿದ್ದಾರೆ. ಆ ವಾಚಾಳಿತನದ ಮ್ಯಾಜಿಕ್‌ನಿಂದಲೇ ಮೊಗಸಾಲೆ ಮುಸ್ಸುಗ್ಗುವವರು; ಇದು ಅವರ ಮಿತಿ ಅಲ್ಲ-ಕೇವಲ ಮತಿ!

ಮೊಗಸಾಲೆ ಸುತ್ತಮುತ್ತ ಹದಿನೈದು ಕಾದಂಬರಿಗಳು, ಮೂರು ನಾಲ್ಕು ಕಥಾಸಂಕಲನಗಳು. ಏಳೆಂಟು ಕವನ ಸಂಕಲನಗಲು-ಮೊದಲಾಗಿ ಸಾಹಿತ್ಯ ಜೆಟ್ಟಗಳೇ ತಲೆಯೆತ್ತಿ ನಿಂತಿವೆ. ಅವರ ಬೆನ್ನಿಗೆ, ಕೊರಳಿಗೆ, ಕೈ-ಮೈಗೆ ಹತ್ತಾರು ಪ್ರಶಸ್ತಿಗಳು-ಸರಕಾರ ಮಾನ್ಯ, ಸಮಾಜಮಾನ್ಯ, ಸಂಘಸಂಸ್ಥೆ ಮಾನ್ಯವೂ ಸೇರಿಕೊಂಡು ಅವರ ಕಳೆ ಕಟ್ಟಿವೆ. 'ನನ್ನದಲ್ಲದ್ದು' ಕನ್ನಡದ ಅಪೂರ್ವ ಕಾದಂಬರಿಗಳ ಸೀಮೆ-ಸಾಲಿನಲ್ಲಿ ಎದೆಯುಬ್ಬಿಸಿ ಸೆಟೆದು ಸ್ಥಿರಗೊಂಡ ಕೃತಿ. ಇದು-ಮೊಗಸಾಲೆಯೇ ನೆನೆಸದಷ್ಟು ಪ್ರಸಿದ್ಧಿ-ಕೀರ್ತಿ ಅವರಿಗೆ ತಂದಿದೆ. ಅವರ ಸಮಗ್ರ ಕಾವ್ಯ ಸಂಪುಟ 'ಅರುವತ್ತರ ತೇರು' ಎಲ್ಲೆಲ್ಲೂ ಸಾಗಿದೆ. ವೈದ್ಯಕೀಯ ಸಾಹಿತ್ಯ ಕೃತಿರಚನೆಯಲ್ಲೂ ಅವರು ಆರೇಳು ವಿಶಿಷ್ಟ ಕೃತಿಗಳನ್ನು ಪ್ರಕಟಿಸಿದ್ದಾರೆ. ಇಲ್ಲಿಯೂ ಅವರು ಜನಪ್ರಿಯತೆ ಗಳಿಸಿದ್ದಾರೆ. ಅವರ ಸಮಸ್ತ ಕಾದಂಬರಿಗಳ ಸಮಗ್ರ ನೋಟದ ಕೃತಿಶೋಧನೆಯನ್ನು ಶ್ರೀ ಅರವಿಂದ ಚೊಕ್ಕಾಡಿ-ಉದ್ದಾಮ ವೈಚಾರಿಕ ಲೇಖಕರು 'ವಸ್ತು' ಎಂಬ ಗ್ರಂಥದಲ್ಲಿ ನಾಡಿಗ ನೀಡಿದ್ದಾರೆ. ಅಪ್ರತಿಮ ವಾಗ್ಮಿಗಳ ಸಾಲಿನಲ್ಲೂ ನಿಜನೆಲೆಯ ಸಾರ್ಥಕ್ಯ ಪಡೆದ ವಿನೀತರೆಂದು ಪರಿಗಣಿಸಲ್ಪಟ್ಟಿದ್ದಾರೆ-ಮೊಗಸಾಲೆ.

ಇದೆಲ್ಲಕ್ಕಿಂತ ಮಿಗಲಾಗಿ ಮೊಗಸಾಲೆ ಈತನಕ ಕನ್ನಡ ಸಂಘ ಕಾಂತಾವರದ ಮೂಲಕ ಸಾಹಿತ್ಯಾದಿ ವಿವಿಧ ಜೀವನ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದ ಹಲವಾರು ಪರಿಣಿತರ ಸನ್ಮಾನ-ಸತ್ಕಾರ ಸಲ್ಲಿಸಿ ಕಾಂತಾವರವನ್ನೇ ಅಡ್ಡಪಲ್ಲಕ್ಕಿಯಲ್ಲಿ ಮೆರೆಸಿ ಕರ್ನಾಟಕದ ಜನಮನ ತುಂಬಿದ್ದಾರೆ. ಮುದ್ದಣ ಪ್ರಶಸ್ತಿ ಯೋಜನೆ ಕನ್ನಡದ ಹಲವಾರು ಕವಿಗಳನ್ನು ಮನ್ನಿಸಿ ಕೃತಾರ್ಥವಾಗಿದೆ. ಕನ್ನಡ ಸಂಘ ಇದಲ್ಲದೆ ಹಲವಾರು ಕವಿಗಳನ್ನು ಮನ್ನಿಸಿ ಕೃತಾರ್ಥವಾಗಿದೆ. ವರ್ಧಮಾನ ಪ್ರಶಸ್ತಿಯನ್ನು ವಿರೇಂದ್ರ ಹೆಗ್ಡೆಯವರ ಬೆಂಬಲದಿಂದ ಮೊಗಸಾಲೆ ಸಂಸ್ಥಾಪಿಸಿ ಧನ್ಯರಾಗಿದ್ದಾರೆ. ಕನ್ನಡ ಸಂಘ ಹಲವಷ್ಟು ಗ್ರಂಥಗಳನ್ನು ಪ್ರಕಟಿಸಿ ಪ್ರಶಂಸೆಗೆ ಅರ್ಹವಾಗಿದೆ. ತುದಿಯಡ್ಕ, ವಿಷ್ಣ್ವಯ್ಯ ವಿರಚಿತ 'ದೊರೆಯ ಪರಾಜಯ ಮತ್ತು ಇತರ ಕತೆಗಳು'. ಜಿ. ಸೀತಾರಾಮ ಭಟ್ ಅವರ 'ಅಗೋಚರ' ಕಥಾಸಂಕಲನ-ಇತ್ಯಾದಿಯಲ್ಲದೆ 'ದಕ್ಷಿಣ ಕನ್ನಡದ ಶತಮಾನದ ಕಾವ್ಯ'ದಂಥ ವಿಶಿಷ್ಟ ಅಂಥಾಲಜಿಯನ್ನು ಅನನ್ಯ ಅಭ್ಯಾಸಪೂರ್ಣ ಸಮೀಕ್ಷೆಯೊಂದಿಗೆ ಪ್ರತಿಭಾನ್ವಿತ ವಿಮರ್ಶಕ ಸಾಹಿತಿ ಜಿ. ಜನಾರ್ಧನಭಟ್ ಅವರಿಂದ ಸಂಪಾದನೆಗೊಳಿಸಿ ಕನ್ನಡ ಸಾಹಿತ್ಯ ಪ್ರಪಂಚದಲ್ಲೇ ಮುಂಚೂಣಿಯಲ್ಲಿ ಮೊಟ್ಟಮೊದಲಿಗೆ ಅಂದರೂ ಸಲ್ಲುವ ಕೃತಿ ಪ್ರಕಟಿಸಿ ಹೆಸರು ಮಾಡಿದ್ದು ಕನ್ನಡ ಸಂಘದ ಪ್ರತಿಷ್ಠೆ ಅಸಾಧಾರಣವೆನ್ನಬೇಕು. ಈ ಹೆಗ್ಗಳಿಕೆಯ ಹಿಂದೆ-ಮುಂದೆ ಮೊಗಸಾಲೆ ಇದ್ದಾರೆ. ಈ

ಬಗೆಯ ಶತಮಾನದ ವಿವಿಧ ಪ್ರಕಾರದ ಸಾಹಿತ್ಯ ಕೃತಿಗಳ ಸಂಗ್ರಹದ ಗ್ರಂಥಗಳು ಕರ್ನಾಟಕದ ಮಿಕ್ಕ ಜಿಲ್ಲೆಗಳಿಂದಲೂ ಪ್ರಕಟವಾಗಲೂ ಕಾಂತಾವರ ಕನ್ನಡ ಸಂಘ ಕೈಮರ ತೋರಿಸಿತೆಂದು ಹೆಮ್ಮೆಯಿಂದ ಹೇಳಬಹುದು!

ಇಷ್ಟೊಂದು ಸಾಧನೆಗಳ ಸಾಗರ ಶೋಧಿಸಿದ–ಶೋಭಿಸಿದ ಮೊಗಸಾಲೆಯವರ ಕವಿ ಕುಟುಂಬ, ಸಹಕಾರ ದಂಡು, ಸಂಘಟನಾ ಮಿತ್ರವೃಂದ ಬೆರಳೆಣಿಕೆಗೆ ಸಿಗುವಂತಹುದಲ್ಲ. ಧರ್ಮದರ್ಶಿ ಹರಿಕೃಷ್ಣಪುನರೂರು, ರಾಜರ್ಷಿ ಧರ್ಮಸ್ಥಳ ವೀರೇಂದ್ರ ಹೆಗ್ಡೆ, ಮಾರಣ್ಣ ಮಾಡ, ವಿಠಲ ಬೇಲಾಡಿ, ನಂದಳಿಕೆ ಬಾಲಚಂದ್ರರಾವ್, ಜಯರಾಮ ಕಾರಂತ, ಕವಿ ಸುಬ್ರಾಯ ಚೊಕ್ಕಾಡಿ, ಬಿ. ಜನಾರ್ಧನಭಟ್, ಡಾ. ಜೀವಂಧರ ಬಲ್ಲಾಳ, ಕುಲ್ಯಾಡಿ ಮಾಧವ ಪೈ, ಡಾ. ವಿದ್ಯಾಧರ ಶೆಟ್ಟಿ, ಎಸ್.ಎಸ್. ದಿವಾಕರ, ಅಂಬಾತನಯ ಮುದ್ರಾಡಿ, ಸುಂದರರಾಮ ಬಂಗೇರಾ, ವಸಂತ ಕುಮಾರ ಮುಂಬೈ... ಒಬ್ಬರೇ, ಇಬ್ಬರೇ– ಈ ತಂಡ–ದಂಡು ಗಣನೆಗೆ ಗೋಚರಿಸುವುದು ಬಹಳ ಕಷ್ಟ...

ಶೈಲನದಿ ರಭಸದಿಂದ ಹರಿಯುವಾಗ ಅದಕ್ಕೆ ಅಡೆ ತಡೆ ಅಡ್ಡ ಬಂಡೆ–ಗುಂಡುಕಲ್ಲು ಬೇಕಾದಷ್ಟು ವಿರೋಧಿಸುವುದು–ವೈರಿಸುವುದು ಲೋಕರೂಢಿ. ಪ್ರಕೃತಿಯ ಸಹಜ ನಡೆ ಇದು. ಇಂಥದನ್ನು ಎದುರಿಸುವುದರಲ್ಲೂ ಮೊಗಸಾಲೆ ಕವಿಗೆ ದೊಡ್ಡ ಗಂಡಾಂತರ ಬಂದೆರಗಿತು–ಅದೇ ಅವರ ಕರ್ಮಭೂಮಿ–ಕಾಂತಾವರದಲ್ಲಿ! ಮೆಟ್ಟು, ಪೊರಕೆ, ಬಡಿಗೆ–ಕತ್ತಿ ಪರ್ದತ್ತಿಯಿಂದಲೂ ಮೊಗಸಾಲೆಯನ್ನು ಮುಗಿಸಲು ಹೆಣ್ಣು ಗಂಡೆನ್ನದೆ ಕಾಂತಾವರವೇ ಮಾರ್ಮಲೆತು ಬಂದುಬಿಟ್ಟಿತು! ಅಹಿಂಸೆ–ವಾಕ್‌ಚಾತುರ್ಯದಿಂದ ಮೊಗಸಾಲೆ ಈ ವೈರಿತಂಡದ ದೌಡು–ದಂಗೆಯನ್ನು ಶಮನಗೊಳಿಸುವುದು ಸುಲಭವಾಗಲಿಲ್ಲ–ಸಾಧ್ಯವೂ ಆಗಲಿಲ್ಲ! ಬಹಳಷ್ಟು ಶ್ರಮಪಟ್ಟು ಕ್ಷಮೆ ಕೋರಿದ ಮೇಲೆ ಹೇಗೋ ತತ್ಕಾಲಕ್ಕೆ ತಪ್ಪಿಸಿಕೊಂಡರು. ಯುದ್ಧಸ್ಯ ವಾರ್ತಾ ರಮ್ಯಾ ಲೋಕ–ಅಲ್ಲವೇ? ಆದರೆ ಈ ಕುತ್ತಿನಿಂದ ಅವರನ್ನು ಪಾರು ಮಾಡಲು ಟೊಂಕ ಕಟ್ಟಿ ಮುಷ್ಟಿ ಬಿಗಿದು ಎದುರಾಗಿ ವೈರಿಗಳಿಗೆ ಗುಡುಗಿ ನಿಂತು ಮೊಗಸಾಲೆಯ ಕೂದಲು ಕೊಂಕದ ಹಾಗೆ ನೋಡಿಕೊಂಡವರು ಬಂಟರ ಬಂಟ ಮಾರಣ್ಣ ಮಾಡರು! ಇವರನ್ನೇ ನೆನೆದು ಸಂತುಷ್ಟಿಯಿಂದ ಇವರ ಮೇಲೆ ಮೊಗಸಾಲೆ ಕವಿ ಕವನ ಕಟ್ಟಿ ಅವರಿಗೆ ಅರ್ಪಿಸಿದ್ದಾರೆ. ಆ ಕವಿತೆಯ ಅರ್ಥ ಮಾರಣ್ಣ ಮಾಡರಿಗೆ ಗೊತ್ತಾಗಲಿಲ್ಲವಂತೆ!

ದೈಹಿಕವಾಗಿ ಮತ್ತು ಮಾನಸಿಕವಾಗಿ ಮೊಗಸಾಲೆ ದೃಢವಾಗಿ ಇದ್ದಾರೆ. ಆದರೆ ದೈಹಿಕ–ಮಾನಸಿಕ ವ್ಯಾಧಿಗಳು ಅವರನ್ನು ಕೆಲವಾರು ಸಲ ಕಾಡಿದ್ದುಂಟು. ಸಹಸ್ರಾರು ರೂಪ್ಯಾ ಸುರಿದು ಅವರು ದೈಹಿಕ ಶಸ್ತ್ರ ಚಿಕಿತ್ಸೆಯನ್ನೂ ಮಾಡಿಸಿಕೊಂಡಿದ್ದಾಗಿದೆ. ಮಾಜಿ ಮುಖ್ಯಮಂತ್ರಿ ಎಂ. ವೀರಪ್ಪ ಮೈಲಿ ಮೊಗಸಾಲೆಗ ಈ ಬಗ್ಗೆ ಧನ ಸಹಾಯ ಮಾಡಿದ್ದಾರೆ. ಹಾ.ಮಾ. ನಾಯಕರು ಈ ಕಷ್ಟಕಾಲದಲ್ಲಿ ನಿತ್ಯವೂ ಮೊಗಸಾಲಗೆ ಸಾಂತ್ವನ ಶೀಘ್ರಗುಣಕ್ಕೆ ದೂರವಾಣಿ ಮೂಲಕ ಸಂಪರ್ಕದಿಂದ ಸಾಂತ್ವನ ಶೀಘ್ರಗುಣಕ್ಕೆ ದೂರವಾಣಿ ಮೂಲಕ ಸಂಪರ್ಕದಿಂದ ಹಾರೈಸಿ ಅವರಿಗೆ ಧೈರ್ಯ ತುಂಬಿಸಿದ್ದಾರೆ. ಅನಂತರ ಕಾಲಾವಧಿಯಲ್ಲಿ ಮೊಗಸಾಲೆ

ಮನೋವ್ಯಾಧಿಗೂ ತುತ್ತಾಗಿದ್ದುಂಟು. ಇದರಿಂದ ಮುಕ್ತರಾಗಲು ಅವರು ಯೋಗ ಸಾಧನೆಗೆ ಮಾರುಹೋಗಿ ಆರೋಗ್ಯ-ಮಾನಸಿಕ ಸ್ವಾಸ್ಥ್ಯ ಪಡೆದಿದ್ದಾರೆ. ಋಷಿಪ್ರಭಾಕರ ಗುರೂಜಿ ಪ್ರಣೀತ ಶಿಷ್ಯ ಗುರುಗಳಿಂದ 'ಸಿದ್ಧಸಮಾಧಿ ಯೋಗ' ಅಭ್ಯಸಿಸಿ ಪರಿಪೂರ್ಣ ದೈಹಿಕ-ಮಾನಸಿಕ ದೃಢತೆ ದೊರಕಿಸಿಕೊಂಡ ಕುರಿತು 'ಬಯಲ ಬೆಟ್ಟ' ಸಾಕಷ್ಟು ವಿವರ ಒದಗಿಸುತ್ತದೆ. ಸ್ವತಃ ವೈದ್ಯರಾದ ಮೊಗಸಾಲೆ ಹೋಮಿಯೋಪತಿ ವೈದ್ಯಕೀಯತೆಯಿಂದ ತಕ್ಕಷ್ಟು ಲಾಭ-ಸ್ವಾಸ್ಥ್ಯ ಪಡೆದು ಆ ಪದ್ಧತಿಯ ಬಗ್ಗೆ ತುಂಬ ವಿಶ್ವಾಸ ಹೊಂದಿದ್ದಾಗಿದೆ. ಕೈಕಂಬದ ಹೋಮಿಯೋಪತಿ ತಜ್ಞ ಡಾ. ವಸಂತಕುಮಾರರಾವ್ ಅವರು ಮೊಗಸಾಲೆಗೆ ವೈಯಕ್ತಿಕ-ವೈದ್ಯರಾಗಿ ತುಂಬ ಪ್ರಭಾವಿಕ ಚಿಕಿತ್ಸೆ ಮಾಡಿ ಅವರ ಮನಸ್ಸನ್ನು ಸೂರೆಗೈದು ಬಲು ಹತ್ತಿರದವರಾಗಿದ್ದಾರೆ. ಅವರ ಬಗ್ಗೆ ಅಪಾರ ಗೌರವದಿಂದ ಅವರ ಮನೆಗೇ ಹೋಗಿ ಅವರಿಗೆ ಪ್ರೀತಿಯಿಂದ ಸನ್ಮಾನ ಮಾಡಿದ್ದಾಗಿದೆ ಮೊಗಸಾಲೆ! ಇದೊಂದು ಅಸದೃಶ ಶುದ್ಧ ಮನಸ್ಸಿನ ಮುಗ್ಧ ನಡೆ ಅನ್ನಬೇಕು.

ಆಗಾಗ ಕಾಂತಾವರ ಕನ್ನಡ ಸಂಘದಲ್ಲಿ ಸಾಹಿತ್ಯಾದಿ ಸಂಸ್ಕೃತಿ ಜಾತ್ರೆ ವಿಜೃಂಭಣೆಯಿಂದ ನಡೆಯುವುದುಂಟು. ನಾಡಿನ ಗಣ್ಯಾತಿಗಣ್ಯರು ಇದರಲ್ಲಿ ಭಾಗವಹಿಸುವ ಹಾಗೆ ಸಂಘಟಿಸುತ್ತಾರೆ. ಮೊಗಸಾಲೆ ತಮ್ಮ ಸಂಗಡಿಗರ ಸಹಸ್ರ ಹಸ್ತಗಳ ಸಹಾಯದಿಂದ. ಇಂಥದೊಂದು ಸಂದರ್ಭದಲ್ಲಿ ಕನ್ನಡದ ಹಿರಿಯ ಗಣ್ಯಕವಿ ಚೆನ್ನವೀರಕಣವಿಯವರು ಅಂದು 'ನಾ ಮೊಗಸಾಲೆ' ಎಂಬ ಅಪೂರ್ವ ಸಾನೆಟ್ ಬರೆದು ಓದಿ 'ಕಾಂತಾವರ'ವನ್ನು 'ಅಯಸ್ಕಾಂತವರ'ವೆಂದು ಪ್ರತಿಭಾಸ್ಫುರಣದಿಂದ ಘೋಷಿಸಿದಾಗ ಅಂದಿನ ಸಭೆಯಲ್ಲ ನಿಬ್ಬೆರಗಾಗಿ ಆಕಾಶಕ್ಕೂ ಅಪ್ಪಳಿಸುವ ಹಾಗೆ ಚಪ್ಪಾಳೆ ತಟ್ಟಿ ಹರ್ಷೋದ್ಗಾರ ಪ್ರಕಟಿಸಿದ್ದು ಅಳಿಯಿಲ್ಲದೆ ಉಳಿಯುವ-ಉಲಿಯುವ ಪ್ರಸನ್ನ ಕರತಾಡನ! ಈ ಸಾನೆಟ್ಟನ್ನು 'ಬಯಲಬೆಟ್ಟ' ವೃತ್ತಾಂತ ಮುಂಬಾಗಿಲಲ್ಲೆ ಸ್ವಾಗತ ರಂಗೋಲಿಯಂತೆ ಚಿಡಿಸಿ-ತೊಡಿಸಿದ್ದಾರೆ ಮೊಗಸಾಲೆ. ಅದೆಷ್ಟು ಸಮಯೋಚಿತ-ಸಂದರ್ಭೋಚಿತ ಎಂಬುದನ್ನು ವಿವರಿಸಲು ಅಸದಳವೆನ್ನಬೇಕು.

ಈ ಪರಿಯ ಸೊಬಗಿನಲ್ಲಿ ಮೊಗಸಾಲೆ ಸಂಸಾರ-ಮಡದಿ ಪ್ರೇಮಕ್ಕ, ಮುತ್ತಿನಂಥ ಮೂವರು ಗಂಡುಮಕ್ಕಳು; ನಿರಂಜನ, ಸುದರ್ಶನ ಮತ್ತು ಪ್ರಸನ್ನ ಹಾಗೂ ಸೊಸೆಯಂದಿರು-ಮೊಮ್ಮಕ್ಕಳಾದಿಯಾಗಿ ಆ ಮಮತೆಯ 'ಕವಿತಾ' ಮನೆಯಲ್ಲಿ ಕಾಂತಾವರ ಕಾನನದೊಂದಿಗೆ ನವವನ ಕವಿಯಾಗಿ ಸುಖಿಸಿ-ಸಂತೋಷಿಸುತ್ತ ನಾಡನ್ನು-ನುಡಿಯನ್ನು ಆರಾಧಿಸುತ್ತಿದ್ದಾರೆ. ಇದು ಭಾಗ್ಯ-ಇದು ಭಾಗ್ಯವಯ್ಯ! ಈ ಸಹೃದಯ ಸ್ಪಂದನಾವಲೋಕನ ಲೇಖನವನ್ನು ಬಸವಣ್ಣನವರ ವಚನವೊಂದರಿಂದ ವಿರಮಿಸಲು ಬಯಸುತ್ತೇನೆ...

ನೆಚ್ಚಿದೆನೆಂದರೆ, ಮಚ್ಚಿದೆನೆಂದರೆ,
ಸಲೆ ಮಾರುವೋದೆನೆಂದರೆ;
ತನುವನಲ್ಲಾಡಿಸಿ ನೋಡುವೆ ನೀನು!
ಮನವನಲ್ಲಾಡಿಸಿ ನೋಡುವೆ ನೀನು!

ಧನವನಲ್ಲಾಡಿಸಿ ನೋಡುವೆ ನೀನು!
ಇವೆಲ್ಲಕಂಜದಿದ್ದರೆ
ಭಕ್ತಕಂಪಿತ ನಮ್ಮ ಕೂಡಲ ಸಂಗಮದೇವ

'ಬಯಲ ಬೆಟ್ಟ'ದ ಮೊಗಸಾಲೆ ಕೂಡ ಅಕಂಪಿತ ಕನ್ನಡ–ಕನ್ನಡ ನಾಡಿನ ಭಕ್ತ–ಕಾಂತಾವರೇಶ್ವರ! ನಾ. ಮೊಗಸಾಲೆ ಭೀಮರಥ ಶಾಂತಿ 70 ವರ್ಷಕ್ಕೇರಿ ಅಲ್ಲಿಂದಲೂ ಮುಂದೆ 80 ದಾಟಿ ಸಹಸ್ರಚಂದ್ರದರ್ಶನ ಶಾಂತಿ ಪೂರೈಸಿ ಸುಖಸೌಭಾಗ್ಯದಿಂದ ಶತಾಯುರ್ವಜ್ರದೇಹಿಯಾಗಿ ವಿಶ್ವಮನ್ನಣೆ ಪಡೆಯಲೆಂದು ಹಾರೈಸುವವರೆಲ್ಲರಲ್ಲಿ ನಾನು–ಈ ನಾನು ಕೂಡ ಸರ್ವರೊಂದಿಗೆ ಸೇರಿಕೊಂಡು ಸಾರುತ್ತೇನೆ–ಹಾರೈಸುತ್ತೇನೆ.

O

# ‘ಬಯಲುಬೆಟ್ಟ’ದ ಬಗೆಗೆ....

(ಒಂದು ಪತ್ರ)

ಓ.ಎಲ್. ನಾಗಭೂಷಣ ಸ್ವಾಮಿ

ಹಿರಿಯರಾದ ಡಾ. ಎನ್. ಮೊಗಸಾಲೆ ಅವರಿಗೆ ನಮಸ್ಕಾರಗಳು. ನೀವು ಪ್ರೀತಿ ವಿಶ್ವಾಸಗಳಿಂದ ಕಳಿಸಿಕೊಟ್ಟ ಬಯಲು ಬೆಟ್ಟ ಕೃತಿಯನ್ನು ಇದೇ ಈಗ ಓದಿ ಮುಗಿಸಿದೆ. ನಿಮಗೆ ಬರಯಲೇ ಬೇಕು ಅನ್ನಿಸಿದ್ದರಿಂದ ಬರೆಯುವುದಕ್ಕೆ ಕೂತಿರುವೆ.

ನಿಮಗೆ, ಬಹುಶಃ ಗುರುವಾರದಂದು ಇರಬೇಕು, ಫೋನು ಮಾಡಿದಾಗಿನಿಂದ ಇದುವರೆಗೂ ದಿನವೂ ಬಿಡುವುಮಾಡಿಕೊಂಡು ಇಡೀ ಪುಸ್ತಕವನ್ನು ಓದಿದೆ. ಬಹಳ ಆಪ್ತವಾದ ಬರವಣಿಗೆ. ನಿಮ್ಮ ಕೃತಿಯ ಮೊದಲ ಭಾಗವಂತೂ ಉತ್ಕೃಷ್ಟವಾಗಿದೆ. ಅದು ಕೇವಲ ನಿಮ್ಮ ಆತ್ಮಕಥನವಲ್ಲ, ನಿಮ್ಮ ಇಡೀ ಪರಿಸರದ ಆತ್ಮಕಥೆ ಎಂಬಂತಿದೆ. ಸಂದುಹೋದ ತಲೆಮಾರಿನ ಬದುಕು ಅನಾವರಣಗೊಂಡಿದೆ. ಕಾರಂತರ ಬರವಣಿಗೆಯಲ್ಲಿ, ಇತ್ತೀಚೆಗೆ ನಾಗವೇಣಿಯವರ ಬರವಣಿಗೆಯಲ್ಲಿ ಮತ್ತು ಇತರ ಲೇಖಕರ ಬರವಣಿಗಯ ಮೂಲಕ ದಕ್ಷಿಣ ಕನ್ನಡದ ಬದುಕನ್ನು ಕಂಡಿದ್ದೆ. ಸರಿಯೋ ತಪ್ಪೋ ಈಗ ಅನ್ನಿಸುತ್ತಿರುವುದು ಹೀಗೆ. ಕಾರಂತರ ಕೋಟ ಮಹಾ ಜಗತ್ತು ಮತ್ತು ಅವರ ಇತರ ಕಾದಂಬರಿಗಳ ಬರವಣಿಗೆಯಲ್ಲಿ ಒಬ್ಬ ವಿಮರ್ಶಕ, ವಿಶ್ಲೇಷಕ ಅಡಗಿರುತ್ತಾನೆ. ಯಾವಾಗಲೂ. ಅದು ಅವರ ದಾರಿ. ನಿಮ್ಮ ಪುಸ್ತಕದ "ಹೊಳೆಯ ಮೇಲೆ ಮಳೆ" ಭಾಗ ಕಂಡದ್ದು ಕಂಡಷ್ಟು ಕಂಡ ಹಾಗೆ ನಿರೂಪಿತವಾಗಿದೆ. ವಿಮರ್ಶೆ ವಿಶ್ಲೇಷಣೆ ಇತ್ಯಾದಿಗಳೆಲ್ಲ ಓದುಗರಿಗೆ ಹೊಳೆಯುತ್ತವೆಯೇ ಹೊರತು ನೀವು ನೇರವಾಗಿ ಅದರಲ್ಲಿ ತೊಡಗುವುದಿಲ್ಲ. ಆದುದರಿಂದಲೇ ಆಪ್ತ ಅನಿಸಿತು. ನಾಗವೇಣಿಯವರು ಓದುಗರಿಗೆ ಗೊತ್ತಿರದ ಲೋಕದ ವಿವರಗಳನ್ನು ಒದಗಿಸುತ್ತಾರೆ. ಅದರಿಂದ ಬೆರಗು ಆಗುತ್ತದೆ. ಇನ್ನು ವೈದೇಹಿಯವರ ಬರವಣಿಗೆಯು ಓದುಗರೂ ದಕ್ಷಿಣ ಕನ್ನಡಿಗರ ತೋಗಲಿನಲ್ಲಿ ಅಡಗಬೇಕೆಂಬಂತೆ ಇರುತ್ತದೆ. ನಿಮ್ಮ ಬರವಣಿಗೆ ಹಾಗೂ ಅಲ್ಲ. ಇದು ನನ್ನದೇ ಬಾಲ್ಯದ, ನನ್ನದೇ ಕುಟುಂಬದ ಕತೆ ಎನ್ನುವಂತೆ ಓದಿಕೊಂಡೆ. ನನ್ನ ಬಾಲ್ಯ ಇತ್ಯಾದಿಗಳು ನಿಮ್ಮದಕ್ಕಿಂತ ತದ್ವಿರುದ್ಧವೂ ಬೇರೆಯವೂ ಆಗಿದ್ದರೂ ಕೂಡ. ವಿಟ್ಲದ ಅಜ್ಜ, ಪುಟ್ಟತ್ತೆ ಇವರು ಬಹು ಕಾಲ ಅಲ್ಲ, ನನ್ನ ಮನಸ್ಸಿನಲ್ಲಿ ಶಾಶ್ವತವಾಗಿ ಉಳಿಯುವ ಜೀವಿಗಳಾಗಿ ಮೂಡಿಕೊಂಡಿದ್ದಾರೆ. ಶಾಲೆ, ವಿದ್ಯಾಭ್ಯಾಸ ಇವು ಬಹುಶಃ ಭಾರತೀಯ ಭಾಷೆಗಳ ಸಾಹಿತ್ಯದ ಮುಖ್ಯ ಥೀಮುಗಳು. ಒಂದೆರಡು ವರ್ಷದ ಹಿಂದೆ ಓದಿದ ಮರಾಠಿ ಕಾದಂಬರಿಯ ಅನುವಾದ "ಹೋರಾಟ"

ಕೂಡ ಮಹಾರಾಷ್ಟ್ರದ ಹಳ್ಳಿಯ ಹುಡುಗ ಎಸ್‌ಎಸ್‌ಎಲ್‌ಸಿ ಓದಿದ ಕಥೆ. ಕುವೆಂಪು, ಕಾರಂತರಂತೂ ಸರಿಯೇ ಸರಿ. ಕರೀಗೌಡರ ಕಥೆಗಳೂ ಅಷ್ಟೆ. ಎಚ್. ನರಸಿಂಹಯ್ಯನವರ ಆತ್ಮಚರಿತ್ರೆಯೂ ಅದೇ. ನನ್ನ ಹಿಂದಿನ ತಲೆಮಾರಿನ ಜನ ಶಿಕ್ಷಣದಿಂದ ಏನನ್ನು ಪಡೆದರೋ, ಅದನ್ನು ತಮ್ಮ ಪರಿಸರಕ್ಕೆ ಹೇಗೆ ಎಷ್ಟು ಮರಳಿಸಿ ಧನ್ಯರಾದರೋ ಅಷ್ಟನ್ನು ಇಂದಿನ ಎಳೆಯರು ಪಡೆಯುತ್ತಿಲ್ಲ, ಮರಳಿಸಿ ಧನ್ಯರಾಗುತ್ತಿಲ್ಲ ಅನಿಸುತ್ತದೆ. ಶಿಕ್ಷಣ ಸುಲಭವಾದ್ದು, ವಾಣಿಜ್ಯಮುಖಿಯಾದ್ದು ಇವೆಲ್ಲ ಕಾರಣ ಇದ್ದೀತು. ಆದರೆ ನಾನು ಪಾಠ ಮಾಡಿದ ಸರ್ಕಾರೀ ಕಾಲೇಜುಗಳಲ್ಲಿ ಈಗಲೂ ಇದೇ ಮೊದಲಬಾರಿಗೆ ತಮ್ಮ ವಂಶದಲ್ಲೇ ಮೊದಲಿಗರಾಗಿ ಕಾಲೇಜಿಗೆ ಬರುತ್ತಿರುವ ಅಸಂಖ್ಯಾತರನ್ನು ಕಂಡಿದ್ದೇನೆ. ಅದರಲ್ಲೂ ವಿಶೇಷವಾಗಿ ಹೆಣ್ಣು ಮಕ್ಕಳು. ನಮ್ಮ ಬದುಕಿನ ವೈವಿಧ್ಯ, ಮೌಲ್ಯ ಇತ್ಯಾದಿಗಳು ಸೊರಗದೆ ಇರಬೇಕಾದರೆ ಇಂಥ ಹೋರಾಟದ ಶಿಕ್ಷಣ ಪಡೆದವರಿಂದಲೇ ಅನ್ನಿಸುತ್ತದೆ. ಆದರೆ ಒಟ್ಟಾರೆಯಾಗಿ ನಮ್ಮ ಜನರ ಮನೋಧರ್ಮ ತೀರ ಬದಲಾಗಿದ್ದು ಕಂಡಾಗ ವ್ಯಥೆಯಾಗುತ್ತದೆ.

ನೀವು ಸರಿಯಾಗಿಯೇ ಗುರಿತಿಸಿದ್ದೀರಿ. ಇದು ನಿಮ್ಮ ಒಬ್ಬರ ಆತ್ಮ ಕಥೆಯಲ್ಲ, ನಿಮ್ಮನ್ನು ನೀವಾಗಿಸಿದ ಎಲ್ಲರ ಆತ್ಮದ ಕಥೆಗಳು. ಹಾಗೆ ಇತರ ಸಾವಿರಾರು ಜನರ ಆತ್ಮಗಳ ಹಾಸು ಹೊಕ್ಕು ಇರದಿದ್ದರೆ ನನ್ನ ಆತ್ಮವಾದರೂ ಎಲ್ಲಿರುತ್ತದೆ, ಯಾಕಿರಬೇಕು! ಜೊತೆಗೆ ಸಾರ್ವಜನಿಕವಾದ ಭಾಷೆಯಲ್ಲಿ ಎಷ್ಟು ಹೇಳಬೇಕು, ಹೇಗೆ ಹೇಳಬೇಕು ಎಂಬ ಹದ ನಿಮಗೆ ಗೊತ್ತಿರುವುದರಿಂದ ನಿಮ್ಮ ಇಡೀ ಬರವಣಿಗೆ ಅತ್ಯಂತ ಆರೋಗ್ಯಪೂರ್ಣವಾಗಿದೆ. ಕನ್ನಡದಲ್ಲಿ ಬಂದಿರುವ ಅನೇಕ ಸುಪ್ರಸಿದ್ಧರ ಆತ್ಮಕಥೆಗಳ ಬಗ್ಗೆ ಈ ಮಾತನ್ನು ಹೇಳುವ ಧೈರ್ಯ ನನಗಿಲ್ಲ. ಈ ಕಾರಣಕ್ಕೆ ನಿಮ್ಮ ಬರವಣಿಗೆ man speaking to man (ವರ್ಡ್ಸ್‌ವರ್ತ್ ಹೇಳಿದ ಮಾತು ಇದು) ಎಂಬ ಉಕ್ತಿಯ ಉತ್ತಮ ನಿದರ್ಶನವಾಗಿದೆ. ಸಾರ್ವಜನಿಕವಾಗಿ ನುಡಿಯುವಾಗ ಇರಬೇಕಾದ ಹಿಂಜರಿಕೆ ಇರಬೇಕಾದ ಸೌಜನ್ಯ, ಇರಬೇಕಾದ ತನ್ನ ಭಾವ ಮತ್ತು ಅನುಭವಗಳಿಗೆ ನಿಷ್ಠನಾಗಿರುವ ಗುಣ ಇವೆಲ್ಲ ಸೇರಿ ಬೆಟ್ಟದ ಬಯಲು ಇಷ್ಟವಾಯಿತು. ಆತ್ಮವೂ ಕಥನವೂ ಸೇರಿದ ಪಾಕ ನಿಮ್ಮ ಬರವಣಿಗೆ. ಎರಡನೆಯ ಭಾಗ "ಹೊಲಕ್ಕೆ ಹರಿದ ನಾಲೆ"ಯಲ್ಲಿ ಮುಗ್ಧತೆ ನೀಗಿಕೊಳ್ಳುತ್ತಿರುವ, ಲೋಕಕ್ಕೆ ತೆರೆದುಕೊಳ್ಳುತ್ತಿರುವ ಕಥನವಿದೆ. ಇದೂ ಇಷ್ಟವಾಯಿತು. ಆದರೆ ಮೊದಲ ಭಾಗದಷ್ಟಲ್ಲ. ಮುಂದಿನ ಭಾಗ "ಬಿತ್ತಿದ ಬೆಳೆ" ನಿಜ ಅನಿಸಿತು. ಆದರೆ ಮೊದಲ ಭಾಗದಷ್ಟು ಆಪ್ತ ಅನಿಸಲಿಲ್ಲ. ಕೊನೆಯ ಭಾಗದಲ್ಲಿ ಡಾಕ್ಯುಮೆಂಟರಿಯ ಗುಣ ಮೇಲುಗೈ ಪಡೆದಿದೆ ಅನ್ನಿಸಿತು.

ಪುಸ್ತಕದ ಕೊನೆಯಲ್ಲಿ ನೀವು ತೀರ ಸಹಜವಾಗಿ ಮಂಡಿಸಿರುವ ನಿಮ್ಮ ಬದುಕಿನ ಮೀಮಾಂಸೆ ನಿಜಕ್ಕೂ ಬೆಲೆಯುಳ್ಳದ್ದು. ನನಗೂ ಅದು ಮನದಟ್ಟಾಗುತ್ತಿದೆ. ಇವನ್ನು ನಾವು ನಾವೇ ಕಂಡುಕೊಳ್ಳಬೇಕೆ ಹೊರತು ಓದಿ, ಬರೆದು ಬರುವಂಥದಲ್ಲ ಅಲ್ಲವೇ! ನೀವು ಹೇಳಿದ್ದೀರಲ್ಲ, ಪುಟ 488ರಲ್ಲಿ ನೀವು ಅಧ್ಯಾತ್ಮದ ಬಗ್ಗೆ ಹೇಳಿರುವ ಮಾತು ತೀರ ತೀರ ನಿಜ. ಆದರೆ ನಾವು ಅಧ್ಯಾತ್ಮವನ್ನು ವಿದ್ವತ್ತಿನ ವಿಷಯವಾಗಿ ಮಾಡಿಕೊಂಡು ಸುಮ್ಮನೆ ಗೊಂದಲದಲ್ಲಿ ಸಿಕ್ಕಿಕೊಂಡಿದ್ದೇವೆ

ಹೆಗ್ಗೋಡಿನಂತೆಯೇ ಕಾಂತಾವರನ್ನೂ ಸಾಂಸ್ಕೃತಿಕ ಕೇಂದ್ರವಾಗಿಸುವಲ್ಲಿ ನಿಮ್ಮ ಪಾಲು ಬಲು ದೊಡ್ಡದು. ನಿಮಗೆ ಸರಿ ಎನಿಸಿದ್ದನ್ನು ಛಲ ಬಿಡದೆ ಸುಮ್ಮನೆ ನಿಮ್ಮ ಪಾಡಿಗೆ ನೀವು ಮಾಡುತ್ತ ಕನ್ನಡವನ್ನು ಶ್ರೀಮಂತವಾಗಿಸಿದ್ದೀರಿ. ಬಯಲು ಬೆಟ್ಟ ಮುಂದಿನ ಸಾಹಸಿಗರಿಗೆ ಒಂದು ಲ್ಯಾಂಡ್ ಮಾರ್ಕ್ ಆಗಿ ಉಳಿಯುತ್ತದೆ.

ನಿಮ್ಮ ಬರಹಗಳನ್ನು ಓದಿದ್ದರೂ ನಿಮ್ಮ ಸಂಪರ್ಕ ಅದೇಕೋ ಹೆಚ್ಚು ಬೆಳೆಸಿಕೊಳ್ಳಲು ಆಗಲಿಲ್ಲ. ನಿಮಗೆ ಅನಾರೋಗ್ಯವೆಂದು ತಿಳಿದು ಒಂದು ಕ್ಷಣ ನೋವಾಯಿತು. ನಿಮ್ಮ ಆರೋಗ್ಯ ಸುಧಾರಿಸಲಿ, ಸ್ಥಿರಗೊಳ್ಳಲಿ, ನಿಮ್ಮ ಕಾರ್ಯಗಳಿಂದ ಇನ್ನಷ್ಟು ಎಳೆಯರು ಸ್ಫೂರ್ತಿ ಪಡೆಯುವಂತಾಗಲಿ ಎಂದು ಹಾರೈಸುತ್ತೇನೆ. ಈ ಪತ್ರದೊಂದಿಗೆ ಪುಸ್ತಕದ ಬೆಲೆಯನ್ನು ಕಳಿಸಿರುವೆ, ದಯವಿಟ್ಟು ಯಾವ ಸಂಕೋಚವೂ ಇಲ್ಲದೆ ಸ್ವೀಕರಿಸಿ. ಬೇಡವೆಂದರೆ ಕಸಿವಿಸಿಯಾಗುತ್ತದೆ. ಕೈ ಬರಹದಲ್ಲಿ ಬರೆಯುವುದು ಸುಮಾರು ಹದಿನೈದು ವರ್ಷಗಳಿಂದ ಅಭ್ಯಾಸ ತಪ್ಪಿಹೋಗಿರುವುದರಿಂದ ಕಂಪ್ಯೂಟರಿನಲ್ಲಿ ಬೆರಳಚ್ಚು ಮಾಡಿದ್ದೇನೆ. ದಯವಿಟ್ಟು ಅನ್ಯಥಾ ಭಾವಿಸಬೇಡಿ. ಸಾಧ್ಯವಾದರೆ ಒಮ್ಮೆ ನಿಮ್ಮನ್ನು ಭೇಟಿ ಮಾಡುವೆ.

O

# ಪ್ರತಿಕ್ಷಣವೂ ನಿಮ್ಮದೇ!

ಡಾ॥ಸ.ಜ.ನಾಗಲೋಟಿಮಠ

"ಪ್ರತಿಕ್ಷಣವೂ ನಿಮ್ಮದೇ" ಎಂಬುದೊಂದು ಉತ್ತಮ ಪುಸ್ತಕ. ಬರೆದವರು ಡಾ.ನಾ.ಮೊಗಸಾಲೆ. ಹೆಸರಾಂತ ವೈದ್ಯರು. ಲಕ್ಷಗಟ್ಟಲೆ ರೋಗಿಗಳನ್ನು ಉಪಚರಿಸಿ ಅನುಭವದ ಭಂಡಾರವನ್ನೆ ಗಳಿಸಿದವರು. ಕುಟುಂಬ ಜೀವನದ ಸವಿಯನ್ನು ಉಂಡವರು. ಹೆಂಡತಿ, ಮಕ್ಕಳ ಸ್ನೇಹದಲ್ಲಿ ಈಜಾಡಿದವರು. ಜನಪ್ರಿಯ ಸಾಹಿತಿಗಳು, ಸಾಹಿತ್ಯ ಲೋಕದಲ್ಲಿ ಸುಪ್ರಸಿದ್ಧರು. ಹಲವಾರು ಪ್ರಶಸ್ತಿಗಳ ಸರದಾರರು.



ಅವರ ಬರಹ ಸರಳ. ಅಷ್ಟೇ ಜ್ಞಾನದಿಂದ ಕೂಡಿದ್ದು. "ಪ್ರತಿ ಕ್ಷಣವೂ ನಿಮ್ಮದೇ" ಪುಸ್ತಕದಲ್ಲಿ ಅವರು ಕೆಲವು ದೈಹಿಕ ತೊಂದರೆಗಳ ಬಗ್ಗೆ ವಿವರಿಸುತ್ತಾರೆ. ಪುಸ್ತಕವು ಅನೇಕರನ್ನು ಆಕರ್ಷಿಸುವ ಶೈಲಿಯಲ್ಲಿದೆ. ಪುಸ್ತಕವು ಓದಿಸಿಕೊಂಡು ಹೋಗುತ್ತದೆ ಎಂದು ಹೇಳುವುದು ಇಲ್ಲಿ ಸೂಕ್ತ ಎನಿಸುವುದಿಲ್ಲ. ಪುಸ್ತಕದ ತುಂಬ ಗಹನವಾದ ವಿಷಯಗಳಿವೆ. ಕಾರಣ ಈ ಪುಸ್ತಕವನ್ನು ಅಭ್ಯಸಿಸುತ್ತ ಹೋಗಬೇಕಾಗುವುದು. ಪ್ರತಿ ಪುಟದಲ್ಲಿ ಪ್ರತಿ ಪರಿಚ್ಛೇದದಲ್ಲಿ ವಿಷಯಗಳನ್ನು ತುಂಬಿದ್ದಾರೆ. ಆದ್ದರಿಂದ ಈ ಪುಸ್ತಕವನ್ನು ನುರಿಸುತ್ತ ಸವಿಯಬೇಕು. ಆಗ ಮಾತ್ರ ಓದಿದ್ದು ಪಚನವಾಗುವುದು. ಪಚನವಾಗಿ ರಕ್ತದಲ್ಲಿ ಕೂಡುತ್ತದೆ.

ಗ್ರಂಥ ಪ್ರಾರಂಭವಾಗುವುದು ಹೃದಯದ ತೊಂದರೆಯ ರೂಪದಲ್ಲಿ. ಡಾ.ಮೊಗಸಾಲೆಯವರು 60 ವರ್ಷ ಪೂರೈಸಿದ ನಂತರ ಅವರಿಗೆ ಎದೆ ನೋವು ಕಾಣಿಸುತ್ತದೆ. ಈ ನೋವು ಅವರಿಗೆ ದೈಹಿಕ ಶ್ರಮವಾದಾಗ ಪ್ರಕಟವಾಗುತ್ತದೆ. ಅವರೂ ವೈದ್ಯರು, ಮಕ್ಕಳೂ ವೈದ್ಯರು. ಈ ವಯಸ್ಸಿನಲ್ಲಿ ಎದೆ ನೋವು ತೋರುವುದೆಂದರೆ ಅಲಕ್ಷ್ಯ ಸಲ್ಲದು. ಕಾರಣ ಹೃದಯ ರೋಗ ತಜ್ಞರಲ್ಲಿಗೆ ಧಾವಿಸುತ್ತಾರೆ. ಎಲ್ಲ ಪರೀಕ್ಷೆಗಳಿಗೆ ಒಳ ಪಡುತ್ತಾರೆ. ರಕ್ತ ತಪಾಸಣೆ ಮಾಡಿಕೊಳ್ಳುತ್ತಾರೆ. ಯಾವ ರೀತಿಯಿಂದ ಹೃದಯದ ತೊಂದರೆಯನ್ನು ಶಮನಗೊಳಿಸಬೇಕು ಎಂದು ಚರ್ಚಿಸುತ್ತಾರೆ. ಹೆಸರಾಂತ ವೈದ್ಯರೂ ಹಲವು ಸಲ ಎಡವುತ್ತಾರೆ ಎಂದು ಸೂಚ್ಯವಾಗಿ ಹೇಳುತ್ತಾರೆ. ಪಿತ್ತಹರಳುಗಳು ತಮ್ಮನ್ನು ತೊಂದರೆಯಲ್ಲಿ ಸಿಲುಕಿಸಿದವು ಎಂಬ ಘಟನೆಯನ್ನು ಪರಿಚಯಿಸುತ್ತಾರೆ.

ಹೃದಯ ತೊಂದರೆಯಿಂದ ಹೊರಬಂದ ಮೇಲೆ ಪಾಶ್ಚಿಮಾತ್ಯ ವೈದ್ಯಕೀಯದ ಲಾಭ ಹಾನಿಗಳನ್ನು ಚರ್ಚಿಸುತ್ತಾರೆ. ಈ ತೊಂದರೆಗಳನ್ನು ಪ್ರತಿಬಂಧಿಸಲು ಭಾರತೀಯರು ಉತ್ತಮ ಉಪಾಯಗಳನ್ನು ಯೋಜಿಸಿದ್ದಾರೆ ಎಂದು ಸೂಚಿಸುವರು. ಓದುಗರನ್ನು ಕರೆದುಕೊಂಡು

ಆಹಾರ. ವ್ಯಾಯಾಮ ಹಾಗೂ ಯೋಗಗಳ ಸಂಗಮಕ್ಕೆ ಬರುತ್ತಾರೆ. ಈ ಸಂಗಮವನ್ನು ಅವರು ಸ್ಪಷ್ಟವಾಗಿ ಸಿದ್ಧಿ-ಸಮಾಧಿ-ಯೋಗದಲ್ಲಿ ಕಾಣುತ್ತಾರೆ. ಈ ತಂತ್ರವನ್ನು ಬೆಳಕಿಗೆ ತಂದ ಗುರು ಪ್ರಭಾಕರ ಅವರನ್ನು ಪರಿಚಯಿಸುತ್ತಾರೆ. ಸಿದ್ಧಿಸಮಾಧಿ ಯೋಗ ಪ್ರಸಿದ್ಧವಾದ ಬಗೆಯನ್ನು ಅದರಿಂದಾಗುವ ಲಾಭಗಳನ್ನು ತಿಳಿಸುತ್ತಾರೆ. ತಮಗೆ ಆದ ಲಾಭ ಜೀವನದಲ್ಲಾದ ಬದಲಾವಣೆಗಳನ್ನು ವಿವರಿಸುವರು.

ಪಾಶ್ಚಿಮಾತ್ಯ ವೈದ್ಯ ರಂಗ ಹಲವಾರು ತರದ ರಿಪೇರಿ ಕಾರ್ಯ ಉಪಚಾರ ನಡೆಸುವದು. ಸಿದ್ಧಿ-ಸಮಾಧಿ-ಯೋಗವು ರೋಗಗಳ ಪ್ರತಿಬಂಧಕೋಪಾಯಗಳನ್ನು ಒಳಗೊಂಡಿರುವುದು. ಸಿದ್ಧಿಸಮಾಧಿ ಯೋಗದಿಂದ ಜನರು ಹೇಗೆ ಒಳ್ಳೆಯ ಆರೋಗ್ಯವನ್ನು ಪಡೆಯುತ್ತಾರೆ. ಆರೋಗ್ಯದಿಂದ ಬದುಕುತ್ತಾರೆ ಎಂಬುದನ್ನು ಸ್ಪಷ್ಟಗೊಳಿಸುತ್ತಾರೆ. ದಿನಚರಿಯೇ ಬದಲಾಗಿ ಬಿಡುತ್ತದೆ. ಯಾವ ಮದ್ದುಗಳ ಸಹಾಯವಿಲ್ಲದೇ ಯಾವುದೇ ತರದ ಆರ್ಥಿಕ ಹೊರೆ ಆಗದೆ ನಿಮಗೆ ಒಳ್ಳೆಯ ಆರೋಗ್ಯ ಲಭ್ಯವಾಗುತ್ತದೆ.

ನೀವು ನಿಮ್ಮ ಜೀವನದಲ್ಲಿ ತರಬೇಕಾದ ಬದಲಾವಣೆಗಳೆಂದರೆ ನಸುಕಿನಲ್ಲಿ ಏಳುವುದು. ಅರ್ಧ ತಾಸು ಪ್ರಾಣಾಯಾಮ ಮಾಡುವುದು. ಅರ್ಧ ತಾಸು ಧ್ಯಾನ ಮಾಡುವುದು. ಅರ್ಧ ಗಂಟೆ ವಾಯು ವಿಹಾರ, ನಿತ್ಯಕರ್ಮಗಳು, ಉಪಹಾರದಲ್ಲಿ ಜಾಸ್ತಿ ತರಕಾರಿ, ಹಣ್ಣುಹಂಪಲು. ನಿಮ್ಮ ಕಾಯಕ. ಮಧ್ಯಾಹ್ನದ ಊಟ ಅದೂ ಸಹ ತರಕಾರಿಗಳಿಂದ ಕೂಡಿದ್ದು, ನಮ್ಮ ಕಾಯಕ ಮುಗಿದ ಮೇಲೆ ಸಂಜೆಗೆ ಅಲ್ಪೋಪಹಾರ, ಪ್ರಾಣಾಯಾಮ, ಧ್ಯಾನ ಹಾಗೂ ಪ್ರಾರ್ಥನೆ. ನಂತರ ನಿದ್ದೆ. ಕೇವಲ ಈ ಬದಲಾವಣೆ ಜೀವನದಲ್ಲಿ ಎಲ್ಲ ಅನಿಷ್ಟಗಳನ್ನು ದೂರ ಸರಿಸಿ ಜೀವನದಲ್ಲಿ ತೃಪ್ತಿ ಹಾಗೂ ಸಮಾಧಾನ ತರುವುದು. ಪ್ರಾರಂಭದಲ್ಲಿ ಇದೇ ಒಂದು ಬಂಧನವಾದಂತೆ ಅನಿಸುವದು. ಆದರೆ ಇದರಿಂದ ಆಗುವ ಬದಲಾವಣೆಗಳು ಲಾಭಗಳು ಸಾಕಷ್ಟು.

ಗ್ರಂಥದ ಕೊನೆಯಲ್ಲಿ ನಾಡಿನ ಹಿರಿಯ ವೈದ್ಯರಾದ ಬಿ.ಎಂ.ಹೆಗಡೆಯವರ ಮಾತುಗಳಿವೆ. ಅವರು ಈ ತರದ ಬಾಳನ್ನು ಬೆಂಬಲಿಸುತ್ತಾರೆ. ಮದ್ದುಗಳಿಂದ ದೂರವಿರಲು ಸೂಚಿಸುತ್ತಾರೆ.

ಇದೆಲ್ಲ ಮಾಡುವವರಿಂದ ಜೀವನದಲ್ಲಿ ಪ್ರತಿ ಕ್ಷಣವೂ ನಮ್ಮದೇ ಆಗಿ ಯಾವುದೇ ತರದ ಆತಂಕ ಮುಕ್ತ ಜೀವನ ಸಾಧ್ಯ. ಪುಸ್ತಕದ ಸಂದೇಶ ಇದು.

# ವೈದ್ಯಕೀಯ ಸಾಹಿತ್ಯಕ್ಕೆ ಡಾ.ನಾ.ಮೊಗಸಾಲೆಯವರ ಕೊಡುಗೆ ...

ಡಾ|| ಪದ್ಮಿನಿ ತಿರುನಾರಾಯಣ

ಡಾ||ನಾ.ಮೊಗಸಾಲೆಯವರು ಕಥೆಗಾರ, ಕವಿ ಮತ್ತು ವೈದ್ಯಕೀಯ ಸಾಹಿತಿಯಾಗಿ ಕನ್ನಡ ಸಾರಸ್ವತ ಲೋಕದಲ್ಲಿ ಜನಪ್ರಿಯರಾಗಿದ್ದಾರೆ. ಅವರು ಅಂಕಣಕಾರರಾಗಿ ರಚಿಸಿರುವ ವೈದ್ಯಕೀಯ ಸಾಹಿತ್ಯ ಸಂಗ್ರಹಗಳಾದ 'ಹೆಣ್ಣು ಹೆಣ್ಣನ್ನು ಅರಿಯುವ ಬಗೆ', 'ನಿಮ್ಮ ಕೈಯಲ್ಲೇ ನಿಮ್ಮ ಆರೋಗ್ಯ' ಮತ್ತು 'ಆರೋಗ್ಯ ಅನಾರೋಗ್ಯದ ನಡುವೆ' ಕೃತಿಗಳು ಈಗಾಗಲೇ ಸಾಕಷ್ಟು ಜನಮನ್ನಣೆ ಗಳಿಸಿವೆ. ಈ ಬರಹಗಳನ್ನು ಕುರಿತು ಚಿಂತನೆ ನಡೆಸುವುದು ವೈದ್ಯಳಾದ ನನಗೆ ಹೆಮ್ಮೆಯ ವಿಷಯವೆನಿಸಿದೆ.

ವೈದ್ಯಕೀಯ ಸಾಹಿತಿಗಳು ಕನ್ನಡದಲ್ಲಿ ಸಾಕಷ್ಟು ಮಂದಿ ಇಲ್ಲ ಎಂಬ ಅಪವಾದವಿದೆ. ವೈದ್ಯಳಾಗಿ ನಾನು ಇದಕ್ಕೆ ಕೆಲವು ಕಾರಣಗಳಿರಬಹುದೆಂದು ಊಹಿಸುತ್ತೇನೆ. ವೈದ್ಯರು ತಮ್ಮ ಅಭ್ಯಾಸವನ್ನೆಲ್ಲಾ ಆಂಗ್ಲಭಾಷೆಯಲ್ಲಿ ಮಾಡುವುದರಿಂದ ಆಂಗ್ಲಭಾಷೆಗೆ ತತ್ಸಂಬಂಧ ಶಬ್ದಗಳು ಬರಹಗಾರರಿಗೆ ಕನ್ನಡದಲ್ಲಿ ತೋಚದೇ ಇರುವುದು. ರೋಗಿಗಳು, ಅವರ ಚಿಕಿತ್ಸೆ ಕುರಿತು ಸಾಕಷ್ಟು ಸಮಯ ದಿನದಲ್ಲಿ ವ್ಯಯಿಸುವ ವೈದ್ಯರಿಗೆ ಸಾಹಿತ್ಯದ ಬಗ್ಗೆ ಬಹಳಷ್ಟು ಆಸೆಯಿದ್ದರೂ ಸಮಯದ ಅಭಾವದಿಂದ ಸಾಹಿತ್ಯದ ಕುರಿತಾದ ಪುಸ್ತಕಗಳನ್ನು ಅಭ್ಯಸಿಸುವುದಕ್ಕಾಗಲೀ, ಬರೆಯಬೇಕೆಂಬುದನ್ನು ಬರವಣಿಗೆಗಿಳಿಸುವುದಕ್ಕಾಗಲೀ ಸಮಯದ ಕೊರತೆ ಇರುವುದು. ಆದರೆ ಡಾ||ನಾ.ಮೊಗಸಾಲೆಯವರು ಇವಕ್ಕೆ ಅಪವಾದ ಎಂದು ನಾನು ಭಾವಿಸುತ್ತೇನೆ. ಶ್ರೀಯುತರು ಕೈಯಾಡಿಸದ ಸಾಹಿತ್ಯ ಕ್ಷೇತ್ರವಿಲ್ಲ. "ಅವು ಮುಟ್ಟದ ಸೊಪ್ಪಿಲ್ಲ" ಎನ್ನುವಂತೆ ಕಥೆ, ಕವನ, ಕಾದಂಬರಿ ಮತ್ತು ವೈದ್ಯಕೀಯ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡಿ ನಾಡಿನಾದ್ಯಂತ ಸುಪ್ರಸಿದ್ಧರಾಗಿರುತ್ತಾರೆ.

'ಹೆಣ್ಣು ಹೆಣ್ಣನ್ನು ಅರಿಯುವ ಬಗೆ' ಎಂಬ ಆರೋಗ್ಯ ಸಲಹೆ ಅಂಕಣ ಬರಹಗಳ ಸಂಗ್ರಹದಲ್ಲಿ ಸಾಮಾನ್ಯರಿಗೂ ಅರ್ಥವಾಗುವ ರೀತಿಯಲ್ಲಿ ಸರಳವಾಗಿ ಹೆಣ್ಣು ಮೈನೆರೆಯುವುದರಿಂದ ಹಿಡಿದು ಹೆಂಗಸರಿಗೆ ಮುಟ್ಟಿನಲ್ಲಿ ಕಂಡುಬರುವ ತಾಪತ್ರೆಗಳವರೆಗೆ ಮನೋಜ್ಞವಾಗಿ ಬರೆದಿರುತ್ತಾರೆ.

ಮೈನೆರೆಯುವುದು ವಿಳಂಬವಾದಾಗ ಇಲ್ಲವೇ. ಋತುಮತಿಯಾದ ನಂತರ

ತಿಂಗಳಿಗೊಮ್ಮೆ ಋತುಸ್ರಾವ ಬಾರದಿರುವುದು ಇವುಗಳ ಬಗ್ಗೆ ತಾಯಂದಿರು ಆತಂಕ ಪಡುವುದು ಬೇಡ. ಇದಕ್ಕೆ ಹಾರ್ಮೋನುಗಳ ವ್ಯತ್ಯಯ ಕಾರಣವಿರಬಹುದು. ಇವೇ ಮುಂತಾದ ವಿಷಯಗಳನ್ನು ಸಮಸ್ಯೆ ಮತ್ತು ಪರಿಹಾರಗಳ ಮುಖಾಂತರ ವಿಶ್ಲೇಷಿಸುತ್ತಾರೆ.

ಮದುವೆಗೆ ಮೊದಲು ಹೆಣ್ಣಿಗೆ ಲೈಂಗಿಕ ಶಿಕ್ಷಣದ ಬಗ್ಗೆ ಸಾಕಷ್ಟು ಅರಿವು ಮೂಡಿಸಬೇಕೆಂಬ ಲೇಖಕರ ಅಭಿಪ್ರಾಯ ಸ್ವಾಗತಾರ್ಹ. ಹತಾಶೆ, ಚಿಂತೆ, ನಿರಾಶೆ ಇವೆಲ್ಲಾ ನಲವತ್ತರ ನಂತರದ ಹೆಂಗಸರಲ್ಲಿ ಮೆನೋಪಾಸ್‌ನ ಲಕ್ಷಣಗಳಿರಬಹುದು. ಒಂಟಿತನ, ಬೇಸರ, ಸಮಯ ಅಧಿಕವಿದೆ ಅನ್ನಿಸುವಿಕೆ ಇವನ್ನೆಲ್ಲಾ ವರವಾಗಿ ಉಪಯೋಗಿಸಿಕೊಳ್ಳುವ ಜಾಣ್ಮೆ ಅವಳಲ್ಲಿರಬೇಕು ಎನ್ನುವ ಲೇಖಕರು, ಶ್ರೀಮತಿ ಎಂ.ಕೆ. ಇಂದಿರಾ, ಸಾರಾ.ಅಬೂಬಕರ್ ಎಲ್ಲಾ ನಲವತ್ತರ ನಂತರವೇ ಸಾಹಿತ್ಯ ಕೃತಿಗೆ ತೊಡಗಿ ಯಶಸ್ವೀ ಮಹಿಳೆಯರಾಗಿದ್ದಾರೆ ಎಂದೂ ಉದಾಹರಿಸುತ್ತಾರೆ.

ಇನ್ನು ಇಳಿ ವಯಸ್ಸಿನಲ್ಲಿ ಸಾಮಾನ್ಯವಾಗಿ ಕಂಡುಬರುವ ಹೆಂಗಸರ ಕಾಯಿಲೆಗಳು ಎಲುಬಿಗೆ ಸಂಬಂಧಪಟ್ಟವು, ಸ್ತನಗಳ ಕ್ಯಾನ್ಸರ್, ಗರ್ಭಕೋಶದ ಕ್ಯಾನ್ಸರ್ ಮತ್ತು ನೆನಪಿನ ಶಕ್ತಿಯ ಕೊರತೆ ಇವೇ ಮುಂತಾದವುಗಳಿಗೆ ಪರಿಹಾರವನ್ನು ಸೂಚಿಸುವುದರ ಜೊತೆಗೇ ವೃದ್ಧರು ಭಾವನಾತ್ಮಕ ಏರುಪೇರು ಅಥವಾ ಕೀಳರಿಮೆ ಬಿಟ್ಟು, ಸೊಸೆಯೊಂದಿಗೆ ವೈಮನಸ್ಯದ ಬದಲು ಸೊಸೆಯೇ ಮಗಳೆಂದು ಭಾವಿಸಿ ಬದುಕುವುದು ಮೇಲು ಎಂಬ ಸಾಮಾಜಿಕ ಚಿಂತನೆಯನ್ನು ಲೇಖಕರು ನಡೆಸಿದ್ದಾರೆ.

ಇನ್ನು ಬಂಜೆತನವನ್ನು ಕುರಿತ ಲೇಖಕರ ಅಭಿಪ್ರಾಯ ಈ ರೀತಿ ಇದೆ – ಬಂಜೆತನಕ್ಕಾಗಿ ಮಹಿಳೆಯನ್ನೆ ದೂಷಿಸುವುದು ಸರಿಯಲ್ಲ. ಹೆಂಡತಿಯಲ್ಲಿ ಹೇಗೋ ಹಾಗೇ ಗಂಡನಲ್ಲಿ ಅನೇಕ ಅಂಶಗಳು ಸೇರಿ ಇದು ಬಂಜೆತನ ಎಂದು ನಿರ್ಧರಿಸಬೇಕು. ಹಾಗಾಗಿ ಈ ಸಾಮಾಜಿಕ ಕ್ರೌರ್ಯಕ್ಕೆ ಹೆಣ್ಣನ್ನೇ ತುತ್ತಾಗಿಸುವುದು ಬೇಡ ಎನ್ನುತ್ತಾರೆ.

ಇತ್ತೀಚಿನ ದಿನಗಳಲ್ಲಂತೂ ಅರ್ಬುದ ಕಾಯಿಲೆಯ ಬಗ್ಗೆ ಹೆಚ್ಚು ಹೆಚ್ಚು ಅರಿವು ಮೂಡಿಸುವುದು ಅಗತ್ಯವಾಗಿದೆ. ಕೆಲವು ಕ್ಯಾನ್ಸರ್‌ಗಳು ಅನುವಂಶೀಕತೆಯಿಂದ, ಕೆಲವು ದುಶ್ಚಟಗಳಿಂದ(ಸಿಗರೇಟು ಸೇವನೆ, ಕುಡಿತ, ತಂಬಾಕು ಜಗಿಯುವಿಕೆ) ಮತ್ತೆ ಕೆಲವು ಪರಿಸರದ ಕಾರಣದಿಂದ ಬರುವಂತಹವಿರಬಹುದು.

ರೋಗ ಎಳಕದಲ್ಲಿರುವಾಗಲೇ ಕ್ಯಾನ್ಸರ್ ಪತ್ತೆ ಹಚ್ಚುವ ಕ್ರಮ ಮತ್ತು ಚಿಕಿತ್ಸೆಯ ಬಗ್ಗೆಯೂ ಸೂಕ್ಷ್ಮವಾಗಿ ಲೇಖಕರು ಜನಸಾಮಾನ್ಯರಿಗ ಪರಿಚಯ ಮಾಡಿಸಿದ್ದಾರೆ.

ಮಕ್ಕಳಿರಲವ್ವ ಮನೆತುಂಬ ಎಂದು ಹಿರಿಯರು ಹೇಳಿದ್ದುಂಟು. ಆದರೆ ಕಾಲಧರ್ಮಕ್ಕನುಗುಣವಾಗಿ ಈ ಹೇಳಿಕೆ ಆರತಿಗೊಬ್ಬಳು, ಕೀರ್ತಿಗೊಬ್ಬ ಆಯಿತು. ಆದರೆ ಇತ್ತೀಚಿನ ಹೇಳಿಕೆ ಗಂಡಾಗಲಿ ಹೆಣ್ಣಾಗಲೀ ಮಗು ಒಂದೇ ಇರಲಿ. ಇದಕ್ಕಾಗಿ ಕುಟುಂಬ ಕಲ್ಯಾಣ ಯೋಜನೆಯಡಿ ಸರ್ಕಾರ ಸಾಕಷ್ಟು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಂತಾನ ನಿರೋಧ ಸಾಧನಗಳ ಬಗ್ಗೆ ಪ್ರಚಾರ ನೀಡುತ್ತಿದೆ. ಪ್ರಶ್ನೋತ್ತರಗಳ ರೂಪದಲ್ಲಿ ಡಾ|| ಮೋಗಸಾಲೆಯವರು ತಮ್ಮ ಅಂಕಣಗಳಲ್ಲಿ ಪದೇ ಪದೇ ಜನರಿಗ

ಕುಟುಂಬ ಕಲ್ಯಾಣ ಯೋಜನೆಗಳ ಬಗ್ಗೆ ಬಹಳಷ್ಟು ಮಾಹಿತಿಗಳನ್ನೊದಗಿಸಿದ್ದಾರೆ.

ಲೈಂಗಿಕ ರೋಗಗಳ ಅಪಾಯ ಮತ್ತು ನಿವಾರಣೋಪಾಯ ಎಂಬ ಅಂಕಣದಡಿ ಅನೈತಿಕ ಲೈಂಗಿಕ ಸಂಪರ್ಕ ಮತ್ತು ವೇಶ್ಯಾ ವಾಟಿಕೆ ಇವುಗಳ ಬಗ್ಗೆ ಲೇಖಕರು ಜನರಿಗೆ ಎಚ್ಚರಿಕೆ ನೀಡುತ್ತಾರೆ. ಈ ರೋಗಗಳು ಪ್ರಾಣಾಪಾಯಕಾರಿಗಳು. ಇವು ಬಂದನಂತರ ಚಿಕಿತ್ಸೆ ಪಡೆಯುವುದಕ್ಕಿಂತ ಬಾರದಂತೆ ನೋಡಿಕೊಳ್ಳುವುದೇ ವಾಸಿ.

ನಮ್ಮ ಆರೋಗ್ಯಕ್ಕೆ ನಮ್ಮ ಆಹಾರ ಹೇಗೆ ಮುಖ್ಯ ಎಂಬ ಲೇಖನದಲ್ಲಿ ಹಸಿರು ಸೊಪ್ಪು ಅವುಗಳ ಉಪಯುಕ್ತತೆ ಬಗ್ಗೆ ವಿವರಿಸುತ್ತಾ ಯಾವ ಸೊಪ್ಪಿನಲ್ಲಿ ಎಷ್ಟು ಕಬ್ಬಿಣಾಂಶ, ಸುಣ್ಣಾಂಶ, ವಿಟಮಿನ್‌ಗಳು ಮತ್ತು ಖನಿಜಗಳು ಇವೆ ಎಂಬ ಬಗ್ಗೆ ಒಂದು ದೊಡ್ಡಪಟ್ಟಿಯನ್ನೇ ಕೊಟ್ಟಿದ್ದಾರೆ.

ಲೇಖಕರು ಉಷಃಪಾನದ ಬಗ್ಗೆ ಮಾಹಿತಿ ನೀಡುತ್ತಾ ಅಧಿಕ ನೀರು ಸೇವಿಸುವವರಿಗೆ ಕ್ಯಾನ್ಸರ್ ಮತ್ತು ಇತರೇ ಖಾಯಿಲೆಗಳು ಬರುವ ಸಂಭವ ಕಡಿಮೆ. ಏಕೆಂದರೆ ಕರುಳಿನಲ್ಲಿನ ಹಾನಿಕಾರಕ ವಿಷಗಳು ಮತ್ತು ಕ್ಯಾನ್ಸರ್‌ಕಾರಕ ವಸ್ತುಗಳನ್ನು ನೀರು ದೇಹದಿಂದ ಹೊರದೂಡುತ್ತದೆ ಎಂಬುದಾಗಿ ಅಮೇರಿಕದ ಕ್ಯಾನ್ಸರ್ ಸಂಶೋಧನಾ ಸಂಸ್ಥೆಯ ಮಾಹಿತಿಯೊಂದನ್ನು ಸಾರಾಂಶರೂಪವಾಗಿ ಹೇಳಿದ್ದಾರೆ.

ಇನ್ನು ಕ್ಷಯ ರೋಗದ ಬಗ್ಗೆ ಸಾಕಷ್ಟು ತಪ್ಪು ಕಲ್ಪನೆಗಳು ಜನರಲ್ಲಿವೆ. ಒಮ್ಮೆ ಈ ಖಾಯಿಲೆ ಬಂದರೆ ಪೂರ್ಣ ವಾಸಿಯಾಗುವುದಿಲ್ಲ, ಮಕ್ಕಳಿಗೆ ಈ ಖಾಯಿಲೆ ಬರುವುದಿಲ್ಲ, ವಂಶಪಾರಂಪರ್ಯವಾಗಿ ಬರುವ ಖಾಯಿಲೆ ಮತ್ತು ಚಿಕಿತ್ಸೆಯಿಂದ ಗುಣಪಡಿಸಲಾಗದ ಖಾಯಿಲ ಇವೇ ಮುಂತಾದವು. ಆದರೆ ರೋಗವೇ ಬರದಂತೆ ಪ್ರತಿ ಬಂಧಕೋಪಾಯ ಮತ್ತು ಒಮ್ಮೆ ರೋಗ ಕಾಣಿಸಿಕೊಂಡಾಗ ಚಿಕಿತ್ಸೆಯಿಂದ ಗುಣಪಡಿಸುವ ವಿಧಾನ ಇವುಗಳ ಬಗ್ಗೆ ಡಾ॥ಮೊಗಸಾಲೆಯವರು ಸಂಕ್ಷಿಪ್ತವಾಗಿ ಮಾಹಿತಿ ನೀಡಿದ್ದಾರೆ.

ವೈದ್ಯಶಾಸ್ತ್ರದ ಮುನ್ನಡೆಯಿಂದಾಗಿ ಬಹಳಷ್ಟು ಖಾಯಿಲೆಗಳನ್ನು ಗುಣಪಡಿಸುವುದೇ ಅಲ್ಲದೆ, ಪ್ರತಿಬಂಧಕೋಪಾಯದಿಂದ ರೋಗ ಬಾರದಂತೆ ತಡೆಗಟ್ಟುವ ಕ್ರಮಗಳೂ ಯಶಸ್ವಿಯಾಗಿವೆ. ಆದರೆ ಇತ್ತೀಚಿನ ದಿನಗಳಲ್ಲಿ ವೈದ್ಯರಿಗೆ ಸವಾಲಾಗಿರುವ ಖಾಯಿಲ ಎಂದರೆ ಅಲರ್ಜಿ. ಅಲರ್ಜಿ ಎಂದರೆ ಒಗ್ಗದಿರುವಿಕೆ ಎಂದರ್ಥ. ಅಲರ್ಜಿಕಾರಕ ವಸ್ತುಗಳನ್ನು ಅಲರ್ಜಿಸ್ ಎನ್ನುತ್ತಾರೆ.

ಇವುಗಳ ಬಗ್ಗೆ ಸಾಕಷ್ಟು ವಿವರಣೆ ನೀಡುವ ಲೇಖಕರು ಅಲರ್ಜಿಸ್ ಬಗ್ಗೆ ತಿಳಿದರೆ, ಅಲರ್ಜಿ ಉಂಟಾಗುವುದನ್ನು ತಡೆಯಬಹುದು ಎಂದು ತಿಳಿಸುತ್ತಾರೆ.

'ಆರೋಗ್ಯ ಅನಾರೋಗ್ಯದ ನಡುವೆ' ಆರೋಗ್ಯವನ್ನು ಕುರಿತು ಬರೆದ, ಜನಾಂತರಂಗ ಪತ್ರಿಕೆಯ ಹಲವಾರು ಅಂಕಣಗಳ ಸಂಗ್ರಹ. ಇದರ ವೈಶಿಷ್ಟ್ಯವೆಂದರೆ ಇಲ್ಲಿನ ಒಟ್ಟು ಬರಹಗಳಲ್ಲಿ ಲೈಂಗಿಕ ಜ್ಞಾನಕ್ಕೆ ಹೆಚ್ಚು ಒತ್ತು ಕೊಟ್ಟಿರುವುದಕ್ಕೆ ಹಲವು ಕಾರಣಗಳಿರಬಹುದು. ಅವಿವಾಹಿತ ತರುಣ-ತರುಣಿಯರಲ್ಲಿ ಲೈಂಗಿಕ ಜೀವನದ ಬಗ್ಗೆ ಸಹಜವಾಗಿಯೇ ಇರುವ ಕುತೂಹಲ ಮತ್ತು ಲೈಂಗಿಕ ಜೀವನದ ಬಗ್ಗೆ

ತಪ್ಪುತಿಳುವಳಿಕೆ ಮತ್ತು ವಿವಾಹಿತರಲ್ಲಿ ಲೈಂಗಿಕ ಜೀವನದ ಸಮಸ್ಯೆಗಳು. ಪ್ರಶ್ನೋತ್ತರ ರೂಪದಲ್ಲಿ ಹಲವಾರು ಲೈಂಗಿಕ ಸಮಸ್ಯೆಗಳಿಗೆ ಡಾ॥ಮೊಗಸಾಲೆಯವರು ಸವಿಸ್ತಾರವಾಗಿ ಉತ್ತರಿಸುತ್ತಾರೆ.

ಇನ್ನು ಕನಸಿನ ಬಗ್ಗೆ ಡಾ॥ಮೊಗಸಾಲೆಯವರ ಅಭಿಪ್ರಾಯ ಈ ರೀತಿ ಇದೆ. ಕನಸುಗಳು ಮಾನವನ ಹುಟ್ಟಿನಿಂದ ಹುಟ್ಟಿವೆ. ಕನಸು ಕಾಣದ ಮನುಷ್ಯರಿಲ್ಲ. ಮನುಷ್ಯರು ಬದುಕಿ ಉಳಿಯುವುದೇ ನಾಳೆ ಎಂಬ ಕನಸು ಕಾಣುತ್ತಾ. ಪ್ರತಿಯೊಂದು ಕನಸಿಗೂ ತನ್ನದೇ ಆದ ಅರ್ಥವಿರುತ್ತದೆ. ನಮ್ಮ ಜೀವನದ ಅನೇಕ ವಿಷಯಗಳು ನಮ್ಮ ಅರಿವಿಗೆ ಬಾರದೆ ಕನಸಿನಲ್ಲಿ ಮರುಕಳಿಸಿ ಅವುಗಳ ಇರುವನ್ನು ಮೂಡಿಸುತ್ತವೆ. ಫ್ರಾಯ್ಡ್ ಎಂಬ ಮನೋವಿಜ್ಞಾನಿ ಪ್ರಕಾರ ಕನಸಿನಲ್ಲಿ ಕಾಣುವ ವಸ್ತುಸ್ಥಿತಿ ಎರಡು ಬಗೆಯದಾಗಿರುತ್ತದೆ. ಸ್ಪಷ್ಟ ವಸ್ತುಸ್ಥಿತಿ, ಅಂದರೆ ಕನಸಿನಲ್ಲಿ ಪ್ರತ್ಯಕ್ಷ ಕಾಣುವಂತಹವು. ಇನ್ನೊಂದು ಸುಪ್ತ ವಸ್ತುಸ್ಥಿತಿ. ನಾವು ಹೊರಗೆಡುಹಿದ ಆಸೆ ಆಕಾಂಕ್ಷೆಗಳು, ಮನಸ್ಸಿನೊಳಗೇ ಅದುಮಿಟ್ಟವು. ಕನಸುಗಳು ಅತೃಪ್ತ ದೈಹಿಕ ಬೇಡಿಕೆಗಳ ಪರಿಹಾರೋಪಾಯ. ಅಜಾಗ್ರತ ಮನಸ್ಸಿನ ರಾಜಮಾರ್ಗ. ಆದ್ದರಿಂದ ಎಲ್ಲರೂ ನಿಶ್ಚಿಂತೆಯಿಂದ ಸುಖವಾದ ರಾತ್ರಿಗಳಲ್ಲಿ ಕನಸುಗಳನ್ನು ಅನುಭವಿಸಿ ಎಂದು ಲೇಖಕರು ಸಲಹೆ ಕೊಡುತ್ತಾರೆ.

ಇತ್ತೀಚೆಗಂತೂ ಬೊಜ್ಜು ನಮ್ಮೆಲ್ಲರನ್ನೂ ಕಾಡುವ ಸಮಸ್ಯೆ. ಆಧುನಿಕ ಜೀವನ ಶೈಲಿಯೇ ಬೊಜ್ಜಿಗೆ ಮೂಲಕಾರಣವೇನೋ ಎನ್ನಿಸಿದೆ. ಇಂದಿನ ವೇಗದ ಬದುಕು, ವ್ಯಾಯಾಮವಿಲ್ಲದ ಪಾಶ್ಚಿಮಾತ್ಯ ಜೀವನ ಶೈಲಿಯ ಜೀವನ, ಮಾನಸಿಕ ಕ್ಲೇಶಗಳ ಒತ್ತಡ – ಇವೇ ಬೊಜ್ಜಿನ ಮುಖ್ಯ ಕಾರಣಗಳಿರಬಹುದು. ಲೇಖಕರು ಬೊಜ್ಜಿಗೆ ಪರಿಹಾರವನ್ನು ಈ ರೀತಿ ಸೂಚಿಸುತ್ತಾರೆ. ನಿಯಮಿತ ಆಹಾರ, ಪ್ರತಿದಿನ ವ್ಯಾಯಾಮ, ಅತಿಯಾದ ಕರಿದ ಪದಾರ್ಥಗಳು, ಕಾಫಿ, ಟೀ ಇವನ್ನು ಸೇವಿಸದಿರುವುದು, ಮದ್ಯಪಾನದಿಂದ ದೂರವಿರುವುದು ಹಾಗೂ ಮಾನಸಿಕ ಒತ್ತಡಗಳನ್ನು ಕಡಿಮೆ ಮಾಡುವ ಸಂಗೀತ, ಸಾಹಿತ್ಯ, ಕ್ರೀಡೆಗಳ ಕಡೆ ಒಲವು ಹೆಚ್ಚಿಸಿಕೊಳ್ಳುವಿಕೆ.

ಹೆಡ್ ಏಕ್ ಅಂದರೆ ತಲೆನೋವಿನ ಬಗ್ಗೆ ಲೇಖಕರ ಅಭಿಪ್ರಾಯ ಈ ರೀತಿ ಇದೆ: ತಲೆನೋವು ಯಾರಿಗಾದರೂ ಯಾವ ವಯಸ್ಸಿನಲ್ಲಾದರೂ ಬರಬಹುದು. ಇದಕ್ಕೆ ಕಾರಣ ಶೀತ, ಕೆಮ್ಮು, ಜ್ವರ, ಕಿವಿ ನೋವು, ಕಣ್ಣು ನೋವು, ದೃಷ್ಟಿ ನ್ಯೂನತೆಗಳು, ಹಲ್ಲುಗಳ ತೊಂದರೆ, ಶ್ವಾಸಕೋಶ, ಮೂತ್ರಪಿಂಡ ಖಾಯಿಲೆಗಳು, ರಕ್ತದ ವೈಪರೀತ್ಯ, ರಕ್ತದ ಏರೊತ್ತಡ, ಮುನ್ನಾದಿನ ಸೇವಿಸಿದ ಮದ್ಯ, ಮಿದುಳು ಕವಚದ ಉರಿಯೂತ, ಮಿದುಳುಗಡ್ಡೆ, ಕ್ಯಾನ್ಸರ್, ಕೆಲವು ಔಷಧಿಗಳ ಅಡ್ಡ ಪರಿಣಾಮ ಇವೇ ಮುಂತಾದವು. ತಲೆ ನೋವಿಗೆ ಸಾಮಾನ್ಯ ಚಿಕಿತ್ಸೆಯಿಂದ ಉಪಶಮನ ದೊರೆಯದಿದ್ದಾಗ ಸಂಬಂಧಪಟ್ಟ ತಜ್ಞವೈದ್ಯರನ್ನು ಸಂಪರ್ಕಿಸುವುದು ಒಳಿತು. ಏಕೆಂದರೆ ಎಲ್ಲ ನೋವುಗಳಲ್ಲಿ ತಲೆನೋವು

ತಲೆನೋವೇ!

ಮಲೇರಿಯಾ ರೋಗ ಪ್ಲಾಸ್ಮೋಡಿಯಂ ಪರೋಪಜೀವಿಯಿಂದ, ಅನಾಫಿಲಿಸ್ ಎಂಬ ಹೆಣ್ಣು ಸೊಳ್ಳೆ ಕಚ್ಚುವುದರಿಂದ ಹರಡುವ ಒಂದು ಸಾಂಕ್ರಾಮಿಕ ರೋಗ. ಈಗ ಮಲೇರಿಯಾ ರೋಗವನ್ನು ಸಂಪೂರ್ಣವಾಗಿ ಗುಣಪಡಿಸುವ ಸಮರ್ಥ ಔಷಧಗಳ ಲಭ್ಯವಿದೆ. ಎಳಕವಲ್ಲೇ ರೋಗವನ್ನು ಪತ್ತೆಹಚ್ಚಿ ವಾಸಿಪಡಿಸಬಹುದಾದ ಖಾಯಿಲೆಯಾದರೂ ಪರಿಸರವನ್ನು ಶುದ್ಧವಾಗಿರಿಸಿ ಮಲೇರಿಯಾ ರೋಗ ಹರಡದಂತೆ ತಡೆಗಟ್ಟುವ ಬಗ್ಗೆಯೂ ಸಮಾಜ ಮತ್ತು ಸರ್ಕಾರ ಸಾಕಷ್ಟು ಮುತುವರ್ಜಿ ವಹಿಸಬೇಕೆಂದು ಡಾ॥ಮೊಗಸಾಲೆಯವರು ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸುತ್ತಾರೆ.

ಡಾ॥ಮೊಗಸಾಲೆ ಕನ್ನಡದ ಜನಾಂತರಂಗ ಪತ್ರಿಕೆಯಲ್ಲಿ ಒಂದು ವರ್ಷ ಕಾಲ ನಡೆಸಿಕೊಟ್ಟ ಪ್ರಶ್ನೋತ್ತರ ಆರೋಗ್ಯ ಸಲಹೆ ಅಂಕಣಕ್ಕೆ ಒದಗಿಸಿದ ಮಾಹಿತಿಯನ್ನು 'ನಿಮ್ಮ ಕೈಯಲ್ಲೇ ನಿಮ್ಮ ಆರೋಗ್ಯ' ಎಂಬ ಕೃತಿಯನ್ನು ಜನತೆಯ ಕೈಲಿಟ್ಟಿದ್ದಾರೆ. ಈ ಪುಸ್ತಿಕೆಯ ಮುನ್ನುಡಿ ಬರೆಯುತ್ತ, ಸುಪ್ರಸಿದ್ಧ ವೈದ್ಯ ಸಾಹಿತಿ, ಮಾನಸಿಕ ರೋಗ ತಜ್ಞ ಡಾ॥ಸಿ.ಆರ್.ಚಂದ್ರಶೇಖರ್‌ರವರು ಡಾ॥ನಾ.ಮೊಗಸಾಲೆಯವರ ಬಗ್ಗೆ ಈ ರೀತಿ ಬರೆಯುತ್ತಾರೆ. ಓದುಗರ ಪ್ರಶ್ನೆಗಳಿಗೆ ಸಮಸ್ಯೆಗಳಿಗೆ "ಸಮಂಜಸವಾದ ಶಿರೋನಾಮೆಗಳಡಿ ರೋಗ ಉಪಶಮನಗಳನ್ನು ಡಾ॥ಮೊಗಸಾಲೆಯವರು ನೀಡಿದ್ದಾರೆ. ಮುಖದ ಕಲೆ-ಕಾಳಜಿ, ಸೌಂದರ್ಯ, ಆಸ್ತಮಾ ಎಂಬ ಪೀಡೆ, ಅಲರ್ಜಿ ನಿಮ್ಮೊಡನಿದ್ದೂ ನಿಮ್ಮಂತಾಗದೆ, ಮಲಬದ್ಧತೆ ಮತ್ತು ನಿವಾರಣೆ, ಬೆನ್ನು ಬಿಡದ ಬೆನ್ನು ನೋವು, ನಿದ್ದೆ ಇಲ್ಲ ಎಂದು ನಿದ್ದೆಗೆಡಬೇಡಿ, ಮುಷ್ಟಿಮೈಥುನ ಎಂಬ ಗುಮ್ಮ, ಸೆರಗು ಹಿಡಿವ ಬಿಳಿ ಸೆರಗು ಇತ್ಯಾದಿ. ಸೂಕ್ತ ಕಂಡೆಡೆ ಆಯುರ್ವೇದ ಚಿಕಿತ್ಸೆಯನ್ನು ಸೂಚಿಸಿದ್ದಾರೆ. ಎಲ್ಲಿ ಸೂಕ್ತವೋ ಅಲ್ಲಿ ತಜ್ಞ ವೈದ್ಯರ ಸಲಹೆಗಾಗಿ ಸೂಚಿಸುತ್ತಾರೆ. ಪ್ರಾಮಾಣಿಕ ಮತ್ತು ವಸ್ತುನಿಷ್ಠ ಬರವಣಿಗೆಗೆ ಡಾ.ಮೊಗಸಾಲೆಯವರ ಕೃತಿಗಳು ನಿದರ್ಶನಗಳಾಗಿವೆ".

ತಮ್ಮ ವೈದ್ಯಕೀಯ ಅಂಕಣಗಳ ಸಂಗ್ರಹ ಪುಸ್ತಕಗಳ ಬಗ್ಗೆ ಲೇಖಕರು ಹೀಗೆ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. "ಆರೋಗ್ಯ ಸಲಹೆ", ಪ್ರಶ್ನೆಗಳಿಗೆ ಉತ್ತರಿಸುವುದು ನಾಜೂಕಿನ ಕೆಲಸ. ರೋಗಿಯನ್ನು ನೋಡದೆ, ಪರೀಕ್ಷೆ ಮಾಡದೆ, ಇತರೇ ವೈಜ್ಞಾನಿಕ ಪರೀಕ್ಷೆಗಳಿಗೊಳಪಡಿಸದೆ ರೋಗಕ್ಕೆ ಉಪಶಮನವನ್ನು ಕಂಡುಹಿಡಿಯುವುದು ನಿಜಕ್ಕೂ ಕಷ್ಟ. ಕುಟುಂಬ ವೈದ್ಯರ ಸಲಹೆಯನ್ನು ಪಡೆಯದೇ ಈ ಚಿಕಿತ್ಸೆ ತೆಗೆದುಕೊಳ್ಳಬೇಡಿ ಎಂದು ನಮ್ರವಾಗಿ ರೋಗಿಗಳಲ್ಲಿ ವಿನಂತಿಸಿಕೊಳ್ಳುತ್ತಾರೆ. ರೋಗಿಗಳಿಗೆ ರೋಗದ ಬಗ್ಗೆ ಅರಿವು ಮೂಡಿಸಿ ಅವರಿಗೆ ಸರಿ ದಾರಿ ತೋರಿಸುವ 'ಗೈಡ್ ಕೆಲಸ' ಮಾತ್ರ ತಮ್ಮದು ಎನ್ನುತ್ತಾರೆ ಡಾ॥ಮೊಗಸಾಲೆಯವರು.

ಆಯುರ್ವೇದದ ಹಿನ್ನಲೆಯಿಂದ ಡಾ॥ಮೊಗಸಾಲೆಯವರಿಗೆ ರೋಗಿಗೆ ಉಪಶಮನವಷ್ಟೇ ಅಲ್ಲ, ರೋಗದ ಬಗ್ಗೆ ಸಾಕಷ್ಟು ತಿಳುವಳಿಕೆ ನೀಡಬೇಕೆಂಬ ಕಾಳಜಿ ಉಂಟು. ಲೈಂಗಿಕ ತಜ್ಞರೆಂದು ಜಾಹೀರಾತು ನೀಡಿ ಸಾವಿರಾರು ರೂಪಾಯಿಗಳನ್ನು

ಸುಲಿಯುವ ನಕಲೀ ವೈದ್ಯರ ಬಗ್ಗೆ ಜನಸಾಮಾನ್ಯರಿಗೆ ಎಚ್ಚರಿಕೆಯ ಮಾತನ್ನು ಹೇಳುತ್ತಾರೆ ಲೇಖಕರು.

ಅವರ ಅಂಕಣ ಬರಹಗಳು ಬಹಳಷ್ಟು ಜನಪ್ರಿಯವಾಗಿವೆ. ಡಾ||ನಾ.ಮೊಗಸಾಲೆಯವರಿಗೆ ನಾಡಿನ ಪ್ರತಿಷ್ಠಿತ ಪ್ರಶಸ್ತಿಗಳು ಕವನ, ಕಾದಂಬರಿ ಮತ್ತು ಸಾಹಿತ್ಯಸೇವೆಗೆ ಈಗಾಗಲೇ ದೊರೆತಿವೆ. ಇವರೊಬ್ಬ ಚಿಂತನಶೀಲ, ಅಧ್ಯಯನಶೀಲ ವೈದ್ಯರು. ಇದೀಗ ಇವರ ವೈದ್ಯಕೀಯ ಸಾಹಿತ್ಯದ ಪ್ರಭೆ ನಾಡಿನಾದ್ಯಂತ ಪಸರಿಸುತ್ತಿದೆ.

ಇವರ ಆಯುರ್ವೇದ ಸೇವೆಯನ್ನು ಜನ ಪಡೆಯಲಿ. ಡಾ||ಮೊಗಸಾಲೆಯವರಿಂದ ಮತ್ತಷ್ಟು ವೈದ್ಯಕೀಯ ಸಾಹಿತ್ಯ ಕುರಿತಾದ ಪುಸ್ತಕಗಳು ಹೊರಬರಲಿ. ಅವರ ಸಾಹಿತ್ಯ ಕೃತಿ ರಚನೆಗಳು ಮತ್ತಷ್ಟು ಮೂಡಿಬರಲಿ ಎಂದು ಆಶಿಸುತ್ತೇನೆ.

O

# ಹಳ್ಳಿಯಲ್ಲಿ ಅರಳಿದ ಬೆಳಕಿನ ಬದುಕು: ನಾ.ಮೊಗಸಾಲೆ -

ನಂದಳಿಕೆ ಬಾಲಚಂದ್ರರಾವ್

ಮುದ್ದಣ ಅಂದ ಕೂಡಲೇ ಆತ ಹುಟ್ಟಿದ ಊರು ನಂದಳಿಕೆ ನೆನಪಾದ ಹಾಗೆ ನಂದಳಿಕೆಯ ಮಾತೆತ್ತಿದರೆ ಮುದ್ದಣ ಪ್ರತ್ಯಕ್ಷನಾಗುತ್ತಾನೆ. ಕಾಂತಾವರ ಅಂದ ಕೂಡಲೇ ಮೊಗಸಾಲೆ, ಮೊಗಸಾಲೆ ಅಂದ ಕೂಡಲೇ ಕಾಂತಾವರ ಅನ್ನುವುದೂ ಕೂಡಾ ಇಂಥಾದ್ದೇ ಒಂದು ಸಾಮ್ಯ!

ಮುದ್ದಣ ನಂದಳಿಕೆಯಲ್ಲಿ ಹುಟ್ಟಿ ಉಡುಪಿಯಲ್ಲಿ ಬಾಳಿ ನಂದಳಿಕೆಗೆ ಹೆಸರು ತಂದರೆ, ಮೊಗಸಾಲೆ ಕಾಸರಗೋಡಿನ ಒಂದು ಕುಗ್ರಾಮವಾದ ಕೋಳ್ಯಾರಿನಲ್ಲಿ ಹುಟ್ಟಿ, ಕೋಳ್ಯಾರನ್ನು ನೆನಪಿಗೆ ತರುವ ಅಂಥಾದ್ದೇ ಇನ್ನೊಂದು ಹಳ್ಳಿ ಕಾಂತಾವರಕ್ಕೆ ವೈದ್ಯಕೀಯ ಕಾಯಕಕ್ಕಾಗಿ ಬಂದು, ಅಲ್ಲೇ ನೆಲೆ ನಿಂತು ತನ್ನ ಶ್ರೀಮಂತ ಸಾಹಿತ್ಯ ಸೃಷ್ಟಿ ಮತ್ತು ಸಾಹಿತ್ಯ ಚಟುವಟಿಕೆಗಳಿಂದ ಕರ್ನಾಟಕ ಸಾಹಿತ್ಯ ನಕ್ಷೆಯಲ್ಲಿ ಕಾಂತಾವರಕ್ಕೆ ಹೆಸರು ತಂದ ಕವಿ, ಕಾದಂಬರಿಕಾರ.

ನಾ.ಮೊಗಸಾಲೆ ಅಂದರೆ ನಾರಾಯಣ ಭಟ್ಟ ಮೊಗಸಾಲೆ - ಶ್ರೀಮಂತ ಪರಂಪರೆಯ ಆಗರ್ಭ ಶ್ರೀಮಂತ ಕುಟುಂಬದ ಹಿನ್ನೆಲೆಯಿಂದ ಬಂದ ಹೃದಯ ಶ್ರೀಮಂತಿಕೆಯ ಸಾಮಾನ್ಯರಲ್ಲಿ ಸಾಮಾನ್ಯ! ಅವರು ಹುಟ್ಟುವಾಗ ಅವರ ಹಿರಿಯರಿಗೆ ಇದ್ದದ್ದು - ಶ್ರೀಮಂತಿಕೆಯಲ್ಲ, ನನ್ನಜ್ಜನಿಗೊಂದು ಆನೆ ಇತ್ತು ಎಂಬ ಇತಿಹಾಸ ಮಾತ್ರ. ನಾಲ್ಕನೇ ವರುಷಕ್ಕೆ ತಂದೆಯನ್ನು ಕಳಕೊಂಡು, ಸಾಕು ತಂದೆಯಾಗಿ ಬಂದ ಚಿಕ್ಕಪ್ಪ ಕೃಷ್ಣಭಟ್ಟರಿಂದ ಸಂರಕ್ಷಿಸಿ, ಸೋದರ ಮಾವಂದಿರಾದ ಒಡಿಯೂರಿನ ಪರಮೇಶ್ವರ ಭಟ್ಟ ಸಹೋದರರ ಆಶ್ರಯದಿಂದ ಕನ್ಯಾನದಲ್ಲಿ ಮೆಟ್ರಿಕ್ಯುಲೇಷನ್ ಮುಗಿಸಿ ಇಂಗ್ಲೀಷ್ ಪ್ರಾಧ್ಯಾಪಕನಾಗಬೇಕೆಂಬ ಆಸೆಯಿಂದ ಉಡುಪಿಗೆ ಹೋದರೆ ಸಿಕ್ಕಿದ್ದು ಆಗ ಯಾರೂ ಓದಲು ಬಯಸದ ಆಯುರ್ವೇದ! ಉಚಿತ ಊಟ ವಸತಿ ಸಿಗಬೇಕಾದರೆ ಇದ್ದ ಅದೃತೆ ಆಯುರ್ವೇದ ವೈದ್ಯಕೀಯವಾದ್ದರಿಂದ ಅನಿವಾರ್ಯವಾಗಿ ತನ್ನ ಕನಸು ಕೈಗೂಡದಿದ್ದರೂ, ಉಡುಪಿ ಮಠದಲ್ಲಿದ್ದುಕೊಂಡೇ ಹೈಸ್ಕೂಲು ವಿದ್ಯಾಭ್ಯಾಸದ ದಿನಗಳಲ್ಲೇ ಮೈಗೂಡಿಸಿಕೊಂಡಿದ್ದ ಸಾಹಿತ್ಯಾಸಕ್ತಿ ಮತ್ತು ಸಾಹಿತ್ಯ ಸೃಷ್ಟಿಗೆ ಅವರು ಆಯುರ್ವೇದದಷ್ಟೇ ಪ್ರಾಶಸ್ತ್ಯ ನೀಡಿದ್ದರಿಂದ ಪದವಿ ಮುಗಿಸಿದಾಗ ಮೊಗಸಾಲೆಯವರಿಗೆ ಉಜ್ವಲ ಭವಿಷ್ಯವಿರುವ ಉದಯೋನ್ಮುಖ ಲೇಖಕ ಎಂಬ ಹೆಸರು.

ವೈದ್ಯಕೀಯ ವೃತ್ತಿಗೆ ಮೊಗಸಾಲೆ ಕಾಂತಾವರವನ್ನು ಆಯ್ಕೆ ಮಾಡಿದ್ದು ಹೀಗೇ ಅನಿರೀಕ್ಷಿತ

ಹಾಗೂ ಅಯಾಚಿತ. ಕಾಂತಾವರದಲ್ಲಿ ಕಾರ್ಕಳ ತಾಲೂಕು ಬೋರ್ಡ್ ಹೊಸದಾಗಿ 'ರೂರಲ್ ಡಿಸ್ಪೆನ್ಸರಿ'ಯೊಂದನ್ನು ತೆರೆದಾಗ ಇಪ್ಪತ್ತೆಂಟು ಅಭ್ಯರ್ಥಿಗಳಲ್ಲಿ ಇವರ ಯೋಗ್ಯತೆಯಿಂದ ನೇಮಕ (1965). ಆಗ ಕಾಂತಾವರ ಅಂದರೆ ಕಚ್ಚಾ ರಸ್ತೆ, ವಿದ್ಯುತ್ ಇರದ ಒಂದು ಕುಗ್ರಾಮ. ಕಳೆದ ಮೂವತ್ತು ವರ್ಷಗಳಿಂದ ಅಲ್ಲೇ ನೆಲೆ ನಿಂತ ಮೊಗಸಾಲೆ ಗ್ರಾಮ ಜೀವನಕ್ಕೆ ಒಗ್ಗಿಕೊಂಡು, ಕಾಂತವರವನ್ನು ಸಾಹಿತ್ಯ ಸಂಸ್ಕೃತಿಯ ಕೇಂದ್ರವನ್ನಾಗಿ ರೂಪಿಸಿದ್ದು ಈಗ ಇತಿಹಾಸ.

ಈಗ ಸಾಹಿತ್ಯ ಕ್ಷೇತ್ರದಲ್ಲಿ ಡಾ.ಮೊಗಸಾಲೆ ಗಮನಾರ್ಹ ಹೆಸರು. ಹನ್ನೆರಡು ಕಾದಂಬರಿ, ನಾಲ್ಕು ಕವನ ಸಂಗ್ರಹಗಳನ್ನು ಅವರು ಈಗಾಗಲೇ ಹೊರತಂದಿದ್ದು ಈ ವರುಷ ಅವರ ಒಂದು ಕಾದಂಬರಿ ಮತ್ತು ಕವನ ಸಂಗ್ರಹ ಬೆಳಕು ಕಾಣಲಿದೆ. ಸಾಹಿತ್ಯ ಅಕಾಡೆಮಿಯ ಪ್ರಶಸ್ತಿಯೂ ಸೇರಿದಂತೆ 'ಕಡೆಂಗೋಡ್ಲು ಕಾವ್ಯ ಪ್ರಶಸ್ತಿ', 'ಜಿ.ಹೆಚ್.ಶ್ರೀ ಪ್ರಶಸ್ತಿ', ಅವರ ಕೃತಿಗಳಿಗೆ ಈಗಾಗಲೇ ಸಂದಿದ್ದರೆ, 'ಸುಧಾ', 'ಮಯೂರ', 'ಕರ್ಮವೀರ'ದಂಥ ಪತ್ರಿಕೆಗಳಲ್ಲಿ ಅವರ ಧಾರಾವಾಹಿಗಳು ಪ್ರಕಟವಾಗಿವೆ. ರುಜುವಾತು, ಸಾಕ್ಷಿ, ಶೂದ್ರ, ಸಂಕ್ರಮಣದಂಥ ಸಾಹಿತ್ಯ ಪತ್ರಿಕೆಗಳಲ್ಲೂ ಬರೆದ ಅವರು ಕನ್ನಡದ ಬಹುತೇಕ ಪತ್ರಿಕೆಗಳಿಗೆ ತಮ್ಮದೇ ಆದ ದೇಣಿಗೆ ನೀಡಿದ್ದಾರೆ. ಅನೇಕ ಕವಿಗೋಷ್ಠಿ, ಸಾಹಿತ್ಯ ಸಮ್ಮೇಳನಗಳಿಗೆ ಅವರು ಆಹ್ವಾನಿತರಾಗಿರುವ ಹಾಗೆ ತುಳು ಮತ್ತು ಕನ್ನಡದಲ್ಲಿ ಒಳ್ಳೆ ವಾಗ್ಮಿ ಎಂಬ ಹೆಸರೂ ಅವರಿಗಿದೆ.

**ಸಂಘಟನಾ ಚತುರ**

ಮೊಗಸಾಲೆಯವರ ಹೆಗ್ಗಳಿಕೆಯಿರುವುದು ಸಾಹಿತ್ಯ ಸೃಷ್ಟಿಯನ್ನು ಮೀರಿನಿಂತ ಅವರ ಸಂಘಟನಾ ಕೌಶಲ್ಯದಲ್ಲಿ. ಗ್ರಾಮೀಣ ಯುವ ಸಂಘಟನೆ(1966)ಗೆ ಕೈಯಿಕ್ಕಿದ ಅವರು ಅದರಲ್ಲಿ ಹತ್ತು ವರುಷಗಳ ಕಾಲ ಗಳಿಸಿದ ಅನುಭವದ ಹಿನ್ನೆಲೆಯಲ್ಲಿ ತುರ್ತು ಪರಿಸ್ಥಿತಿಯ ದಿನಗಳಲ್ಲಿ ಸ್ವಾತಂತ್ರ್ಯದ ಮೌಲ್ಯಗಳನ್ನು ಕಾಪಾಡಲು ರೂಪಿಸಿದ ಸಂಸ್ಥೆ ಕಾಂತಾವರದ ಕನ್ನಡ ಸಂಘ(1976). ಕರ್ನಾಟಕ ರಾಜ್ಯದಲ್ಲೇ ಅಪರೂಪವಾದ ಪಂಚ ಗ್ರಾಮಗಳ ಆಶ್ರಯದಲ್ಲಿ (ಕಾಂತಾವರ, ಬೆಳುವಾಯಿ, ಬೋಳ, ಕೆದಿಂಜೆ, ನಂದಳಿಕೆ) ರೂಪಿತವಾದ ಈ ಸಂಸ್ಥೆ-ಪರಿಸರದ ಶಾಲೆ ಮತ್ತು ಸಾಹಿತ್ಯಾಸಕ್ತರ ನೆರವಿನಿಂದ ನಾಡೇ ತಲೆದೂಗುವಂಥ ಕೆಲಸಗಳನ್ನು ಮಾಡಿದೆ. ಅನೇಕ ವಿಚಾರಗೋಷ್ಠಿ, ಕವಿಗೋಷ್ಠಿ, ಪುಸ್ತಕ ಪ್ರಕಟಣೆ, ಸಾಹಿತಿ ಸಮಾಜ ಸೇವಕರ ಸನ್ಮಾನ, ಸ್ಮಾರಕ ಉಪನ್ಯಾಸಗಳನ್ನು ನಡೆಸಿದ ಬಲಿಷ್ಠ ದಾಖಲೆ ಇದಕ್ಕಿದ್ದರೆ, ಎಲ್ಲಕ್ಕೂ ಮಿಗಿಲಾಗಿ ಇದು ಮಾಡಿದ್ದು 'ಮುದ್ದಣ ಕಾವ್ಯ ಪ್ರಶಸ್ತಿ' ಯೋಜನೆ. ಕಳೆದ ಹದಿನೇಳು ವರುಷಗಳಿಂದ 'ಮುದ್ದಣ ಪ್ರಶಸ್ತಿ' ಪಡೆದವರ ಸಾಲಿನಲ್ಲಿ ಹಿರಿಯರಾದ ಸು.ರಂ.ಎಕ್ಕುಂಡಿಯಂಥ ಕವಿಗಳಿಂದ ಹಿಡಿದು ಕೆ.ಪಿ. ಮೃತ್ಯುಂಜಯ, ಮೋಹನ ನಾಗಮ್ಮನವರಂಥ ತರುಣರೂ ಇರುವುದು ವಿಶೇಷ.

ಮೊಗಸಾಲೆಯವರ ಕನಸಿನ ಇನ್ನೊಂದು ಕೂಸು: 'ವರ್ಧಮಾನ ಪ್ರಶಸ್ತಿ ಪೀಠ'. ಮೂಡಬಿದಿರೆಯನ್ನು ಕೇಂದ್ರವಾಗಿಟ್ಟು ಧರ್ಮಸ್ಥಳದ ಧರ್ಮಾಧಿಕಾರಿ ವೀರೇಂದ್ರ ಹೆಗ್ಗಡೆಯವರ ಅಧ್ಯಕ್ಷತೆಯಲ್ಲಿ ನಾಡಿನ ಸಾಹಿತಿ, ಸಾಹಿತ್ಯಾಸಕ್ತರ ನೆರವಿನಿಂದ 1978ರಲ್ಲಿ ಸ್ಥಾಪನೆಯಾದ ಪೀಠಕ್ಕೆ ಮುನ್ನೂರಕ್ಕೂ ಮಿಕ್ಕಿ ಆಜೀವ ಸದಸ್ಯರಿದ್ದಾರೆ. ಪ್ರತಿ ವರುಷವೂ ವರುಷದ ಎರಡು

ಶ್ರೇಷ್ಠ ಸಾಹಿತ್ಯ ಕೃತಿಗಳನ್ನು ಗುರುತಿಸಿ ಗೌರವಿಸುತ್ತಾ ಬಂದಿರುವ ಈ ಪೀಠ ಹಿರಿಯ ಪೀಳಿಗೆಯ ಸಾಹಿತಿಗಳಿಗೆ ನೀಡುವಷ್ಟೇ ಪ್ರಾಧಾನ್ಯವನ್ನು ಹೊಸ ಪೀಳಿಗೆಯ ಉದಯೋನ್ಮುಖ ವರ್ಧಮಾನ ಸಾಹಿತ್ಯ ಪ್ರಶಸ್ತಿ ಮೂಲಕ ಬರಹಗಾರರಿಗೂ ನೀಡಿದೆ. ಮಾಸ್ತಿ, ಅಡಿಗ, ಕುವೆಂಪು, ಚಿತ್ತಾಲ, ಪಾವೆಂ, ಕಲಬುರ್ಗಿ, ಹಾಮಾನಾ, ಕಟ್ಟೀಮನಿ, ಕಂಬಾರ, ಎಲ್.ಎಸ್.ಶೇಷಗಿರಿ ರಾವ್, ಡಾ.ಸಿ.ಎನ್.ಆರ್. – ಮೊದಲಾದವರು ಈ ಪ್ರಶಸ್ತಿ ಪಡೆದ ಗಣ್ಯರಲ್ಲಿ ಮುಖ್ಯರು. ಪ್ರಶಸ್ತಿ ಪೀಠ ಸ್ಥಾಪನೆಯಾಗುವ ದಿನಗಳಲ್ಲಿ ಸರಕಾರದ ಅಕಾಡೆಮಿ ಬಿಟ್ಟರೆ ಉಳಿದಂತೆ ಖಾಸಗಿ (ಸಾಹಿತ್ಯ, ಲಲಿತಕಲಾ)ಅಕಾಡೆಮಿಯೆಂದು ಪಡೆದ ಹೆಗ್ಗಳಿಕೆ ಇದಕ್ಕೆ. ಇದರ ಸ್ಫೂರ್ತಿಯಿಂದ ಈಗ ಕನ್ನಡದಲ್ಲಿ ಇಪ್ಪತ್ತೈದಕ್ಕೂ ಮಿಕ್ಕಿ ವ್ಯಕ್ತಿಗಳ ಹೆಸರಿನಲ್ಲಿ ಪ್ರಶಸ್ತಿ ನೀಡುವ ಸಂಸ್ಥೆಗಳು ಹುಟ್ಟಿದ್ದರೂ – ಸಮಷ್ಟಿಯ (ಸಾರ್ವಜನಿಕ) ಹಿನ್ನೆಲೆಯಲ್ಲಿ ಪ್ರಶಸ್ತಿ ನೀಡುವ ಸಂಸ್ಥೆ ಇದೊಂದೇ.

ಹೀಗೆ ಸಾಹಿತ್ಯ ಸೃಷ್ಟಿ ಮತ್ತು ಸಾಹಿತ್ಯ ಸಂಘಟನೆಗಳನ್ನೇ ತನ್ನ ವ್ಯಕ್ತಿತ್ವದಲ್ಲಿ ರೂಪಿಸಿಕೊಂಡು ಅದನ್ನೊಂದು ಆರಾಧನೆಯೆಂದೇ ನಂಬಿ, ಅದಕ್ಕಾಗಿ ತನ್ನನ್ನು ಸಮರ್ಪಿಸಿಕೊಂಡ ಡಾ.ಮೊಗಸಾಲೆ ಒಬ್ಬ ಅಪರೂಪದ ವೈದ್ಯ, ಸಾಹಿತಿ. ಗ್ರಾಮಾಂತರ ಪ್ರದೇಶಕ್ಕೂ ಮುಖ ಹಾಕಲು ಹಿಂಜರಿಯುತ್ತಿರುವ ಇಂದಿನ ಯುವಕರನ್ನು ನಾಚಿಸುವ ಹಾಗೆ ಜೀವನೋತ್ಸಾಹದ ಲವಲವಿಕೆಯಿಂದ ಪುಟಿಯುತ್ತಿರುವ ಅವರು ಐವತ್ತನ್ನು ದಾಟುತ್ತಿದ್ದಾರೆ ಎಂಬುದನ್ನು ಕಾರಣವಾಗಿರಿಸಿಕೊಂಡು 'ಮೊಗಸಾಲೆ' ಎಂಬ ಅಭಿನಂದನಾ ಗ್ರಂಥವನ್ನು ಅವರಿಗೆ ಅರ್ಪಿಸಿ ಸನ್ಮಾನಿಸುವ ವಿಶೇಷ ಸಮಾರಂಭವನ್ನು ಅವರ ಅಭಿಮಾನಿ ಮಿತ್ರರು, ಸಾಹಿತಿಗಳು ಸಾಹಿತ್ಯಾಸಕ್ತರ ನೆರವಿನಿಂದ ಇದೇ ಆಗಸ್ಟ್ 27ರಂದು ಉಡುಪಿಯಲ್ಲಿ ಏರ್ಪಡಿಸಲು ನಿರ್ಧರಿಸಿದ್ದಾರೆ. ಇದು ಕನ್ನಡವನ್ನು ಪ್ರೀತಿಸುವವರೆಲ್ಲರೂ ಹೆಮ್ಮೆಪಡಬೇಕಾದಷ್ಟೇ ಯಲ್ಲದೆ ಮೊಗಸಾಲೆಯವರನ್ನು ಬಲ್ಲವರು ಸಂತೋಷಿಸುವ ವಿಚಾರವೂ ಹೌದು ಎನ್ನುವುದೇ ಇದಕ್ಕೆ ಇರುವ ಸಾರ್ಥಕ್ಯ!

ಸುಧಾ, 3 ಸೆಪ್ಟೆಂಬರ್ 1995 ○

# ನನ್ನ ಕವಿತೆಯೇ,
# ಹೋಗು-ಮನುಷ್ಯನ ಮಾತಾಗು

ಡಾ॥ ಹಾ.ಮಾ.ನಾಯಕ.

ಕಾಂತಾವರ ದಕ್ಷಿಣ ಕನ್ನಡ ಜಿಲ್ಲೆಯ ಒಂದು ಪುಟ್ಟ ಊರು. ಮೂಡಬಿದಿರೆಯಿಂದ ಹತ್ತು ಕಿ.ಮೀ. ದೂರದಲ್ಲಿದೆ. ಅದು ಸಾಹಿತ್ಯ ಸಂಸ್ಕೃತಿಗಳ ಚಟುವಟಿಕೆಗಳಿಗೆ ಹೆಸರಾದ ಹಳ್ಳಿ. ಆ ಪುಟ್ಟ ಊರಿನ ದೊಡ್ಡ ಹೆಸರು ಮೊಗಸಾಲೆ. ಅವರ ಪೂರ್ಣ ಹೆಸರು ಮೊಗಸಾಲೆ ನಾರಾಯಣ ಭಟ್ಟ. ಅವರು ಆ ಊರಿನವರಲ್ಲ. ಕಾಸರಗೋಡು ತಾಲೂಕಿನ ಮಂಜೇಶ್ವರದ ಬಳಿಯ ಕೋಳ್ಯೂರು ಗ್ರಾಮದ ಬಳಿಯ ಮೊಗಸಾಲೆ ಎಂಬ ಗ್ರಾಮದವರು. ಅಲ್ಲಿಯೇ ಅವರು ಜನಿಸಿದ್ದು (ಆಗಸ್ಟ್ 27. 1944). ತಾವು ಹುಟ್ಟಿದ ಊರಿನ ಹೆಸರನ್ನೇ ತಮ್ಮ ಹೆಸರನ್ನಾಗಿ ಅವರು ಸ್ವೀಕರಿಸಿದರು. ಅದೇ ಹೆಸರಿನಿಂದ ಈಗ ಅವರು ಪ್ರಸಿದ್ಧರು. ಅವರು ಕಾಂತಾವರಕ್ಕೆ ಬಂದು ನೆಲೆಸುವಾಗ (1965)ಅವರಿಗೆ ಇಪ್ಪತ್ತೊಂದು ವರ್ಷ. ಅಲ್ಲಿಂದ ಮುಂದೆ ಅವರು ಅಲ್ಲಿಯೇ ನೆಲೆಸಿದರು; ಅಲ್ಲಿನವರೇ ಆದರು. ಆ ಹಳ್ಳಿಗೆ ಭೂಷಣಪ್ರಾಯರೆನ್ನಿಸಿದರು.

ವಿಠಲ ಭಟ್ಟರು ಮತ್ತು ಸರಸ್ವತಿ ಅಮ್ಮ ದಂಪತಿಗಳಿಗೆ ಮೂರನೆಯ ಮಗನಾಗಿ ಹುಟ್ಟಿದ ನಾರಾಯಣ ಭಟ್ಟ ಎಳವೆಯಲ್ಲಿಯೇ ತಂದೆಯನ್ನು ಕಳೆದುಕೊಂಡ ನತದೃಷ್ಟ. ಅವನು ಐದು ವರ್ಷದ ಹುಡುಗನಾಗಿದ್ದಾಗಲೇ ತಂದೆಯವರು ಅಕಾಲ ಮರಣಕ್ಕೆ ತುತ್ತಾದರು. ಚಿಕ್ಕಪ್ಪ ಮೊಗಸಾಲೆ ಕೃಷ್ಣಭಟ್ಟರು ಹುಡುಗನ ಲಾಲನೆ–ಪಾಲನೆ ನೋಡಿಕೊಂಡರು. ಪ್ರಾಥಮಿಕ ವಿದ್ಯಾಭ್ಯಾಸ ಕೋಳ್ಯೂರಿನಲ್ಲಿಯೇ ನಡೆಯಿತು. ಮಾಧ್ಯಮಿಕ ಹಾಗೂ ಪ್ರೌಢಶಾಲೆಯ ಶಿಕ್ಷಣವೆಲ್ಲ ಕನ್ಯಾನದಲ್ಲಿ ಸಾಗಿತು. ಮುಂದಿನ ಶಿಕ್ಷಣ ಉಡುಪಿಯ ಆಯುರ್ವೇದ ಕಾಲೇಜಿನಲ್ಲಿ. ಅಲ್ಲಿ ಅವರು ಡಿಪ್ಲೋಮಾ ಪಡೆದರು. ಡಿಪ್ಲೋಮಾ ಪರೀಕ್ಷೆಯಲ್ಲಿ ಯಶಸ್ವಿಯಾದ ಮೇಲೆ ಅವರಿಗೆ ವೈದ್ಯಕೀಯ ವೃತ್ತಿ ನಡೆಸುವ ತೀವ್ರ ಅಗತ್ಯವಿತ್ತು. ಅಂದಿನ ಜಿಲ್ಲಾ ಬೋರ್ಡ್ ಗ್ರಾಮಾಂತರ ಪ್ರದೇಶಗಳಲ್ಲಿ ಆಸ್ಪತ್ರೆ ನಡೆಸುತ್ತಿತ್ತು. ಅಂಥ ಒಂದು ಆಸ್ಪತ್ರೆ ಕಾಂತಾವರದಲ್ಲಿಯೂ ಇತ್ತು. ಮೊಗಸಾಲೆಯವರು ಅಲ್ಲಿಗೆ ವೈದ್ಯಾಧಿಕಾರಿಯಾಗಿ ನೇಮಕಗೊಂಡರು(ನವೆಂಬರ್, 1965).

ಅಂದಿನ ಕಾಂತಾವರ ಇಂದಿಗಿಂತ ಬೇರೆಯದಾಗಿತ್ತು! ಸಾರಿಗೆ ವ್ಯವಸ್ಥೆ ಎಂಬುದಿರಲಿಲ್ಲ; ಕಚ್ಚಾ ರಸ್ತೆಯಲ್ಲಿ ಎತ್ತಿನಗಾಡಿಗಳು ಮಾತ್ರ ತಿರುಗುತ್ತಿದ್ದವು; ವಿದ್ಯುತ್ ಸೌಕರ್ಯ ಇರಲಿಲ್ಲ;

ಆಧುನಿಕ ಜೀವನಾವಶ್ಯಕ ವ್ಯವಸ್ಥೆಗಳಾವುವೂ ಇರಲಿಲ್ಲ. ಆ ಹಳ್ಳಿಯ ಆಸ್ಪತ್ರೆಯಲ್ಲಿ ವೈದ್ಯರು ಪೂರ್ಣಕಾಲದ ವೈದ್ಯರಾಗಿರಲಿಲ್ಲ; ಒಪ್ಪೊತ್ತಿನ ವೈದ್ಯರು ಮಾತ್ರವಾಗಿದ್ದರು. ಆದ್ದರಿಂದ ಅವರು ಖಾಸಗಿಯಾಗಿಯೂ ವೈದ್ಯ ವೃತ್ತಿ ಮಾಡಬಹುದಾಗಿತ್ತು. ಮೊಗಸಾಲೆಯವರು ತಮ್ಮ ವೈದ್ಯ ವೃತ್ತಿಯಿಂದ ಜನಪ್ರೀತಿ ಗಳಿಸಿದರು. ಹಣ ಅವರಿಗೆಂದೂ 'ಸರ್ವಸ್ವ'ವಾಗಿರಲಿಲ್ಲ. ಸೇವೆ ಬಹುಮುಖ್ಯವೆನಿಸಿತ್ತು! ಕಾಂತಾವರಕ್ಕೆ ಬಂದ ಒಂದು ವರ್ಷದಲ್ಲಿಯೇ 'ರೈತ ಯುವಕ ವೃಂದ' ಎಂಬ ಸಂಸ್ಥೆಯೊಂದನ್ನು ಕಟ್ಟಿದರು. ಮುಂದೆ ಹತ್ತು ವರ್ಷಗಳ ವರೆಗೆ ಅದರ ವಿವಿಧ ಹುದ್ದೆಗಳನ್ನು ನಿರ್ವಹಿಸಿದರು. ಗ್ರಾಮಾಂತರ ಪ್ರದೇಶದಲ್ಲಿ ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆಗಳನ್ನು ಹೇಗೆ ಮಾಡಬಹುದೆಂಬುದನ್ನು ತೋರಿಸಿಕೊಟ್ಟರು. ಇತರೆಡೆಗಳಲ್ಲಿ ಆ ಬಗೆಯ ಚಟುವಟಿಕೆಗಳಿಗೆ ಪ್ರೇರಣೆಯೂ ಸ್ಫೂರ್ತಿಯೂ ಆದರು.

ಬೆಳುವಾಯಿ, ಕಾಂತಾವರ, ಬೋಳ, ಕೆದಿಂಜೆ, ನಂದಳಿಕೆ – ಈ ಪಂಚ ಗ್ರಾಮಗಳ ಆಶ್ರಯ ಪಡೆದು ಕಾಂತಾವರ ಕನ್ನಡ ಸಂಘವನ್ನು ಕಟ್ಟಿದರು(1976). ಎರಡೇ ವರ್ಷಗಳಲ್ಲಿ ಈ ಸಂಘದ ಆಶ್ರಯದಲ್ಲಿ ಮುದ್ದಣನ ಹೆಸರಿನಲ್ಲಿ ಕಾವ್ಯ ಪ್ರಶಸ್ತಿಯೊಂದನ್ನು ಸ್ಥಾಪಿಸಿದರು(1978). ಈವರೆಗೆ ಹದಿನೇಳು ಕವಿಗಳಿಗೆ 'ಮುದ್ದಣ ಕಾವ್ಯ ಪ್ರಶಸ್ತಿ'ಯನ್ನು ನೀಡಲಾಗಿದೆ. ಇದರಲ್ಲಿ ಅನೇಕರು ಈಗ ಸುಪ್ರಸಿದ್ಧ ಕವಿಗಳೆನ್ನಿಸಿದ್ದಾರೆ. ಜತೆಗೆ ಈ ಪ್ರಶಸ್ತಿಯ ಪ್ರೇರಣೆಯಿಂದಲೇ, ನಂದಳಿಕೆಯ ಮುದ್ದಣ ಸ್ಮಾರಕ ಮಿತ್ರ ಮಂಡಳಿಯೂ ಸ್ಥಾಪಿತವಾಗಿ, ಈಗ ನಾಡಿನಾದ್ಯಂತ ಹೆಸರಾಗಿದೆ. ಬಾಲಚಂದ್ರರಾಯರ ಮಾರ್ಗದರ್ಶನದಲ್ಲಿ ಅದು ನಾನಾ ಬಗೆಯಾಗಿ ಬೆಳೆಯುತ್ತಿದೆ. ಈಗ ಕನ್ನಡ ಕೃತಿಗಳಿಗೆ ಹತ್ತಾರು ಬಹುಮಾನ, ಪ್ರಶಸ್ತಿಗಳಿವೆ. ಇಪ್ಪತ್ತೈದು ವರ್ಷಗಳ ಹಿಂದೆ ಹಾಗಿರಲಿಲ್ಲ. ಅಂಥ ಸ್ಥಿತಿಯಲ್ಲಿ ಈ ಬಹುಮಾನವನ್ನು ಸ್ಥಾಪಿಸಿ ಮೊಗಸಾಲೆಯವರು ತಮ್ಮ ದೂರದೃಷ್ಟಿಯನ್ನು ಪ್ರದರ್ಶಿಸಿದ್ದಾರೆ. ಆರಂಭದಲ್ಲಿ ಐನೂರು ರೂಪಾಯಿ ಮೊತ್ತದ ಬಹುಮಾನವಾಗಿದ್ದು ಈಗ ಅದು ಎರಡು ಸಾವಿರ ರೂಪಾಯಿಗಳದ್ದಾಗಿದೆ.

ಹಣ ಇರುವವರನ್ನು ಗುರುತಿಸುವುದು, ಅವರಿಂದ ಹಣ ಪಡೆಯುವುದು ಎರಡೂ ಮುಖ್ಯ ಕೆಲಸಗಳೇ. ತಾವು ಕೊಡುವ ಹಣ ಸದ್ವಿನಿಯೋಗವಾಗುತ್ತದೆ ಎಂಬುದು ಖಾತ್ರಿಯಾದಾಗ ಹಣ ಕೊಡುವವರು ಹಿಂದೆಗೆಯುವುದಿಲ್ಲ. ಮೊಗಸಾಲೆಯವರಲ್ಲಿ ಆ ಬಗೆಯ ನಂಬುಗೆ, ಭರವಸೆಗಳಿವೆ. ಅವರ ಮಾತಿಗೆ ಯಾರೂ ಇಲ್ಲ ಎನ್ನುವುದಿಲ್ಲ. ಜನರನ್ನು ಒಲಿಸಿಕೊಳ್ಳುವ ಕಲೆ ಅವರಲ್ಲಿದೆ. 1978ರಲ್ಲಿ ಸ್ಥಾಪನೆಗೊಂಡ ಮತ್ತೊಂದು ಸಂಸ್ಥೆ ಎಂದರೆ ಮೂಡಬಿದಿರೆಯ ವರ್ಧಮಾನ ಪ್ರಶಸ್ತಿ ಪೀಠ. ಅದರ ಸ್ಥಾಪನೆಯಲ್ಲಿಯೂ ಮೊಗಸಾಲೆಯವರು ಸಾಕಷ್ಟು ಬೆಂಬಲ, ಪ್ರೋತ್ಸಾಹ ನೀಡಿದ್ದಾರೆ. ಎರಡು ಪ್ರಶಸ್ತಿಗಳನ್ನು ಪ್ರತಿ ವರ್ಷ ವರ್ಧಮಾನ ಪೀಠ ಕೊಡುತ್ತದೆ: ಒಂದು, ಪ್ರಸಿದ್ಧ ಲೇಖಕರಿಗೆ; ಇನ್ನೊಂದು, ಉದಯೋನ್ಮುಖ ಲೇಖಕರಿಗೆ. ಉದಯೋನ್ಮುಖ ಎಂಬ ಹೆಸರಿನಲ್ಲಿ ಲೇಖಕರನ್ನು ಆಯುವಾಗ, ಹಲವು ಸಂದರ್ಭಗಳಲ್ಲಿ, ಗೊಂದಲವಾಗಿದ್ದರೂ ಸಹ ಈ ಪ್ರಶಸ್ತಿಗಳು ದೊಡ್ಡ ಹೆಸರು ಮಾಡಿವೆ.

ಮಂಗಳೂರಿನ ವಿವೇಕ ಸಾಹಿತ್ಯ ಮಾಲೆ ಅನೇಕ ಲೇಖಕರನ್ನು ಬೆಳಕಿಗೆ ತಂದ ಪ್ರಕಾಶನ ಸಂಸ್ಥೆ. ಮೊಗಸಾಲೆಯವರ ಮೊದಲನೆಯ ಕೃತಿ 'ಮಣ್ಣಿನ ಮಕ್ಕಳು' ಅದೇ ಸಂಸ್ಥೆಯಿಂದ 1965ರ ಕೊನೆಯಲ್ಲಿ ಪ್ರಕಟಗೊಂಡಿತು. ಕುಡಿ ಮೀಸೆಯ ತರುಣನ ಮೊದಲನೆಯ

ಕೃತಿಯನ್ನು ಸಂಪಾದಕರಾದ ರಾಮ ಮೊಳೆಯಾರರು ಧೈರ್ಯದಿಂದ ಪ್ರಕಟಿಸಿದರು. ಇದನ್ನು ಅವರು ಬರೆದದು, ಅವರಿನ್ನೂ ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ. ಇಂಥದೊಂದು ಕೃತಿಯಲ್ಲಿ ಇರಬಹುದಾದ ಆರಂಭದ ದೋಷಗಳು ಇದರಲ್ಲಿ ಕಾಣಿಸುತ್ತವೆ. ಭಾಷೆ, ಶೈಲಿಗಳಲ್ಲಿ ಇನ್ನೂ ಬೆಳೆಯಬೇಕಾಗಿರುವುದು ಸ್ಪಷ್ಟವಾಗಿದೆ. ಇಂಥದೇ ಇನ್ನೊಂದು ಕಾದಂಬರಿ 'ಅನಂತ'. ಇದೂ ಮೊದಲಿನ ಕಾದಂಬರಿಯಂತೆ ವಿದ್ಯಾರ್ಥಿದೆಸೆಯ ರಚನೆ. ದಕ್ಷಿಣ ಕನ್ನಡದ ಪುತ್ತೂರು, ಕಾಸರಗೋಡು ಪ್ರದೇಶದ ಹವ್ಯಕ ಜನಾಂಗದ ಯುವಪ್ರೇಮಿಗಳಿಬ್ಬರ ಸರಳ ಕತೆ. "ಕಾದಂಬರಿ ರಚಿಸುವಾಗ ನಾನೂ ಹದಿಹರೆಯದ ಹುಡುಗನಾಗಿದ್ದುದರಿಂದ ಆಗ ಇದು ನನಗೆ ಮಹತ್ತ್ವವಾಗಿ ಕಂಡಿರಬಹುದು" ಎಂದು ಮೊಗಸಾಲೆ ವಸ್ತುವಿನ ಬಗ್ಗೆ ಹೇಳಿಕೊಳ್ಳುತ್ತಾರೆ. ಇದೊಂದು ಪ್ರಾದೇಶಿಕ ಚಿತ್ರಣ. ಮೂರನೆಯ ಕಾದಂಬರಿ 'ಕನಸಿನ ಬಳ್ಳಿ'. ಬರವಣಿಗೆಯಲ್ಲಿ ಬೆಳವಣಿಗೆಯನ್ನು ತೋರಿಸುತ್ತದೆ.

'ನನ್ನದಲ್ಲದ್ದು' ಕಾದಂಬರಿಯ ಮೂಲಕ ತಾವು ಒಬ್ಬ ಸಮರ್ಥ ಕಾದಂಬರಿಕಾರರೆಂಬುದನ್ನು ಮೊಗಸಾಲೆಯವರು ತೋರಿಸಿಕೊಂಡಿದ್ದಾರೆ. ಇದು ಅವರ ಬರವಣಿಗೆಯ ಎರಡನೆಯ ಮಜಲು ಎಂದೂ ಹೇಳಬಹುದು. ಕಾದಂಬರಿಯ ನಾಯಕ ಶ್ರೀನಿವಾಸ. ಅವನ ಬದುಕಿನ ದುರಂತವನ್ನು ಇದರಲ್ಲಿ ಸೊಗಸಾಗಿ ಪ್ರತಿಪಾದಿಸಿದ್ದಾರೆ. ಕಥೆಯನ್ನು ನಿರೂಪಿಸಿರುವ ವಿಧಾನವೂ ಸ್ವಾರಸ್ಯಕರವಾಗಿದೆ. ತನ್ನ ಪ್ರಾಮಾಣಿಕತೆಯಿಂದಲೇ, ತನ್ನ ಸುಖವನ್ನು ಶ್ರೀನಿವಾಸ ಹೇಗೆ ಕಳೆದುಕೊಂಡನೆಂಬುದನ್ನು ಇಲ್ಲಿ ನೋಡಬಹುದು. ಬದುಕಿಗೆ ಏನಾದರೂ ಅರ್ಥವಿದೆಯೇ ಎಂಬುದನ್ನು ಈ ಕಾದಂಬರಿ ಕೆದಕುತ್ತದೆ. ಮುಂದಿನ 'ಪಲ್ಲಟ' ಕಾದಂಬರಿಯಲ್ಲಿ ಸಾಮಾಜಿಕ ಸ್ಥಿತ್ಯಂತರಗಳ ಚಿತ್ರಣವಿದೆ. ಉದ್ಯಾವರ ಮಾಧವ ಆಚಾರ್ಯರ ಪುಟ್ಟ ಮುನ್ನುಡಿಯಲ್ಲಿ ಹೇಳುವಂತೆ " ಓದುವಾಗಕ್ಕಿಂತ ಹೆಚ್ಚು ಓದಿ ಮುಗಿಸಿದ ಮೇಲೆ ನಮ್ಮ ಮನಸ್ಸನ್ನು, ಭಯಂಕರ ಶಬ್ದವನ್ನು ಕೇಳಿದ ಮೇಲೆ ಅದೆಷ್ಟೋ ಕಾಲ ಕಿವಿಯೊಳಗೆ ಆ ಶಬ್ದ ಕೊರೆಯುವಂತೆ ಆವರಿಸುತ್ತದೆ" ಎಂಬ ಮಾತು ಅನುಭವವಾಗುತ್ತದೆ. ಹಳ್ಳಿಗಾಡಿನ ಸಾಮಾಜಿಕ ಬದುಕಿನ ಹತ್ತು ಹಲವು ಮುಖಗಳನ್ನು ಇಲ್ಲಿ ಲೇಖಕರು ಚಿತ್ರಿಸಿದ್ದಾರೆ. ಗ್ರಾಮ ಜೀವನದ ಸಂಕೀರ್ಣ ಸಂಬಂಧಗಳನ್ನು ಇದರಲ್ಲಿ ನೋಡಬಹುದಾಗಿದೆ. ಮೊಗಸಾಲೆಯವರು ಸಮರ್ಥ ಕಾದಂಬರಿಕಾರರೆಂಬುದನ್ನು 'ಪಲ್ಲಟ' ಹೇಳುತ್ತದೆ.

'ನನ್ನದಲ್ಲದ್ದು' ಹಾಗೂ 'ಪಲ್ಲಟ' ಕಾದಂಬರಿಗಳಿಗಿಂತ ಮೊದಲೇ ಬರೆದ ಕಾದಂಬರಿ 'ಹದ್ದು'. ಪರಿಷ್ಕರಣದ ಅನಂತರ ಪರಿಷ್ಕರಣವಾಗಿ ಪ್ರಕಟವಾಗಿದೆ. "ಗಂಡು ಹೆಣ್ಣಿಗೆ ಸಂಬಂಧಿಸಿದ ಕೆಲವು ಚಿತ್ರಗಳು ಈ ಕಾದಂಬರಿಯಲ್ಲಿವೆ. ಬೀಜ ಬೆಳೆದು ಹಣ್ಣಾಗುವ ಪರಿಣಾಮ ಕಾಣುತ್ತದೆ. ಆದರೆ ಆ ಬೆಳವಣಿಗೆ ಸುಲಭಗೋಚರವಲ್ಲ" ಎಂದು ಮೊಗಸಾಲೆ ಹೇಳಿಕೊಂಡಿದ್ದಾರೆ. ಈ ಕಾದಂಬರಿ ಓದುಗರನ್ನು ಆಲೋಚಿಸುವಂತೆ ಮಾಡುತ್ತದೆ. ಇಲ್ಲಿ ಕೆಲವಾರು ವಿಚಾರಗಳು ಗುಪ್ತಗಾಮಿನಿಯಂತೆ ಹರಿದಾಡುತ್ತವೆ. ಮಾಸ ಪತ್ರಿಕೆಯೊಂದರಲ್ಲಿ ಪ್ರಕಟವಾದ ಯಶವಂತ ಚಿತ್ತಾಲರ ಲೇಖನಮಾಲೆಯಲ್ಲಿ ಬಂದ 'ಪ್ರಸೂತಿ ಗೃಹದಲ್ಲಿ ಗರ್ಭಧಾರಣೆ' ಎಂಬ ಲೇಖನದಿಂದ ಪ್ರಚೋದಿತವಾದ ಕಾದಂಬರಿ 'ಪ್ರಕೃತಿ'. ದಯಾಹತ್ಯೆ ವಸ್ತುವನ್ನೊಳಗೊಂಡ ಕಾದಂಬರಿ 'ನೆಲಮುಗಿಲುಗಳ ಮಧ್ಯೆ', ಎತ್ತಂಗಡಿ ಎಂಬ ಊರು ಇಡೀ ಭಾರತವನ್ನು ಪ್ರತಿನಿಧಿಸುತ್ತದೆ;

ಮಂಗನ ಕಾಯಿಲೆ ಅದಕ್ಕೆ ಬಂದ ಕಾಯಿಲೆ ಎಂಬ ಮಾತುಗಳನ್ನು ಹಿಡಿದು ಬರೆದ ಕಾದಂಬರಿಯೇ 'ದಿಗಂತ'. ಹೀಗೆ ಸಮಕಾಲೀನ ಸಮಾಜವನ್ನು ಧ್ವನಿಸುತ್ತದೆ ಅದು. ಅವರ 'ದೃಷ್ಟಿ' ಕಾದಂಬರಿಯಲ್ಲಿ ಯಾವುದೇ ಒಂದು ಸೀಮಿತ ದೃಷ್ಟಿಯನ್ನು ಬಿಂಬಿಸದೆ, ಬದುಕಿನ ವಿಶಾಲವಾದ ದೃಷ್ಟಿಯನ್ನು ತೋರಿಸುತ್ತದೆ. ಕಾದಂಬರಿಗೆ ಸಂಬಂಧಿಸಿದಂತೆ ಹೇಳುವುದಾದರೆ ಇದು ಪತ್ರಿಕೋದ್ಯೋಗಿ ವಾಸುದೇವರಾಯನ 'ದೃಷ್ಟಿ'; ಇನ್ನೊಂದು ಅರ್ಥದಲ್ಲಿ ಕಾದಂಬರಿಕಾರರ ಜೀವನ ದೃಷ್ಟಿ. ಸಮಕಾಲೀನ ಜೀವನವನ್ನು ಅದರ ಸಂಕೀರ್ಣ ಸ್ವರೂಪವನ್ನು ಬಿಚ್ಚಿ ತೋರಿಸುವ ಕಾದಂಬರಿ 'ತೊಟ್ಟಿ'. ಇದು 'ಸುಧಾ' ವಾರಪತ್ರಿಕೆ ತನ್ನ ವಿಶೇಷ ಸಂಚಿಕೆಯೊಂದಿಗೆ ಪ್ರಕಟಿಸಿದ ಪುಸ್ತಕ. ಕುತೂಹಲಕಾರಿಯಾದ ಕಥೆಯನ್ನು ಮೊಗಸಾಲೆ ಇದರಲ್ಲಿ ಹೇಳಿದ್ದಾರೆ, ಸ್ವಾರಸ್ಯವಾಗಿ, ಮೋಹಕವಾಗಿ.

ಹೀಗೆ ಮೊಗಸಾಲೆಯವರು ಹನ್ನೊಂದು ಕಾದಂಬರಿಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಎರಡನ್ನು ಬಿಟ್ಟರೆ ಉಳಿದವೆಲ್ಲ 160 ಪುಟಗಳನ್ನು ಮೀರಿಲ್ಲ. 'ಮಣ್ಣಿನ ಮಕ್ಕಳು' ಮತ್ತು 'ಪಲ್ಲಟ' ಎಂಬೆರಡು ಕಾದಂಬರಿಗಳು ಮಾತ್ರ ಕ್ರಮವಾಗಿ 192 ಹಾಗೂ 248 ಪುಟಗಳನ್ನು ಹೊಂದಿವೆ. ಬರವಣಿಗೆಯ ಈ ಮಿತವ್ಯಯ ನಮ್ಮ ಇಂದಿನ ಕಾದಂಬರಿಕಾರರಲ್ಲಿ ಅಪರೂಪದ ಗುಣ ಎನ್ನಬೇಕು. ಅದು ಒಂದು ಆದರ್ಶವೇ ಹೌದು.

ಕಾದಂಬರಿಗಳಲ್ಲದೇ ಮೊಗಸಾಲೆಯವರು ಒಂದು ಗೀತ ನಾಟಕವನ್ನೂ ನಾಲ್ಕು ಕವನ ಸಂಕಲನಗಳನ್ನೂ ಪ್ರಕಟಿಸಿದ್ದಾರೆ. 'ಪುರೂರವ' ಎನ್ನುವುದು ಅವರ ಗೀತ ನಾಟಕ. ಗೋವಿಂದ ಪೈ ಅವರ 'ಗೊಲ್ಗೊಥಾ' ಮತ್ತು 'ವೈಶಾಖಿ'ಗಳ ಪ್ರಭಾವದೊಡನೆ ಸಿದ್ಧವಾದ ಈ ನಾಟಕ 'ಪುರೂರವ'ವನ್ನು ರಂಗದ ಮೇಲೆ ತರಲಾಗದು. ಓದುವುದಷ್ಟರಿಂದಲೇ ತೃಪ್ತಿಗೊಳ್ಳಬೇಕು. ಮೊಗಸಾಲೆಯವರ ಭಾಷಾಸಂಪತ್ತು ಓದುಗರನ್ನು ಆಶ್ಚರ್ಯಗೊಳಿಸುವಷ್ಟರ ಮಟ್ಟಿಗೆ ಶ್ರೀಮಂತವಾಗಿದೆ ಎಂದು ಹೇಳಬೇಕು. ಅವರ ಶೈಲಿಯೂ ಸುಂದರವಾಗಿದೆ. ನಾಟಕ ಭಾವುಕವಾಗಿದೆ.



ಅವರ ನಾಲ್ಕು ಕವನ ಸಂಕಲನಗಳಲ್ಲಿ ಒಂದು ನೂರ ಆರು ಕವನಗಳು ಸೇರಿವೆ. 'ವರ್ತಮಾನದ ಮುಖಗಳು' ಸಂಕಲನ ಪ್ರಕಟವಾದಾಗ ಕವಿಗೆ ಮೂವತ್ತು ವರ್ಷ. ಹೆಸರೇ ಹೇಳುವಂತೆ ಸಮಕಾಲೀನ ಬದುಕಿನ ಕೆಲವಾರು ಮುಖಗಳು ಇಲ್ಲಿ ಅನಾವರಣಗೊಂಡಿವೆ. 'ಆರ್ಕಿಡ್' ಎಂಬ ಪದ್ಯ ತುಂಬ ಸೊಗಸಾಗಿದೆ. ಅದರ ಆರಂಭವೇ ಮೋಹಕ. 'ನನ್ನಮ್ಮನ ತುರುಬೆಂದರೆ ನಮ್ಮನೆ ಹಿಂದಿನ ಕಾಡು.' 'ಅಮ್ಮ : ಒಂದು ಅನುಭವ' ಎನ್ನುವುದು ಸಂಕಲನದ ಇನ್ನೊಂದು ಅತ್ಯುತ್ತಮ ಪದ್ಯ. 'ಪಲ್ಲಟ'ದಲ್ಲಿರುವ 'ಒಂದು ವಿಚಿತ್ರ ಬಗೆಯ ಆಟ', 'ಮದ್ದಳೆ ಹೇಳಿ ಕೇಳಿದ ಕಥೆ', 'ಕಾರ್ಕಳ; 1964 – 74', 'ಇಂಡಿಯಾದ ಬೆನ್ನು' ಮೊದಲಾದ ಕವಿತೆಗಳನ್ನು ಎತ್ತಿಹೇಳಬೇಕು. ಈ ಸಂಕಲನದಲ್ಲಿ ಕವಿ ಗಮನಾರ್ಹವಾಗಿ ಬೆಳೆದಿದ್ದಾರೆ.

ಇವರ 'ಮೊಗಸಾಲೆಯ ನೆನಪುಗಳು' ಎಂಬ ಸಂಕಲನಕ್ಕೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತ, ಬನ್ನಂಜೆ ಗೋವಿಂದಾಚಾರ್ಯರು ಬರೆಯುತ್ತಾರೆ; " ಮೊದಮೊದಲು ಇವರ ಕವನಗಳನ್ನು ಓದಿದಾಗ ನನಗನಿಸಿದ್ದುಂಟು ವೃತ್ತಿಯಲ್ಲಿ ವೈದ್ಯನಾದ ಈ ಮನುಷ್ಯ ತನ್ನ ಪದ್ಯದ ರಚನೆಯಲ್ಲೂ

ಅಲ್ಲಲ್ಲಿ ಶಸ್ತ್ರಚಿಕಿತ್ಸೆ ಮಾಡಿದ್ದರೆ ಚೆನ್ನಿತ್ತು ಎಂದು. ಆದರೆ ಇತ್ತೀಚಿನ ಬೆಳವಣಿಗೆಯನ್ನು ಕಂಡರೆ ಶಸ್ತ್ರಚಿಕಿತ್ಸೆ ಇಲ್ಲದೆಯೇ ಒಳಗಿನ ರೋಗವನ್ನು ನಿಧಾನವಾಗಿ ಗುಣಪಡಿಸುವ ಕಲೆಯನ್ನು ಇವರು ಬೆಳೆಸಿಕೊಳ್ಳುತ್ತಿದ್ದಾರೆ. ಹೆಚ್ಚು ಹೆಚ್ಚು ಪ್ರಬುದ್ಧವಾಗಿ ಬೆಳೆಯುತ್ತಿರುವ ಇವರ ಕವಿ ಪ್ರತಿಭೆಯಿಂದ ನಾನು ಇನ್ನಷ್ಟು ಹುಲುಸಾದ ಬೆಳೆಯನ್ನು ನಿರೀಕ್ಷಿಸುತ್ತೇನೆ".

ಮೊಗಸಾಲೆಯವರ ಕವಿತೆಗಳಿಗೆ ತುಂಬ ಸಮಂಜಸವಾಗಿ ಒಪ್ಪುವ ಮಾತು ಇದು. ಹೃದಯದ ತುಡಿತಗಳನ್ನು ಅವರು ಪರಿಣಾಮಕಾರಿಯಾಗಿ ಗ್ರಹಿಸಬಲ್ಲರು;ಅಭಿವ್ಯಕ್ತಿಸಬಲ್ಲರು. ಇದು ಅವರ ನಾಲ್ಕನೆಯ ಸಂಕಲನ 'ಪ್ರಭವ'ದ ಬಹುಪಾಲು ಪದ್ಯಗಳಲ್ಲಿ ಸಾಬೀತಾಗುತ್ತದೆ. 'ಮತ್ತೆ ಕನ್ಯಾಕನಕ್ಕೆ', 'ಪಯಣ', 'ನಾನು ಪ್ರೀತಿಸುತ್ತೇನೆ' – ಮೊದಲಾದ ಕವಿತೆಗಳು ಇದಕ್ಕೆ ಸಾಕ್ಷಿಯಾಗಿವೆ. ಮೊಗಸಾಲೆಯವರು ಹೆಜ್ಜೆ ಹೆಜ್ಜೆಗೂ ಬೆಳೆಯುತ್ತ ಬಂದ ಕವಿಯಾಗಿದ್ದಾರೆ. ಹಸ್ತಪ್ರತಿಯಲ್ಲಿದ್ದಾಗಲೇ 'ಪ್ರಭವ'ಕ್ಕೆ ಕಡೆಂಗೋಡ್ಲು ಶಂಕರಭಟ್ಟ ನೆನಪಿನ ಕಾವ್ಯ ಪ್ರಶಸ್ತಿ ಲಭಿಸಿದೆ. ಒಟ್ಟಿನಲ್ಲಿ ಮೊಗಸಾಲೆಯವರು ಬರೆದಿರುವುದು ಸ್ವಲ್ಪವಾಗಿದ್ದರೂ ಗುಣದಲ್ಲಿ ಮಹತ್ವದ್ದಾಗಿದೆ.

ಅವರ 'ನನ್ನದಲ್ಲದ್ದು' ಕಾದಂಬರಿಗೆ ಸಾಹಿತ್ಯ ಅಕಾಡೆಮಿಯ ಬಹುಮಾನ ಲಭಿಸಿದೆ (1977); 'ಪ್ರಭವ' ಕವನ ಸಂಕಲನಕ್ಕೆ ಕಡೆಂಗೋಡ್ಲು ಕಾವ್ಯ ಪ್ರಶಸ್ತಿ (1989) ಮತ್ತು ಬಿ.ಎಚ್. ಶ್ರೀಧರ ಕಾವ್ಯ ಪ್ರಶಸ್ತಿಗಳು ದೊರಕಿವೆ (1992). 'ಉಪ್ಪು' ಎಂಬ ಕಾದಂಬರಿಗೆ 1993ರ 'ತುಷಾರ' ವಿಂಶತಿ ಕಾದಂಬರಿ ಸ್ಪರ್ಧೆಯಲ್ಲಿ ಬಹುಮಾನ ಬಂದಿದೆ. ತಮ್ಮಷ್ಟಕ್ಕೆ ತಾವು ಕೆಲಸ ಮಾಡಿಕೊಂಡು ಹೋಗುವುದರಲ್ಲಿ ಮೊಗಸಾಲೆಯವರಿಗೆ ನಂಬುಗೆ ಇದೆ. ಸಾಹಿತ್ಯದ ಕೆಲಸಕ್ಕೆ ದೊಡ್ಡ ಹುದ್ದೆಯಲ್ಲಿರಬೇಕು, ದೊಡ್ಡ ಪಟ್ಟಣವೇ ಆಗಬೇಕು ಎಂಬುದೇನಿಲ್ಲ. ಈ ಬಗೆಯ ಸೇವೆಯಿಂದ ತಮ್ಮ ಊರಿನ ಸಾಹಿತ್ಯಿಕ ಸಾಂಸ್ಕೃತಿಕ ಪರಿಸರವನ್ನು ಬೆಳೆಸಿದ್ದಾರೆ; ತಾವೂ ಬೆಳೆದಿದ್ದಾರೆ. ಸ್ನೇಹ, ಸೌಜನ್ಯ ಹಾಗೂ ಸಹೃದಯತೆಗಳ ಪ್ರತಿಮೂರ್ತಿಯಾದ ಮೊಗಸಾಲೆಯವರು ಜನರ ಪ್ರೀತಿ, ಆದರಗಳನ್ನು ಸಾಕಷ್ಟು ಪಡೆದಿದ್ದಾರೆ. ಇಂದು ಆಗಸ್ಟ್ 27ರಂದು ಅವರಿಗೆ ಐವತ್ತು ವರ್ಷಗಳು ತುಂಬುತ್ತವೆ. ಇದರ ನೆನಪಿಗಾಗಿ ಕಾಂತಾವರದ ಸ್ನೇಹಿತರೆಲ್ಲ ಕೂಡಿ ಒಂದು ಅಭಿನಂದನ ಗ್ರಂಥವನ್ನು ಯೋಜಿಸಿದ್ದಾರೆ; ವಿಶೇಷ ಸಮಾರಂಭವೊಂದನ್ನು ಏರ್ಪಡಿಸಿದ್ದಾರೆ. 'ಸ್ವರ್ಣಕಲಶ' ಎಂಬ ಹೆಸರಿನ ಆ ಅಭಿನಂದನ ಗ್ರಂಥ ಆ ಸಮಾರಂಭದಲ್ಲಿ ಬಿಡುಗಡೆಯಾಗುತ್ತದೆ. ಅದು ಕನ್ನಡಕ್ಕಾಗಿ ತನ್ನನ್ನು ಅರ್ಪಿಸಿಕೊಂಡವರಿಗೆ ಸಲ್ಲುವ ಕೃತಜ್ಞತೆಯ ಕಲಶವೂ ಹೌದು.

ಮೊಗಸಾಲೆಯವರದು ಸಣ್ಣ ಗಾತ್ರದ ಕುಟುಂಬ. ಪತ್ನಿ ಶ್ರೀಮತಿ ಪ್ರೇಮಲತಾ; ಮೂವರು ಗಂಡು ಮಕ್ಕಳು. ಹಿರಿಯ ನಿರಂಜನ ಸ್ವೋದ್ಯೋಗಿ; ಎರಡನೆಯ ಸುದರ್ಶನ ಅಹಮ್ಮದಾಬಾದಿನಲ್ಲಿ ಇಸ್ರೋ ವಿಜ್ಞಾನಿ; ಮೂರನೆಯ ಪ್ರಸನ್ನ ಬಿ.ಎ.ಎಂ.ಎಸ್.ನಲ್ಲಿ ಅಂತಿಮ ವರ್ಷದ ವಿದ್ಯಾರ್ಥಿ. "ನಿಮ್ಮ ಜೀವನದ ಮುಖ್ಯ ಘಟನೆಗಳು ಯಾವುವು?" ಎಂದು ಕೇಳಿದ್ದಕ್ಕೆ ಮೊಗಸಾಲೆ ಹೇಳುತ್ತಾರೆ: "ನನ್ನ ಜೀವನದ ಮುಖ್ಯ ಘಟನೆಗಳು ಅನ್ನುವಂಥವು ವಿಶೇಷವಾದದ್ದು ಏನೂ ಘಟಿಸಲಿಲ್ಲ. ಶ್ರೀಸಾಮಾನ್ಯನಂತೆ ನಾನು ಬಾಳಿದವನು. ನನ್ನ ಸಾಹಿತ್ಯಾಸಕ್ತಿಯೂ, ಸಾಹಿತ್ಯ ಪ್ರೀತಿಯೂ ಸಾಹಿತ್ಯ ಸಂಘಟನೆಯೂ ಕೂಡ ಶ್ರೀಸಾಮಾನ್ಯನ

ನೆಲೆಯದ್ದೇ."

ನಾನು ಸಾಹಿತ್ಯ ಅಕಾಡೆಮಿಯ ಅಧ್ಯಕ್ಷನಾಗಿದ್ದಾಗ ಅವರನ್ನು ಸಹ ಸದಸ್ಯರನ್ನಾಗಿ ನಾಮಕರಣ ಮಾಡಿದ್ದೆವು. ಆ ಸಂದರ್ಭದಲ್ಲಿ ಅವರೊಂದಿಗೆ ಮೂರು ವರ್ಷಗಳ ಕಾಲ ಕೆಲಸ ಮಾಡುವ ಅದೃಷ್ಟ ನನ್ನ ಪಾಲಿನದಾಗಿತ್ತು. ಆ ಮೂರು ವರ್ಷಗಳಲ್ಲಿ ಅವರನ್ನು, ಅವರ ಸಂಘಟನಾ ಚಾತುರ್ಯವನ್ನು ಹತ್ತಿರದಿಂದ ನೋಡುವ ಅವಕಾಶ ನನಗೆ ಒದಗಿತ್ತು. ಅವರಿಗಿಂತ ಕಡಿಮೆ ಕೆಲಸ ಮಾಡಿದವರೆಲ್ಲ ದೊಡ್ಡ ಅವಕಾಶ ಪಡೆದಿದ್ದರೂ, ಮೊಗಸಾಲೆ ಮನಸ್ಸನ್ನು ಕಹಿ ಮಾಡಿಕೊಂಡದ್ದನ್ನಾಗಲೀ, ಸಿನಿಕರಾದದ್ದನ್ನಾಗಲೀ ನಾನು ಕಂಡಿಲ್ಲ. ಅವರಿಗೆ ಎಲ್ಲ ಶುಭಗಳಿರಲಿ.

O

ತರಂಗ, 27 ಆಗಸ್ಟ್, 1995

# ಬೆಳ್ಳಿ ಬೆಳಕಲ್ಲಿ ಕನ್ನಡ ಸಂಘ

ಹಾ.ಮಾ.ನಾಯಕ

ದಕ್ಷಿಣ ಕನ್ನಡ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಬೆಳುವಾಯಿ, ಕಾಂತಾವರ, ಬೋಳ, ಕದಿಂಜೆ ಮತ್ತು ನಂದಳಿಕೆ ಎಂಬ ಪಂಚ ಗ್ರಾಮಗಳ ಆಶ್ರಯದಲ್ಲಿ ಸಾಂಸ್ಕೃತಿಕ ಉದ್ದೇಶಗಳನ್ನು ಇಟ್ಟುಕೊಂಡು, ಕನ್ನಡ ಸಂಘವೊಂದು ಅಸ್ತಿತ್ವಕ್ಕೆ ಬಂದು ಇಪ್ಪತ್ತೈದು ವರ್ಷಗಳು ಕಳೆದವು!

ನಗರದ ಸದ್ದುಗದ್ದಲಗಳಿಗೂ ತನಗೂ ರಹದಾರಿ ದೂರವೆಂಬತಿದ್ದ, ಪಟ್ಟಣ ಪ್ರದೇಶಗಳಿಗೆ ತಲಪಬಹುದಾದ ಸುದ್ದಿಗಳು ಅಪರೂಪಕ್ಕೆಂಬಂತೆ ಹುಟ್ಟುತ್ತಿದ್ದ, ಮಲೆನಾಡಿನ ಸೆರಗಿನಲ್ಲಿ ಹಸುರು ಮುಕ್ಕಳಿಸುವ ಹಾದಿ ಗುಡ್ಡಗಳ ಎಡೆಯಲ್ಲಿ ಅಲ್ಲಲ್ಲಿ ವಿದ್ಯುತ್ ತಲೆಪದ ಮನೆಗಳಿದ್ದ ಬಹುತೇಕ ಪ್ರಚಾರ ಪ್ರೀತಿ ಇಲ್ಲದಿದ್ದವರ, ಊರಾಗಿದ್ದ ಕಾಂತಾವರದಲ್ಲಿ ಸಾಹಿತ್ಯದಲ್ಲಿ ಆಸಕ್ತಿಯಿದ್ದರೂ ಅದಕ್ಕೆ ಸ್ಪಂದಿಸಲು ಅವಕಾಶವಿರದಿದ್ದಂತಹ ಕಾಲದಲ್ಲಿ ನಾಡಿನಲ್ಲಿ ಮೊದಲ ಬಾರಿಗೆಂಬಂತೆ ಐದು ಗ್ರಾಮಗಳ ಆಶ್ರಯದಲ್ಲಿ ಅಸ್ತಿತ್ವಕ್ಕೆ ಬಂದಿದ್ದ ಕಾಂತಾವರ ಕನ್ನಡ ಸಂಘಕ್ಕೆ ಈಗ ಇಪ್ಪತ್ತೈದರ "ಯೌವನ". ಆ ಸಂಘ ಈಗ ಬೆಳ್ಳಿ ನೀರಲ್ಲಿ ಮೀಯುತ್ತಿದೆ. ಬಂಗಾರದ ಹಬ್ಬದ ಕಡೆ ಮುಖ ಮಾಡಿದೆ!

ಮಂಗಳೂರಿನಲ್ಲಿ ತನ್ನ ಸ್ನಾತಕೋತ್ತರ ಕೇಂದ್ರವನ್ನು ತೆರೆದು, ಅದರ ನಿರ್ದೇಶಕರನ್ನಾಗಿ ಎಸ್.ವಿ. ಪರಮೇಶ್ವರ ಭಟ್ಟರನ್ನು ಕಳಿಸಿದ ಮೈಸೂರು ವಿಶ್ವವಿದ್ಯಾನಿಲಯ ಈಗ ಸಂತೃಪ್ತಿಯ ಉಸಿರನ್ನು ಬಿಡಬಹುದು. ಅಲ್ಲಿನ ಕನ್ನಡ ಚಟುವಟಿಕೆಗಳಿಗೆ ಒಂದು ತಿರುವನ್ನು ತಂದು, ವಿಶ್ವವಿದ್ಯಾನಿಲಯಕ್ಕೂ ಜನ ಸಾಮಾನ್ಯರಿಗೂ ನಡುವೆ ಸೇತುವೆಯಾಗಿ ನಿಂತವರು ಪರಮೇಶ್ವರ ಭಟ್ಟರು!

ಅವರು ಅಲ್ಲಿ ನಿರ್ದೇಶಕರಾಗಿದ್ದ ಅವಧಿಯಲ್ಲಿ ಪತ್ತಾರು ಬಗೆಯ ನೂರಾರು ಚಟುವಟಿಕೆಗಳಲ್ಲಿ ಭಾಗವಹಿಸಿದ್ದರು. ಕನ್ನಡದ ಕೆಲಸಕ್ಕೆ ಅವರು ಉತ್ಸಾಹದಿಂದ ತಮ್ಮನ್ನು ತೊಡಗಿಸಿಕೊಂಡರು. ಎಷ್ಟೊಂದು ಸಮಾರಂಭಗಳಲ್ಲಿ ಭಾಗವಹಿಸಿದ್ದರು. ಉಪನ್ಯಾಸಗಳನ್ನು ನೀಡಿದರು. ಎಷ್ಟೊಂದು ಸಂಘ ಸಂಸ್ಥೆಗಳನ್ನು ಆರಂಭಗೊಳಿಸಿದರು ಎಂದರೆ, ಲೆಕ್ಕ ಹಾಕುವುದಕ್ಕೇ ಭಯವಾಗುತ್ತದೆ. ಆಚಾರ್ಯ ಬಿ.ಎಂ. ಶ್ರೀಕಂಠಯ್ಯನವರು ಅಖಿಲ ಕರ್ನಾಟಕ ವ್ಯಾಪ್ತಿಯಲ್ಲಿ ಮಾಡಿದ ಕೆಲಸವನ್ನೇ ಪರಮೇಶ್ವರ ಭಟ್ಟರು ಕಾಸರಗೋಡು ಸೇರಿದಂತೆ, ಇಡೀ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಿರ್ವಹಿಸಿದರೆಂಬುದು ಸಂತೋಷದ ಮಾತು. ಅವರು ಮಾಡಿದ ಅನೇಕ ಕೆಲಸಗಳಲ್ಲಿ, ಈ ಸಂಘವನ್ನು ಉದ್ಘಾಟಿಸಿದ್ದೂ ಒಂದು (1975)

ಆ ಉದ್ಘಾಟನೆಯ ಸಮಾರಂಭ ಬೇಲಾಡಿಯಲ್ಲಿ ನಡೆಯಿತು. ಪರಮೇಶ್ವರ ಭಟ್ಟರು ಅಂದು ಹೊತ್ತಿಸಿದ ಕನ್ನಡದ ದೀಪ ಇಂದಿಗೂ ಪ್ರಜ್ವಲಿಸುತ್ತಿದೆ. ಕೆಲವು ವಿಷಯಗಳಲ್ಲಿ ನಾಡಿಗೇ ಮಾರ್ಗದರ್ಶಕವಾಗಿದೆ! ಆ ಸಂಘ ತನ್ನೆದುರು ಇಟ್ಟುಕೊಂಡಿದ್ದ ಧ್ಯೇಯೋದ್ದೇಶಗಳೆಂದರೆ– ಶತಮಾನಗಳಿಂದ ಬೆಳೆದುಬಂದಿದ್ದ ಕನ್ನಡ ಸಾಹಿತ್ಯ ಪರಂಪರೆಯನ್ನು ಜನಸಾಮಾನ್ಯರಿಗೆ ಪರಿಚಯಿಸುವುದು; ಅವರಲ್ಲಿ ಸಾಹಿತ್ಯಾಸಕ್ತಿ ಮತ್ತು ಸಾಹಿತ್ಯಾಭಿರುಚಿಯನ್ನು ಬೆಳೆಸಿ ಪೋಷಿಸುವುದು. ಅದಕ್ಕಾಗಿ ವಿಚಾರ ಸಂಕಿರಣಗಳನ್ನೂ ವ್ಯವಸ್ಥೆ ಮಾಡುವುದು; ದಾನಿಗಳಿಂದ ನೆರವು ಪಡೆದು, ಮೌಲಿಕ ಗ್ರಂಥಗಳನ್ನು ಪ್ರಕಟಿಸುವುದು; ಐದೂ ಗ್ರಾಮಗಳಲ್ಲಿನ ಯುವಶಕ್ತಿಯನ್ನು ರಚನಾತ್ಮಕ ಕಾರ್ಯದಲ್ಲಿ ತೊಡಗಿಸುವುದು; ಈ ಗ್ರಾಮಗಳಲ್ಲಿನ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಗುರುತಿಸುವುದು; ಪ್ರತಿಭೆಯನ್ನು ಹುಡುಕಿ ಅರ್ಹರಾದವರನ್ನು ಗುರುತಿಸಿ, ಗೌರವಿಸುವುದು; ಹೊಸ ಬರಹಗಾರರಿಗೆ ಅಗತ್ಯವಾದ ಉತ್ತೇಜನವನ್ನು ನೀಡುವುದು– ಹೀಗೆ ಈ ಪಟ್ಟಿ ಬೆಳೆಯುತ್ತದೆ.

ಈ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ, ಕಾಂತಾವರ ಕನ್ನಡ ಸಂಘ ಈ ಇಪ್ಪತ್ತೈದು ವರ್ಷಗಳಲ್ಲಿ ಯಶಸ್ವಿಯಾಗಿ ಕೆಲಸ ಮಾಡಿದೆ. ಅನೇಕ ಪ್ರಥಮಗಳನ್ನು ಸಾಧಿಸಿದೆ. ನಗರ ಪ್ರದೇಶಗಳಿಗೇ ಮೀಸಲಾಗಿದ್ದ ಸಾಹಿತ್ಯ ಸಂವಾದವನ್ನೂ, ಸಾಹಿತ್ಯಕ ಸಂಕಿರಣಗಳನ್ನೂ ಗ್ರಾಮಾಂತರ ಪ್ರದೇಶಕ್ಕೆ ತಂದ ಕೀರ್ತಿ ಈ ಸಂಘದ್ದಾಗಿದೆ. ಎಷ್ಟೋ ವಿಚಾರಗೋಷ್ಠಿಗಳನ್ನು ಮೊದಲ ಬಾರಿಗೆ ಸಂಯೋಜಿಸಿದ ಹೆಗ್ಗಳಿಕೆಯೂ ಅದರದ್ದೇ ಆಗಿದೆ. ಸಾಕ್ಷರತಾ ಆಂದೋಲನವನ್ನು ಕವಿಗೋಷ್ಠಿಯ ಮೂಲಕ ಸಫಲಗೊಳಿಸಬಹುದೆಂಬುದನ್ನು ಅದು ಸಾಧಿಸಿ ತೋರಿಸಿದೆ. ಹೀಗೆ ಬಹು ಬಗೆಯ ತನ್ನ ಕಾರ್ಯಕ್ರಮಗಳಿಂದ ಸಮಗ್ರ ನಾಡವರ ಪ್ರೀತ್ಯಾದರಗಳನ್ನು ಅದು ಸಂಪಾದಿಸಿಕೊಂಡಿದೆ.

ಕನ್ನಡ ಸಂಘಕ್ಕೆ ಆಶ್ರಯ ಕೊಟ್ಟ ಪಂಚಗ್ರಾಮಗಳಲ್ಲಿ ಒಂದಾದ ನಂದಳಿಕೆ "ಮುದ್ದಣ್ಣ" ಕವಿಯಿಂದಾಗಿ ನಾಡಿನಾದ್ಯಂತ ಪರಿಚಯಗೊಂಡಿದೆ. ಈಚಿನ ದಿನಗಳಲ್ಲಿ ನಂದಳಿಕೆ ಬಾಲಚಂದ್ರರಾವ್ ಅವರ ನೇತೃತ್ವದಲ್ಲಿ ನಡೆದಿರುವ ಗ್ರಾಮಾಭಿವೃದ್ಧಿ ಕಾರ್ಯಕ್ರಮಗಳಿಂದ, ಸಾಂಸ್ಕೃತಿಕ ಚಟುವಟಿಕೆಗಳಿಂದ ಪ್ರಸಿದ್ಧಿಗೆ ಬಂದಿದೆ. ಅದೊಂದು ಮಾದರಿಯ ಗ್ರಾಮ ಎನ್ನಿಸಿದೆ. ಇದೆಲ್ಲಕ್ಕೆ ಕಾರಣನಾದ "ಮುದ್ದಣ್ಣ"ನ ಹೆಸರನ್ನು ಶಾಶ್ವತಗೊಳಿಸುವ ಮೂಲಕ, ಕನ್ನಡ ಕಾವ್ಯಕ್ಕೆ ಉತ್ತೇಜನ ನೀಡುವ ಸಲುವಾಗಿ ಅಖಿಲ ಕರ್ನಾಟಕ ಮಟ್ಟದ ಕಾವ್ಯ ಸ್ಪರ್ಧೆಯೊಂದನ್ನು ಏರ್ಪಡಿಸಲು ಸಂಘ ನಿರ್ಧರಿಸಿತು (1978) 25 ಅಥವಾ ಅದಕ್ಕಿಂತ ಹೆಚ್ಚು ಕವಿತೆಗಳ ಹಸ್ತಪ್ರತಿಯನ್ನು ಸ್ಪರ್ಧೆಗೆ ಆಹ್ವಾನಿಸುವುದು. ಅದನ್ನು ಮೂರು ಜನ ತೀರ್ಪುಗಾರರ ಸಮಿತಿಯಿಂದ ಮೌಲ್ಯಮಾಪನ ಮಾಡಿಸುವುದು; ಅವುಗಳಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ಹಸ್ತಪ್ರತಿಗೆ ಬಹುಮಾನ ನೀಡುವುದು ಎಂದು ನಿರ್ಧರಿಸಲಾಯಿತು. ಆ ಬಹುಮಾನ ಇಂದು ಐದು ಸಾವಿರ ರೂಪಾಯಿಗಳದ್ದಾಗಿದ್ದು, ಜೊತೆಗೆ ಸನ್ಮಾನ ಮತ್ತು ಪ್ರಶಸ್ತಿಪತ್ರ ನೀಡಿ ಕವಿಯನ್ನು ಗೌರವಿಸುವುದು.

ಪ್ರಾರಂಭದಲ್ಲಿ ದಿ. ನಿಟ್ಟೆ ಕೆಮ್ಮಣ್ಣು ನಾರಾಯಣರಾವ್ ದತ್ತಿಯಿಂದ ಚಾಲನೆಗೊಂಡ ಈ ಸ್ಪರ್ಧೆಯು ಇನ್ನೂರು ರೂಪಾಯಿಗಳದ್ದಾಗಿತ್ತು. 1990ರ ನಂತರ ಹರಿಕೃಷ್ಣ ಪುನರೂರು

ಅವರ ಸಂಚಾಲಕತ್ವದಲ್ಲಿರುವ ಬಿ. ಪಟೇಲ್ ಪುನರೂರು ವಾಸುದೇವರಾವ್ ಟ್ರಸ್ಟಿನ ನೆರವಿನಿಂದ ಅದು ಮುಂದುವರಿದಿದೆ. ಪ್ರತಿ ವರ್ಷವೂ ಕರ್ನಾಟಕದಾದ್ಯಂತ ನೂರಾರು ಕವಿಗಳು ಇದರಲ್ಲಿ ಪಾಲುಗೊಳ್ಳುತ್ತಿದ್ದಾರೆ. ಇದರಲ್ಲಿ ಬಹುಮಾನ ಗಳಿಸುವುದು "ಕಾವ್ಯ ಪ್ರಸಿದ್ಧಿ"ಗೆ ಒಂದು ಪಾಸ್‌ಪೋರ್ಟ್ ಇದ್ದಂತೆ ಎಂದೂ ಭಾವಿಸಿದ್ದಾರೆ. ನಿಷ್ಪಕ್ಷಪಾತ ತೀರ್ಮಾನದಿಂದ "ಮುದ್ದಣ್ಣ ಪ್ರಶಸ್ತಿ" ಸಮಗ್ರ ಕರ್ನಾಟಕದ ಆದರ ಗೌರವಗಳಿಗೆ ಪಾತ್ರವಾಗಿದೆ. ಪ್ರಶಸ್ತಿ ಮೊದಲ ಬಾರಿಗೆ (1979) ಆನಂದ ಜರುಘರವಾಡ ಅವರಿಗೆ ಲಭ್ಯವಾಯಿತು. ಅಲ್ಲಿಂದ ಪ್ರತಿವರ್ಷವೂ ಕೊಡಲ್ಪಟ್ಟಿದೆ. ಯಾವುದೇ ವರ್ಷವೂ ಕೊಡದೇ ಇಲ್ಲ. ಆದರೆ 1994 ಮತ್ತು 97ರಲ್ಲಿ ಇಬ್ಬಿಬ್ಬರಿಗೆ ಹಂಚಲ್ಪಟ್ಟಿದೆ. ಸು.ರಂ ಎಕ್ಕುಂಡಿ (1982), ಪಿ.ಎಸ್. ರಾಮಾನುಜಂ (1988) ಪ್ರತಿಭಾ ನಂದಕುಮಾರ (1990) ಮೊದಲಾದ ಪ್ರಸಿದ್ಧರು ಪ್ರಶಸ್ತಿ ವಿಜೇತರ ಪಟ್ಟಿಯಲ್ಲಿದ್ದಾರೆ. ಈ ವರ್ಷದ ಪ್ರಶಸ್ತಿ (2000) ರಾಧಾಕೃಷ್ಣ ಬೆಳ್ಳೂರು ಅವರಿಗೆ ಲಭಿಸಿದೆ.

ಗಮನಾರ್ಹವಾದ ಸೇವೆ ಸಲ್ಲಿಸಿದವರಿಗೆ ಸನ್ಮಾನ ಮಾಡುವುದೂ ಸಂಘದ ಚಟುವಟಿಕೆಗಳಲ್ಲಿ ಸೇರಿದೆ. ಸೇಡಿಯಾಪು ಕೃಷ್ಣಭಟ್ಟ, ಕಯ್ಯಾರ ಕಿಂಞಣ್ಣರೈ, ಸುಬ್ರಾಯ ಚೊಕ್ಕಾಡಿ (ಸಾಹಿತ್ಯ), ಬೆ.ಸು.ನ. ಮಲ್ಯ, ಸಂತೋಷಕುಮಾರ ಗುಲ್ವಾಡಿ, ಬನ್ನಂಜೆ ರಾಮಾಚಾರ್ಯ (ಪತ್ರಿಕೋದ್ಯಮ), ಬೋಳಂಕ ಕೋಡಿ ಈಶ್ವರಭಟ್ಟ, ಬೊಳುವಾರು ಮಾದವ ನಾಯಕ (ಪ್ರಕಾಶನ), ತುದಿಯಡಕ ವಿಷ್ಣ್ವಯ್ಯ (ಯಕ್ಷಗಾನ), ಕೆ. ರಾಮ, ಜಸ್ಟಿಸ್ ಕೆ.ಎಸ್. ಹೆಗಡೆ (ಸಮಾಜಸೇವೆ) ಕೆ. ಕಾಂತ ರೈ (ಶಿಕ್ಷಣ) ಇವರೇ ಮೊದಲಾದವರು ತಮ್ಮ ತಮ್ಮ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಗಾಗಿ ಗೌರವ ಗಳಿಸಿದ್ದಾರೆ.

ಸಂಘವು ಪುಸ್ತಕ ಪ್ರಕಾಶನ ಕಾರ್ಯದಲ್ಲಿಯೂ ಹಿಂದೆ ಬಿದ್ದಿಲ್ಲ. ಕಳೆದ ಶತಮಾನದ ಆರಂಭದ ಎಪ್ಪತ್ತೈದು ವರ್ಷಗಳಲ್ಲಿ (1901–1976) ಬೆಳೆದು ಬಂದು ದಕ್ಷಿಣ ಕನ್ನಡದ ಕಾವ್ಯ ಸಂಕಲನವೊಂದನ್ನು ಸಂಘ ಆರಂಭದಲ್ಲಿಯೇ ಪ್ರಕಟಿಸಿತು. ಅದರಲ್ಲಿ 42 ಮಂದಿ ಪ್ರಾತಿನಿಧಿಕ ಕವಿಗಳ 71 ಕವನಗಳು ಸೇರಿವೆ (1977). ಸುಬ್ರಾಯ ಚೊಕ್ಕಾಡಿ ಮತ್ತು ಮುರಳೀಧರ ಉಪಾಧ್ಯ, ಹಿರಿಯಡಕ ಅವರು ಸಂಪಾದಿಸಿದ ಈ ಸಂಕಲನದಲ್ಲಿ, ಪಂಜೆಯವರಿಂದ ತೊಡಗಿ, ಇಂದಿನ ಅನೇಕ ಗಮನಾರ್ಹ ಕವಿಗಳ ಕವಿತೆಗಳವರೆಗೆ ಸೇರಿವೆ. ಅವನ್ನು ನಿಜವಾದ ಅರ್ಥದಲ್ಲಿ ಪ್ರಾತಿನಿಧಿಕ ಕವಿತೆಗಳು ಎಂದು ಹೇಳಬಹುದು. ಕನ್ನಡ ಕಾವ್ಯ ಪ್ರಪಂಚದಲ್ಲಿ ಇದೊಂದು ಮಹತ್ವದ ಸಂಕಲನವೆಂದೂ ಹೇಳಬೇಕು. ಮುದ್ದಣ್ಣ ಕಾವ್ಯ ಪ್ರಸಸ್ತಿಯಿಂದ ಪುರಸ್ಕೃತವಾದ ಸು.ರಂ. ಎಕ್ಕುಂಡಿಯವರ "ಬೆಳ್ಳಕ್ಕಿಗಳು" ಕವನ ಸಂಕಲನ, ಬನ್ನಂಜೆ ಗೋವಿಂದಾಚಾರ್ಯರ "ಹೇಳದೆ ಉಳಿದದ್ದು" ಸಂಕಲನ, ಆರ್. ರಾಮಚಂದ್ರಪ್ಪ ಅವರ "ಕನಸುಗಳೇ ಬನ್ನಿ" ಸಂಕಲನಗಳನ್ನೂ, ಸಂಘ ಪ್ರಕಟಿಸಿದೆ. ಇವುಗಳಲ್ಲದ ಅನೇಕ ಸ್ಮರಣ ಸಂಚಿಕೆಗಳನ್ನೂ, ಅನಿಯತಕಾಲಿಕಗಳನ್ನೂ ಅದು ಪ್ರಕಾಶನಗೊಳಿಸಿದೆ. ದತ್ತಿ ಉಪನ್ಯಾಸದ ವ್ಯವಸ್ಥೆಯೊಂದಿದ್ದು, ಅದಕ್ಕಾಗಿ ಹತ್ತು ಸಾವಿರ ರೂಪಾಯಿಗಳನ್ನು ನೀಡಬೇಕು.

ಇಂಥ ಬಹುವ್ಯಾಪಿ ಸಾಹಿತ್ಯಿಕ ಸಂಘವೊಂದು ಸಾರ್ಥಕವಾದ ಇಪ್ಪತ್ತೈದು ವರ್ಷಗಳನ್ನು ಕಳೆದು ಮುಂದೆ ನಡೆಯುತ್ತಿರುವ ಈ ಸಂದರ್ಭದಲ್ಲಿ ಅದಕ್ಕೆ ಶುಭ ಕೋರುವುದು ಎಲ್ಲ

ಕನ್ನಡಿಗರ ಕರ್ತವ್ಯ. ಕಾಂತಾವರ ಕನ್ನಡ ಸಂಘ ತನ್ನ ರಜತೋತ್ಸವ ವರ್ಷದಲ್ಲಿ ಹಲವಾರು ಕಾರ್ಯಕ್ರಮಗಳನ್ನು ತನ್ನ ಮೂಲ ಉದ್ದೇಶಕ್ಕೆ ಅನುಗುಣವಾಗಿ ನಡೆಸಲು ತೀರ್ಮಾನಿಸಿದೆ. ಈಚೆಗೆ ಅಕ್ಟೋಬರ್ ಆರರಂದು ಬೆಳ್ಳಿಹಬ್ಬದ ಕಾರ್ಯಕ್ರಮಗಳ ಉದ್ಘಾಟನೆಯಾಗಿತ್ತು.

ಅದೇ ಸಂದರ್ಭದಲ್ಲಿ 2000ನೇ ವರ್ಷದ "ಮುದ್ದಣ್ಣ ಕಾವ್ಯ ಪ್ರಶಸ್ತಿ"ಯನ್ನೂ ವಿತರಿಸಲಾಯಿತು. ಎಂದಿನಂತೆ ಈ ಕಾರ್ಯಕ್ರಮ ಬೇಲಾಡಿ ಶಾಲೆಯ ಮುದ್ದಣ ರಂಗಮಂಟಪದಲ್ಲಿ ನಡೆಯಿತು. ವರ್ಷದಾದ್ಯಂತ ಬಗೆ ಬಗೆಯ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯಲಿವೆ. ನವೆಂಬರ್ ತಿಂಗಳಿನಲ್ಲಿ ಬೋಳ ಪಂಚಾಯತ್ ಆಶ್ರಯದಲ್ಲಿ ಯಕ್ಷಗಾನ ಗೋಷ್ಠಿ ಮತ್ತು ತಾಳ ಮದ್ದಲೆ ಕೂಟಗಳ ವ್ಯವಸ್ಥೆಯಾಗಿದೆ; ಮುಂದಿನ ಜನವರಿ ತಿಂಗಳಲ್ಲಿ, ಮುದ್ದಣ ಕಾವ್ಯ ಪ್ರಶಸ್ತಿ ಗಳಿಸಿರುವ ಕವಿಗಳ ಕವಿಗೋಷ್ಠಿಯೊಂದು ನಡೆಯುತ್ತದೆ; ಮಾರ್ಚ್ ತಿಂಗಳಿನಲ್ಲಿ ಬೆಳುವಾಯಿಯಲ್ಲಿ ಜನಪದ ಸಾಹಿತ್ಯ ಗೋಷ್ಠಿ ಸೇರುತ್ತದೆ.

ಕನ್ನಡ ಸಂಘ ಆರಂಭಗೊಂಡದ್ದು ಏಪ್ರಿಲ್ 10, 1975. 2001ರ ಏಪ್ರಿಲ್ 10ರಂದು ಕಾಂತಾವರದಲ್ಲಿ ರಾಜ್ಯಮಟ್ಟದ ಸಾಹಿತ್ಯೋತ್ಸವ ನಡೆಯಲಿದೆ. ಅದೇ ಸಂದರ್ಭದಲ್ಲಿ ಬೆಳ್ಳಿಹಬ್ಬದ ಕಾರ್ಯಕ್ರಮಗಳ ಸಮಾರೋಪ ಸಮಾರಂಭವೂ ನಡೆಯುತ್ತದೆ. ಆ ಸಂದರ್ಭದಲ್ಲಿ ಬಿಡುಗಡೆಗೊಳ್ಳಲಿರುವ ಎರಡು ಮುಖ್ಯ ಪ್ರಕಟಣೆಗಳೆಂದರೆ 'ದಕ್ಷಿಣ ಕನ್ನಡದ ಶತಮಾನದ ಕಾವ್ಯ' ಹಾಗೂ "ಬೆಳ್ಳಿ ಬೆಳಕು". ಮೊದಲನೆಯದನ್ನು ಬಿ. ಜನಾರ್ದನ ಭಟ್ಟ ಅವರು ಸಂಪಾದಿಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆ ಇಂದು ಎರಡು ಜಿಲ್ಲೆಗಳಾಗಿವೆ. ಈ ಎರಡೂ ಜಿಲ್ಲೆಗಳ ಮತ್ತು ಕಾಸರಗೋಡಿನ ಒಂದನೂರು ವರ್ಷಗಳ ಮಹತ್ವದ ಕಾವ್ಯ ಸಂಕಲನ, ಡೆಮ್ಮಿ ಆಕಾರದ ಸುಮಾರು 400 ಪುಟಗಳಲ್ಲಿರುತ್ತದೆ. ಕನ್ನಡ ಸಂಘದ ಅಸ್ತಿತ್ವಕ್ಕೆ ಆಧಾರವಾಗಿರುವ ಪಂಚ ಗ್ರಾಮಗಳ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಬಿಂಬಿಸುವ ಮತ್ತು ಕನ್ನಡ ಸಾಹಿತ್ಯದ ನೆಲೆಗಳನ್ನು ಗುರುತಿಸುವ ವಿಶೇಷ ಲೇಖನಗಳನ್ನೊಳಗೊಂಡ 'ಬೆಳ್ಳಿ ಬೆಳಕು', ಇದು ರಜತೋತ್ಸವ ಸಮಾರಂಭದ ನೆನಪಿನ ಸಂಚಿಕೆ. ಶ್ರೀನಿವಾಸ ಜೋಕಟ್ಟೆ ಮತ್ತು ಬೆಳುವಾಯಿ ಸೀತಾರಾಮ ಆಚಾರ್ಯ ಅವರು ಅದರ ಸಂಪಾದಕರು. ಡೆಮ್ಮಿ ಆಕಾರದ ಸುಮಾರು 150 ಪುಟಗಳನ್ನು ಅದು ಒಳಗೊಂಡಿರುತ್ತದೆ.

ಮಂಜೇಶ್ವರ ಗೋವಿಂದ ಪೈ. ಕೋಟ ಶಿವರಾಮ ಕಾರಂತ ಅವರಂಥ ಧೀಮಂತ ಸಾಹಿತಿಗಳು ತೆರೆದ ದಕ್ಷಿಣ ಕನ್ನಡದ ಆಧುನಿಕ ಕನ್ನಡ ಸಾಹಿತ್ಯ ಮಾರ್ಗ, ನೂರಾರು ಪ್ರತಿಭಾವಂತ ಲೇಖಕರಿಂದ ತುಂಬಿ ತುಳುಕುತ್ತಿದೆ. ಮುಳಿಯ ತಿಮ್ಮಪ್ಪಯ್ಯ, ಕಡೆಂಗೋಡ್ಲು ಶಂಕರ ಭಟ್ಟ, ಸೇಡಿಯಾಪು ಕೃಷ್ಣ ಭಟ್ಟ, ಕುಶಿ. ಹರಿದಾಸ ಭಟ್ಟ, ವ್ಯಾಸರಾಯ ಬಲ್ಲಾಳ ಮುಂತಾದ ಹಲವರಿಂದ ಸಮೃದ್ಧಗೊಂಡಿದೆ. ತುಳುವಿನ ಸೊಗಸನ್ನು ಒಳಗೊಂಡು, ಕೊಂಕಣಿಯ ಕಂಪಿನ ಸೊಂಪಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆ ಇಂದಿಗೂ ಕನ್ನಡದ ನೆಲದಲ್ಲಿ ಅನನ್ಯವಾಗಿದೆ. ಅಸಾಧಾರಣವಾಗಿದೆ. ವ್ಯವಹಾರ, ವಾಣಿಜ್ಯ, ಉದ್ದಿಮೆಗಳಲ್ಲಿ ಮಾರ್ಗದರ್ಶಕವಾಗಿದೆ. ಇಡೀ ಕರ್ನಾಟಕದಲ್ಲಿ ಅದು 'ನಾಳೆ'ಗಳನ್ನು ನೋಡುವ ಏಕಮಾತ್ರ ಜಿಲ್ಲೆಯಾಗಿದೆ. ಅದರ ಭವಿಷ್ಯ ಉಜ್ವಲವಾಗಿದೆ.

ಬೆಳ್ಳಿಹಬ್ಬದ ಕಾಂತಿಯಲ್ಲಿ ತೋಯುತ್ತಿರುವ, ಕನ್ನಡನಾಡಿನ ಅರ್ಥಪೂರ್ಣ ಪ್ರಾಯವಾದ,

ಗ್ರಾಮಾಂತರ ಪ್ರದೇಶಗಳಿಗೆ ಸಾಂಸ್ಕೃತಿಕ ದಾರಿದೀಪವಾಗಿರುವ, ಕಾಂತಾವರ ಕನ್ನಡ ಸಂಘವನ್ನು ನೆನಪಿಸಿಕೊಂಡಾಗಲೆಲ್ಲ ನೆನಪಿಗೆ ಬರುವವರು ಕವಿಯೂ, ಕಾದಂಬರಿಕಾರರೂ ಆಗಿರುವ ಡಾ. ನಾ. ಮೊಗಸಾಲೆಯವರು. ಉತ್ಸಾಹದಿಂದ ಪುಟಿಯುತ್ತಿರುವ ಅವರು ಕಾಂತಾವರದ ಕಾಂಡೇಶ್ವರ ದೇವಸ್ಥಾನದ ಬಳಿಯೇ ನೆಲಸಿದ್ದಾರೆ. ಅವರು ಕನ್ನಡ ಸಂಘದಲ್ಲಿ ಪದಾಧಿಕಾರಿಯಾಗಿರಲಿ, ಇಲ್ಲದಿರಲಿ ಅದಕ್ಕೆ ಗೆಳೆಯರೂ, ಮಾರ್ಗದರ್ಶಿಗಳೂ, ತತ್ವಶಾಸ್ತ್ರಿಗಳೂ ಆಗಿದ್ದಾರೆ! ಕನ್ನಡ ಸಂಘದ ಪ್ರೇರಕ ಶಕ್ತಿಯೂ ಅವರಾಗಿದ್ದಾರೆ. ಅವರು ಅದನ್ನು ಸರಿಯಾದ ಹಾದಿಯಲ್ಲಿ ನಡೆಸುತ್ತಾರೆ ಎಂಬುದರಲ್ಲಿ ನನಗೆ ನಂಬುಗೆಯಿದೆ!

ಸುಧಾ, 2 ನವೆಂಬರ್, 2000

O

# ಮೊಗಸಾಲೆಯವರ ವಿಚಾರಗಳು

ಡಾ॥ ಹಾ.ಮಾ.ನಾಯಕ.

ದಕ್ಷಿಣ ಕನ್ನಡದ ಉಡುಪಿ ಜಿಲ್ಲೆಯ ಕಾರ್ಕಳ ತಾಲ್ಲೂಕಿನ ಅಜೆಕಾರಿನಲ್ಲಿ ಮೊನ್ನೆ ಮೊನ್ನೆ ನಡೆದ ಏಳನೆ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರಾಗಿದ್ದವರು ಪಕ್ಕದ ಕಾಂತಾವರದಲ್ಲಿ ವೈದ್ಯರಾಗಿರುವ ಪ್ರಸಿದ್ಧ ಸಾಹಿತಿ ಮೊಗಸಾಲೆ ನಾರಾಯಣ ಭಟ್ಟರು. ನಾ.ಮೊಗಸಾಲ ಹೆಸರಿನಲ್ಲಿಯೇ ಕನ್ನಡದ ಮಹತ್ವದ ಸಾಹಿತಿಗಳಲ್ಲಿ ಒಬ್ಬರಾಗಿರುವ ಅವರು ಅಂದುವಾಡಿದ ಅಧ್ಯಕ್ಷ ಭಾಷಣ ತುಂಬ ವಿಚಾರ ಪ್ರಚೋದಕವಾಗಿತ್ತು; ಆಲೋಚನೀಯವಾಗಿತ್ತು. ಮೊಗಸಾಲೆಯವರು ಕಾಂತಾವರದಲ್ಲಿಯೇ ನೆಲೆಯಾಗಿದ್ದರೂ. ಅವರ ಊರು ಅದಲ್ಲ. ಅವರ ಹುಟ್ಟೂರು (ಜನನ: ಆಗಸ್ಟ್ 27, 1944) ಇಂದಿನ ಕಾಸರಗೋಡು ಜಿಲ್ಲೆಯ ಕೋಳ್ಯೂರು. ಪ್ರಾಥಮಿಕ ಶಾಲೆ ಆಲೂರಿನಲ್ಲಿಯೇ ಮುಗಿಸಿ, ಮಾಧ್ಯಮಿಕ, ಪ್ರೌಢಶಾಲಾ ಶಿಕ್ಷಣವನ್ನು ಕನ್ಯಾನದಲ್ಲಿ ಪೂರೈಸಿದರು. ಮುಂದೆ ಉಡುಪಿ ಆಯುರ್ವೇದ ಕಾಲೇಜಿನಲ್ಲಿ ಓದಿ ಪದವೀಧರರಾಗಿ ಕಾಂತಾವರದ ಸರ್ಕಾರಿ ಆಸ್ಪತ್ರೆಯಲ್ಲಿ ವೈದ್ಯಾಧಿಕಾರಿಯಾಗಿ ನೇಮಕಗೊಂಡರು.

ಈಗಲೂ ಅವರು ಅದೇ ಊರಿನಲ್ಲಿ ಅದೇ ಕೆಲಸದಲ್ಲಿದ್ದಾರೆ. ಸಾಹಿತ್ಯ, ವಿದ್ಯಾರ್ಥಿ ದೆಸೆಯಿಂದಲೂ ಮೊಗಸಾಲೆಯವರಿಗೆ ಅಂಟಿಕೊಂಡು ಬಂದ ಹುಚ್ಚು! ತಿರುಮಲೇಶ, ಸುಬ್ಬರಾಯ ಚೊಕ್ಕಾಡಿ, ರಾಮಚಂದ್ರದೇವ ಮೊದಲಾದ ಪ್ರತಿಭಾವಂತರು ಎಳವೆಯಲ್ಲಿಯೇ ಅವರ ಸ್ನೇಹಿತರಾಗಿದ್ದರು. ಆಗ ಪ್ರಾರಂಭವಾದ 'ವಸಂತ ಸಾಹಿತ್ಯ'ದ ಸ್ಥಾಪಕ ಸದಸ್ಯರಲ್ಲಿ ಮೊಗಸಾಲೆಯವರೂ ಒಬ್ಬರಾಗಿದ್ದರು (1965). ಅಂದಿನಿಂದಲೇ ಅವರು ಸಂಘಟನೆಯಲ್ಲಿಯೂ ತೊಡಗಿದರು. ಆ ಶಕ್ತಿಯ ಫಲವಾಗಿಯೇ ಇಂದಿಗೂ ಅವರು 'ವರ್ಧಮಾನ' ಪ್ರಶಸ್ತಿ ಪೀಠದಂತಹ ಸಂಸ್ಥೆಯನ್ನು ನಡೆಸುತ್ತಿದ್ದಾರೆ. ಪುಟ್ಟಹಳ್ಳಿಯೊಂದರಲ್ಲಿ ವಾಸಿಸುತ್ತಿರುವ ಮೊಗಸಾಲೆಯವರು ತಮ್ಮ ಸಾಹಿತ್ಯದಿಂದ, ಸಾಹಿತ್ಯ ಚಟುವಟಿಕೆಗಳಿಂದ ಕನ್ನಡ ನಾಡಿನ ಉದ್ದಗಲಕ್ಕೂ ಪರಿಚಿತರಾಗಿದ್ದಾರೆ;ಕನ್ನಡದ ಒಬ್ಬ ಪ್ರಸಿದ್ಧ ಲೇಖಕರೆನಿಸಿದ್ದಾರೆ. ಅವರು ಹನ್ನೆರಡು ಕಾದಂಬರಿಗಳನ್ನೂ, ಆರು ಕವನ ಸಂಗ್ರಹ, ಒಂದು ಗೀತ ನಾಟಕ, ಒಂದು ವೈದ್ಯಕೀಯ ಕೃತಿಯನ್ನೂ ಪ್ರಕಟಿಸಿದ್ದಾರೆ. ಏಳು ಸಂಪಾದಿತ ಕೃತಿಗಳು ಪ್ರಕಟಗೊಂಡಿವೆ. ಅವರ ಮೊದಲ

ಕೃತಿ 1965ರಲ್ಲಿ ಪ್ರಕಟವಾಯಿತು. 'ನನ್ನದಲ್ಲದ್ದು' ಎಂಬ ಕಾದಂಬರಿಗೆ ರಾಜ್ಯ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರಕಿದೆ. ಅವರ ಕಾವ್ಯಕ್ಕೆ ಕಡೆಂಗೋಡ್ಲು ಪ್ರಶಸ್ತಿ, ಪಿ.ಎಸ್.ಶ್ರೀಧರ್ ಪ್ರಶಸ್ತಿ, ಉಗ್ರಾಣ ಪ್ರಶಸ್ತಿ ಮತ್ತು ಪರ್ಲ ಪ್ರಶಸ್ತಿಗಳು ಲಭಿಸಿವೆ.

ಮೊನ್ನೆ ನವೆಂಬರ್ 28ರಂದು ಅಜೆಕಾರಿನಲ್ಲಿ ಕಾರ್ಕಳ ತಾಲ್ಲೂಕಿನ 7ನೆಯ ಕನ್ನಡ ಸಾಹಿತ್ಯ ಸಮ್ಮೇಳನ ನಡೆಯಿತು. ಅದು ಬಹಳ ಅದ್ದೂರಿಯದಾಗಿತ್ತು. ಹಲವು ರೀತಿಗಳಿಂದ ಯಾವುದೇ ಜಿಲ್ಲಾ ಸಮ್ಮೇಳನಕ್ಕೂ ಕಡಿಮೆಯದಾಗಿರಲಿಲ್ಲ. ಕೆಲವು ಸಂಗತಿಗಳಲ್ಲಿ ಅದು ರಾಜ್ಯಮಟ್ಟದ ಸಮ್ಮೇಳನಕ್ಕೂ ಸರಿದೊರೆಯಾಗಿತ್ತು! ಆ ಪುಟ್ಟ ಊರಿನಲ್ಲಿಯೂ ಸಾವಿರಾರು ಜನ ಕೂಡಿ ತಮ್ಮ ಕನ್ನಡ ಪ್ರೀತಿಯನ್ನು, ಅಧ್ಯಕ್ಷರಾದ ಮೊಗಸಾಲೆಯವರ ಮೇಲೆ ತಾವಿಟ್ಟ ಅಭಿಮಾನವನ್ನು ಮೆರೆದರು. ಜಿ.ನಾರಾಯಣ ಅವರು ಆರಂಭಿಸಿದ ಜಿಲ್ಲಾ ಸಮ್ಮೇಳನಗಳ ಸಂಪ್ರದಾಯ ಈಗ ತಾಲ್ಲೂಕು ಸಮ್ಮೇಳನಗಳಾಗಿ ಫಲಕೊಡಲು ಆರಂಭಿಸಿದೆ. ದಕ್ಷಿಣಕನ್ನಡ ಜಿಲ್ಲೆಯಲ್ಲಂತೂ ಈ ಸಮ್ಮೇಳನಗಳು ಯಶಸ್ವಿಯಾಗಿ ನಡೆದಿವೆ. ಅಜೆಕಾರು ಸಮ್ಮೇಳನದ ಅಧ್ಯಕ್ಷ ಭಾಷಣ. ಡೆಮ್ಮಿ ಆಕಾರದ 22 ಪುಟಗಳಲ್ಲಿ ಅಚ್ಚಾಗಿದೆ. ಸಾಹಿತ್ಯಕ್ಕೆ ಸಂಬಂಧಿಸಿದ ಒಂದೆರಡು ಮುಖ್ಯ ವಿಚಾರಗಳನ್ನು ಮೊಗಸಾಲೆಯವರು ಅದರಲ್ಲಿ ಪ್ರಸ್ತಾಪಿಸಿದ್ದಾರೆ.

"ಅಜೆಕಾರು ಎಂಬ ಈ ಪುಟ್ಟ ಊರಿಗಿಂದು ಒಂದು ಹೊಸ ಅನುಭವ. ದೂರದ ಅಶ್ವತ್ಥಪುರದಿಂದ (6ನೆಯ ಸಮ್ಮೇಳನ ನಡೆದ ಜಾಗ;ಅಧ್ಯಕ್ಷರು. ಜನಾರ್ದನ ಗುರ್ಕಾರ್) ಸುಮಾರು ಒಂದೂವರೆ ವರ್ಷಗಳ ಹಿಂದೆ ನಡೆದ, ಸಾಹಿತ್ಯ ಸಮ್ಮೇಳನದ ಶಕ್ತಿ ಶಾರದೆಯ ತೇರನ್ನು ನಾವೆಲ್ಲ ಎಳೆದು ತಂದು ಇಲ್ಲಿ ನಿಲ್ಲಿಸಿದ್ದೇವೆ. ನಿಮ್ಮೆಲ್ಲರ ಮುಖದಲ್ಲಿ ಕನ್ನಡ ಶಾರದೆಯ ಪ್ರತಿಬಿಂಬ ಮಿಂಚುತ್ತಿದೆ.... ಈ ಸ್ಥಾನ ನಿಮ್ಮ ಪ್ರೀತಿಗಿಂತ ದೊಡ್ಡದಲ್ಲವೆಂದು ನಾನು ಬಲ್ಲೆ. ನೀವು-ನಾವು ಎಲ್ಲರೂ ತಿಳಿದಿರಬಹುದಾದ ವಿಷಯವನ್ನು, ಈ ಸಾಂಕೇತಿಕ ಅಧ್ಯಕ್ಷತೆಯ ನೆಲೆಯಲ್ಲಿ ಪ್ರಕಟಿಸುವುದು ನನ್ನ ಕರ್ತವ್ಯವೆಂದು ತಿಳಿದು, ನಿಮ್ಮ ಮುಂದೆ ನನ್ನ ಅನಿಸಿಕೆಗಳನ್ನು ಮುಂದಿಡಲು ಸಂತೋಷಿಸುತ್ತೇನೆ." ಎಂದು ತಮ್ಮ ಭಾಷಣವನ್ನು ಆರಂಭಿಸಿದ ಮೊಗಸಾಲೆ ಅವರು ಸುಮಾರು ಒಂದು ಗಂಟೆಗೂ ಮೀರಿ ತಮ್ಮ ಭಾಷಣವನ್ನು ಓದಿದರು. ತಮ್ಮ, ತಮ್ಮ ಊರಿನ ಸ್ವಂತ ವಿಚಾರಗಳನ್ನೂ ಪ್ರಸ್ತಾಪಿಸಿದರು.

ಮಂಜೇಶ್ವರದ ಗೋವಿಂದ ಪೈಗಳ ಊರಿನವರು ಮೊಗಸಾಲೆ. ಮೊಗಸಾಲೆ ಎನ್ನುವುದು ಆ ಪ್ರದೇಶದ ಒಂದು ಪುಟ್ಟ ಪ್ರದೇಶದ ಹೆಸರು. ಪೈ ಅವರಿಗೆ ಇಬ್ಬರು ತಾಯಂದಿರು. ಒಬ್ಬಾಕೆ ಅವರಿಗೆ ಜನ್ಮ ಕೊಟ್ಟ ಕೊಂಕಣಿ ತಾಯಿ: ಇನ್ನೊಬ್ಬಾಕೆ ಸಾಕಿ ಸಲುಹಿದ ಕನ್ನಡದ ತಾಯಿ. ತಾವು ಗೋವಿಂದ ಪೈಯವರಷ್ಟು ದೊಡ್ಡವರಲ್ಲವೆಂದು ಸಹಜ ವಿನಯದಿಂದ ಹೇಳಿಕೊಳ್ಳುವ ಮೊಗಸಾಲೆಯವರು ತಮಗೂ ಇಬ್ಬರು ತಾಯಂದಿರೆಂದು ಹೇಳಿಕೊಳ್ಳುತ್ತಾರೆ. ಹೆತ್ತ ತಾಯಿ ಮೊಗಸಾಲೆ. ತಲೆಗೆ ಕಿರೀಟವನ್ನಿಟ್ಟು ಎತ್ತಿ ಮುದ್ದಾಡುತ್ತಿರುವವಳು ಕಾಂತಾವರದ ತಾಯಿ. "ಉದ್ಯೋಗವನ್ನರಸಿ ಕಾಂತಾವರಕ್ಕೆ ಬಂದೆ. ಇಲ್ಲಿನ ಹೆಣ್ಣನ್ನು ನೋಡಿ ಮದುವೆಯಾದೆ. ಮೂವತ್ತೈದು ಸಂತಸದ ವಸಂತಗಳನ್ನು ಕಾಂತಾವರದಲ್ಲಿಯೇ ಕಂಡೆ. ನೂರು ಶರದೃತುಗಳನ್ನು ನೋಡುತ್ತೇನೋ ಇಲ್ಲವೋ;ಆದರೆ ನನ್ನೆಲ್ಲ ಶರದೃತುಗಳು ಕಾಂತಾವರಕ್ಕೇ ಮೀಸಲು.

"ಕಾರ್ಕಳ ಪರಿಸರದ ಈ ಪ್ರಕೃತಿ - ರುದ್ರ ರಮಣೀಯವಾದುದು. ಇಲ್ಲಿನ ಸೂರ್ಯೋದಯ.

ಚಂದ್ರೋದಯ, ವಸಂತ, ಶರದೃತುಗಳನ್ನು ನೋಡಲು ನಾಲ್ಕು ಕಣ್ಣುಗಳು ಬೇಕು. ಬೇಂದ್ರೆಯವರು ಹೇಳಿದಂತೆ 'ಇದು ಬರಿ ಬೆಳಗಲ್ಲೋ ಅಣ್ಣಾ!' ನಿಜ. ನಾನಿದನ್ನು ಎಷ್ಟೋ ಸಲ ಅನುಭವಿಸಿದ್ದೇನೆ. ನನ್ನ 'ಪ್ರಕೃತಿ' ಕಾದಂಬರಿಯಲ್ಲಿ ಈ ಪರಿಸರದ, ಮುಖ್ಯವಾಗಿ ಕಾಂತಾವರದ ಸಿರಿ ವೈದಾಳಿ ಬಂದಿದೆಯೆಂದು ವಿಮರ್ಶಕರು ಗುರುತಿಸಿದ್ದಾರೆ. ಸದ್ಯೋಭವಿಷ್ಯದಲ್ಲಿ ಬೆಳಕು ಕಾಣಲಿರುವ ನನ್ನ ಕವನ ಸಂಕಲನ 'ನೆಲದ ನೆರಳು'ವಿನಲ್ಲಿ ಕಾಂತಾವರ ನವಿಲಿನ ಹಾಗೆ ರೆಕ್ಕೆ ಬಿಚ್ಚಿ ನಿಂತಿದೆ" ಎಂದು ಮೊಗಸಾಲೆಯವರು ಪ್ರಕೃತಿಯ ಆಡುಂಬೊಲದಲ್ಲಿ ತಾವು ಎಳೆಯುತ್ತಿರುವ ಸಾಹಿತ್ಯ ಶಾರದೆಯ ತೇರನ್ನು ತೋರಿಸಿದ್ದಾರೆ.

"ಸಾಹಿತ್ಯವೆಂದರೆ ಹಿತದಿಂದ ಕೂಡಿದುದು ಎಂದೇ ಅರ್ಥ...ನಲ್ಲೆಯ ನಲ್ ನುಡಿ, ಮೆಲು ನುಡಿಯಂತೆ ಸಾಹಿತ್ಯವಿರುವುದರಿಂದ ಅದು ಕಾಂತಾಸಂಮಿತ– ಹೀಗೆಂದರು ಹಿರಿಯರು. ಸಾಹಿತ್ಯವನ್ನು 'ಮಾತೃಸಂಮಿತ' ಎಂದು ಏಕೆ ಕರೆಯಬಾರದು. ಏಕೆ ಗುರುತಿಸಬಾರದು? ಡಿವಿಜಿ., ಮಾಸ್ತಿ, ಗೋವಿಂದ ಪೈ, ಸೇಡಿಯಾಪು ಮೊದಲಾದವರ ಬರವಣಿಗೆ ಮಾತೃಸಂಮಿತವಾದುದು. 'ಮಂಕುತಿಮ್ಮನ ಕಗ್ಗ' ನನಗೆ ಆಪ್ತವಾಗಿರುವುದು ಹೀಗೆ. ಈ ಹಿರಿಯರೆಲ್ಲ ತಾವು ಒಪ್ಪದಿರುವುದನ್ನು ನಿರಾಕರಿಸುವಾಗ ವಿನಯದಿಂದ ನಡೆದುಕೊಳ್ಳುತ್ತಿದ್ದರು. ತನ್ನ ನಿಲುವಿನಿಂದ ಪ್ರತಿವಾದಿಗೆಲ್ಲಿ ನೋವು ಆಗುತ್ತದೋ ಎಂದು ಅವರ ಅಂತಃಕರಣ ಕರಗುತ್ತಿತ್ತು. ನಮ್ಮ ಇಂದಿನ ಅನೇಕ ಬರಹಗಾರರ ಬರವಣಿಗೆಯಲ್ಲಿ ಈ ಮಾರ್ದವವಿಲ್ಲ. ನನ್ನ ಸ್ನೇಹಿತರನೇಕರು ಪ್ರಗತಿಶೀಲ ಮನೋಭಾವದವರು ನಿಜ. ಅವರ ನಿಲುವು, ಒಲವಿನ ಬಗೆಗೆ ನನ್ನ ಆಕ್ಷೇಪವಿಲ್ಲ. ಬ್ರಾಹ್ಮಣರಿಂದ ಅಬ್ರಾಹ್ಮಣರ ಶೋಷಣೆಯಾಗಿದೆ ಎಂಬುದನ್ನು ಸಮರ್ಥಿಸುವ ಹುಮ್ಮಸ್ಸಿನಲ್ಲಿ ಈ ಮಿತ್ರರು, ಪ್ರಾತಃಸ್ಮರಣೀಯರಾದ ಡಿವಿಜಿ, ಮಾಸ್ತಿ ಮೊದಲಾದವರ ಬರಹಗಳೆಲ್ಲ ಪ್ರತಿಗಾಮಿ ಬರಹಗಳೆಂದು ಧಿಕ್ಕರಿಸುವುದನ್ನು ನಾನು ಒಪ್ಪಲಾರೆ. ಬ್ರಾಹ್ಮಣರಿಂದ ಅಬ್ರಾಹ್ಮಣರ ಶೋಷಣೆಯಾಗಿರುವುದು ನಿಜ. ಆದರೆ ಆ ಕಾರಣದಿಂದ ಬ್ರಾಹ್ಮಣ ಬರಹಗಾರರೆಲ್ಲ ಪ್ರತಿಗಾಮಿಗಳೆಂದು ಸರಳೀಕರಿಸುವುದು ಸರಿಯೇ? ಹಾಗೇ ಬ್ರಾಹ್ಮಣ ಬರಹಗಾರರು ಬಂಡಾಯ ಮನೋಧರ್ಮದಿಂದ, ದಲಿತ ಸಂವೇದನೆಯಿಂದ ಬರೆದಾಗಲೂ ಅದು ಬ್ರಾಹ್ಮಣ ಸಾಹಿತ್ಯವೆಂದು ಹಣೆಪಟ್ಟಿ ಅಂಟಿಸುವುದು ಯಾವ ನ್ಯಾಯ? ಗಾಂಧೀಜಿಯವರನ್ನೇ ಈಚೆಗೆ ಸನ್ಮಿತ್ರರೊಬ್ಬರು ವರ್ಣವ್ಯವಸ್ಥೆಯ ಪ್ರತಿಪಾದಕರೆಂದು ಆಪಾದಿಸಿದರು. ಗಾಂಧೀಜಿ ಹಿಂದೂ ಧರ್ಮವನ್ನು ಧಿಕ್ಕರಿಸಬೇಕಿತ್ತೆಂದು ಅವರ ವಾದ... ಈ ಧೋರಣೆಯ ಮಾನ್ಯ ಸಾಹಿತಿ ಮಿತ್ರರು ಮೊದಲು ಕುವೆಂಪು ಭಕ್ತರಾಗಿದ್ದರು. ಆಮೇಲೆ ಅವರಿಗೆ ಕುವೆಂಪು ಅವರಿಗಿಂತ ಕಾರಂತರಲ್ಲಿ ಭಕ್ತಿ ಹೆಚ್ಚಿತು. ಆಮೇಲೆ ಅವರಿಗೆ ಅವರೇ ಆದರ್ಶರೆನಿಸಿಕೊಂಡರು. ಮಾತ್ರವಲ್ಲ, ಸಾಹಿತಿ ಈ ದಿನ ರಾಕ್ಷಸನಾಗದಿದ್ದರೆ ಬದುಕುವುದು ಕಷ್ಟವೆಂದು ಅಪ್ಪಣೆ ಕೊಡಿಸಿದರು. "ಈತ ಬ್ರಾಹ್ಮಣ. ಈತನಿಗೆ ಈತನಕ ಯಾವುದೇ ಅಕಾಡೆಮಿಯ ಸದಸ್ಯತ್ವ ಅಥವಾ ಗೌರವ ಪ್ರಶಸ್ತಿ ಇನ್ನೂ ಬಂದಿಲ್ಲ. ಬರಬೇಕು ಎಂಬುದಕ್ಕಾಗಿಯೇ ಈತ ಹೀಗೆ ಗರ್ಜಿಸುತ್ತಿದ್ದಾರೆ" ಎಂದು ಅವರ ಮಾಜಿ ಸ್ನೇಹಿತರೊಬ್ಬರು ನನ್ನಲ್ಲಿ ದೂರಿಕೊಂಡರು" ಎಂದು ಮೊಗಸಾಲೆಯವರು ಹೇಳಿದರು. ಇದು ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಇಂದು ಕಾಣುತ್ತಿರುವ ಹಗಲು ವೇಷದ ಒಂದು ಮಾದರಿ!

ಇನ್ನೊಬ್ಬ ದಲಿತ ಲೇಖಕರು ತಮ್ಮ ಈಚಿನ ಕೃತಿಯೊಂದನ್ನು ಮೊಗಸಾಲೆಯವರಿಗೆ ಕೊಟ್ಟರಂತೆ. ಅದಕ್ಕೆ ಬ್ರಾಹ್ಮಣರಾದ ಶ್ರೇಷ್ಠ ಸಾಹಿತಿಯೊಬ್ಬರಿಂದ 'ಮುನ್ನುಡಿ' ಬರೆಸಿದ್ದರಂತೆ. ಇದಕ್ಕೆ ಕಾರಣವೇನು? ಎಂದು ಮೊಗಸಾಲೆ ಕೇಳಿದರಂತೆ. ಅದಕ್ಕೆ ಅವರು ಕೊಟ್ಟ ಉತ್ತರ ಆಶ್ಚರ್ಯಕರವಾಗಿದೆ. "ದಲಿತ ಲೇಖಕರಲ್ಲಿ ನಾನು ಮುನ್ನುಡಿ ಬರೆಸಿದರೆ ನಾನವರ ಪ್ರತಿಸ್ಪರ್ಧಿಯೆಂದು ವಸ್ತುನಿಷ್ಠವಾಗಿ ಕೃತಿವಿಮರ್ಶೆ ಮಾಡುವುದಿಲ್ಲ". ಆಮೇಲೆ ಆ ಕೃತಿಗೆ ರಾಷ್ಟ್ರಪ್ರಶಸ್ತಿ ಬಂತಂತೆ! ಅದು ಮುನ್ನುಡಿಕಾರರ ಶಿಫಾರಸ್ಸಿನಿಂದ ಬಂದಿರಬೇಕೆಂದು ಒಬ್ಬರು ಸಂಶಯಿಸಿದರಂತೆ! ಹೀಗಿದೆ ಇಂದಿನ ನಮ್ಮ ಸಾಹಿತ್ಯಿಕ ವ್ಯವಹಾರ. ಆದ್ದರಿಂದಲೇ ಮೊಗಸಾಲೆ ಹೇಳುತ್ತಾರೆ: "ಒಂದು ಕೃತಿಯ ಬಗೆಗೆ ವ್ಯಕ್ತವಾಗುವ ಉತ್ತಮ ಅಭಿಪ್ರಾಯ ಕೂಡ ನಿಜವೇ ಅಥವಾ ಕೃತಕವೇ ಎಂಬ ವಾತಾವರಣ ಸೃಷ್ಟಿಯಾಗಿದೆ. ಇದರಿಂದ ಸೃಜನಶೀಲ ಪ್ರತಿಭೆಗೆ ದೊಡ್ಡ ಆಘಾತವಾಗಿದೆ. ಮುನ್ನುಡಿ ಬೆನ್ನುಡಿಗಳನ್ನೆಲ್ಲ ನಾವು ಸಂಶಯದಿಂದ ನೋಡುವಂತಾಗಿದೆ. ಇದಕ್ಕೆ ನಾವೆಲ್ಲ ಏಕೆ ಕಾರಣರಾಗುತ್ತಿದ್ದೇವೆ ಎಂಬುದನ್ನು ನಾವು ಯಾವುದೇ 'ಇಸಂ' ಅಥವಾ ಪಂಥ ಪಂಗಡಕ್ಕೆ ಒಳಗಾಗದೆ, ವಿಮರ್ಶಿಸಿಕೊಳ್ಳಬೇಕೆಂದು ನನ್ನ ಗೆಳೆಯರಲ್ಲಿ ವಿನಂತಿಸಿಕೊಳ್ಳುತ್ತಿದ್ದೇನೆ."

ನಮ್ಮ ಸಾಹಿತಿಗಳನೇಕರ ಪ್ರಾಮಾಣಿಕತೆಯ ಬಗಗೆ, ನೈತಿಕತೆಯ ಬಗೆಗೆ ಮೊಗಸಾಲೆಯವರು ಕೆದಕುತ್ತಾರೆ! ಎರಡು ಅವಧಿಗೆ ನಾಟಕ ಅಕಾಡೆಮಿಯ ಸದಸ್ಯರಾಗಿದ್ದು, ಆಮೇಲೆ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ನಂತರ ಈಗ ಪ್ರಾಧಿಕಾರವೊಂದರ ಸದಸ್ಯರಾಗಿರುವ ಸನ್ಮಿತ್ರರೊಬ್ಬರ ಬಗೆಗೆ ಹೇಳುತ್ತಾರೆ;"ವೃತ್ತಿಯಲ್ಲಿ ಅಧ್ಯಾಪಕರೂ ಆಗಿರುವ ಅವರ ಪ್ರಾಮಾಣಿಕತೆ ಹೇಗಿದೆಯೆಂದರೆ, ಅವರು ಇರುವ ಊರಿನಿಂದ ಬೇಂಗಳೂರಿಗೆ ಹೋಗಲು ತಗಲುವ ವೆಚ್ಚ ಇನ್ನೂರಕ್ಕೂ ಕಡಿಮೆ. ಆದರೆ ಅವರು ರೈಲಿನಲ್ಲಿ ಮದ್ರಾಸಿಗೆ ಹೋಗಿ ಅಲ್ಲಿಂದ ಬೆಂಗಳೂರಿಗೆ ಬಂದೆನೆಂದು ದಾಖಲಿಸಿ ಸಾವಿರದಷ್ಟು ರೂಪಾಯಿ ಪ್ರಯಾಣ ವೆಚ್ಚ ಪಡೆಯುತ್ತಾರೆ! ಕಳೆದ ಹನ್ನೆರಡು ವರ್ಷಗಳಿಂದ ಇವರ ಕನ್ನಡದ ಸೇವೆ ಹೀಗೆಯೇ ಇದೆ."

ಇನ್ನೊಬ್ಬರು ಇವರಿಗಿಂತ ಹಿರಿಯರು. ಹುಟ್ಟು ಹೋರಾಟಗಾರರು. ಮೊಗಸಾಲೆಯವರ ಜತೆಗೇ ದಸರಾ ಕವಿಗೋಷ್ಠಿಯಲ್ಲಿ ಭಾಗವಹಿಸಿದ್ದಾಗ ಬಸ್ ಪ್ರಯಾಣ ದರವನ್ನು ತಿರಸ್ಕರಿಸಿ ಕಾರಿನ ವೆಚ್ಚವನ್ನು ಕೊಡಬೇಕೆಂದು ಹಠ ಮಾಡಿದರು. ಬಳ್ಳಾರಿ ಸ್ನೇಹಿತರೊಬ್ಬರು ಒಮ್ಮೆ ಕೇಳಿದರಂತೆ "ನೀವೇಕೆ ಅಕಾಡೆಮಿಯ ಸದಸ್ಯತ್ವಕ್ಕಾಗಿ ಮೊಯಿಲಿಯವರನ್ನು ಹಿಡಿಯಲಿಲ್ಲ? ಅಕಾಡೆಮಿಯ ಪ್ರಶಸ್ತಿ ಪಡೆಯುವುದಕ್ಕಿಂತ ಸದಸ್ಯತ್ವವನ್ನು ಗಿಟ್ಟಿಸುವುದೇ ಮೇಲು". ಹೌದು ಅವರು ಕೇಳಿದ್ದು ಸರಿ. ಯಾಕೆಂದರೆ ಮೊಯಿಲಿಯವರು ಮೊಗಸಾಲೆಯವರ ಪರಿಚಿತರು. ಅದೇ ಊರಿನವರು! ಹೀಗಿದೆ ನಮ್ಮ ಸಾಹಿತ್ಯಿಕ ಸಂಸ್ಥೆಗಳ ಟಿ.ಎ, ಡಿ.ಎ.ಗಳ ಕಥೆ! ಪ್ರಶಸ್ತಿಗಳ ಕಥೆ ಇನ್ನೊಂದು ತೆರವಾಗಿದೆ!

"ಪ್ರಶಸ್ತಿ ಎನ್ನುವುದು ಗುರುತಿಸುವಿಕೆಯ ಗೌರವವೆಂದು ನನ್ನ ಅಭಿಪ್ರಾಯ. ಯಾವುದೇ ಕೃತಿ ಪ್ರಶಸ್ತಿಯಿಂದ ದೊಡ್ಡದಾಗುವುದಿಲ್ಲ. ಪ್ರಶಸ್ತಿ ಬಾರದೆ ಹೋದಾಗ ಸಣ್ಣದಾಗುವುದೂ ಇಲ್ಲ. ಕೃತಿಯ ಯೋಗ್ಯತೆ ಅಳೆಯಲು ಪ್ರಶಸ್ತಿ ಮಾನದಂಡವೂ ಅಲ್ಲ. ಆದರೂ ಮನುಷ್ಯ ಹುಟ್ಟಿನಿಂದ ಇನ್ನೊಬ್ಬರ ಮೆಚ್ಚುಗೆ ನಿರೀಕ್ಷಿಸುತ್ತಾನೆ. ಪ್ರಶಸ್ತಿ ಒಂದು ಸಾರ್ವಜನಿಕ ಮೆಚ್ಚುಗೆ.

ಇದರಿಂದ ಲೇಖಕನಿಗೆ ಧನ್ಯತೆ ಬರುತ್ತದೆ" ಎಂದು ಅಭಿಪ್ರಾಯ ಪಡುವ ಮೊಗಸಾಲೆಯವರು ಈಗ ಕನ್ನಡದಲ್ಲಿ ಅಗಣಿತವಾಗಿರುವ ಪ್ರಶಸ್ತಿಗಳ ಒಳರಾಜಕೀಯವನ್ನು ಕುರಿತೂ ಸಾಕಷ್ಟು ಹೇಳಿದ್ದಾರೆ. ಅವರು "ಪ್ರಶಸ್ತಿಯು ಯಾವಾಗಲೂ ಪಾರದರ್ಶಕ ವಾಗಿರಬೇಕು." ಎಂಬ ನಿಲುವಿನವರು.

"ನಮ್ಮ ಸಾಹಿತಿಗಳೇನಕರಿಗೆ ಪ್ರಶಸ್ತಿಯ ವ್ಯಾಮೋಹ ನಾಚಿಕೆಪಡುವಷ್ಟಿದೆ" ಎಂದು ವಿಷಾದಿಸುತ್ತಾರೆ. ನನಗೆ ಪ್ರಶಸ್ತಿ ಕೊಡಿಸಿ ಎಂದು ಸನ್ಮಿತ್ರರೊಬ್ಬರು ವರ್ಧಮಾನ ಪ್ರಶಸ್ತಿ ಪೀಠದ ಪದಾಧಿಕಾರಿಗಳ ಮನೆ ಬಾಗಿಲುಗಳನ್ನು ತಟ್ಟಿದ್ದಲ್ಲದೆ, ನನ್ನ ವಿರುದ್ಧವಾಗಿ ಪತ್ರಿಕೆಗಳಿಗೂ ಬರೆದರು. "ತಮ್ಮ ಪತ್ನಿ ತಹಶೀಲ್ದಾರರೆಂದೂ ಅವರು ಕಾರ್ಕಳಕ್ಕೆ ವರ್ಗವಾಗಿ ಬಂದರೆ ನಿಮ್ಮನ್ನು ನೋಡಿಕೊಳ್ಳುತ್ತಾರೆಂದೂ ಭೂಗತ ದೊರೆಗಳ ಹಾಗೆ ಬೆದರಿಸಿದರು" ಎಂಬ ಮಾತನ್ನು ಹೇಳಿದ್ದಾರೆ! ನನ್ನ ಪುಸ್ತಕಕ್ಕೆ ಪ್ರಶಸ್ತಿ ಬರಬೇಕಾದರೆ ಇಂಥವರನ್ನು ಆಯ್ಕೆ ಸಮಿತಿ ಸದಸ್ಯರನ್ನಾಗಿ ಮಾಡಿ ಎಂದು ಕೇಳುವವರೂ ಇದ್ದಾರೆ! ಇನ್ನೊಬ್ಬರು ಪ್ರಶಸ್ತಿಯ ಗೌರವಧನ ಪೂರ್ತಿಯಾಗಿ ನಿಮಗೇ ಕೊಡುತ್ತೇನೆ. ನನಗೆ ಪ್ರಶಸ್ತಿ ಪತ್ರ ಮಾತ್ರ ಸಾಕು ಎಂದರಂತೆ ! ಇನ್ನೂ ಬಗೆ ಬಗೆಯ ಪ್ರಶಸ್ತಿ ನಾಟಕಗಳನ್ನು ಮೊಗಸಾಲೆಯವರು ವಿವರಿಸಿದ್ದಾರೆ: ಒಟ್ಟಿನಲ್ಲಿ ಇಂದಿನ ಸಾಹಿತ್ಯ ಲೋಕಕ್ಕೆ ಕನ್ನಡಿ ಹಿಡಿದಿದ್ದಾರೆ. ನಮ್ಮ ಅಧೋಗತಿಗೆ ಚಿಂತಿಸಿದ್ದಾರೆ.

---

ಸುಧಾ, 6 ಜನವರಿ 2000

O



# ಕಾಂತಾವರ ಕನ್ನಡ ಸಂಘ ; ಕನ್ನಡ ಪರಿಚಾರಿಕೆಗೆ ಒಂದು ಮಾದರಿ

ಬೆಳುವಾಯಿ ಸೀತಾರಾಮ ಆಚಾರ್ಯ

ನಗರದ ಸದ್ದುಗದ್ದಲಗಳಿಂದ ದೂರ ನಿಂತ, ಸಾಹಿತ್ಯದಲ್ಲಿ ಆಸಕ್ತಿ ಇದ್ದರೂ ಅದಕ್ಕೆ ಸ್ಪಂದಿಸಲು ಅನುಕೂಲ ಇಲ್ಲದ ಗ್ರಾಮಾಂತರ ಪ್ರದೇಶದ ಸಹೃದಯಿಗಳನ್ನು ತಲುಪುವ ಉದ್ದೇಶದಿಂದ ನಾಡಿನಲ್ಲೇ ಮೊತ್ತಮೊದಲ ಬಾರಿಗೆ ಪಂಚಗ್ರಾಮಗಳ (ಬೆಳುವಾಯಿ, ಕಾಂತಾವರ, ಬೋಳ, ಕೆದಿಂಜೆ, ಸಂದಳಿಕೆ) ಆಶ್ರಯದಲ್ಲಿ ಕಾಂತಾವರ ಕನ್ನಡ ಸಂಘವು 1976ರಲ್ಲಿ ಜನ್ಮ ತಾಳಿತು.

ಮೂಡುಬಿದ್ರೆಯಿಂದ ಕಾರ್ಕಳಕ್ಕೆ ಹಾದುಹೋಗುವ ರಸ್ತೆಯಲ್ಲಿ ಬೆಳುವಾಯಿ ಎಂಬ ಒಂದು ಸಣ್ಣ ಪೇಟೆಯಿದೆ. ಅಲ್ಲಿಂದ ಪಶ್ಚಿಮಕ್ಕೆ ನಾಲ್ಕು ಕಿ.ಮೀ. ದೂರದಲ್ಲಿ ಕಾಂತಾವರವಿದೆ. ಈ ಗ್ರಾಮದ ಕೇಂದ್ರದಲ್ಲಿ ಗುರುಕುಲ ಮಾದರಿಯ ಅಪೂರ್ವ ಶಿಕ್ಷಣ ನೀಡುತ್ತಿರುವ ರಾಷ್ಟ್ರ ಪ್ರಶಸ್ತಿ ಪುರಸ್ಕೃತ ಒಂದು ಖಾಸಗಿ ಶಾಲೆಯಿದೆ. ಅದು ಬೇಲಾಡಿ ಶಾಲೆಯೆಂದು ಈ ಪರಿಸರಕ್ಕೆ ಪ್ರಸಿದ್ಧಿಯನ್ನು ತಂದುಕೊಟ್ಟಿದೆ. ಈ ಶಾಲೆಯನ್ನು ಕೇಂದ್ರವಾಗಿಟ್ಟುಕೊಂಡು ಹುಟ್ಟಿದ ಕಾಂತಾವರ ಕನ್ನಡ ಸಂಘವು ಕಾವ್ಯವಲಯದಲ್ಲಿ ಪ್ರತಿಷ್ಠಿತವಾದ ಮುದ್ದಣ ಕಾವ್ಯ ಪ್ರಶಸ್ತಿಯಿಂದ ನಾಡಿನಾದ್ಯಂತ ಪ್ರಸಿದ್ಧವಾಗಿರುವುದು ಗ್ರಾಮಾಂತರ ಪ್ರದೇಶದಲ್ಲಿ ಅರಳಿದ ಒಂದು ಸಾಂಸ್ಕೃತಿಕ ಇತಿಹಾಸ.

ಈ ಗ್ರಾಮಾಂತರ ಸಂಘದ ವೈಶಿಷ್ಟ್ಯವೆಂದರೆ ಅದರ ಪ್ರಾರಂಭದ ದಿನಗಳಲ್ಲಿ ಪರಿಸರದ ಎಲ್ಲಾ ಶಾಲೆಗಳಲ್ಲಿ ಪ್ರತಿ ಎರಡು ತಿಂಗಳಿಗೊಮ್ಮೆ ಸಾಹಿತ್ಯೋಪನ್ಯಾಸ ಕಾರ್ಯಕ್ರಮಗಳನ್ನು ಏರ್ಪಡಿಸಿ ಕನ್ನಡ ಸಾಹಿತ್ಯದ ವಿವಿಧ ಮುಖಗಳನ್ನು ಪರಿಚಯಿಸಿದ್ದು. ಹಳಗನ್ನಡ ಸಾಹಿತ್ಯದಿಂದ ಹಿಡಿದು ಆಗ ಉಚ್ಛ್ರಾಯ ಸ್ಥಿತಿಯಲ್ಲಿದ್ದ ನವ್ಯ ಸಾಹಿತ್ಯದವರೆಗೆ ಈ ಉಪನ್ಯಾಸಗಳು ಜನರನ್ನು ಆಕರ್ಷಿಸಿದುವು. ಈ ಹಿನ್ನೆಲೆಯಲ್ಲಿ ಸಂಘವು ಜನರ ಅರಿವನ್ನು ಇನ್ನೂ ಹೆಚ್ಚಿಸಲು ಉಪನ್ಯಾಸ ಮಾಲಿಕೆಯನ್ನು ಮೀರಿ ವಿಚಾರಗೋಷ್ಠಿಯ ಕಡೆಗೆ ತನ್ನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿ ಈ ಗ್ರಾಮಾಂತರ ಪ್ರದೇಶಗಳ ಜೊತೆಗೆ ದ.ಕ. ಜಿಲ್ಲೆಯ ವಿವಿಧೆಡೆಗಳಲ್ಲಿ ಕಾರ್ಯಕ್ರಮಗಳನ್ನು ಏರ್ಪಡಿಸಿ ಸಾರ್ಥಕ್ಯ ಪಡೆಯಿತು.

ಹೀಗೆ ಪೇಟೆ ಪಟ್ಟಣಗಳಿಗೆ ಸೀಮಿತವಾಗಿದ್ದ ಸಾಹಿತ್ಯಿಕ ಸಂವಾದವನ್ನು ರಾಜ್ಯಮಟ್ಟದಲ್ಲೇ ಗ್ರಾಮಾಂತರ ಪ್ರದೇಶಕ್ಕೆ ತಂದ ಪ್ರಥಮ ದಾಖಲೆ ಈ ಸಂಘದ್ದು. ನಾಡುನುಡಿಗೆ ಅಪರೂಪದ ಘನತೆ ತಂದ ಮರೆಯಬಾರದ ಹಿರಿಯ ಸಾಹಿತಿಗಳ ಸಾಹಿತ್ಯವನ್ನು ಜನ ಮರೆಯಬಾರದು

ಎಂದು ಅಂಥ ಸಾಹಿತಿಗಳ ಸಾಹಿತ್ಯ ವಿಚಾರಗೋಷ್ಠಿಗಳನ್ನು ನಡೆಸಿದ ಅನೇಕ ದಾಖಲೆಯೂ ಇದಕ್ಕಿದೆ.

ಗೋವಿಂದ ಪೈ ಶತಮಾನೋತ್ಸವ ಸಂದರ್ಭದಲ್ಲಿ ಪೈ ಸಾಹಿತ್ಯ ವಿಚಾರಗೋಷ್ಠಿಗೆ ರಾಜ್ಯದಲ್ಲೇ ಇದು ಮೊದಲು ನಾಂದಿ ಹಾಡಿತು. ಯಶವಂತ ಚಿತ್ತಾಲ, ಕಯ್ಯಾರ ಕಿಞ್ಞಣ್ಣರೈ, ಸೇಡಿಯಾಪು ಕೃಷ್ಣ ಭಟ್, ಕಡೆಂಗೋಡ್ಲು ಶಂಕರ ಭಟ್, ಪಾ.ವೆಂ.ಆಚಾರ್ಯ, ಎಂ.ಎನ್.ಕಾಮತ್, ಟಿ.ಪಿ.ಕೈಲಾಸಂ, ಸಾಂತ್ಯಾರು ವೆಂಕಟರಾಜರೇ ಮೊದಲಾದ ಖ್ಯಾತನಾಮರ ಸಾಹಿತ್ಯ ವಿಚಾರಗೋಷ್ಠಿಗಳು ನಾಡಿನಲ್ಲೇ ಪ್ರಥಮ ಬಾರಿಗೆ ಎನ್ನುವಂತೆ ಈ ಕನ್ನಡ ಸಂಘದ ಆಶ್ರಯದಲ್ಲಿ ನಡೆಯಿತು. "ನಾನೇಕೆ ಬರೆಯುತ್ತೇನೆ?" ಎಂಬ ಅಪರೂಪದ ಸಾಹಿತ್ಯಿಕ ಸಂವಾದವನ್ನು ಸಂಘವು ಏರ್ಪಡಿಸಿದ್ದು ನಾಡಿನ ಬಹುತೇಕ ಮುಸ್ಲಿಂ ಲೇಖಕರು ಇದರಲ್ಲಿ ತಮ್ಮ ಅನಿಸಿಕೆಗಳನ್ನು ನೀಡಿದುದು ಒಂದು ಹೆಗ್ಗಳಿಕೆ. ಸಾಕ್ಷರತಾ ಆಂದೋಲನವನ್ನು ಕವಿಗೋಷ್ಠಿಯ ಮೂಲಕ ಸಾಕ್ಷೀಕರಿಸಲು ಸಾಧ್ಯ ಎಂದೂ ಇದು ತೋರಿಸಿದೆ. 1981ರಲ್ಲಿ ಹೊಸಗನ್ನಡ ಕಾವ್ಯದ ಕವಲುಗಳು ಒಲವುಗಳು – ನಿಲುವುಗಳು ಎಂಬ ಅಪರೂಪದ ವಿಚಾರಸಂಕಿರಣವನ್ನು ಎಡೆಬಿಡದೆ ಮೂರು ದಿನ ನಡೆಸಿ ಸಾಹಿತ್ಯ ಸಮ್ಮೇಳನದ ಪರಿಸರವನ್ನು ಈ ಪ್ರದೇಶದ ಜನರಿಗೆ ಮನಗಾಣಿಸಿತು.

ಈ ಸಂಘವು ಪ್ರಥಮವಾಗಿ ಪ್ರಕಟಿಸಿದ 'ದ.ಕ. ಕಾವ್ಯ 1900–1976' ಎಂಬ ಕಾವ್ಯ ಸಂಪುಟ ಇಂದಿಗೂ ಮಹತ್ವದ್ದಾಗಿಯೇ ಉಳಿದಿದೆ. ಪಂಜೆಯವರಿಂದ ಮೊದಲ್ಗೊಂಡು ಸತ್ಯನ್ ದೇರಾಜೆಯವರೆಗೆ ಈ 75 ವರ್ಷಗಳಲ್ಲಿ ಕಾವ್ಯದ ವಿವಿಧ ಮಜಲುಗಳನ್ನು ದಾಖಲಿಸುವ ದ.ಕ.ದ 42 ಕವಿಗಳ ಕವನಗಳು ಇದರಲ್ಲಿವೆ. ಇದು ಕೇರಳದ ಕಲ್ಲಿಕೋಟೆ ವಿಶ್ವವಿದ್ಯಾನಿಲಯದ ಎಂ.ಎ.ತರಗತಿಗೆ ಪಠ್ಯಪುಸ್ತಕವಾಗಿ ಮಾನ್ಯವಾಗಿರುವುದು ಉಲ್ಲೇಖಾರ್ಹ.

ಸಂಘವು ಹಿರಿಯ ಕವಿಗಳಾದ ಸು.ರಂ.ಎಕ್ಕುಂಡಿಯವರ "ಬೆಳ್ಳಕ್ಕಿಗಳು", ಶ್ರೀ ಬನ್ನಂಜೆ ಗೋವಿಂದಾಚಾರ್ಯರ "ಹೇಳದೇ ಉಳಿದದ್ದು", ಯು.ಕೆ.ವಿ ಆಚಾರ್ಯ ಅವರ "ವಸುಂಧರಾ" ಮತ್ತು ಆರ್. ರಾಮಚಂದ್ರ ಪೈಯವರ ಕವನ ಸಂಕಲನ "ಕನಸುಗಳೇ ಬನ್ನಿ" ಮುಂತಾದ ಕವನ ಸಂಕಲನಗಳನ್ನು ಹೊರತಂದಿದ್ದು ಪ್ರಕಾಶನ ಕ್ಷೇತ್ರಕ್ಕೂ ಗಣನೀಯ ಕೊಡುಗೆ ನೀಡಿದೆ.

ಕನ್ನಡ ಸಂಘಕ್ಕೆ ಆಶ್ರಯ ನೀಡಿದ ನಂದಳಿಕೆಯ ಸಾಹಿತ್ಯಾಸಕ್ತರ ಔದಾರ್ಯಕ್ಕಾಗಿ ನಂದಳಿಕೆಯಲ್ಲಿ ಹುಟ್ಟಿದ ಕವಿಶ್ರೇಷ್ಠ ಮುದ್ದಣನ ಹೆಸರಿನಲ್ಲಿ 1978ರಿಂದ ಅಖಿಲ ಕರ್ನಾಟಕ ಮಟ್ಟದಲ್ಲಿ ಕಾವ್ಯಸ್ಪರ್ಧೆಯನ್ನು ಸಂಘವು ಪ್ರಾರಂಭಿಸಿತು. ಇದಕ್ಕೆ ಆರ್ಥಿಕ ನೆರವು ನೀಡಿದವರು ದಿ.ನಿಟ್ಟೆ ಕೆಮ್ಮಣ್ಣು ನಾರಾಯಣರಾಯರ ಬಂಧುಗಳು. ಪ್ರಶಸ್ತಿಯ ಗೌರವ ಸಂಭಾವನೆಯನ್ನು ರೂಪಾಯಿ 500 ರಿಂದ 1500ಕ್ಕೆ ಈಗ ಹೆಚ್ಚಿಸಲಾಗಿದ್ದು, ಈ ಮೊತ್ತವನ್ನು ದ.ಕ. ಜಿಲ್ಲಾ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಹರಿಕೃಷ್ಣ ಪುನರೂರು ಅವರೇ ನೀಡಿ ತಮ್ಮ ಔದಾರ್ಯವನ್ನು ಮೆರೆದಿದ್ದಾರೆ. ಪ್ರತೀ ವರುಷವೂ ಈ ಸ್ಪರ್ಧೆಯಲ್ಲಿ ನಾಡಿನಾದ್ಯಂತ ಐವತ್ತಕ್ಕೂ ಮಿಕ್ಕಿ ಹಿರಿಕಿರಿಯ ಕವಿಗಳು ಭಾಗವಹಿಸುತ್ತಿರುವುದು ಈ ಪ್ರಶಸ್ತಿಯ ಪ್ರತಿಷ್ಠೆಗೆ ಸಾಕ್ಷಿ.

ಶ್ರೀ ಆನಂದ ಜಂಝುರವಾಡ, ಶ್ರೀ ಕೃಷ್ಣ ಚೆನ್ನಂಗೋಡು, ಶ್ರೀ ರಾಮದಾಸ್, ಸು.ರಂ. ಎಕ್ಕುಂಡಿ, ಶ್ರೀ ಯು.ಕೆ.ವಿ. ಆಚಾರ್ಯ, ಶ್ರೀ ವೇಣುಗೋಪಾಲ ಕಾಸರಗೋಡು, ಶ್ರೀ ಎಚ್.

ಡುಂಡಿರಾಜ್, ಶ್ರೀ ಶ್ರೀಶದೇವ ಪೂಜಿತ್ತಾಯ, ಶ್ರೀ ಹೊರೆಯಾಲ ದೊರೆಸ್ವಾಮಿ, ಡಾ.ಪಿ.ಎಸ್.ರಾಮಾನುಜಂ, ಶ್ರೀ ಮಹಾಬಲ ಮೂರ್ತಿ ಕೊಡ್ಲಕೆರೆ, ಶ್ರೀಮತಿ ಪ್ರತಿಭಾ ನಂದಕುಮಾರ್, ಶ್ರೀ ಸ.ರಘುನಾಥ ಮತ್ತು ಶ್ರೀಮತಿ ಎಂ.ಆರ್.ಕಮಲ ಈ ಹದಿನಾಲ್ಕು ಮಂದಿ ಈ ತನಕದ ಮುದ್ದಣ್ಣ ಕಾವ್ಯ ಪ್ರಶಸ್ತಿ ಪುರಸ್ಕೃತರು. ನಾಡು ನುಡಿಗೆ ವಿಶೇಷ ಸೇವೆ ಸಲ್ಲಿಸಿದ ಹಿರಿಯರನ್ನು ಗೌರವಿಸುವುದು ಸಂಘಧ ಮುಖ್ಯ ಉದ್ದೇಶಗಳಲ್ಲೊಂದು. ಅಂತೆಯೇ ಸಾಹಿತ್ಯದ ಸಾಧನೆಗಾಗಿ ಕಯ್ಯಾರ ಕಿಞ್ಞಣ್ಣ ರೈ, ಸೇಡಿಯಾಪು ಕೃಷ್ಣ ಭಟ್, ಸಾಂತ್ಯಾರು ವೆಂಕಟರಾಜ, ಪ್ರೊ.ಎಂ.ರಾಜಗೋಪಾಲಾಚಾರ್ಯ ಮೊದಲಾದವರನ್ನು ಸನ್ಮಾನಿಸಿದೆ. ವೈದ್ಯಕೀಯ ಕ್ಷೇತ್ರದ ಡಾ.ಕಿದಿಯೂರು ಗುರುರಾಜ ಭಾಗವತ ಹಾಗೂ ಶಿಕ್ಷಣ ಕ್ಷೇತ್ರದ ಪಂಜಾಜೆ ಶಂಕರಭಟ್ಟ, ಕಲ್ಮಂಜೆ ಗೋಪಾಲಕೃಷ್ಣ ಉಪಾಧ್ಯಾಯ ಮೊದಲಾದವರನ್ನು ಗೌರವಿಸಿದೆ.

ಸಂಘದ ಸ್ಥಾಪನೆಯಾದಂದಿನಿಂದ ಕವಿ, ಸಾಹಿತಿ ಡಾ.ನಾ.ಮೊಗಸಾಲೆಯವರು ಖಾಯಂ ಅಧ್ಯಕ್ಷರಾಗಿದ್ದು ನಂದಳಿಕೆ ಬಾಲಚಂದ್ರರಾವ್, ಕಾಂತಾವರ ಜಯರಾಮ ಕಾರಂತ, ವಿಠಲ ಬೇಲಾಡಿ, ಬೆಳುವಾಯಿ ಸೀತಾರಾಮ ಆಚಾರ್ಯ, ಗಣಪತಿ ಭಟ್ ನ್ಯಾಯತೋಟ ಮೊದಲಾದವರು ಸಂಘದ ವಿವಿಧ ಪದಾಧಿಕಾರಿಗಳಾಗಿ ಸೇವೆ ಸಲ್ಲಿಸಿ ಸಂಘದ ಯಶಸ್ಸಿಗೆ ಕಾರಣೀಭೂತರಾಗಿದ್ದಾರೆ.

ಇಂತಹ ಪ್ರಯತ್ನಗಳು ಪ್ರತಿ ಗ್ರಾಮಾಂತರ ಪ್ರದೇಶದಲ್ಲಿ ನಡೆದರೆ ನಾವು ಸರಕಾರಕ್ಕೆ ಕನ್ನಡವು ಆಡಳಿತ ಭಾಷೆಯಾಗಬೇಕೆಂದು ಒತ್ತಡ ತರುವ ಅವಶ್ಯಕತೆಯೇ ಬಾರದೋ ಏನೋ. ಆದರೆ ಇಂತಹ ಪ್ರಯತ್ನಕ್ಕೆ ನಮ್ಮ ಜನ ಎಂದು ಮುಂದಾದಾರು? ಕಾಂತಾವರ ಕನ್ನಡ ಸಂಘದ ಚಟುವಟಿಕೆಗಳು ಇತರೆಡೆಗಳಲ್ಲಿ ಇಂತಹ ಪ್ರಯತ್ನಕ್ಕೆ ಪ್ರೇರಕವಾದರೆ ಸಂಘಕ್ಕೆ ಇದಕ್ಕಿಂತ ದೊಡ್ಡ ಹೆಮ್ಮೆ ಬೇರೆ ಏನಿದೆ?

ಸುಧಾ, 4 ಜನವರಿ 1993

o

# ಕನ್ನಡ ಭವನವಾದ ಬಾರಾಡಿ ಬೀಡು ಮತ್ತು ಕಾಂತಾವರ

ಶಾಂತಾರಾಮ ಸೋಮಯಾಜಿ

ಕಾರ್ಕಳ–ಮೂಡಬಿದಿರೆ ಸಮೀಪದ ಕಾಂತಾವರ ಎಂಬ ಗಟ್ಟಿ ಮೈಕಟ್ಟಿನ, ಸೌಮ್ಯ ಅಂತರಂಗದ ಒಂದು ಗ್ರಾಮದ ಕಾಂತೇಶ್ವರ ದೇವಸ್ಥಾನದ ಹೊರಾಂಗಣದ ಓಂಬದಿಯ ಇಳುಕಲಿನಿಂದ ಎದ್ದು ನಿಂತಿವೆ, ಎರಡು ದೈತ್ಯಗಾತ್ರದ, ಗಂಟುಗಂಟು ಎದೆಯ ಸಂಪಿಗೆ ಮರಗಳು. ಅವನ್ನು ಕಂಡಾಗ, ಮೊನ್ನೆ ಮೊನ್ನೆ, ಎಂದರೆ ಕೆಲ ತಿಂಗಳ ಹಿಂದೆ, ತೈವಾನಿನ ಯೂನಿವರ್ಸಿಟಿಯೊಂದರ ಕ್ಯಾಂಪಸ್ಸಿನಲ್ಲಿ ನಾನು ನೋಡಿದ, ನನ್ನಷ್ಟೇ ತೆಳುಕಾಯದ ಸಂಪಿಗೆ ಗಿಡಗಳು ನೆನಪಿಗೆ ಬಂದು, ಅಬ್ಬಾ, ಇವಕ್ಕೆ ಐನೂರು ವರ್ಷಗಳ ಮೇಲಾಗಿರಬೇಕು ಎಂದುಕೊಂಡೆ.

ಸುತ್ತಮುತ್ತ ಹುಲ್ಲು, ಹಸಿರು, ರಂಗು, ಆಕಾಶ, ಭ್ರಮೆ, ಸ್ಫೂರ್ತಿ – ಇವಿಷ್ಟು ಬಿಟ್ಟು ಬೇರೇನೂ ಕಾಣಿಸದ ಈ ಹಳ್ಳಿ ಮೂಲೆಯಲ್ಲಿ ಮತ್ತೇನು ವಿಶೇಷವಿದೆ? ಸೊಗಸಿದೆ, ಹೌದು, ಶಾಂತಿಯಿದೆ; ಕೆಂಪು ಕೆಂಪು ಮಣ್ಣಿದೆ; ಅಜ್ಜ–ಮುತ್ತಜ್ಜರ ಕಾಲದ ಸಂಪಿಗೆ ಮರವಿದೆ; ಇತಿಹಾಸವಿದೆ;ಸ್ವಾತಂತ್ರ್ಯ ಹೋರಾಟದ ನೆನಪಿದೆ; ಬಯಲಾಟದ ಚಂಡೆ ಸಪ್ಪಳವಿದೆ; ಹೌದು, ಇವೆಲ್ಲಾ ಇದೆ. ಮತ್ತೇನಿದೆ?... ಮತ್ತೆ ಒಬ್ಬರು ನಾರಾಯಣ ಭಟ್ಟ ಎಂಬ ಹೆಸರಿನ ನಿವೃತ್ತ ಆಯುರ್ವೇದ ಡಾಕ್ಟರ್ ಇದ್ದಾರೆ.

ನಿವೃತ್ತ ಡಾಕ್ಟರ್‌ರದ್ದೇನು ವಿಶೇಷ? ನಿವೃತ್ತ ಆದ್ರ, ಆಗದಿದ್ದರ, ಡಾಕ್ಟರ್‌ರದ್ದೇನು ವಿಶೇಷವಪ್ಪಾ? ವಿಶೇಷವಿರುವುದು, ಆ ಡಾಕ್ಟರರು ನಾ.ಮೊಗಸಾಲೆ ಎಂಬ ಪ್ರಸಿದ್ಧ ಕವಿ–ಕಾದಂಬರಿಕಾರರಾಗಿದ್ದುದರಿಂದ. ಅದಲ್ಲದೆ ಕನ್ನಡದಲ್ಲಿ ವೈದ್ಯ–ವಿಜ್ಞಾನಕ್ಕೆ ಅವರು ಸಾಕಷ್ಟು ಕೊಡುಗೆ ನೀಡುತ್ತಿರುವುದರಿಂದ ಮತ್ತು ಅವರ ಸೌಜನ್ಯ ಮರೆಯಲಾಗದಿರುವುದರಿಂದ.

ಸುಮಾರು ಅಷ್ಟೇನೂ ಎತ್ತರವಿರದ, ಸಾಧಾರಣ ಮೈಕಟ್ಟಿನ, ಬೊಗಸೆ ಮೋರೆಯ, ಉರುಟು ಕುಂಕುಮದಂತಹ ಸ್ಪಷ್ಟ ಕಣ್ಣುಗಳ, ಹಸಿರು ನಗುವಿನ ಮತ್ತು ಈಗಷ್ಟೇ ಅರವತ್ತು ವರ್ಷದ 'ಹಳಬ'ರಾದ ಮೊಗಸಾಲೆ ಅವರಿಗೂ ಕಾಂತಾವರಕ್ಕೂ ಸುಮಾರು ಮೂರು ದಶಕದ ನಂಟು. ಯಾವುದೋ ಅದೃಷ್ಟದಿಂದ ಆ ಹಳ್ಳಿಯಲ್ಲಿ ದೊರೆತ ಪುಡಿಕಾಸಿನ ಸಂಬಳದ ನೌಕರಿ. ಅವರೇ ಹೇಳುವಂತೆ, ಅವರು ಈ ಹಳ್ಳಿ ಮೂಲೆ ತೊರೆದು ಬೇರೆಲ್ಲಿಗೂ ಹೋಗುವುದು ಅಸಾಧ್ಯ ಎಂಬ ನಂಬಿಕೆಯಿಟ್ಟ 'ಸೆಲೆಕ್ಷನ್ ಕಮಿಟಿಯವರು' ಮಾಡಿದ

ತಿಂಯ್ಕೆ. ಆದರೆ ಡಾಂಬರು ಮಾರ್ಗವಿರದ ಹಳ್ಳಿಯಲ್ಲಿ ಅವರಿಗೆ ಪರಿಚಯದವರೆಂದರೆ ಆಯುರ್ವೇದ ಮದ್ದಿನ ಬಾಟ್ಲಿಗಳು – ಕಷಾಯ, ಚೂರ್ಣ, ಅರಿಷ್ಟ, ಗುಳಿಗೆ, ಎಣ್ಣೆ, ಹುಡಿ ಇತ್ಯಾದಿ. ನೀರಸ ಒಂಟಿ ಬದುಕು. ಹುಟ್ಟಿ ಬೆಳೆದ ಊರು ಅದೆಷ್ಟೋ ಗುಡ್ಡಗಳಾಚೆ. ಆದರೆ, ಬಿಟ್ಟಿಯೂಟ ಉಂಡು, ಪರರ ಹಂಗಿನಲ್ಲಿ ಬೆಳೆದು, ಮಠದ ಚಾವಡಿಯಲ್ಲಿ ಮಲಗಿ, ಆಗಸದಷ್ಟೆತ್ತರದ ಕನಸು ಕಾಣುತ್ತಾ, ಅಂತೂ ಇಂತೂ, ಡಾಕ್ಟರಿಕೆಯ ಲೈಸನ್ಸ್ ಪಡೆದ ನಾರಾಯಣ ಭಟ್ಟನಿಗೆ, ತನ್ನ ಕಾಲಿ ಮೇಲೆ ತಾನು ನಿಂತುಕೊಳ್ಳುವ ಅವಕಾಶ ಸಿಕ್ಕಿದ್ದೇ ತಡ, ಆತ ಅದನ್ನು ಮೊಸಳೆಯಂತೆ ಹಿಡಿದುಬಿಟ್ಟ. ಮರದಂತೆ ಎದ್ದು ನಿಂತ. ಕಪ್ಪುಕಲ್ಲಿನ ನಂದಿಯಂತೆ ಗಟ್ಟಿ ಹೂತು ಕುಳಿತ. ಆ ಹಳ್ಳಿ ಮೂಲೆಯಲ್ಲಿ, ಕಾಂತಾವರ ಎಂಬ ಮೂಲೆಮೂಲೆಯಲ್ಲಿ.

ಹಾಗೇ, ತಾನು ಆ ಕೆಂಪು ಕಲ್ಲಿನ ಭೂಮಿಯೊಳಗಿಳಿಸಿದ ಬೇರು ಇನ್ನಷ್ಟು ಗಟ್ಟಿಯಾಗಿ ಬೆಳೆಯುವ ಮರ ಮತ್ತಷ್ಟು ಭದ್ರವಾಗಿರಲಿ ಎಂದುಕೊಂಡು, ಅದೇ ಊರಿನ ಉರುಟು ಮುಖದ, ಬೆಳಕಿನ ಬಣ್ಣದ, ಚೆಂದದ ಹುಡುಗಿಯೊಬ್ಬಳನ್ನು ಮದುವೆಯಾದ. ಅಲ್ಲಿಂದ ಶುರುವಾಯ್ತು ನಾರಾಯಣ ಮತ್ತು ಪ್ರೇಮಾ ಇವರ ಸಂಸಾರದ ಕುದುರೆ ಗಾಡಿ – ಜ್ವರದ ಕುದುರೆಯೊಂದಿಗೆ; ಅಷ್ಟು ಬಡಸ್ಥಿತಿ ಆಗ ಅವರದು.

ಹಾಗೇನೇ ಆರಂಭವಾದದ್ದು ನಾ.ಮೊಗಸಾಲೆ ಅವರ ಸಾಹಿತ್ಯ ಕೃಷಿ. ಬಿ.ಎಂ. ಇದಿನಬ್ಬ, ಕಯ್ಯಾರ ಕಿಞ್ಞಣ್ಣ ರೈ, ಏರ್ಯ ಲಕ್ಷ್ಮೀನಾರಾಯಣ ಆಳ್ವ ಮುಂತಾದ ಹಿರಿಯರ ಪ್ರಶಂಸೆಗೆ ಮೋಡಿಯಾಗಿ ಶುರುವಾದ ಕವಿತೆಯ ಹುಚ್ಚು. ಕ್ರಮೇಣ ಶ್ರದ್ಧೆಯಾಗಿ ಬೆಳೆದು ಅವರ ಕವಿತೆಗಳು ನಾಡಿನಲ್ಲಿ ಹರಡಿದುವು. ಅದರೊಂದಿಗೇ ಅವರು ಕಥೆಗಾರರಾದರು. ಕಾದಂಬರಿ ರಚಿಸಿದರು. ಅಂಕಣ ಬರೆದರು. ವೈದ್ಯಕೀಯ ಜಗತ್ತಿನ ಪರಿಚಯ ಮಾಡಿಸಿದರು. ಲೈಂಗಿಕ ತತ್ವದ ವಿವರಣೆ ಕೊಟ್ಟರು ಮತ್ತು ಇನ್ನೇನೋ ಬೇರೆ ಬೇರೆ.... ಮತ್ತು ಮೊಗಸಾಲೆ ಹೆಸರನ್ನು ನಾಡಿಗೆಲ್ಲಾ ಪರಿಚಯ ಮಾಡಿಕೊಟ್ಟರು. ಅದೆಲ್ಲಕ್ಕಿಂತ ಮಿಗಿಲಾಗಿ ಕಾಂತಾವರ ಎಂಬ ಹಳ್ಳಿ ಊರನ್ನು ಸಾಹಿತಿಗಳಿಗೂ, ಸಾಹಿತ್ಯ ಪ್ರಿಯರಿಗೂ ಪರಿಚಯ ಮಾಡಿಕೊಟ್ಟರು.

ನಾನು ಮೊಗಸಾಲೆ ಅವರನ್ನು ಇತ್ತೀಚೆಗೆ ಭೇಟಿಯಾದಾಗ, ದೊಡ್ಡವರ ಯ 'ರೂಮುಗಳ ಗೋಡೌನು'ವಿನಂತೆ ಕಂಡುಬರುವ ಅವರ ಮನೆಯೊಳಗೆ ಸಂಭ್ರಮ, ಗಲಾಟೆ, ಹಲವಾರು ಚಟುವಟಿಕೆಗಳು. (ಅದೆಲ್ಲದರ ಮಧ್ಯೆ 'ಕನ್ನಡ ಭವನ'ದ ಉದ್ಘಾಟನೆಯ ಹೊರೆಹೊತ್ತ ಮೊಗಸಾಲೆ ಅವರ ಶಾಂತ ಸ್ವರೂಪ.) ....ಮೊಗಸಾಲೆ ದಂಪತಿಗಳ ಸೊಸೆಯೊಬ್ಬಳು ಅಮೆರಿಕಕ್ಕೆ ವಾಪಸು ಹೋಗುವವಳಿದ್ದಳು. ಆಕೆಗೆ ಕಟ್ಟಿಕೊಡಲು ತಿಂಡಿಯ ತಯಾರಿ ನಡೆಯುತ್ತಿತ್ತು. ಆ ಎಲ್ಲ ಗಡಿಬಿಡಿ ಮಧ್ಯೆ ನಾನೂ ಒಬ್ಬನಾಗಿ ಹೋದೆ. ಊಟಕ್ಕೆ ಬಳಸಿದ್ದು ಬೋಳು ಹುಳಿ. ಊಟದ ನಂತರ ದಪ್ಪ ದಪ್ಪ ಚೀಲಗಳೊಂದಿಗೆ ಸೊಸೆ ಮತ್ತು ಮೊಮ್ಮಗ ಬಸ್‌ಸ್ಟಾಪಿಗೆ ಹೊರಟರು – ಆಕೆಯ ತವರು ಮನೆಯ ಪ್ರಯಾಣಕ್ಕೆ. ಗಟ್ಟಿ ಮಣ್ಣು ನೆಲದ ಮೇಲೆ ಕೆಲ ಕಣ್ಣೀರ ಹನಿಗಳು. ಹೊಟ್ಟೆ ತುಂಬಿಸಿಕೊಂಡು ಮಲಗಿದ ನಾಯಿಗಳು ಎದ್ದು ನಿಂತವು. ಚಿಲ್ಲರೆ ಹಣದ ಸಪ್ಪಳ ಕೇಳಿಸುತ್ತಾ ಮೊಮ್ಮಗ ಗೇಟಿಗೆ ಓಡಿದ... ಮರಿ ಮೊಗಸಾಲೆಯನ್ನು ಹೊತ್ತುಕೊಂಡ ಬಸ್ಸಿನ ದನಿ ಮಾಯವಾಯ್ತು. ನಾಯಿ, ಬೆಕ್ಕು, ದನಗಳ ಸ್ವರ ಈಗ ಮನೆಯೊಳಗೆ ಸ್ಪಷ್ಟವಾಗತೊಡಗಿತು. ನೆಲ, ಕುರ್ಚಿ, ಮೇಜು ಎಲ್ಲಾ ವಿಶ್ರಾಂತಿ ಪಡೆದವು.

ಸ್ವಲ್ಪ ಹೊತ್ತಿನಲ್ಲಿ ಟೀಯೊಟ್ಟಿಗೆ ಉಂಡ್ಲೂಕ ಬಂತು – ಅಮೆರಿಕಕ್ಕೆ ಹೊರಟಿದ್ದ ಉಂಡ್ಲೂಕದ ಕಸಿನ್ಸ್‌ಗಳು. ಹಿಂದೆಲ್ಲಾ, ಉಂಡ್ಲೂಕದೊಟ್ಟಿಗೇ ಒಂದು ಸುತ್ತೆಯನ್ನು ಪ್ಲೇಟಿನಲ್ಲಿಡುವ ಪದ್ಧತಿಯಿತ್ತೆಂದು ಕೇಳಿದ್ದೆ. ಆದರೆ ಮೊಮ್ಮಗ ಹೊರಟುಹೋದ ದುಃಖದಲ್ಲಿ ಸೊರಗಿದ್ದ ಪ್ರೇಮಾರಿಗೆ ನಾನು ಈ ಕುರಿತು ತಕರಾರು ಮಾಡಲಿಲ್ಲ. ಕಟಂ, ಕಟಂ, ಕಟಂ....!

ಸುಮಾರು ಇಪ್ಪತ್ತು ಲಕ್ಷ ರೂಪಾಯಿ ವೆಚ್ಚದಲ್ಲಿ, ಹಳೆ ಬಾರಾಡಿ ಬೀಡು ಮನೆಯ ಮಾದರಿಯಲ್ಲಿ ಕಟ್ಟಿಸಿದ 'ಕನ್ನಡ ಭವನ' ನನಸಾದ ಉತ್ಸಾಹದಲ್ಲಿ ಮೊಗಸಾಲೆ ಅವರಿಗೆ ತಮ್ಮ ಮೊಮ್ಮಗ ಹೊರಟುಹೋದುದು ಅಷ್ಟೇನೂ ಪೆಟ್ಟು ಕೊಟ್ಟಿರಲಾರದು. ಆದರೆ ಈಗ ಕಟ್ಟಡ ಮುಗಿದಿದೆ, ಉದ್ಘಾಟನೆ ಸಮಾರಂಭ ಗೌಜಿಯಲ್ಲಿ ನಡೆದಿದೆ. ಕನ್ನಡ ಸಂಘದ ಆಫೀಸು ಅದರೊಳಗೆ ಸೇರಿಕೊಂಡಿದೆ. ಮೊಗಸಾಲೆ ಮತ್ತಿತರರು ದಾನ ಮಾಡಿದ ಪುಸ್ತಕಗಳ ಭಂಡಾರ ಅಲ್ಲಿದೆ. ಚಾವಡಿ ಅಗಲವಾಗಿದೆ. ರೂಮುಗಳು ಹಲವಿವೆ... ಆದರೆ ಇನ್ನು ಮುಂದೇನು? ಎಲ್ಲರಿಗಿಂತ ಮೊದಲೇ ಮೊಗಸಾಲೆ ಅವರಲ್ಲಿ ಈ ಪ್ರಶ್ನೆಯಿದೆ. ತಮ್ಮ ಮೂವತ್ತು ವರ್ಷಗಳ ಪರಿಶ್ರಮದಿಂದ ಯಾವ ಹಳ್ಳಿಯೂ ಹೆಮ್ಮೆಪಡುವ ಒಂದು ಕಟ್ಟಡ ಬಂತು. ಆದರೆ ನಾಲ್ಕು ಗೋಡೆಗಳೊಳಗೆ ಒಂದು ಸಂಸಾರವಿರದ ಮನೆ ಹಾಳುಕೊಂಪೆ ಎನಿಸೀತು ಅಥವಾ ಸ್ಮಾರಕವಾದೀತಷ್ಟೇ. ಕನ್ನಡ ಭವನವನ್ನು ಕನ್ನಡ ಕುಟುಂಬವಾಗಿ ಮಾಡುವ ಜವಾಬ್ದಾರಿ ಕುಟುಂಬದ ಎಲ್ಲರದ್ದು, ಎಂದರೆ ನಮ್ಮ ನಿಮ್ಮದು. ಮೊಗಸಾಲೆಯವರು ಮನೆ ಕಟ್ಟಿಸಿಕೊಟ್ಟಿದ್ದಾರೆ. ಅದರೊಳಗಿದ್ದು ನಮ್ಮ-ನಿಮ್ಮ ಸಂಸಾರ ಬೆಳೆಸುವ ಶ್ರದ್ಧೆ, ಸೌಜನ್ಯ, ಶ್ರೀಮಂತಿಕೆ ನಮ್ಮಲ್ಲಿದೆಯಾ?

---

ವಿಜಯ ಕರ್ನಾಟಕ, 27–9–03



o



# ಅಪೂರ್ವ ಸಾಧನೆಗಳ ಕಾಂತಾವರ ಕನ್ನಡ ಸಂಘ

ವಿನಾಯಕ, ಕರ್ಕಿಕೋಡಿ

ಡಾ॥ನಾ.ಮೊಗಸಾಲೆ ಮೂಲತಃ ಈಗ ಕಾಸರಗೋಡಿಗೆ ಸೇರಿ ಹೋಗಿರುವ ಮೊಗಸಾಲೆಯವರು. ಸುಮಾರು ಮೂವತ್ತು ವರ್ಷಗಳಿಗೂ ಹಿಂದೆ ವೈದ್ಯರಾಗಿ ಈ ಪುಟ್ಟಹಳ್ಳಿಗೆ ಬಂದವರು. ಪ್ರವೃತ್ತಿಯಿಂದ ಕವಿಗಳು, ಕಾದಂಬರಿಕಾರರು. ಹೆಸರೂ ಮಾಡಿದ್ದವರು. ಆದರೆ ಮೊಗಸಾಲೆ ವ್ಯಕ್ತಿತ್ವವೇ ವಿಶಿಷ್ಟವಾದದ್ದು. ಅದರ ಜತೆ ಜತೆಗೇ ಇನ್ನೂ ಏನೇನೆಲ್ಲ ಕೈಗೂಡಿಸಬೇಕು; ಪವಾಡವೇ ಮಾಡಬೇಕು ಎಂದು ಮುನ್ನುಗಿದ್ದೇ ಸೈ. ನೆಲೆಕೊಟ್ಟ ಕಾಂತಾವರ, ಇದರಂತೆಯೇ ಹಚ್ಚಿಕೊಂಡ ಸುತ್ತ-ಮುತ್ತಲಿನ ಬೆಳುವಾಯಿ, ಬೋಳ, ಕೆದಿಂಜೆ, ನಂದಳಿಕೆ ಹೀಗೆ ಪಂಚ ಗ್ರಾಮಗಳನ್ನೊಳಗೊಂಡು ಒಂದು ಸದಭಿರುಚಿಯ ಸಂಘ ಸ್ಥಾಪಿಸುವುದು - ಇದು ಮೊದಲ ಯೋಜನೆ. ತತ್ಫಲವೇ ಎಪ್ರಿಲ್ 10, 1975ರಂದು 'ಕಾಂತಾವರ ಕನ್ನಡ ಸಂಘ' ಸ್ಥಾಪನೆ! ಆಗ ಮೊಗಸಾಲೆಯವರ ಬೆಂಬಲಕ್ಕೆ ನಿಂತವರಲ್ಲಿ ಮುಖ್ಯರು ವಿಟ್ಠಲ ಬೇಲಾಡಿ. ಶಾಲೆಯ ಸಂಚಾಲಕ ಕೆ.ಮಾರಣ್ಣ ಮಾಡ ಅವರು. ಇನ್ನೊಬ್ಬರು ಮುಖ್ಯೋಪಾಧ್ಯಾಯ ವಿಟ್ಠಲ ಬೇಲಾಡಿ ಅವರು, ಇವರೊಟ್ಟಿಗೆ ಇನ್ನೂ ಕೆಲವರು. ಎಲ್ಲರೂ ಶ್ರದ್ಧಾಳುಗಳು.

ಕನ್ನಡ ಸಂಘ ಈಗಾಗಲೇ ಇಪ್ಪತ್ತೈದು ವರ್ಷ ಮುಗಿಸಿದೆ. ಬೆಳ್ಳಿಬೆಳಕು ಕಂಡಿದೆ. ಬೆಳ್ಳಿ ಹಬ್ಬವನ್ನು ಅಭೂತಪೂರ್ವ ರೀತಿಯಲ್ಲಿ ಅನುಭವಿಸಿದೆ. ಈ ಇಪ್ಪತ್ತೈದು ವರ್ಷಗಳಲ್ಲಿ ಕನ್ನಡ ಸಂಘ ಹೇಗೆಲ್ಲ ತೊಡಗಿಕೊಂಡಿದೆ? ನಿಟ್ಟಿಸಿ ನೋಡುವಾಗ ಸಂತೋಷವಾಗುತ್ತದೆ; ಸಂಭ್ರಮವಾಗುತ್ತದೆ. ಇಂದಿಗೂ ಅನೇಕ ಆಧುನಿಕ ಸೌಲಭ್ಯಗಳಿಂದ ವಂಚಿತವಾದ ಒಂದು ಸಣ್ಣ ಗ್ರಾಮದಲ್ಲಿ ಇಷ್ಟೆಲ್ಲಾ ನಡೆಯಿತೇ? ಎಂದು ಆಶ್ಚರ್ಯವೂ ಆಗುತ್ತದೆ. ಏನೆಲ್ಲಾ ಅನುಕೂಲವಿದ್ದೂ ಏನೂ ಮಾಡಲಾಗದ ಪಾಡು ಇನ್ನೊಂದು ಕಡೆ!! ನಾಚಿಕೆ ಆಗುತ್ತದೆ.

ಇದುವರೆಗೆ 23ಕ್ಕೂ ಹೆಚ್ಚು ಗೋಷ್ಠಿಗಳನ್ನು ಕನ್ನಡ ಸಂಘದ ಮೂಲಕ ನಡೆಯಿಸಿಕೊಟ್ಟ ಅದರ ಸ್ಥಾಪಕರೂ, ಕಾರ್ಯಾಧ್ಯಕ್ಷರೂ ಆದ ಡಾ॥ನಾ.ಮೊಗಸಾಲೆ ಸಹಜವಾಗಿಯೇ ಹೆಮ್ಮೆ ಪಟ್ಟುಕೊಳ್ಳುತ್ತಾರೆ - "ರಾಷ್ಟ್ರಕವಿ ಗೋವಿಂದ ಪೈಯವರ ಶತಮಾನೋತ್ಸವವನ್ನು ರಾಜ್ಯದಲ್ಲೇ ಮೊದಲಾಗಿ ಪ್ರಾರಂಭಿಸಿದ್ದು ಕಾಂತಾವರ ಕನ್ನಡ ಸಂಘ. ಕಯ್ಯಾರ ಕಿಞ್ಞಣ್ಣ ರೈ, ಯಶವಂತ ಚಿತ್ತಾಲ, ಸೇಡಿಯಾಪು ಕೃಷ್ಣ ಭಟ್, ಸಾಂತ್ಯಾರು ವೆಂಕಟರಾಜ, ಕಡೆಂಗೋಡ್ಲು ಶಂಕರ

ಭಟ್, ಪಾ.ವೆಂ.ಆಚಾರ್ಯರಂಥ ಸಾಹಿತ್ಯ ಸಾಧಕರ ಮೊತ್ತಮೊದಲ ಸಾಹಿತ್ಯ ಗೋಷ್ಠಿಗಳನ್ನು ಸಂಯೋಜಿಸಿದ್ದು ನಾವೇ."

ಅಷ್ಟೇ ಅಲ್ಲ; ಪಂಪ ರನ್ನರೇ ಮೊದಲಾದ ಹಳೆಯ ಮಹಾಕವಿಗಳ ಕಾವ್ಯಗಳನ್ನು ಪರಿಚಯಿಸುವ ವಿಶೇಷ ಉಪನ್ಯಾಸಗಳು ನಡೆದಿದ್ದೂ ಇದೇ ಸಂಘದಿಂದಲೆ ಆಗಿದೆ. ನವೋದಯ ಸಾಹಿತ್ಯದ ಕುರಿತು ವಸ್ತುನಿಷ್ಠ ಪ್ರಬಂಧ; ನವ್ಯ ಸಾಹಿತ್ಯದ ಕುರಿತೂ ಅಷ್ಟೇ ತೂಕದ, ಮೋಹಾತೀತವಾದ ಪ್ರಬಂಧ ಮತ್ತು ಚರ್ಚೆ ಎಲ್ಲದಕ್ಕೂ ಇದು ಒಪ್ಪಿಸಿಕೊಂಡಿದೆ. ದಲಿತ-ಬಂಡಾಯ ಸಾಹಿತ್ಯದ ಸಾಫಲ್ಯ- ವೈಫಲ್ಯಗಳ ಕುರಿತೂ ಗೋಷ್ಠಿ ನಡೆಯಿಸಿ ಗಂಭೀರವಾಗಿಯೇ ಪ್ರತಿಕ್ರಿಯಿಸಿದೆ. ಮುಸ್ಲಿಮ್ ಲೇಖಕ/ಲೇಖಕಿಯರನ್ನು ಕರೆಯಿಸಿ ನಡೆಯಿಸಿದ ಆತ್ಮೀಯ ಸಂವಾದವಂತೂ ಹಲವರಿಗೆ ಅಪರಿಚಿತವಾದ ಒಂದು ಸಮುದಾಯವನ್ನು ತೀರಾ ಹತ್ತಿರದಿಂದ ಅರ್ಥೈಸಿಕೊಳ್ಳುವಲ್ಲಿ ನೆರವಾದದ್ದೂ ವಿಶೇಷವಾಗಿ ಉಲ್ಲೇಖನೀಯವಾಗಿದೆ.

ಕವಿಗೋಷ್ಠಿಗಳನ್ನು ಕನ್ನಡ ಸಂಘ ಹಮ್ಮಿಕೊಂಡಿದೆ. ಹಿರಿಯ ಕವಿ ಗೋಪಾಲಕೃಷ್ಣ ಅಡಿಗರ ಅಧ್ಯಕ್ಷತೆಯಲ್ಲಿ ನಡೆದ ಕವಿಗೋಷ್ಠಿ ಅಪೂರ್ವವಾದ ಕವಿತೆಗಳಿಂದ ಸಹೃದಯರನ್ನು ಗೆದ್ದುಕೊಂಡದ್ದು ಒಂದು ಹಸುರಾದ ನೆನಪು. ಸಾಕ್ಷರತಾ ಆಂದೋಲನಕ್ಕೆ ಸಂಬಂಧಿಸಿದ ಕವಿಗೋಷ್ಠಿಯೂ ಚಿರಸ್ಮರಣೀಯವಾದದ್ದೇ. 1996ರಲ್ಲಿ ಮುದ್ದಣ ಕವಿ ಪ್ರಶಸ್ತಿ ಪಡೆದ ಒಟ್ಟು ಹದಿನೈದು ಮಂದಿ ಕವಿಗಳನ್ನು ಆಹ್ವಾನಿಸಿ ಏರ್ಪಡಿಸಿದ ಕವಿಗೋಷ್ಠಿಯೂ ಉಣಿಸಿದ್ದು ರಸದೂಟವನ್ನೇ.

'ಮುದ್ದಣ ಕವಿ ಪ್ರಶಸ್ತಿ'ಯಾದರೂ ಎಲ್ಲಿಯದು? ಇದೂ ಕಾಂತಾವರ ಕನ್ನಡ ಸಂಘದ ಕಾಣ್ಕೆಯೇ; ಸ್ವಂತ ಡಾಮೊಗಸಾಲೆ ಸ್ವಂತ ಕೃತಿಯೊಂದಕ್ಕೆ ಪಡೆದ ಸರಕಾರದ ಪ್ರಶಸ್ತಿ ಹಾಗೂ ಸನ್ನಿವೇಶ ಕೊಟ್ಟ ಕಹಿ ಅನುಭವವೇ – ಮುದ್ದಣ ಕವಿ ಪ್ರಶಸ್ತಿಗೆ ಪ್ರೇರಣೆ! 1979ರಿಂದ ಪ್ರಶಸ್ತಿ ಪ್ರಧಾನ. 'ಕರ್ನಾಟಕದಲ್ಲೇ ಪ್ರಥಮವಾಗಿ ಸರಕಾರೇತರ ನೆಲೆಯಲ್ಲಿ ಸಾಹಿತ್ಯ ಪ್ರಶಸ್ತಿ' ಇದು ಹಿರಿಮೆ. ವಿಜೇತ ಕವಿಗೆ ಐದು ಸಾವಿರ ರೂಪಾಯಿ ಗೌರವ ಸಂಭಾವನೆ, ಸನ್ಮಾನ ಹಾಗೂ ಪ್ರಶಸ್ತಿ! ಇದುವರೆಗೆ ಒಟ್ಟು 25 ಮಂದಿ ಕವಿಗಳು ಈ ಪ್ರಶಸ್ತಿ ಪಡೆದಿದ್ದಾರೆ. ಈ ಬಾರಿ ಪ್ರಶಸ್ತಿ ಕವಿ ಅಂಶುಮಾಲಿಯವರ ಪಾಲಾಗಿದೆ. ಇವರೀಗ 26ನೆಯ ಕವಿಯಾಗಿದ್ದಾರೆ. ತನ್ನ ಪಾರದರ್ಶಕ ತೀರ್ಪಿನಿಂದಾಗಿ ಮುದ್ದಣ ಕವಿ ಪ್ರಶಸ್ತಿಗಿರುವ ಮಾನ ಬಹುದೊಡ್ಡದೇ ಆಗಿದೆ. ಆದುದರಿಂದಲೇ ಸ್ಪರ್ಧೆಯಲ್ಲಿ ಭಾಗವಹಿಸುವ ಹಿರಿಯ, ಕಿರಿಯ ಕವಿಗಳ ಸಂಖ್ಯೆ ಕೂಡ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಲೇ ಇದೆ.

ನಾಡು-ನುಡಿಗಾಗಿ ದುಡಿದವರನ್ನು ಗುರುತಿಸಿ-ಗೌರವಿಸುವುದನ್ನು ಕನ್ನಡ ಸಂಘ ಕರ್ತವ್ಯವೆಂದೇ ಒಪ್ಪಿಕೊಂಡಿದೆ; ಮುಂದುವರೆಸಿಕೊಂಡು ಬಂದಿದೆ ಕೂಡ. ಸೇಡಿಯಾಪು, ಕಯ್ಯಾರ ಕಿಞ್ಞಣ್ಣ ರೈ, ಬನ್ನಂಜೆ ರಾಮಾಚಾರ್ಯ, ಕೆ.ರಾಮ, ಜಸ್ಟೀಸ್ ಕೆ.ಎಸ್.ಹೆಗಡೆ – ಹೀಗೆ ಪಟ್ಟಿ ಬೆಳೆಯುತ್ತದೆ. ಇದುವರೆಗೆ ಇಲ್ಲಿ ಒಟ್ಟು 40 ಮಂದಿಗೆ ಸನ್ಮಾನ ನಡೆದಿದೆ!

ಕೃತಿ ಪ್ರಕಟಣೆಯಲ್ಲೂ 'ಕನ್ನಡ ಸಂಘ' ಆಸಕ್ತಿ ತೋರಿದೆ. ಅತ್ಯಂತ ನಿಷ್ಠೆಯಿಂದಲೇ ಅಲ್ಲಿಯೂ ತನ್ನನ್ನು ಒಡ್ಡಿಕೊಂಡಿದೆ. 'ದಕ್ಷಿಣ ಕನ್ನಡ ಕಾವ್ಯ 1901-1976' ಎಂಬುದು ಕನ್ನಡ

ಸಂಘದ ಜೊಜ್ಜಲ ಕೊಡುಗೆ; ಸಹೃದಯರಿಗೆ ಅಚ್ಚುಮೆಚ್ಚಾದ ಹೊತ್ತಗೆ. ದಕ್ಷಿಣ ಕರಾವಳಿಯ 42 ಮಂದಿ ಕನ್ನಡ ಕವಿಗಳ ಒಟ್ಟು 71 ಕವನಗಳನ್ನೊಳಗೊಂಡು, ಸಾಕಷ್ಟು ಪ್ರಬುದ್ಧವಾದ ಸಮೀಕ್ಷೆಯಿಂದೊಡಗೂಡಿ ಸಂದಿರುವ ಸಾರ್ಥಕ ಪ್ರಯತ್ನ. ಕೇರಳದ ಕಲ್ಲಿಕೋಟೆ ವಿಶ್ವವಿದ್ಯಾನಿಲಯವಲ್ಲಿ ಪಠ್ಯಪುಸ್ತಕದ ಮಾನ್ಯತೆ ಪಡೆದದ್ದೂ ಇದರ ಸತ್ವಕ್ಕೆ ಸಂದ ಪುರಸ್ಕಾರ! ಕನ್ನಡ ಸಂಘಕ್ಕೆ ಪ್ರಾಪ್ತವಾದ ಬಹುಮಾನ! ಹಿರಿಯ ಕವಿಗಳಾದ ಸು.ರಂ.ಎಕ್ಕುಂಡಿಯವರ 'ಬೆಳ್ಳಕ್ಕಿ'; ಬನ್ನಂಜೆ ಗೋವಿಂದಾಚಾರ್ಯರ 'ಹೇಳದೇ ಉಳಿದದ್ದು' ಇಂಥ ಬೆಲೆಬಾಳುವ ಕವನ ಸಂಕಲನಗಳನ್ನು ಪ್ರಸಿದ್ಧಿಸಿದ್ದು ಇದೇ ಕನ್ನಡ ಸಂಘವೇ. ಇವರ ಪ್ರಕಟಣೆಯಲ್ಲಿ ಕಿರೀಟಪ್ರಾಯವಾದದ್ದು, ಇದರ ಬೆಳ್ಳಿಹಬ್ಬದ ಸಡಗರದಲ್ಲಿ ಹೊರಬಂದ 'ದಕ್ಷಿಣ ಕನ್ನಡದ ಶತಮಾನದ ಕಾವ್ಯ 1900-2000' ಎಂಬ ಬೃಹತ್ ಕಾವ್ಯ ಸಂಪುಟ! ಡೆಮ್ಮಿ ಆಕಾರದಲ್ಲಿ ಒಟ್ಟು 464 ಪುಟಗಳು!! ಅವಿಭಜಿತ ದಕ್ಷಿಣಕನ್ನಡ ಜಿಲ್ಲೆ ಹಾಗೂ ಕಾಸರಗೋಡಿನ ಕವಿಗಳನ್ನು ಬಿಡದೇ ಓದಿ, ಅವರ ನೆಲೆ-ಬೆಲೆ ತೂಗಿ ನೋಡಿ ನಿರ್ಭಿಡೆಯಿಂದ ಪ್ರತಿಸ್ಪಂದಿಸಿದ್ದು ಇದರ ಘನತೆ. ಇದಕ್ಕಾಗಿ ಒಟ್ಟು 150 ಪುಟಗಳು ಮೀಸಲು! ಎಂದರೆ ಹೊಸ ದಿಕ್ಕಿನಲ್ಲಿ ಕಾವ್ಯ ಮೀಮಾಂಸೆ ಅಥವಾ ಕಾವ್ಯ ಮೀಮಾಂಸೆಗೆ ಹೊಸ ದಿಕ್ಕು - ಇದಿಲ್ಲಿನ ಅನನ್ಯತೆ. ಒಟ್ಟು 117 ಕವಿಗಳಿಲ್ಲಿದ್ದಾರೆ. 180ರಷ್ಟು ಕವನಗಳಿವೆ! ಕವನಗಳ ಆಯ್ಕೆಯಲ್ಲೂ ವಿಮರ್ಶಕನ ಕಟ್ಟೆಚ್ಚರ ತೀಕ್ಷ್ಣವಾಗಿಯೇ ದುಡಿದುಕೊಂಡಿದೆ. ನಮ್ಮ ಮುಖ್ಯ ವಿಮರ್ಶಕರಲ್ಲಿ ಒಬ್ಬರಾದ ಬಿ.ಜನಾರ್ದನ ಭಟ್ ಅವರ ಒಟ್ಟೂ ನಿರ್ವಹಣೆ ಇಲ್ಲಿ ಅದ್ಭುತವಾಗಿದೆ. ಸಂಪಾದಕನ ಜವಾಬ್ದಾರಿ ಬಗ್ಗೆ ಇದೊಂದು ಅತ್ಯುತ್ತಮವಾದ ಮಾದರಿ ಆಗಿದೆ. ಇಂಥ ಸಂಪುಟ ವಿಶ್ವವಿದ್ಯಾನಿಲಯದಲ್ಲಿ ಪಠ್ಯಪುಸ್ತಕವಾಗಬೇಕು. ಇದು ಸಾಹಿತ್ಯದ ವಿದ್ಯಾರ್ಥಿಗಳಿಗೆ ಮಾಡುವ ಉಪಕಾರವಾಗುತ್ತದೆ. ಇದೇ ಸಂದರ್ಭದಲ್ಲಿ ಬಿಡುಗಡೆಗೊಂಡದ್ದು 'ಬೆಳ್ಳಿ ಬೆಳಕು' ಸಂಚಿಕೆ. ಇದು ಕನ್ನಡ ಸಂಘವನ್ನು, ಪಂಚಗ್ರಾಮಗಳನ್ನು ಪರಿಚಯಿಸಿದ ಕೃತಿ. ಒಂದು ಸಂಘಟನೆಯ ಹಿಂದಿನ ಶ್ರದ್ಧೆ, ಶ್ರಮ ಎಲ್ಲವನ್ನೂ ತೆರೆದಿಟ್ಟ ಕೃತಿ.

ಬೆಳ್ಳಿಪಬ್ಬವನ್ನು ಹೀಗೆ ಅಕ್ಷರಗಳಲ್ಲಿ ಶಾಶ್ವತವಾಗಿ ಸ್ಥಾಪಿಸುವ ಕೆಲಸವನ್ನು ನಿಭಾಯಿಸುವುದರೊಟ್ಟಿಗೆ ಕನ್ನಡ ಸಂಘವು ಬೆಳ್ಳಿಹಬ್ಬಕ್ಕೆ ಸಂಬಂಧಿಸಿದ ಸಮ್ಮೇಳನ ಹಾಗೂ ಪೂರ್ವಭಾವೀ ಕಾರ್ಯಕ್ರಮಗಳನ್ನು ಅತ್ಯಂತ ವಿಭಿನ್ನ ಶೈಲಿಯಲ್ಲಿ ಅನಾವರಣಗೊಳಿಸಿದ್ದು ಒಂದು ವಿಶಿಷ್ಟ ಉಪಕ್ರಮವಾಗಿದೆ. ಕನ್ನಡ ಸಂಘವೊಂದು ಕೇವಲ ಸಾಹಿತ್ಯಿಕವಾಗಿ ಮಾತ್ರವಲ್ಲ, ಸಾಂಸ್ಕೃತಿಕವಾಗಿಯೂ ಒಪ್ಪಿಸಿಕೊಳ್ಳಬೇಕು ಮತ್ತು ಎಲ್ಲದಕ್ಕೂ ಹೊಸ ಅರ್ಥ, ಭಾಷ್ಯ, ಸಂಬಂಧಗಳನ್ನು ಜೋಡಿಸುತ್ತ ಎಲ್ಲರಿಗೂ ಸಲ್ಲುವಂತಾಗಿಸಬೇಕು ಎಂಬ ನಿಟ್ಟಿನಲ್ಲಿ ಕನ್ನಡ ಸಂಘ ತೋರಿದ ಕಾಳಜಿ, ಕಂಡ ಸಾಫಲ್ಯ ಈಗ ಇತಿಹಾಸವಾಗಿದೆ.

2001ರ ಸಪ್ಟೆಂಬರ್ ತಿಂಗಳಲ್ಲಿ ಕಾಂತಾವರದಲ್ಲಿಯೇ ಬೆಳ್ಳಿಹಬ್ಬದ ಉದ್ಘಾಟನಾ ಕಾರ್ಯಕ್ರಮ ನಡೆಯಿತು. ಅವೊತ್ತಿನ ಕಾರ್ಯಕ್ರಮದ ವಿಶಿಷ್ಟತೆಯನ್ನು ಪತ್ರಿಕೆಯೊಂದು ಹೀಗೆ ವರದಿ ಮಾಡುತ್ತದೆ: "ಸ್ವಾಗತ ಪ್ರಸ್ತಾವನೆಗಳ ಬಳಿಕ ಕಾರ್ಯಾಧ್ಯಕ್ಷ ಡಾ.ನಾ.ಮೊಗಸಾಲೆ ಅವರು ಬೆಳ್ಳಿತಟ್ಟೆಯಲ್ಲಿ ಹಸಿರು ರುಮಾಲನ್ನಿಟ್ಟು ಸ್ವಾಗತಾಧ್ಯಕ್ಷ ಡಾ.ಜೀವಂಧರ್ ಕುಮಾರ್ ಬಲ್ಲಾಳರಿಗೊಪ್ಪಿಸಿದರು. ಬಲ್ಲಾಳರು, ಅದನ್ನು ಉದ್ಘಾಟಕ ಡಿ.ಕೆ. ಚೌಟ ಅವರಿಗೊಪ್ಪಿಸಲು

ಅದನ್ನವರು ತಲೆಗೆ ಸುತ್ತಿ ಸಭಾಸ್ಥಾನದ ಹಿಂಭಾಗದಲ್ಲಿರುವ ಶಾರದಾ ಸನ್ನಿಧಿಗೆ ಬಂದರು. ಬಲ್ಲಾಳರು... ನಂದಾದೀಪದಿಂದ ಏಕಾರತಿ ಹಚ್ಚಿ ಚೌಟರಿಗೊಪ್ಪಿಸಲು ಸಭಿಕರೆಲ್ಲ ಒಬ್ಬರನ್ನೊಬ್ಬರು ಸ್ಪರ್ಶಿಸುತ್ತಿದ್ದಂತೆ, ಸೇಡಿಯಾಪು ಕೃಷ್ಣಭಟ್ಟರ ಕೃತಿ 'ಎಣ್ಣೆ ಹೊಯ್ಯಮ್ಮ ದೀಪಕ್ಕೆ ' ಕವನವನ್ನು 'ನಾದ ವೈಭವಂ' ಗಾಯಕರು ಹಾಡುತ್ತಿದ್ದಂತೆ, ಚೌಟರು ಎತ್ತರದ ಕಾಲುದೀಪವನ್ನು ಬೆಳಗಿದರು. ಮತ್ತು ವೇದಿಕೆಯತ್ತ ಮರಳಿದ ಚೌಟರಿಗೆ ಬಲ್ಲಾಳರು ಚಂಡೆ ನೀಡಿದರು. 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ನಾಡಗೀತೆ ಹಾಡಾಗಿ ಹೊಮ್ಮುತ್ತಿರುವಂತೆಯೇ ಚೌಟರು ಚಂಡೆ ಬಾರಿಸಿದರು..." ನಿಟ್ಟೆಯಲ್ಲಿ ನಡೆದ ಕಾವ್ಯ ಕಮ್ಮಟವು "ಭಾರತ ಗ್ರಂಥವನ್ನು ವ್ಯಾಸ ಪೀಠದಲ್ಲಿರಿಸಿ ಆರತಿ ಬೆಳಗಿ ನಾಂದಿ ಪದ್ಯಗಳನ್ನು ವಾಚಿಸುವ ಮೂಲಕ ನೆರವೇರಿತು. ಬೋಳದಲ್ಲಿ ಯಕ್ಷಗಾನ ವಿಚಾರಗೋಷ್ಠಿ, ಪ್ರಾತ್ಯಕ್ಷಿಕೆ; ನಂದಳಿಕೆಯಲ್ಲಿ ಮುದ್ದಣನಿಗೆ ಕಾವ್ಯ ನಮನ, ಬೆಳ್ಮಣ್‌ನಲ್ಲಿ ಕಾವ್ಯವಾಚನ, ಕಮ್ಮಟ ಹಾಗೂ ಸಾಹಿತ್ಯ ಸಂವಾದ- ಇದೆಲ್ಲವೂ ಬೆಳ್ಳಿಹಬ್ಬಕ್ಕೆ ಸಂಬಂಧಿಸಿ ಪಂಚಗ್ರಾಮಗಳಲ್ಲಿ ಯಶಸ್ವಿಯಾದವು. ಇಲ್ಲಿಯೂ ವಿಶಿಷ್ಟತೆಗಳು ಆದ್ಯತೆ ಪಡೆದವು; ಮನೆ ಮಾತಾದವು!!

ಎಪ್ರೀಲ್ 15, 2001ರಂದು ಕಾಂತಾವರದಲ್ಲಿ ನಡೆದ ರಾಜ್ಯಮಟ್ಟದ ಸಾಹಿತ್ಯ, ಸಾಂಸ್ಕೃತಿಕ ಸಮ್ಮೇಳನವು ಹಿಂದಿಲ್ಲ, ಮುಂದೇನೋ ಎಂಬಂತೆ ಜರುಗಿದ್ದು - ಚರಿತ್ರಾರ್ಹವಾದದ್ದು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಸಾಹಿತಿ ವ್ಯಾಸರಾಯ ಬಲ್ಲಾಳ ಸಮ್ಮೇಳನಾಧ್ಯಕ್ಷರಾಗಿ ಅಂದು ಮಾಡಿದ ಭಾಷಣ, ಅಪೂರ್ವವಾದದ್ದು. ಹಿರಿಯ ಕವಿ ಕಯ್ಯಾರ ಕಿಞ್ಞಣ್ಣ ರೈ ದೀಪ ಬೆಳಗಿ ಉದ್ಘಾಟಿಸಿ, ಕನ್ನಡ ಸಂಘವನ್ನು ಅಭಿನಂದಿಸಿ ಹರಸಿದ್ದು ರೋಮಾಂಚನಕಾರಿಯಾದದ್ದು. ಬಳಿಕ ನಡೆದ ಕವಿಗೋಷ್ಠಿ, ಸಾಹಿತಿಗಳೊಂದಿಗೆ ಸಂವಾದ, ಸಾಧಕರಿಗೆ ಸನ್ಮಾನ, ಸಮಾರೋಪ ಸಭೆ ಒಂದಕ್ಕಿಂತ ಒಂದು ಹೆಚ್ಚು ಅರ್ಥಪೂರ್ಣವಾಗಿ, ಶ್ರೀಮಂತವಾಗಿ ಅನಾವರಣಗೊಂಡು ಮನಸ್ಸನ್ನು ಅರಳಿಸಿತು, ಬುದ್ಧಿಯನ್ನು ಬೆಳಗಿಸಿತು. ಇಲ್ಲಿಯೂ ವೈಶಿಷ್ಟ್ಯ ಮೆರೆಯದೇ ಉಳಿಯಲಿಲ್ಲ. ಸಮ್ಮೇಳನಾಧ್ಯಕ್ಷ ದಂಪತಿಯನ್ನು ಚೆಂಡೆ, ತಾಳ, ಛತ್ರಿ ಮೆರವಣಿಗೆಯಲ್ಲಿ ಕಾಂತೇಶ್ವರ ದೇವಳದ ಹೊರ ಆವರಣಕ್ಕೆ ಒಂದು ಸುತ್ತು ತಂದು ವೇದಿಕೆಗೆ ಬರಮಾಡಿಕೊಂಡದ್ದು; ಉದ್ಘಾಟಕರಿಗೆ ಕೆಂಪು ರುಮಾಲು ಸುತ್ತಿ, ಶಾಲು ಹಾಕಿ ಗುಲಾಬಿ ಹೂ ನೀಡಿ ಸತ್ಕರಿಸಿದ್ದು; ಅಧ್ಯಕ್ಷರಿಗೆ ಮೈಸೂರು ಪೇಟ ತೊಡಿಸಿ, ಶಾಲು ಹೊದಿಸಿ, ಪನ್ನೀರು ಎರಚಿ, ಕುಂಕುಮ ಸಹಿತ ವೀಳ್ಯ ಹಸ್ತಾಂತರಿಸಿದ್ದು; ಚಂದ್ರಶೇಖರ ಕೆದಲಾಯರು 'ಹಚ್ಚೇವು ಕನ್ನಡದ ದೀಪ' ಹಾಡು ಮೊಳಗಿಸುತ್ತಿದ್ದಂತೆ ಕೆಂಪು ರುಮಾಲಿನ ಕಯ್ಯಾರರು ಸಪ್ತಬತ್ತಿಯ ದೀಪ ಹಚ್ಚಿದ್ದು - ಎಲ್ಲವೂ ಹೊಸ ಲೋಕಕ್ಕೆ ಒಯ್ದಂಥವೇ! ಪರಮಾನಂದಕ್ಕೆ ಪಕ್ಕಾಗಿಸಿದಂಥವೇ!

ಕನ್ನಡ ಸಂಘ ತನ್ನ ಹೆಜ್ಜೆಯನ್ನು ಇನ್ನೂ ಮುಂದಕಿಟ್ಟಿದೆ. ಮರೆಯಬಾರದ ನವೋದಯ ಸಾಹಿತಿಗಳನ್ನು ತರುಣರಿಗೆ ತಲುಪಿಸುವ ನಿಟ್ಟಿನಲ್ಲಿ ಕಳಕಳಿ ಹೊಂದಿದೆ; ರೂಪುರೇಷೆ ಹಾಕಿಕೊಂಡಿದೆ. ಹುರುಳಿ ಭೀಮರಾಯರು, ಪಾಂಡೇಶ್ವರ ಗಣಪತಿರಾಯರು, ಅ.ಗೌ.ಕಿನ್ನಿಗೋಳಿ ಇಂಥವರ ಬದುಕು-ಬರಹಗಳ ತಲಸ್ಪರ್ಶಿ ಅಧ್ಯಯನ-ಶೋಧನೆ-ಮಂಡನೆ ಸಂಘದ ಆಶಯವಾಗಿದೆ.

ಕನ್ನಡ ಸಂಘ – ಇದೀಗ ಸಾಹಿತ್ಯೋತ್ಸವದ ಸಿದ್ಧತೆಯಲ್ಲಿದೆ. ಜನವರಿ 28ರಂದು ಅದು ತನ್ನ 26ನೆಯ ವಾರ್ಷಿಕೋತ್ಸವವನ್ನು ಕನ್ನಡ ಪುಸ್ತಕ ಪ್ರಾಧಿಕಾರದ ಸಹಯೋಗದಲ್ಲಿ ಅತ್ಯುಪಯುಕ್ತವಾದ ರೀತಿಯಲ್ಲಿ ನಡೆಸಲು ಕಾರ್ಯೋನ್ಮುಖವಾಗಿದೆ. ಇಂಥ ಸಂಘವನ್ನು ಸಮಸ್ತ ಕನ್ನಡಿಗರು ಹಾರ್ದಿಕವಾಗಿ ಅಭಿನಂದಿಸಲೇ ಬೇಕಿದೆ. ಅದಕ್ಕೆ ಇನ್ನೂ ಇನ್ನೂ ಯಶಸ್ಸುಗಳನ್ನು ಹಾರೈಸಲೇ ಬೇಕಿದೆ.

---

ತರಂಗ, 24 ಜನವರಿ 2002 ೦

# ಸಾಹಿತ್ಯ ಲೋಕ (ಸಂದರ್ಶನ)

ವಿಜಯಕಾಂತ ಪಾಟೀಲ

**ನಿಮಗೆ ಕಾವ್ಯದ ನಂಟು ಹೇಗಾಯಿತು?**

ನಾನು ಹುಟ್ಟಿದ ಊರು ಕಾಸರಗೋಡು ತಾಲ್ಲೂಕಿನ ಮೊಗಸಾಲೆ ಎಂಬ ಪ್ರದೇಶ. ಇಡೀ ಕಾಸರಗೋಡು ತಾಲ್ಲೂಕು (ಈಗ ಜಿಲ್ಲೆಯಾಗಿದೆ.) ಆಗ ಯಕ್ಷಗಾನ ಕಲೆ ಮತ್ತು ಸಾಹಿತ್ಯದ ಗಂಡು ಮೆಟ್ಟಿದ ಸ್ಥಳ. ಅದರಲ್ಲೂ ಕುಂಬಳೆ, ಕೂಡ್ಲು, ಕೋಳ್ಯೂರು ಎಂಬ ಊರುಗಳು ಯಕ್ಷಗಾನಕ್ಕೆ ತುಂಬಾ ಪ್ರಸಿದ್ಧವಾದವು. ಈ ಊರಿನವರಾದ ನನ್ನ ತಂದೆ ಮತ್ತು ಚಿಕ್ಕಪ್ಪ ಆ ದಿನಗಳಲ್ಲಿ ಯಕ್ಷಗಾನದ ಅರ್ಥಧಾರಿಗಳು. ಈ ಹಿನ್ನೆಲೆ ಮತ್ತು ನನ್ನ ತಂದೆಯ ಅಕ್ಕ ಮೂಕಾಂಬಿಕೆ ಅವರಲ್ಲಿದ್ದ ಜಾನಪದ ಪ್ರೀತಿ ಮತ್ತು ಆಕೆ ದಿನಾ ಓದುತ್ತಿದ್ದ ರಾಮಾಯಣ, ಮಹಾಭಾರತ ನನ್ನ ಮೇಲೆ ನೇರ ಪ್ರಭಾವ ಬೀರಿದವು. ನನ್ನ ತಂದೆಯ ಸೋದರಮಾವ ತಲೆಕ್ಕಳ ರಾಮಭಟ್ಟರು ಒಬ್ಬ ಅದ್ಭುತ ಜಾನಪದ ಕತೆಗಾರರು. (ಅವರ ಕತೆಗಳು ಮಾಸ್ತಿಯವರ ಕತೆಗಳಿಗೆ ತೀರಾ ಹತ್ತಿರವಾದವು.) ಈ ಹಿರಿಯರ ಜೊತೆ ಹೈಸ್ಕೂಲ್ ವಿದ್ಯಾಭ್ಯಾಸದ ದಿನಗಳಲ್ಲಿ ನನಗೆ ಅಧ್ಯಾಪಕರಾಗಿ ಒದಗಿಬಂದ ಪಂಜಾಜೆ ಶಂಕರಭಟ್ಟ ಎಂಬ ಶಿಷ್ಯಪ್ರೇಮಿಯ ಸಾಹಿತ್ಯಾಸಕ್ತಿ ಮತ್ತು ಸಂಘಟನಾ ಕೌಶಲ್ಯ ನನ್ನ ಒಟ್ಟೂ ಬದುಕನ್ನು ಸಾಹಿತ್ಯ ಸಂಸ್ಕೃತಿ ಮತ್ತು ಸಂಘಟನೆಗೆ ಎಳೆಯಿತು.

**ಕವಿಯಾಗಿ ಕವಿತೆ ಬರೆವಾಗಿನ ಹೊತ್ತನ್ನು ಹೇಗೆ ಬಣ್ಣಿಸುವಿರಿ?**

ಕವಿತೆ ಬರೆಯಬೇಕು ಎಂದುಕೊಂಡು ನಾನು ಯಾವತ್ತೂ ಕವಿತೆ ಬರೆದಿಲ್ಲ. ಕವಿತೆ ಧ್ಯಾನಸ್ಥ ಸ್ಥಿತಿಯಿಂದ ಹುಟ್ಟುವುದೂ ಇಲ್ಲ. ಇದ್ದಕ್ಕಿದ್ದ ಹಾಗೆ ಆಕಾಶದಲ್ಲಿ ಮೋಡ ಕವಿದು ಮಿಂಚು ಹೊಳೆಯುವಂತೆ ನಡುರಾತ್ರಿಯಲ್ಲಾದರೂ ಅದು ನನ್ನನ್ನು ಗಾಢವಾಗಿ ಕಾಡಿ ನನ್ನನ್ನು ಎಚ್ಚಿಸುತ್ತದೆ. ಆಗ ಪೆನ್ನು ತೆಗೆದು ಬರೆಯಲೇಬೇಕು. ಆ ಮೇಲೆ ಎಷ್ಟೋ ದಿನಗಳಾದ ಮೇಲೆ (ತಿಂಗಳುಗಳೂ ಆಗಬಹುದು)ಅದನ್ನು ತಿದ್ದಿ ತೀಡುವ ಕೆಲಸ. ಇಲ್ಲಿ ಆಗ ಬುದ್ಧಿ ಭಾವಗಳೇ ಪ್ರಧಾನ.

**ಕವಿತೆ ಬರೆಯುವುದೆಂದರೆ ಪ್ರಯಾಸದ ಕೆಲಸವೇ?**

ಕವಿತೆ ಬರೆಯುವುದೆಂದರೆ ಹೆಣ್ಮಗಳೊಬ್ಬಳು ಹೆರಿಗೆಯ ನೋವು ಮತ್ತು ಸುಖವನ್ನು

ಅನುಭವಿಸಿದ ಹಾಗೆ. ಗರ್ಭ ಕಟ್ಟುವುದು ಹೇಗೆ ಅರಿವಿಗೆ ಬರುವುದಿಲ್ಲವೋ ಹಾಗೇ ಕವಿತೆಯ ಮೊದಲ ಸಾಲು, ಕಲ್ಪನೆ ಅನಿರೀಕ್ಷಿತವಾಗಿ ಹುಟ್ಟುತ್ತದೆ. ಆ ಮೇಲೆ ಅದನ್ನು ಉಳಿಸಿ-ಬೆಳೆಸುವುದು ಯಾವತ್ತೂ ಸವಾಲೇ. ಬರೆದಷ್ಟೂ ತಿದ್ದುದ್ದಿದೆ. ತಿದ್ದಿದ್ದಷ್ಟೂ ಅತೃಪ್ತಿ ಬೆಳೆಯುತ್ತದೆ. ಒಂದೇ ಸಿಟ್ಟಿಂಗ್‌ನಲ್ಲಿ ಯಾವತ್ತೂ ನನಗೆ ಕವಿತೆ ಬರೆಯುವುದು ಸಾಧ್ಯವಿಲ್ಲ. ಬರೆದದ್ದನ್ನು ಕನಿಷ್ಠ ನಾಲ್ಕಾರು ಸಲ ಪರಿಷ್ಕರಿಸದಿದ್ದರೆ ನನಗೆ ತೃಪ್ತಿ ಇಲ್ಲ.

**ಕಾವ್ಯ-ಕಾದಂಬರಿಗಳಲ್ಲಿ ಸಿದ್ಧಿ ಸಾಧಿಸಿದ ನೀವು ಕಥೆ-ನಾಟಕಗಳಿಂದ ದೂರ ಉಳಿದಿರೇಕೆ?**

ನನ್ನ ಓದಿನ ದಿನಗಳಲ್ಲಿ ಸಾಕಷ್ಟು ಕಥೆಗಳನ್ನು ಬರೆದೆ. ಆ ಮೇಲೆ ಯಾಕೋ ಆಸಕ್ತಿ ಕಡಿಮೆಯಾಯಿತು. ಇಪ್ಪತ್ತೈದು ವರ್ಷಗಳ ನಂತರ ಮತ್ತೆ ನಾಲ್ಕಾರು ಕಥೆ ಬರೆದಿದ್ದೇನೆ. ನಾಟಕಗಳ ಬಗ್ಗೆ ಮೊದಲಿನಿಂದಲೂ ನನಗೆ ಆಸಕ್ತಿ ಕಡಿಮೆ. ನಾನಿರುವ ಹಳ್ಳಿಯಲ್ಲಿ ಇದಕ್ಕೆ ಪೂರಕ ವಾತಾವರಣ ಇಲ್ಲದಿರುವುದೂ ಅದಕ್ಕೊಂದು ಕಾರಣವಿರಬೇಕು.

**ವೈದ್ಯರಾದ ನಿಮ್ಮೊಳಗಿನ ಕವಿಯ ತಕರಾರು ಏನು?**

ವೈದ್ಯವೃತ್ತಿ ನನ್ನ ಸಾಹಿತ್ಯ ಕೃಷಿಗೆ ಪೂರಕವಾದ ವೃತ್ತಿ ಅಲ್ಲ. ಯಾವ ಹೊತ್ತಿಗೆ ನನ್ನ ಮುಂದೆ ರೋಗಿ ಪ್ರತ್ಯಕ್ಷನಾಗುತ್ತಾನೋ ಗೊತ್ತಾಗುವುದಿಲ್ಲ. ಅದಕ್ಕೆ ರಾತ್ರಿ ಹಗಲೆನ್ನುವ ಹೊತ್ತು ಗೊತ್ತಿಲ್ಲ. ಹಾಗಾಗಿ ನನ್ನೊಳಗಿನ ಕವಿ ಯಾವಾಗಲೂ 'ನಿನಗೆ ಈ ವೃತ್ತಿ ಬೇಡ ಇತ್ತು!' ಎಂದು ತಕರಾರು ತೆಗೆಯುತ್ತಲೇ ಇದ್ದಾನೆ.

**ದಕ್ಷಿಣ ಕನ್ನಡದ ಪರಿಸರ ನಿಮ್ಮ ಬರವಣಿಗೆಗೆ ಪೂರಕವಾಗಿದ್ದು ಹೇಗೆ?**

ಕಳೆದ ಶತಮಾನದಲ್ಲಿ ಕನ್ನಡ ಸಾಹಿತ್ಯದ ದೊಡ್ಡ ಬೆಳೆ ಪ್ರಾರಂಭವಾದುದು ಮೊದಲು ದಕ್ಷಿಣ ಕನ್ನಡದಲ್ಲಿ. ಆಮೇಲೆ ಧಾರವಾಡ, ಮೈಸೂರು ಮೊದಲಾದ ಕಡೆಗಳಲ್ಲಿ. ದಕ್ಷಿಣ ಕನ್ನಡದ ಪಂಜೆ, ಪೈ, ಕಾಮತ್, ಶಂಕರಭಟ್ಟ, ಅಡಿಗ, ಕಾರಂತ, ರೈ ಮೊದಲಾದವರ ಪರಂಪರೆ ಮತ್ತು ಯಕ್ಷಗಾನದ ಹಿನ್ನೆಲೆ, ನನ್ನ ಬದುಕು ಮತ್ತು ಬರವಣಿಗೆಗೆ ನೇರ ಪ್ರಭಾವ ಬೀರಿದೆ. ಹಾಗೇ ಇಲ್ಲಿನ ಮಧ್ಯಮ ವರ್ಗದ ಜನರ ಸಾಹಿತ್ಯ ಪ್ರೀತಿ ಕೂಡಾ.

**ಈ ಹೊತ್ತು ಯಾಕೋ ಕನ್ನಡದಲ್ಲಿ ಅತ್ಯುತ್ತಮವೆನಿಸುವ ಕಾದಂಬರಿಗಳೇ ಬರುತ್ತಿಲ್ಲ ಎಂಬ ಅನೇಕರ ಆತಂಕಕ್ಕೆ ನೀವೊಬ್ಬ ಕಾದಂಬರಿಕಾರರೂ ಆಗಿ ಏನಂತ ಸಮಜಾಯಿಷಿ ಹೇಳುವಿರಿ?**

ನಿಜ, ಈ ಹೊತ್ತು ಒಳ್ಳೆ ಕಾದಂಬರಿಗಳು ಬರುತ್ತಿಲ್ಲ ಎನ್ನುವುದು ಸತ್ಯ. ಇದಕ್ಕೆ ಕಾರಣಗಳು ಹಲವು. ನವೋದಯ ಕಾಲದ ನಂತರ ಪ್ರಗತಿಶೀಲ ಅಥವಾ ನವ್ಯ ಪರಂಪರೆಯ ಲೇಖಕರ ಒಂದು ದಂಡೇ ವೃದ್ಧಿಯಾದ ಹಾಗೆ. ಆ ನಂತರ ಅಂಥ ಒಂದು ಲೇಖಕರ ವರ್ಗ ವೃದ್ಧಿಯಾಗದಿರುವುದೂ ಒಂದು. ವೇಗ ಯುಗದ ತಲ್ಲಣ, ಸಾಹಿತ್ಯ ಪ್ರೀತಿಯ ಬದಲು ಓದುಗ ವರ್ಗವನ್ನು ಆಕರ್ಷಿಸುವ ಬಹು ಮಾಧ್ಯಮಗಳು, ಸಾಹಿತ್ಯಕ್ಕೆ ಬಂದೊದಗಿದ ಬದ್ಧತೆ, ಈ ಬದ್ಧತೆಯಿಂದಾಗಿ ಓದುವ ಹವ್ಯಾಸದಲ್ಲಿ ಆದ ಹಿನ್ನಡೆ, ಇದರಿಂದಾಗಿ ಒಳ್ಳೆ ಕಾದಂಬರಿಗಳ ಪ್ರಕಾಶನಕ್ಕೂ ಸಿಗದೇ ಇರುವ ಪ್ರಕಾಶಕರು ಮತ್ತು ಬಹಳ ಮುಖ್ಯವಾದುದು ಅಂದರೆ ಜನಪ್ರಿಯ ಮತ್ತು ಕ್ಲಾಸಿಕಲ್ ಎಂಬ (ಅಘೋಷಿತ) ವರ್ಗೀಕರಣದ ನಡುವ

ಬರೆಯುವ ನನ್ನಂಥ ಕಾದಂಬರಿಕಾರರ ಬಗ್ಗೆ ನಮ್ಮ ವಿಮರ್ಶಕ ಕ್ಷೇತ್ರದ ನಿರ್ಲಕ್ಷ್ಯ ಮೊದಲಾದವು.

**ನಿಮ್ಮನ್ನು ಒಳಗೊಂಡಂತೆ ಹಲವು ಗಮನಾರ್ಹ ಬರಹಗಾರರನ್ನು ಕನ್ನಡದ ವಿಮರ್ಶೆ ಲೋಕ ತೆರೆದ ಕಣ್ಣಿಂದ ನೋಡಿಲ್ಲ ಎಂಬ ಮಾತಿದೆ?**

ಸತ್ಯ. ನಾವು ಅತ್ತ ಜನಪ್ರಿಯ ಬರಹಗಾರರು ಅಥವಾ ಇತ್ತ ಕ್ಲಾಸಿಕಲ್ ಬರಹಗಾರರೂ ಅಲ್ಲ ಎಂಬ ನಿರ್ಲಕ್ಷ್ಯಕ್ಕೆ ಒಳಗಾದ ಸ್ಥಿತಿಯಲ್ಲಿದ್ದೇವೆ ಅನಿಸುತ್ತದೆ ನನಗೆ. ಇದು ಮಧ್ಯಮ ವರ್ಗದ ಜನಸಾಮಾನ್ಯನ ಸ್ಥಿತಿಯೇ ಅಲ್ಲದೇ ಈಗ ಅಕಾಡೆಮಿಕ್ ಮತ್ತು ನಾನ್ ಅಕಾಡೆಮಿಕ್ ಎಂಬ ಅಲಿಖಿತ ಧೋರಣೆ ನಮ್ಮ ಅಂದರೆ ಸಾಹಿತಿಗಳ ನಡುವೆ ಬೆಳೆದಿದೆ. ಅಕಾಡೆಮಿಕ್ ವ್ಯಕ್ತಿಗಳಿಗೆ ಶಿಷ್ಯ ಸಂಪತ್ತು, ಅಧಿಕಾರ, ಪ್ರಭಾವ ಎಲ್ಲವೂ ಇದ್ದರೆ ನಾನ್ ಅಕಾಡೆಮಿಕ್ ಸಾಹಿತ್ಯಿಗಳಿಗೆ ಇಂಥ ಅವಕಾಶಗಳು ಕಡಿಮೆ. ಹೀಗಾಗಿ ಸಹಜವೋ ಎನ್ನುವಂತೆ ನನ್ನಂಥವರಿಗೆ 'ಸಾಹಿತ್ಯಕ ನ್ಯಾಯ' ಸಿಗದೇ ಹೋಯಿತು!

**ಅರವತ್ತು ವಸಂತಗಳನ್ನು ಪೂರೈಸಿದ ನಿಮ್ಮ ಮುಂದಿನ ಸಾಹಿತ್ಯಿಕ ಯೋಜನೆಗಳೇನು?**

ಸಾಹಿತ್ಯ ರಚನೆಯಲ್ಲಿ ನಾನು ಯೋಜನೆ ಹಾಕಿ ಮುಂದುವರಿಯುವವನಲ್ಲ. ಈಗ ನನ್ನ ಆತ್ಮಚರಿತ್ರೆ ಬರೆಯಲು ಹೊರಟಿದ್ದೇನೆ. ಅದು ಮುಗಿದ ಮೇಲೆ ಎರಡು ಬೃಹತ್ ಕಾದಂಬರಿಗಳ ರಚನೆಯ ಆಶೆ ಉಂಟು. ಆದರೆ ಅಂಥವುಗಳಿಗೆ ಪ್ರಕಾಶಕರು ಸಿಗುವುದು ಕಷ್ಟ ಎಂಬ ಭಯ ಕಾಡುತ್ತಿದೆ.

**ಗ್ರಾಮೀಣ ಪ್ರದೇಶದಲ್ಲೂ ಯಶಸ್ವೀ ಸಾಹಿತ್ಯಿಕ ಚಟುವಟಿಕೆಗಳ ರೂವಾರಿಯಾದ ನಿಮ್ಮ ಹಿಂದಿನ ಪ್ರೇರಕ ಶಕ್ತಿ ಯಾವುದು?**



ನಾನಿರುವುದು ಐದು ಸಾವಿರಕ್ಕೂ ಕಡಿಮೆ ಜನಸಂಖ್ಯೆಯುಳ್ಳ ಹಳ್ಳಿ. ಇಲ್ಲಿದ್ದೂ 26 ವರ್ಷಗಳಿಂದ ಮುದ್ದಣ ಕಾವ್ಯ ಪ್ರಶಸ್ತಿ, 24 ವರ್ಷಗಳಿಂದ ವರ್ಧಮಾನ ಪ್ರಶಸ್ತಿಗಳನ್ನು ನೀಡುತ್ತ ಬಂದಿರುವುದಕ್ಕೆ ಸಾಕ್ಷಿ ನನ್ನ ಜನ ನನ್ನ ಮೇಲಿಟ್ಟಿರುವ ಪ್ರೀತಿ. ಈಚೆಗೆ 25 ಲಕ್ಷ ರೂ. ವೆಚ್ಚದಲ್ಲಿ ಕಾಂತಾವರದಲ್ಲಿ ಒಂದು 'ಕನ್ನಡ ಭವನ' ನಿರ್ಮಾಣವಾಗಿದೆ. ಸರ್ಕಾರವೂ ಇದಕ್ಕೆ 12 ಲಕ್ಷ ರೂಪಾಯಿ ಅನುದಾನ ನೀಡಿದೆ. ಇದೆಲ್ಲ ನನ್ನಿಂದಾಯಿತು ಎಂಬ ಭ್ರಮೆ ನನಗೆ ಇಲ್ಲ. ಜನ ಮಾಡಿಸಿದ್ದಾರೆ ಎಂಬ ನಂಬಿಕೆ ನನ್ನದು.

ಕರ್ಮವೀರ, 26, ಅಕ್ಟೋಬರ್ 2004

O



# ೬೦ ಶ್ರಾವಣ ಕಂಡ
# 'ಕನ್ನಡ ಕಟ್ಟೋಣ'ದ ಮೊಗಸಾಲೆ

ಜಯರಾಮ ಕಾರಂತ

'ಅವರಿಗೆ ಹೇಳಿಕೊಳ್ಳುವಂಥ ಇಂಪ್ರೆಸಿವ್ ಪರ್ಸನಾಲಿಟಿ ಇಲ್ಲ/ ಇಲ್ಲ ನಮ್ಮ ಕೃತಕ ಪೋಸು/ ಒಬ್ಬ ಹಳ್ಳಿ ರೈತನಲ್ಲಿ ನೀವು ನನ್ನ ಮಾಸ್ತರರನ್ನು ಕಾಣಬಹುದು' - ಇವು ಕವಿ ಡಾ.ನಾ.ಮೊಗಸಾಲೆ ಅವರ 'ಮೊಗಸಾಲೆಯ ನೆನಪುಗಳು' ಎಂಬ ಸಂಕಲನ (1983)ದಲ್ಲಿನ ಒಂದು ಪದ್ಯದ ಸಾಲುಗಳು.

ತನ್ನ ಗುರುವಾದ ಹಳ್ಳಿಯ ಶಿಕ್ಷಕನೊಬ್ಬನ ಕುರಿತು ಅವರು ಬರೆದಿರುವ ಈ ಸಾಲುಗಳಲ್ಲಿ ಕೊನೆಯದು 60ನೆಯ ವಯಸ್ಸನ್ನು ತಲುಪಿರುವ ಅವರಿಗೇ ಅನ್ವಯಿಸುತ್ತದೆ!

ಕವಿ, ಕಾದಂಬರಿಗಾರ, ಕಥೆಗಾರ, ಸಾಹಿತ್ಯ ಪರಿಚಾರಕ ಮೊಗಸಾಲೆಯವರ ಹುಟ್ಟೂರು ಈಗ ಕೇರಳಕ್ಕೆ ಸೇರಿರುವ ಕಾಸರಗೋಡು ಜಿಲ್ಲೆಯ ಮಂಜೇಶ್ವರ ಫಿರ್ಕದ ಕೋಳ್ಯೂರು. ಅಂಥ ಗ್ರಾಮೀಣ ಪರಿಸರದಿಂದ ಸ್ವಲ್ಪ ಕಾಲ ದೂರಾಗಿ ಉಡುಪಿಯಂಥ ಬೆಳೆಯುತ್ತಿದ್ದ ಪಟ್ಟಣವೊಂದರಲ್ಲಿ ಅವರು ಆಯುರ್ವೇದ ಕಲಿತರು. ಆಮೇಲೆ ಗ್ರಾಮೀಣ ವೈದ್ಯಾಧಿಕಾರಿಯಾಗಿ ಕೋಳ್ಯೂರನ್ನೇ ನೆನಪಿಸುವಂತಿದ್ದ ಕಾರ್ಕಳ ತಾಲೂಕಿನ ಕಾಂತಾವರ ಎಂಬ ಹಳ್ಳಿಗೆ ಬಂದರು. ಅಲ್ಲೇ ನೆಲೆ ನಿಂತರು. ಅಲ್ಲಿನ ಹುಡುಗಿಯನ್ನೇ ಮದುವೆಯಾದರು. ವೃತ್ತಿಯೊಂದಿಗೆ ಲೇಖಕೀಯ ಪ್ರವೃತ್ತಿಯೂ ಬೆರೆತಿದ್ದುದರಿಂದ ಅದರ ಬೆಳವಣಿಗೆಗೆ ತಕ್ಕ ಆಡುಂಬೊಲವನ್ನು ತಾನಿದ್ದಲ್ಲೇ ನಿರ್ಮಿಸಿಕೊಂಡರು. ಹಳ್ಳಿ ಮೂಲೆಯೊಂದರಲ್ಲಿ ಕೂಡ ಯುವ ಸಂಘಟನೆ, ಕನ್ನಡ ಕಟ್ಟುವ ಕೆಲಸ ಸಾಧ್ಯ ಎಂಬುದನ್ನು ತೋರಿಸಿಕೊಟ್ಟರು.

ನಮ್ಮ ದೇಶದ ಭವಿಷ್ಯದ ಬೀಜ ಹಳ್ಳಿಗಳಲ್ಲಿದೆ ಎಂಬರ್ಥದ ಮಾತುಗಳನ್ನು ನಾವೆಲ್ಲ ಕೇಳಿದ್ದೇವೆ. ಒಂದು ಭಾಷೆಯ ಉತ್ಕರ್ಷದ ಬಗೆಗಿನ ಆಸಕ್ತಿಯಾಗಲಿ, ದೇಶದ ಅರ್ಥ ವ್ಯವಸ್ಥೆಯ ರೂಪುರೇಶೆಯಾಗಲಿ ಮೂಡುವುದು ಹಳ್ಳಿಗಳಲ್ಲೇ. ಜಗತ್ತಿನ ನಾನಾ ಸಂಸ್ಕೃತಿಗಳ ಮೂಲ ತಾಣಗಳು ಗ್ರಾಮಗಳೇ ಆಗಿವೆ.

ಹೀಗೆಂದು ವಾದಿಸುತ್ತ ನಾವು ಹಳ್ಳಿಗಳನ್ನು ಕಣ್ಣುಮುಚ್ಚಿ ಕೀರ್ತಿಸಬಹುದು. ಆದರೆ ಪೇಟೆಗಳಿಂದ/ನಗರಗಳಿಂದ ಹಳ್ಳಿಗಳಿಗೆ ಹೋಗಿ ನೆಲೆಸೋಣವೆಂಬ ಉತ್ಸಾಹ ಸುಶಿಕ್ಷಿತ ಪಟ್ಟಣಪ್ರಿಯರಿಗೆ ಬರುವುದು ಸಾಧ್ಯವೇ ಇಲ್ಲ. ಅದರಲ್ಲೂ ಮೂರು - ನಾಲ್ಕು ದಶಕಗಳ

ಹಿಂದೆ ಹೀಗೆ ಹಳ್ಳಿಗೆ ಮುಖಮಾಡುವ ವೈದ್ಯರಾಗಲಿ, ಶಿಕ್ಷಕರಾಗಲಿ ಹೆಚ್ಚು ಸಂಖ್ಯೆಯಲ್ಲಿ ಇರಲಿಲ್ಲ. ಏಕೆಂದರೆ, ಆಗ ನಮ್ಮ ಹೆಚ್ಚಿನ ಹಳ್ಳಿಗಳು 'ಕಗ್ಗಾಡ ಕೊಂಪೆ'ಗಳಾಗಿದ್ದವು;ವಿದ್ಯುತ್ತು – ಸಾರಿಗೆ ಸಂಪರ್ಕವಿಲ್ಲದ ದ್ವೀಪಗಳಾಗಿದ್ದವು.

ಆದರೆ ಮೊಗಸಾಲೆ 1960ರ ದಶಕದಲ್ಲಿ ಆಯ್ದುಕೊಂಡದ್ದು ದಕ್ಷಿಣಕನ್ನಡ (ಈಗ ಉಡುಪಿ) ಜಿಲ್ಲೆಯ ಕಾಂತಾವರ ಎಂಬ ಒಂದು ಹಳ್ಳಿಯನ್ನು. ಅಲ್ಲಿ ಅವರು ಅರೆ ಸರಕಾರಿ ವೈದ್ಯಾಧಿಕಾರಿಯಾಗಿ ಅರ್ಧ ಸಂಬಳಕ್ಕೆ ದುಡಿದರು. ಖಾಸಗಿ ದವಾಖಾನೆ ತೆರೆದು ಮಧ್ಯಾಹ್ನದ ಬಳಿಕದ ತಾಸುಗಳನ್ನು ಗ್ರಾಮೀಣ ಮುಗ್ಧರ ಚಿಕಿತ್ಸೆಯ ಅಗತ್ಯಗಳಿಗಾಗಿ ಮೀಸಲಿಟ್ಟರು. ಊರ ರೈತ ಯುವಕರನ್ನು, ಶಿಕ್ಷಕ ಬಂಧುಗಳನ್ನು ಸಂಘಟಿಸಿದರು; 'ರೈತ ಯುವಕ ವೃಂದ'ವನ್ನು ಕಟ್ಟಿದರು. ಕೃಷಿ ಮತ್ತು ಲಲಿತಕಲೆಗಳಲ್ಲಿನ ಅವರ ಆಸಕ್ತಿಗಳಿಗೆ ಒತ್ತಾಸೆ ಕೊಟ್ಟರು.

ಆಮೇಲೆ 1976ರ ಹೊತ್ತಿಗೆ ಸಮಾನ ಆಸಕ್ತರನ್ನು ಹುರಿದುಂಬಿಸಿ ಕಾಂತಾವರ, ಬೆಳುವಾಯಿ, ಬೋಳ, ಕೆದಿಂಜೆ, ನಂದಳಿಕೆ ಗ್ರಾಮಗಳ ವ್ಯಾಪ್ತಿಯಲ್ಲಿ ಕಾರ್ಯಾಚರಿಸುವ ದೀಕ್ಷೆ ಹೊತ್ತ ಕಾಂತಾವರ ಕನ್ನಡ ಸಂಘದ ಸ್ಥಾಪನೆ. ಇದರ ಆಶ್ರಯದಲ್ಲಿ ರಾಜ್ಯ ಮಟ್ಟದ ಸಾಹಿತ್ಯ ಸಂಕಿರಣಗಳು. ವಿಶೇಷ ಉಪನ್ಯಾಸ ಮಾಲಿಕೆಗಳು. ವಿದ್ವತ್ ಸಮ್ಮಾನಗಳು. ದಕ್ಷಿಣ ಕನ್ನಡ ಕಾವ್ಯ ಸಂಪುಟದಂಥ ಪ್ರಕಟಣೆಗಳು. 1977ರಲ್ಲಿ ಅಖಿಲ ಕರ್ನಾಟಕ ಮಟ್ಟದ ಮುದ್ದಣ ಕಾವ್ಯ ಸ್ಪರ್ಧೆ – ಮುದ್ದಣ ಪ್ರಶಸ್ತಿ ಯೋಜನೆಯ ಆರಂಭ. 1978ರಲ್ಲಿ ನೆರೆಯ ಮೂಡಬಿದಿರೆಯಲ್ಲಿ ವರ್ಧಮಾನ ಪ್ರಶಸ್ತಿ ಪೀಠದ ಸ್ಥಾಪನೆಗೂ ಅವರೇ ಕಾರಣರಾದರು. ಅಂದಿನಿಂದ ಇಂದಿನವರೆಗೂ ಅದರ ಪ್ರಧಾನ ನಿರ್ದೇಶಕರಾಗಿ ಕಾಂತಾವರ ಕನ್ನಡ ಸಂಘದ ಕಾರ್ಯಾಧ್ಯಕ್ಷರಾಗಿ ಅವರು ತ್ರಿಕರಣ ಪೂರ್ವಕ ಕಾರ್ಯನಿರ್ವಹಿಸುತ್ತಿದ್ದಾರೆ. ಮೊನ್ನೆ ಮೊನ್ನೆ ಕಾಂತಾವರ ಮೂಲದ ರಾಷ್ಟ್ರಮಟ್ಟದ ರಾಜಕಾರಣಿ, ಏಕೀಕರಣ ಚಳವಳಿಯ ನಾಯಕ ಕಾಂತಾವರ ಬಾರಾಡಿಬೀಡು ಜಿನರಾಜ ಹೆಗ್ಗಡೆಯವರ ಜನ್ಮಶತಮಾನೋತ್ಸವದ ನೆನಪಿಗಾಗಿ ಕಾಂತಾವರದಲ್ಲಿ ತಲೆಯೆತ್ತಿದ ಕನ್ನಡ ಭವನದ ಕೆಲಸದಲ್ಲೂ ಅವರು ಸದ್ದಿಲ್ಲದೆ ಭಾಗಿಯಾಗಿದ್ದಾರೆ.

### ಗ್ರಾಮೀಣ ಸಾಹಸ

ಇಂದು ಕಾಂತಾವರ ಕನ್ನಡ ಸಂಘ ಹಾಗೂ ವರ್ಧಮಾನ ಪ್ರಶಸ್ತಿ ಪೀಠ ಕರ್ನಾಟಕದ ಉದ್ದಗಲಗಳಲ್ಲಿ ಸುಪರಿಚಿತ. ಅವು ನೀಡುವ ಪ್ರಶಸ್ತಿಗಳಿಗೆ ಅವುಗಳದೇ ಆದ ಒಂದು ತೂಕವಿದೆ. ಹಳ್ಳಿಯಲ್ಲಿ ನೆಲೆಸಿದ ಸಾಹಿತ್ಯ ಸಂಘಟನೆಗಳು ಮನಸ್ಸು ಮಾಡಿದರೆ ಏನನ್ನೂ ಸಾಧಿಸಿಯಾವು ಎಂಬುದಕ್ಕೆ ಈ ಸಂಸ್ಥೆಗಳು ಉದಾಹರಣೆಗಳು. ಇವುಗಳ ಹಿಂದಿರುವುದು ಮೊಗಸಾಲೆಯವರ ಕರ್ತವ್ಯಶೀಲ ಮನಸ್ಸು.

ಇದಕ್ಕೆಲ್ಲ ಕಾರಣ ಮೊಗಸಾಲೆಯೇ ಎಂದರೆ ಅವರೇ ಒಪ್ಪಲಾರರು! ವರ್ಧಮಾನ ಪ್ರಶಸ್ತಿ ಪೀಠದ ಯಶಸ್ವಿಗೆ ಧರ್ಮಸ್ಥಳದ ವೀರೇಂದ್ರ ಹೆಗ್ಗಡೆ, ಕುಲ್ಯಾಡಿ ಮಾಧವ ಪೈ, ಮೂಡಬಿದಿರೆಯ ಚಾರುಕೀರ್ತಿ ಭಟ್ಟಾರಕವರ್ಯ ಸ್ವಾಮೀಜಿ, ಶ್ರೀಪಾಲ್ ಎಸ್.

ಅಪರಂಥವರು ಕಾರಣವೆಂದು ಹೇಳಿಯಾರು. ಕಾಂತಾವರ ಕನ್ನಡ ಸಂಘದ ಬೆಳವಣಿಗೆಯ ಹಿಂದೆ ಹರಿಕೃಷ್ಣ ಪುನರೂರು, ಕಾಂತಾವರದ ಧರ್ಮದರ್ಶಿ ಡಾ.ಜೀವಂಧರ ಬಲ್ಲಾಳ, ಪಿತಲ ಬೇಲಾಡಿ, ನಂದಳಿಕೆ ಬಾಲಚಂದ್ರ ರಾವ್, ಟ.ದಿವಾಕರ ರಾವ್, ಜನಾರ್ದನ ಭಟ್‌ರಂಥವರು ಇದ್ದಾರೆ ಎಂದಾರು. ಸಂಘದ ವ್ಯಾಪ್ತಿಯ ಗ್ರಾಮಗಳ ಹತ್ತು-ಹಲವು ತರುಣ ಮಿತ್ರರತ್ತ ಬೆಟ್ಟುಮಾಡಿಯಾರು.

**ಸಾಹಿತ್ಯ ಕೃಷಿ**

'ಸಹೃದಯನಲ್ಲದವನು ಸಾಹಿತ್ಯ ಪ್ರೇಮಿಯೂ ಆಗಲಾರ, ಸಾಹಿತ್ಯ ವ್ಯವಸಾಯಿಯೂ ಆಗಲಾರ' ಎಂಬುವಕ್ಕೆ ಮೊಗಸಾಲೆ ಒಳ್ಳೆಯ ಉದಾಹರಣೆ. ಅವರು ಸ್ವಭಾವತಃ ಸ್ನೇಹಶೀಲ. ಗೆಳೆತನದಲ್ಲಿ ಸಾರ್ಥಕತೆಯನ್ನರಸುವ ವ್ಯಕ್ತಿ. ಅವರ ಸಾಹಿತ್ಯ ಸಂಘಟನೆಯ ಚಟುವಟಿಕೆಗಳ ಹಿಂದಿನ ಉದ್ದೇಶವೇ ಮಿತ್ರರ ಬಳಗವನ್ನು ವಿಸ್ತರಿಸಿಕೊಳ್ಳುವುದು ಎನ್ನಬಹುದು. 'ವರ್ತಮಾನದ ಮುಖಗಳು' ಸಂಕಲನದಿಂದ ಹಿಡಿದು 'ಇದಲ್ಲ ಇದಲ್ಲ'ದ ತನಕ ಏಳು ಕವಿತಾ ಸಂಕಲನಗಳನ್ನು, 'ನನ್ನದಲ್ಲದ್ದು', 'ಪ್ರಕೃತಿ', 'ಪಂಥ'ದಂಥ 14 ಕಾದಂಬರಿಗಳನ್ನು, ಹಲವು ಸಣ್ಣಕಥೆಗಳನ್ನು ಪ್ರಕಟಿಸಿರುವ ಅವರು ತನ್ನ ಕೃತಿಗಳಲ್ಲಿ ಶೋಧಿಸುವುದು ಇಂಥ ಸಹೃದಯಿಗಳನ್ನೇ. ಅವರ ಕವಿತೆಗಳಲ್ಲಿ ಸ್ನೇಹ, ವಿಶ್ವಾಸಗಳಿಗಾಗಿ ತುಡಿಯುವ ಒಬ್ಬ ಹೆಸರಿಲ್ಲದ ವ್ಯಕ್ತಿ ಸಹೃದಯೀ ಸಮುದಾಯವನ್ನುದ್ದೇಶಿಸಿ ಅನೌಪಚಾರಿಕವಾಗಿ ಮಾತನಾಡುತ್ತಿರುವುದನ್ನು ನೋಡಬಹುದು. ಸಾಮಾನ್ಯ ಮನುಷ್ಯನನ್ನು ಅವನ ಎದೆಯೊಳಗಿನ ಆತಂಕ - ಪುಳಕ- ನಿರೀಕ್ಷೆ- ನಿರಾಸೆಗಳನ್ನು ಚಿತ್ರಿಸಿಯೇನೆಂಬ ತುಡಿತ ಅವರ ಬಹುತೇಕ ಕವನಗಳ ಹಿಂದಿನ ಆಶಯ. ವೈಯಕ್ತಿಕ ಹಾಗೂ ಸಾಮಾಜಿಕ ಸಂಬಂಧಗಳ ವಿಶ್ಲೇಷಣೆ ಅವರ ಹೆಚ್ಚಿನ ಕಾದಂಬರಿಗಳ ಹಿಂದಿನ ಕಾಳಜಿ. ಅವರು ಕವಿತೆಗಳಲ್ಲಿ ನಿತ್ಯಮಾತುಗಳಿಂದಲೇ ಹೊಸ ಹೊಸ ರೂಪಕಗಳನ್ನು ಕಟ್ಟುತ್ತ ಧರ್ಮ, ರಾಜಕಾರಣ ಹಾಗೂ ಸೈದ್ಧಾಂತಿಕ ಬದ್ಧತೆಗಳ ಬೇಡಿಗಳನ್ನು ತುಂಡರಿಸುವ ಬಗೆ ಹೇಗೆಂಬುದನ್ನು ಚಿಂತಿಸುತ್ತಾರೆ. ಅವರ ಕಥೆ ಹಾಗೂ ಕಾದಂಬರಿಗಳಲ್ಲಿ ಈ ಚಿಂತನೆ ವಿಡಂಬನೆಯ ಕೊರತೆಯೊಂದಿಗೆ, ಕವಿಯೊಬ್ಬನ ಮುಗುಡದೊಂದಿಗೆ, ವೈವಿಧ್ಯಮಯ ವಿನ್ಯಾಸಗಳಲ್ಲಿ ದಾಖಲಾಗಿದೆ. ಅವರ ಮೂಲ ಉದ್ದೇಶ- ಮನುಷ್ಯರ ನಡುವಿನ ವಿಶ್ವಾಸ ನಿತ್ಯದ ಬದುಕಿಗೆ ಶ್ವಾಸವೂಡದಿದ್ದಲ್ಲಿ ಎಲ್ಲವೂ ವ್ಯರ್ಥವಲ್ಲವೇ ಎಂದು ಪ್ರಶ್ನಿಸುವುದಾಗಿದೆ. ತನ್ನನ್ನು ಸಂಪರ್ಕಿಸುವ ಯಾವನೇ ವ್ಯಕ್ತಿಯಿರಲಿ ಅವನ ಜಾತಿ, ಪಂಥ, ಹುದ್ದೆ, ಸೈದ್ಧಾಂತಿಕ ಒಲವುಗಳಿಗೆ ಬೆಲೆಕೊಡಬೇಕೆ ಅಥವಾ ಅವನ ಸರಳ- ಸ್ನೇಹಶೀಲ ನಡವಳಿಕೆಗೇ ಎಂಬ ಪ್ರಶ್ನೆ ಅವರನ್ನೆಂದೂ ಬಾಧಿಸುವುದಿಲ್ಲ! ಏಕೆಂದರೆ, ಅವರ ಆಯ್ಕೆ ನಿಸ್ಸಂಶಯವಾಗಿ ಎರಡನೆಯದೇ!

**ಎಲ್ಲರ ಮಿತ್ರ**

ಹೀಗಾಗಿಯೇ ಅವರ ಸ್ನೇಹಿತರ ಬಳಗ ದೊಡ್ಡದು - ಅದರಲ್ಲಿ ಸಮಾಜದ ಅಧ್ವರಿದ್ದಾರೆ. ಧಾರ್ಮಿಕ ಮುಖಂಡರಿದ್ದಾರೆ, ನಾಸ್ತಿಕರೆನಿಸಿಕೊಂಡ ಬುದ್ಧಿಜೀವಿಗಳೂ ಇದ್ದಾರೆ; ರಾಜಕೀಯ ಮುಖಂಡರಿದ್ದಾರೆ, ಉದ್ಯಮಿಗಳಿದ್ದಾರೆ, ಕವಿ ಕಲಾವಿದ ಶಿಕ್ಷಕರಿದ್ದಾರೆ, ಕಾರ್ಮಿಕರಿದ್ದಾರೆ,

ಸಮಾಜಸೇವಕರಿದ್ದಾರೆ, ಸಾಹಿತ್ಯವೆಂದರೆ ಏನೆಂದು ಅರಿಯದ ವೆಂಕ ನಾಣಿ ಶೀನಿಗಳೂ ಇದ್ದಾರೆ.

ಸಾಹಿತಿ ಮಿತ್ರರ, ಸಂಘಟನಾ ಸಹವ್ಯಸನಿಗಳ ಅಭಿಮಾನಕ್ಕೆ ಹೇಗೋ ಹಾಗೆ ಟೀಕೆ–ಟಿಪ್ಪಣಿಗಳಿಗೂ ಅವರು ತುತ್ತಾಗಿದ್ದಾರೆ. ಅವರು ಸಾಹಿತ್ಯ ಕೃಷಿಗಷ್ಟೇ ತನ್ನ ಗಮನವನ್ನು ನೀಡಿದ್ದಿದ್ದರೆ, ತಿದ್ದಿ ತೀಡಿ ಬರೆದಿದ್ದರೆ ಇನ್ನಷ್ಟು ನಯ, ನಾಜೂಕುಗಳು ಅವರ ಕೃತಿಗಳಿಗೆ ಲಭಿಸಬಹುದಿತ್ತು ಎನ್ನುವವರಿದ್ದಾರೆ. ಆದರೆ ಸಾಹಿತ್ಯ ಪರಿಚರ್ಯೆಯನ್ನು ಅವರು ಬಡಪೆಟ್ಟಿಗೆ ಕೈಬಿಡಲಾರರು! ಅದರೊಂದಿಗಿನ ಅವರ ದಾಂಪತ್ಯ 35 ವರ್ಷಗಳಷ್ಟು ಹಳೆಯದು!

ಮೊದಲೇ ಹೇಳಿದಂತೆ ಮೊಗಸಾಲೆ ನಾನ್– ಅಕಾಡೆಮಿಕ್ ಮನುಷ್ಯ. ಅವರ ಪ್ರತಿಭೆ ಕಾಡಬಳ್ಳಿಯ ತರಹದ್ದು. ಕನ್ನಡ ಸಾಹಿತ್ಯದ ವಿವಿಧ ಪಂಥಗಳ ಒಳ್ಳೆಯ ಅಂಶಗಳನ್ನು ಸ್ವಾಧ್ಯಾಯಿಯಾದ ಅವರು ತನ್ನ ಕೃತಿಗಳಲ್ಲಿ ದುಡಿಸಿಕೊಂಡಿದ್ದಾರೆ. ಅವರ ಈ ಕೃತಿಗಳಲ್ಲಿ ನಮಗೆ ಸಿಕ್ಕುವುದು ಅಕಾಡೆಮಿಕ್ ಶಿಸ್ತಿಗೆ ಸಿಕ್ಕದ ಮೊಗಸಾಲೆಯೇ! ಅವರ ಕಾರ್ಯ ವ್ಯವಹಾರ ಶೈಲಿಯೂ ಅವರದೇ; ಸರಳ ಹಾಗೂ ಪರಿಣಾಮಕಾರಿ. ವಿಮರ್ಶೆಗೆ ಸಿಗದೆ ಉಳಿದುಕೊಳ್ಳುವ ರೀತಿಯದು.

ತನ್ನ ಸಂಪರ್ಕಕ್ಕೆ ಬರುವ ಎಲ್ಲರಲ್ಲೂ ಸಾರ್ಥಕಭಾವವನ್ನು ಹುಟ್ಟಿಸುವಂಥ ಬೆಚ್ಚಗಿನ ನಡೆವಳಿಕೆ ಅವರದು. ಕನ್ನಡ ಸಂಘದ ಯಾವುದೋ ಒಂದು ಕೆಲಸವಾಗಬೇಕಾದರೆ, ಯಾರು ಇದಕ್ಕೆ ಅರ್ಹ ವ್ಯಕ್ತಿ ಎಂಬುದನ್ನು ಅವರು ಕರಾರುವಕ್ಕಾಗಿ ನಿರ್ಧರಿಸುತ್ತಾರೆ. ಸ್ನೇಹದಿಂದ ಅವರನ್ನು ಒಲಿಸಿಕೊಂಡು ತನ್ನ ಯೋಜನೆಯನ್ನು ಅವರ ಮುಂದಿರಿಸುತ್ತಾರೆ. ಇವರ ಸರಳತೆ, ಪ್ರಾಮಾಣಿಕತೆ ಹಾಗೂ ಸಂಕಲ್ಪದ ತೀವ್ರತೆ ಅವರಿಂದ ಆ ಕೆಲಸವನ್ನು ಮಾಡಿಸಿಬಿಡುತ್ತದೆ!

ಅವರು ತಮ್ಮ ಕಾವ್ಯ, ಕಾದಂಬರಿಗಳಿಗಾಗಿ ಹಲವು ಪ್ರಶಸ್ತಿ ಪುರಸ್ಕಾರಗಳಿಗೆ ಪಾತ್ರರಾಗಿದ್ದಾರೆ. (ಬಿ.ಎಚ್, ಶ್ರೀಧರ ಪ್ರಶಸ್ತಿ, ಕಡೆಂಗೋಡ್ಲು ಕಾವ್ಯ ಪ್ರಶಸ್ತಿ, ದಿನಕರ ದೇಸಾಯಿ ದತ್ತಿ ಪ್ರಶಸ್ತಿ, ಪರ್ಲ ಕಾವ್ಯ ಪ್ರಶಸ್ತಿ, ಮಾಸ್ತಿ ಪ್ರಶಸ್ತಿ, ವಿಶುಕುಮಾರ್ ಪ್ರಶಸ್ತಿ, ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಇತ್ಯಾದಿ.) ಅವರ ಆರೋಗ್ಯ ವಿಷಯದ ಅಂಕಣ ಬರಹಗಳ ಸಂಕಲನವೊಂದಕ್ಕೂ ಪುರಸ್ಕಾರ ಲಭಿಸಿದೆ. ತನ್ನ ಬರವಣಿಗೆಯ ಕುರಿತು ಅವರು ಒಂದೆಡೆ ಹೀಗೆ ಹೇಳಿಕೊಂಡಿದ್ದಾರೆ – 'ಪ್ರತಿ ಸಲದ ಬರವಣಿಗೆಯೂ ನನಗೆ ಸವಾಲೇ ಆಗಿರುವುದರಿಂದ ನನ್ನ ಬರವಣಿಗೆಯನ್ನು ನವೋದಯವೋ ನವ್ಯವೋ ನವ್ಯೋತ್ತರವೋ ಎಂದು ವರ್ಗೀಕರಿಸಲು ನಾನು ಪ್ರಯತ್ನಿಸಲಿಲ್ಲ. ನಾನು ನನಗಾಗಿ ಎಷ್ಟೋ ಅಷ್ಟೇ ಸಹೃದಯಿಗಳಿಗೆ ಏನು ಹೇಳಬೇಕಾಗಿದೆಯೆಂಬುದೇ ನನಗೆ ಮುಖ್ಯ'. ಈಚೆಗೆ 'ಆ್ಯಂಜೈನ'ದಂಥ ಹೃತ್ ಸಂಬಂಧಿ ತೊಂದರೆಗೊಳಗಾಗಿ ಚೇತರಿಸಿಕೊಂಡಿರುವ ಅವರು ಮತ್ತೆ ಬರೆವಣಿಗೆಯ ಮೇಜಿನತ್ತ ಹಾಗೂ ಸಾಹಿತ್ಯ ಸಂಘಟನೆಯತ್ತ ಮೊಗ ಮಾಡಿರುವುದು ಸಂತಸದ ಸಂಗತಿ.

ಅವರ ಪತ್ನಿ ಪ್ರೇಮಾ ಅವರ ಸಾಧನೆಗಳ ಹಿಂದಿರುವ 'ಕಾಂತಾವರ'ದ ಒಂದು ಶಕ್ತಿ. ಮೊಗಸಾಲೆಯ ಸ್ನೇಹ ವರ್ತುಲದಲ್ಲಿರುವ ಎಲ್ಲರ ಪಾಲಿಗೆ ಇವರು ಪ್ರೇಮಕ್ಕ. ಮೂವರು

ಗಂಡು ಮಕ್ಕಳು - ಅವರೆಲ್ಲ ಒಳ್ಳೆಯ ಉದ್ಯೋಗದಲ್ಲಿದ್ದಾರೆ. ಅವರ ಇನ್ನಿಬ್ಬರು ಮಕ್ಕಳಾದ ಕಾಂತಾವರ ಕನ್ನಡ ಸಂಘ ಮತ್ತು ವರ್ಧಮಾನ ಪ್ರಶಸ್ತಿ ಪೀಠ - ಇವು ಅವರಿಗೆ ಹೇಗೋ ಕಾಂತಾವರಕ್ಕೂ ಹೆಸರು ತಂದಿವೆ. ಅವರ ಈ ಸಂಸಾರ ದೀರ್ಘಕಾಲ ಸುಖವಾಗಿ ಮುನ್ನಡೆಯಲಿ! ಅವರಲ್ಲಿ ಇನ್ನಷ್ಟು ಬರವಣಿಗೆ ನಡೆಸುವ, ಕನ್ನಡ ಸಂಘದ ಚಟುವಟಿಕೆಗಳಿಗೆ ಇನ್ನಷ್ಟು ಹೊಳಪು ನೀಡುವ ಆಕಾಂಕ್ಷೆಯಿದೆ. ಮುದ್ದಣ ಕಾವ್ಯ ಪ್ರಶಸ್ತಿ ಯೋಜನೆಗೆ 25 ವರ್ಷ ತುಂಬಿದ ಸಂಭ್ರಮಾರ್ಥ ಈ ನವೆಂಬರ್‌ನಲ್ಲಿ ರಾಜ್ಯಮಟ್ಟದ ಸಾಹಿತ್ಯೋತ್ಸವ, ಪುಸ್ತಕಗಳ ಪ್ರಕಟಣೆಯಂಥ ಹೊಸ ಹೊಸ ಯೋಜನೆಗಳನ್ನು ಅವರು ಹಾಕಿಕೊಂಡಿದ್ದಾರೆ. ಅವುಗಳನ್ನು ಸಾಕಾರಗೊಳಿಸಲು ತಕ್ಕ ಸ್ನೇಹ ಸಹಕಾರದ ಹಸ್ತಗಳು ಅವರಿಗೆ ದೊರಕಲಿ. ಆರೋಗ್ಯ- ಉತ್ಸಾಹಗಳೆಂಬ ಅವರ ರೆಕ್ಕೆಗಳು ದಣಿಯದಿರಲಿ.

---

ತರಂಗ, 16 ಸೆಪ್ಟೆಂಬರ್ 2004

o

# ಡಾ.ನಾ.ಮೊಗಸಾಲೆ ನಡೆದು ಬಂದ ದಾರಿ

ಹೆಸರು : ನಾರಾಯಣ ಭಟ್ಟ ಮೊಗಸಾಲೆ

ಕಾವ್ಯ ನಾಮ : ನಾ.ಮೊಗಸಾಲೆ

ಜನನ : 27–08–1944 ಕಾಸರಗೋಡು ಜಿಲ್ಲೆಯ(ಹಿಂದಿನ ದ.ಕ) ಮಂಜೇಶ್ವರ ಫಿರ್ಕಾದ ಕೋಳ್ಯೂರು ಗ್ರಾಮದ ಮೊಗಸಾಲೆ ಎಂಬ ಪ್ರದೇಶ.

ಓದು : ಕೋಳ್ಯೂರು, ಕನ್ಯಾನ, ಉಡುಪಿಯಲ್ಲಿ , ಡಿ.ಎಸ್.ಎ.ಸಿ ಎಂಬ ಆಯುರ್ವೇದ ಪದವಿ.

ವೃತ್ತಿ ಮತ್ತು ಸ್ಥಳ: ವೈದ್ಯಕೀಯ. 1965 ರಿಂದ ಕಾರ್ಕಳ ತಾಲೂಕಿನ ಕಾಂತಾವರ ಎಂಬ ಹಿಂದುಳಿದ ಗ್ರಾಮದಲ್ಲಿ.

ಪ್ರವೃತ್ತಿ : ಸಾಹಿತ್ಯ ಸಾಂಸ್ಕೃತಿಕ ಸಾಮಾಜಿಕ ಸಂಘಟನೆಗಳಲ್ಲಿ ಒಳಗೊಳ್ಳುವುದು.

1. 1966ರಲ್ಲಿ ಕಾಂತಾವರದಲ್ಲಿ ರೈತ ಯುವಕ ವೃಂದದ ಸ್ಥಾಪನೆ. ಅದರಲ್ಲಿ ವಿವಿಧ ಪದಾಧಿಕಾರಿಯಾಗಿ ಸೇವೆ. ತಾಲೂಕಿಗೇ ಪ್ರಥಮ ಸ್ಥಾನ.

2. 1975ರಲ್ಲಿ ಕಾಂತಾವರದಲ್ಲಿ ಕಾಂತಾವರ ಕನ್ನಡ ಸಂಘದ ಸ್ಥಾಪನೆ. 1975ರಿಂದ ಅದರ ಅಧ್ಯಕ್ಷ. ಸಂಘದಿಂದ 1979ರಿಂದ ಮುದ್ದಣ ಕಾವ್ಯ ಪ್ರಶಸ್ತಿ (ಐದು ಸಾವಿರ ರೂಪಾಯಿ ಗೌರವ ಸಂಭಾವನೆ ಮತ್ತು ಸನ್ಮಾನ)ಯನ್ನು 28 ಕವಿಗಳಿಗೆ ನೀಡಲಾಗಿದೆ. 49 ಮಂದಿ ಸಾಹಿತಿ ಕಲಾವಿದರನ್ನು ಗೌರವಿಸಲಾಗಿದೆ. ಸಂಘದಿಂದ ಮಹತ್ವದ ಗ್ರಂಥ ಹಾಗೂ ಸಾಹಿತ್ಯ ಕೃತಿಗಳನ್ನು ಪ್ರಕಟಿಸಲಾಗಿದೆ ಮತ್ತು ಅನೇಕ ಸಾಹಿತ್ಯ ಗೋಷ್ಠಿಗಳನ್ನು ನಡೆಸಲಾಗಿದೆ. 2001ರಲ್ಲಿ ಕನ್ನಡ ಸಂಘದ ಬೆಳ್ಳಿಹಬ್ಬವನ್ನು ರಾಜ್ಯಮಟ್ಟದಲ್ಲಿ ಆಚರಿಸಲಾಗಿದೆ. ಈ ಸಂಘದಿಂದ "ದಕ್ಷಿಣ ಕನ್ನಡದ ಶತಮಾನದ ಕಾವ್ಯ 1900–2000" ಎಂಬ ಬೃಹತ್ ಗ್ರಂಥ (ಪುಟ 475–ಬೆಲೆ ರೂ.250/–)ವನ್ನು ಲಕ್ಷಕ್ಕೂ ಮಿಕ್ಕಿ ವೆಚ್ಚದಲ್ಲಿ ಪ್ರಕಾಶಿಸಲಾಗಿದೆ.

3. 1978ರಲ್ಲಿ ಮೂಡಬಿದ್ರೆಯಲ್ಲಿ ರಾಜ್ಯಮಟ್ಟದ ವರ್ಧಮಾನ ಪ್ರಶಸ್ತಿ ಪೀಠ ಎಂಬ

ಸಾಹಿತ್ಯ ಲಲಿತ ಕಲಾ ಅಕಾಡೆಮಿ ಸ್ಥಾಪನೆ. ರಾಜರ್ಷಿ ಡಾ.ವೀರೇಂದ್ರ ಹೆಗ್ಗಡೆಯವರು 11 ವರುಷ ಇದರ ಅಧ್ಯಕ್ಷರು. ಪ್ರಶಸ್ತಿ ಪೀಠ ಸ್ಥಾಪನೆಯಾದಂದಿನಿಂದ ಅದರ ಪ್ರಧಾನ ನಿರ್ದೇಶಕ. 24 ವರುಷಗಳಿಂದ ಪ್ರತೀ ವರುಷವೂ ಇಬ್ಬರು ಸಾಹಿತಿಗಳಿಗೆ ರೂಪಾಯಿ 9000/-ದ ಗೌರವ ಸಂಭಾವನೆಯೊಂದಿಗೆ ವರ್ಧಮಾನ ಪ್ರಶಸ್ತಿ ನೀಡಿ ಸನ್ಮಾನ. ಈ ತನಕ 48 ಮಂದಿ ಈ ಪ್ರಶಸ್ತಿ ಪಡೆದಿದ್ದಾರೆ. (1979ರಿಂದ 2004ರ ತನಕ)

4. 1994ರಲ್ಲಿ ಕಾಂತಾವರದಲ್ಲಿ ನಡೆದ ಕಾರ್ಕಳ ತಾ। ಎರಡನೇ ಸಾಹಿತ್ಯ ಸಮ್ಮೇಳನದ ಸಂಚಾಲಕ.

5. 1996ರಲ್ಲಿ ಬೇಲಾಡಿಯಲ್ಲಿ ಜರುಗಿದ ಕಾರ್ಕಳ ತಾ। ನಾಲ್ಕನೇ ಸಾಹಿತ್ಯ ಸಮ್ಮೇಳನದ ಸಂಚಾಲಕ.

6. ಡಾ.ಹಾ.ಮಾ.ನಾಯಕರು ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿದ್ದಾಗ(1980-83) ಅಕಾಡೆಮಿಯ ಸರ್ವ ಸದಸ್ಯರ ಶಿಫಾರಸ್ಸಿನ ಮೇರೆಗೆ 3 ವರುಷದ ಅವಧಿಯ ನಾಮಕರಣ ಸದಸ್ಯ.

7. 2001ರಲ್ಲಿ ಕರ್ನಾಟಕ ಏಕೀಕರಣದ ಆಧ್ವರ್ಯ ಕೆ.ಜಿ. (ಕಾಂತಾವರ ಬಾರಾಡಿಬೀಡು) ಜಿನರಾಜ ಹೆಗ್ಡೆ ಅವರ ಸ್ಮಾರಕ ಟ್ರಸ್ಟ್ ಸ್ಥಾಪನೆ. ಆ ಟ್ರಸ್ಟಿನ ವತಿಯಿಂದ- ರಾಜ್ಯಮಟ್ಟದ ಜನ್ಮ ಶತಮಾನೋತ್ಸವ ಆಚರಣೆ ಮತ್ತು 25 ಲಕ್ಷ ವೆಚ್ಚದಲ್ಲಿ ಕನ್ನಡ ಭವನದ ನಿರ್ಮಾಣ. 24-08-2003ರಂದು ಕನ್ನಡ ಭವನದ ಉದ್ಘಾಟನೆ. ಪರಿಪೂರ್ಣ ಗ್ರಂಥಾಲಯಗಳ ಯೋಜನೆ. ಕರ್ನಾಟಕ ಸರಕಾರದಿಂದ 12 ಲಕ್ಷ ಧನ ಸಹಾಯ.

8. ಮುದ್ದಣ ಸ್ಮಾರಕ ಕಾವ್ಯ ಪ್ರಶಸ್ತಿ ಯೋಜನೆಯ ಬೆಳ್ಳಿಹಬ್ಬ ಪ್ರಶಸ್ತಿ ಪುರಸ್ಕೃತ ಕವಿಗಳಿಂದ ರಾಜ್ಯಮಟ್ಟದ ಕವಿಗೋಷ್ಠಿ, ರಾಜ್ಯಮಟ್ಟದ ವಿಚಾರ ಸಂಕಿರಣ. (7-10-2004)

**ಗೌರವಗಳು:**

1. ಭಾರತ ಸರಕಾರದ ದಕ್ಷಿಣ ಮಧ್ಯ, ಸಾಂಸ್ಕೃತಿಕ ಕೇಂದ್ರ ಭೋಪಾಲ್ ಇವರು ಸಂಯೋಜಿಸಿದ ರಾಷ್ಟ್ರೀಯ ಕವಿಗೋಷ್ಠಿಯಲ್ಲಿ ಬಿಜಾಪುರ(1992) ಮತ್ತು ಶಿವಮೊಗ್ಗ (1996)ದಲ್ಲಿ ಸಹಭಾಗಿ.

2. ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯಲ್ಲಿ ಚಿಕ್ಕಮಗಳೂರು ಮತ್ತು ಹುಬ್ಬಳ್ಳಿಯಲ್ಲಿ ಎರಡು ಸಲ ಸಹಭಾಗಿ.

3. ಕರ್ನಾಟಕ ವಿಜ್ಞಾನ ಪರಿಷತ್ತು ಬೆಂಗಳೂರು ಅವರು ಸಂಯೋಜಿಸಿದ - ಕವಿಗೋಷ್ಠಿಯಲ್ಲಿ - ತುಮಕೂರಿನಲ್ಲಿ - ಸಹಭಾಗಿ.

4. ಪುತ್ತೂರಿನ ಸವಣೂರಿನಲ್ಲಿ ಜರುಗಿದ ದ.ಕ.ಜಿಲ್ಲಾ 10ನೇ ಸಾಹಿತ್ಯ ಸಮ್ಮೇಳನದ

ಕವಿಗೋಷ್ಠಿಯ ಅಧ್ಯಕ್ಷತೆ.

5. ಕಾರ್ಕಳದ ಅಜೆಕಾರಿನಲ್ಲಿ ನಡೆದ ಕಾರ್ಕಳ ತಾ। ಏಳನೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ.

6. ದ.ಕ., ಉಡುಪಿ, ಕಾಸರಗೋಡು ಜಿಲ್ಲೆಗಳ ವಿವಿಧ ಸಂಘ ಸಂಸ್ಥೆಗಳು ನಡೆಸಿದ ಕವಿಗೋಷ್ಠಿ/ಸಾಹಿತ್ಯ ಗೋಷ್ಠಿಗಳಲ್ಲಿ ಅಧ್ಯಕ್ಷತೆ/ಸಹಭಾಗಿತ್ವ.

7. ಮಂಗಳೂರು ಆಕಾಶವಾಣಿ/ಬೆಂಗಳೂರು ದೂರದರ್ಶನದ ಕಾರ್ಯಕ್ರಮಗಳಲ್ಲಿ ಸಹಭಾಗಿ.

8. ಮೂಡಬಿದ್ರೆಯಲ್ಲಿ ನಡೆದ 71ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಪ್ರತಿಷ್ಠಿತ ಕವಿಗೋಷ್ಠಿಯ ಅಧ್ಯಕ್ಷತೆ.

**ಪ್ರಶಸ್ತಿ ಬಹುಮಾನಗಳು :**

1. 'ನನ್ನದಲ್ಲದ್ದು' – ಕಾದಂಬರಿಗೆ 1977ರಲ್ಲಿ ಸಾಹಿತ್ಯ ಅಕಾಡೆಮಿ ಬಹುಮಾನ/ ಪ್ರಶಸ್ತಿ.

2. 'ಪ್ರಭವ' ಕವನ ಸಂಗ್ರಹಕ್ಕೆ 1988ರಲ್ಲಿ ಕವಿ ಕಡೆಂಗೋಡ್ಲು ಕಾವ್ಯ ಪ್ರಶಸ್ತಿ.

3. 'ಪ್ರಭವ' ಕವನ ಸಂಗ್ರಹಕ್ಕೆ 1991ರಲ್ಲಿ ಬಿ.ಹೆಚ್.ಶ್ರೀಧರ ಕಾವ್ಯ ಪ್ರಶಸ್ತಿ.

4. 'ಉಪ್ಪು' ಕಾದಂಬರಿಗೆ 'ತುಷಾರ' ವಿಂಶತಿ ಕಾದಂಬರಿ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ.

5. 'ಸ್ವಂತಕ್ಕೆ ಸ್ವಂತಾವತಾರ' ಕವನ ಸಂಗ್ರಹಕ್ಕೆ 1994ರ ಉಗ್ರಾಣ ಸಾಹಿತ್ಯ ಪ್ರಶಸ್ತಿ.

6. ಸಾಹಿತ್ಯ ಸೇವೆಗಾಗಿ 1998ರ ವಿಶ್ವೇಶ್ವರ ಸಾಹಿತ್ಯ ಪ್ರಶಸ್ತಿ.

7. 'ನೆಲದ ನೆರಳು' ಕವನ ಸಂಗ್ರಹಕ್ಕೆ 1998ರ ಪೆರ್ಲ ಕಾವ್ಯ ಪ್ರಶಸ್ತಿ.

8. 'ಕಿಡ್ನಿ' ಕಥೆಗೆ 1999ರ ಪ್ರಜಾವಾಣಿ ಕಥಾ ಸ್ಪರ್ಧೆಯಲ್ಲಿ ದ್ವಿತೀಯ ಸ್ಥಾನ.

9. 'ನೆಲದ ನೆರಳು' ಕವನ ಸಂಗ್ರಹ 2000ದ ದಿನಕರ ದೇಸಾಯಿ ಕಾವ್ಯ ಪ್ರಶಸ್ತಿ.

10. ಧನ್ವಂತರಿ ಆಯುರ್ವೇದಿಕ್ ಟ್ರಸ್ಟ್ ಮೈಸೂರು ಇವರಿಂದ ವೈದ್ಯಕೀಯ ಸಾಹಿತ್ಯ ರಚನೆಗಾಗಿ ಬಿಷಕ್ ಸಾಹಿತ್ಯ ರತ್ನ ಪ್ರಶಸ್ತಿ.

11. ದ.ಕನ್ನಡಿಗರ ಸಂಘ–ಬೆಂಗಳೂರು ಅವರಿಂದ "ಪರಶುರಾಮ ಪುರಸ್ಕಾರ" – 2002.

12. 'ಅರ್ಥ' ಕಾದಂಬರಿಗೆ ಮಾಸ್ತಿ ಪ್ರಶಸ್ತಿಯ ದಶಮಾನೋತ್ಸವ ಕಾದಂಬರಿ ಸ್ಪರ್ಧೆಯಲ್ಲಿ ದ್ವಿತೀಯ ಸ್ಥಾನ, 2002.

13.ಡಾ.ಶಿವರಾಮ ಕಾರಂತ ಪ್ರತಿಷ್ಠಾನ ಮೂಡಬಿದ್ರೆ ಅವರಿಂದ ಶಿವರಾಮ ಕಾರಂತ ಗೌರವ ಪ್ರಶಸ್ತಿ–2002.

14. ಡಾ. ಪಿ.ಎಸ್. ಶಂಕರ ಪ್ರತಿಷ್ಠಾನ ಗುಲಬರ್ಗ ಇವರಿಂದ 'ಆರೋಗ್ಯ ಅನಾರೋಗ್ಯದ ನಡುವೆ' ಕೃತಿಗೆ ವೈದ್ಯ ಸಾಹಿತ್ಯ ಪ್ರಶಸ್ತಿ – 2002.

15. 'ಪಂಥ' ಕಾದಂಬರಿಗೆ ವಿಶುಕುಮಾರ್ ಸ್ಮಾರಕ ಪ್ರಥಮ ಸಾಹಿತ್ಯ ಪ್ರಶಸ್ತಿ – 2003.

16. 'ಅರ್ಥ' ಕಾದಂಬರಿಗೆ ಪ್ರತಿಷ್ಠಿತ ಹಾವನೂರು ಪ್ರಶಸ್ತಿ – 2003.

17. ಸಾಹಿತ್ಯ ಸೇವೆಗಾಗಿ 2004ರ ಸಾಲಿನ ಕರ್ನಾಟಕ ಸರಕಾರದ ಕನ್ನಡ ರಾಜ್ಯೋತ್ಸವ ಪ್ರಶಸ್ತಿ.

ಇತರ ವಿಷಯಗಳು:

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದಲ್ಲಿ – 'ಕನ್ನಡದ ಒಂದು ಸಾವಿರ ಸಾಹಿತಿಗಳ ಭಾವಚಿತ್ರ ಮತ್ತು ವೃತ್ತಿ ಜೀವನ ದೃಷ್ಟಿ' ಎಂಬ ಧ್ವನಿ ಮುದ್ರಣ ಸಂಗ್ರಹಿಸಿಡುವ ಈ ಯೋಜನೆಯಲ್ಲಿ ಒಳಗೊಂಡ ಸಾಹಿತಿಗಳಲ್ಲಿ ಒಬ್ಬರು.

| ಕೃತಿಗಳು : ಕಾದಂಬರಿಗಳು : | | ಕವನ ಸಂಗ್ರಹಗಳು : | | ಕೃತಿಗಳು : ಕಾದಂಬರಿಗಳು : | |
|---|---|---|---|---|---|
| 1. ಮಣ್ಣಿನ ಮಕ್ಕಳು | 1965 | 1. ವರ್ತಮಾನದ ಮುಖಗಳು | 1974 | 1. ಮಣ್ಣಿನ ಮಕ್ಕಳು | 1965 |
| 2. ಅನಂತ | 1968 | 2. ಪಲ್ಲವಿ | 1979 | 2. ಅನಂತ | 1968 |
| 3. ಕನಸಿನಬಳ್ಳಿ | 1970 | 3. ಮೊಗಸಾಲೆಯ ನೆನಪುಗಳು | 1983 | 3. ಕನಸಿನಬಳ್ಳಿ | 1970 |
| 4. ನನ್ನದಲ್ಲದ್ದು | 1977 | 4. ಪ್ರಭವ | 1989 | 4. ನನ್ನದಲ್ಲದ್ದು | 1977 |
| 5. ಪಲ್ಲಟ | 1998 | 5. ಸ್ವಂತಕ್ಕೆ ಸ್ವಂತಾವರ | 1994 | 5. ಪಲ್ಲಟ | 1998 |
| 6. ಹದ್ದು | 1980 | 6. ನೆಲದ ನೆರಳು | 1999 | 6. ಹದ್ದು | 1980 |
| 7. ಪ್ರಕೃತಿ | 1984 | 7. ಇದಲ್ಲ ಇದಲ್ಲ | 2003 | 7. ಪ್ರಕೃತಿ | 1984 |
| 8. ನೆಲಮುಗಿಲುಗಳ ಮಧ್ಯೆ | 1986 | 8. ಅರವತ್ತರ ತೇರು (ಸಮಗ್ರ ಕಾವ್ಯ) | 2003 | 8. ನೆಲಮುಗಿಲುಗಳ ಮಧ್ಯೆ | 1986 |
| 9. ದಿಗಂತ | 1988 | **ಕಥಾಸಂಕಲನ :** | | 9. ದಿಗಂತ | 1988 |
| 10. ದೃಷ್ಟಿ | 1991 | 1. ಆಶಾಂಕುರ | 1965 | 10. ದೃಷ್ಟಿ | 1991 |
| 11. ಉಪ್ಪು | 1995 | 2. ಹಸಿರು ಬಿಸಲು | 1965 | 11. ಉಪ್ಪು | 1995 |
| 12. ತೊಟ್ಟಿ | 1997 | 3. ಸುಂದರಿಯ ಎರಡನೇ ಅವತಾರ 2004 | | 12. ತೊಟ್ಟಿ | 1997 |
| 13. ಪಂಥ | 2002 | | | 13. ಪಂಥ | 2002 |
| 14. ಅರ್ಥ | 2002 | | | 14. ಅರ್ಥ | 2002 |

**ಇತರ ವಿಷಯಗಳು:**

1. "ನನ್ನದಲ್ಲದ್ದು" ಕಾದಂಬರಿ ಮಲಯಾಳಕ್ಕೆ ಅನುವಾದವಾಗಿದೆ.

   ಅನುವಾದಕರು : ಕೆ.ಕೆ.ನಾಯರ್ (ಪ್ರಕಟವಾಗಿಲ್ಲ)

2. 'ತೊಟ್ಟಿ' ಕಾದಂಬರಿ ತೆಲುಗಿಗೆ ಅನುವಾದವಾಗಿ "ಚತುರ" ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿದೆ. ಅನುವಾದಕರು : ನೆಲ್ಲಿಮೇಲ ಭಾಸ್ಕರ ರಾವ್.

3. ಕವನಗಳು – ತೆಲುಗಿಗೆ ಅನುವಾದವಾಗಿವೆ.

   ಅನುವಾದಕರು : ಬಿ.ಆರ್.ಲಕ್ಷ್ಮಣರಾವ್ ಮತ್ತು ಸ.ರಘುನಾಥ

4. ಕವನಗಳು ಕೇಂದ್ರ ಸಾಹಿತ್ಯ ಅಕಾಡೆಮಿಯ ದ್ವೈವಾರ್ಷಿಕ ಪತ್ರಿಕೆ "ಸಮಕಾಲೀನ"ದಲ್ಲಿ ಹಲವು ಬಾರಿ ಅನುವಾದವಾಗಿ ಪ್ರಕಟವಾಗಿವೆ.

   ಅನುವಾದಕರು : ಡಿ.ಎನ್. ಶ್ರೀನಾಥ್

5. ಕವನಗಳು ಇಂಗ್ಲೀಷಿಗೆ ಅನುವಾದವಾಗಿವೆ.

   ಅನುವಾದಕರು : ವೇಣುಗೋಪಾಲ ಸೊರಬ.

**ಅಂಕಣ ಬರಹ :**

ಉತ್ತರ ಕನ್ನಡದ "ಕನ್ನಡ ಜನಾಂತರಂಗ" ಮತ್ತು ಮಂಗಳೂರಿನ 'ಕರಾವಳಿ ಅಲೆ' ಪತ್ರಿಕೆಗಳಲ್ಲಿ 'ಆರೋಗ್ಯ ಸಲಹೆ' ಎಂಬ ಜನಪ್ರಿಯ ಅಂಕಣದ ನಿರ್ವಹಣೆ (1997ರಿಂದ)

ವಿಳಾಸ : 'ಕವಿತಾ' ಕಾಂತಾವರ – 574129. ಉಡುಪಿ ಜಿಲ್ಲೆ.

ದೂರವಾಣಿ : 08258– 276216

# ಪತ್ರ ಸಂಚಯ - ೧

ಕನ್ಯಾನ
15-03-06

ಆತ್ಮೀಯರೆ,

ತಮ್ಮ 'ಬಯಲ ಪೆಟ್ಟಿ'ವನ್ನು ಓದಿ ಮುಗಿಸಿದೆ. ಹದ ಬಿಸಿ (luke warm) ನೀರಿನಲ್ಲಿ ಮಿಂದ ಸುಖಾನುಭವವಾಯಿತು.

ನಿಮ್ಮ ಅಗಾಧ ನೆನಪಿನ ಶಕ್ತಿ, ಸಣ್ಣ, ಇತರರು ಕಡೆಗಣಿಸಿಬಹುದಾದ ವಿಷಯ ಘಟನೆಗಳನ್ನು ಹೆಕ್ಕಿಕೊಂಡು ಆಪ್ತವಾಗಿ ರೂಪಿಸುವ ಶೈಲಿ ಮೆಚ್ಚುವಂಥದ್ದು. ತಣ್ಣಗೆ ಹರಿದು ಬೆಚ್ಚನೆಯ ಅನುಭವವನ್ನು ನೀಡುವ ನಿಮ್ಮ ಗದ್ಯ ಸರಾಗವಾಗಿ ಓದಿಸಿಕೊಂಡು ಹೋಗುತ್ತಾರೆ.

ಪುಟಪುಟದಲ್ಲೂ ತುಡಿಯುವ ಜೀವನ ಪ್ರೀತಿ. ಎಲ್ಲರಲ್ಲೂ ಎಲ್ಲದರಲ್ಲೂ ಒಳ್ಳೆಯದನ್ನೇ ಕಾಣುವ ಮನೋಭಾವ. ಬದುಕಿಗೆ ಸ್ಫೂರ್ತಿ. ಪ್ರೇರಣೆ, ಸಹಾಯ ನೀಡಿದವರೆಲ್ಲರನ್ನೂ ಬಿಡದೆ ನೆನಪಿಸುವ ಔದಾರ್ಯ. ವೈಚಾರಿಕ. ವೈಜ್ಞಾನಿಕ ದೃಷ್ಟಿಕೋನ. ವಾಸ್ತವ ಚಿತ್ರಣ. ಮನುಷ್ಯ ಸ್ವಭಾವದ ಸಹಜತೆಯನ್ನು ಒಪ್ಪುವ ವೈಶಾಲ್ಯ ಮುಖ್ಯವಾದದ್ದು.

ಆತ್ಮ ವೃತ್ತಾಂತವೊಂದು ಮಹಾ ಕಾದಂಬರಿಯಂತಾಗುವ ಚೋದ್ಯವಿರುವ ಈ ರಚನೆ. ಹಳ್ಳಿಯ ಮುಪ್ಪುರಿಗೊಂಡ ಚಿತ್ರಣದಿಂದಾಗಿ ಭಾರತೀಯ ಜೀವನಕ್ಕೊಂದು ಭಾಷ್ಯ ಬರೆದಂತಾಗಿದೆ.

ಕಾರಂತರ ಕಾದಂಬರಿಗಳಲ್ಲಿ ಬರುವ ಮುದುಕಿಯರ ಪಾತ್ರವನ್ನು ನೆನಪಿಸುವ 'ಪುಟ್ಟತ್ತೆ'ಯ ವ್ಯಕ್ತಿತ್ವದ ಅನಾವರಣವಂತೂ ಅಮೋಘವಾಗಿದೆ.

Flash back ತಂತ್ರದಂತೆ ಗೋಚರಿಸುವ ಉತ್ತಮ ಮುಕ್ತಾಯ. ನಿಲುವು. ಧೋರಣೆಗಳನ್ನು ನೇರವಾಗಿ ತೆರೆದಿಟ್ಟ ಅಂಶ ಉತ್ತಮವಾಗಿ ಮೂಡಿಬಂದಿದೆ.

ನನಗಂತೂ ಕನ್ಯಾನ ಪರಿಸರದಲ್ಲಿ ಓಡಿಯಾಡಿದ ಅನುಭವವಾಯಿತು. ಇಲ್ಲಿಯ ಪರಿಸರದ ಮಹನೀಯರ ಬಗ್ಗೆ ತಿಳಿದುಕೊಳ್ಳುವಂತಾಯಿತು.

ಸಾಹಿತ್ಯ ಸಂಘಟನೆಯನ್ನು ಸರಿದೂಗಿಸಿಕೊಂಡು ಮುಂದುವರಿಯುವ ನಿಮ್ಮ ಪರಿ. ಕಾಂತಾವರವನ್ನು 'ಅಭಿನವ ಹೆಗ್ಗೋಡ'ವನ್ನಾಗಿ ಮಾಡುವಲ್ಲಿನ ನಿಮ್ಮ ಕರ್ತೃತ್ವ ಶಕ್ತಿ ತಲೆದೂಗುವಂಥದ್ದು.

ಸಾರ್ಕುಡೇಲು-ಕನ್ಯಾದ-ಉಡುಪಿ-ಕಾಂತಾವರ ಈ ನಾಲ್ಕು ಸ್ಥಂಭಗಳಲ್ಲಿ ಗಟ್ಟಿಯಾಗಿ ನಿಂತ ನಿಮ್ಮ ಸಾಹಿತ್ಯ ಸೌಧ ಇನ್ನಷ್ಟು ಬೆಳಗುತಿರಲಿ.

ಗೌರವಪೂರ್ವಕ ವಂದನೆಗಳೊಂದಿಗೆ,

ರವಿಶಂಕರ ಒಡ್ಡಂಬೆಟ್ಟು
ಪ್ರಾಧ್ಯಾಪಕರು, ಸರಕಾರಿ ಪ.ಪೂ. ಶಾಲೆ
ಕನ್ಯಾನ, ಬಂಟ್ವಾಳ, ತಾ॥ ದ.ಕ.

– ೨

**ಬನ್ನಂಜೆ ಗೋವಿಂದಾಚಾರ್ಯ** 9–1–05
'ಈಶಾವಾಸ್ಯಮ್', ಅಂಬಲವಾಡಿ ಉಡುಪಿ–3

ಪ್ರಿಯ ಮೊಗಸಾಲೆ,

ನಿಮ್ಮ 'ಬಯಲುಬೆಟ್ಟ' ಕೈ ಸೇರಿತು. ಮನೆಗೆ ಬಂದವನೆ Phone ಮಾಡಿದೆ. ನೀವು ಸಿಗಲಿಲ್ಲ. ಎಷ್ಟು ದಿನಗಳಾದವು ನಾವು ಭೇಟಿಯಾಗದೆ! ನೀವು ಮನೆಗೆ ಬಂದಾಗಲೂ ನಾನಿರಲಿಲ್ಲ. ಒಮ್ಮೆ ಕೇವಲ ನಿಮ್ಮನ್ನು ಕಾಣಲು, ನಿಮ್ಮ ಜತೆಗಿರಲು ಕಾಂತಾವರಕ್ಕೆ ಬರಬೇಕು ಎಂಬ ಆಸೆ ಇದೆ. ನನ್ನ ಸುತ್ತಾಟದಲ್ಲಿ ಅದು ಸಾಧ್ಯವಾಗಲೇ ಇಲ್ಲ. ಈಗಲೂ ಅಷ್ಟೆ. ನಾನು ನಾಡಿದ್ದು (ತಾ. 13ರಂದು) ಉಡುಪಿಯಿಂದ ಬೆಂಗಳೂರಿಗೆ ಹೋಗಬೇಕು. ಅಲ್ಲಿಂದ ಚೆನ್ನೈ ಮತ್ತೆ ಧಾರವಾಡ, ಬಳ್ಳಾರಿ, ಬೆಂಗಳೂರು, ಮುಂಬಯಿ ಎಲ್ಲ ಮುಗಿಸಿಕೊಂಡು ಮತ್ತೆ ಫೆಬ್ರವರಿ ಕೊನೆಗೆ ಉಡುಪಿಗೆ ಮರಳುವುದು. ಹೀಗಾಗಿ ನನ್ನ ಹಳೆಯ ಮಿತ್ರರನ್ನೆಲ್ಲ ಕಾಣುವುದೇ ಅಸಾಧ್ಯವಾಗಿದೆ. ನನಗೇ ನನ್ನ ಮೇಲೆ ಸಿಟ್ಟು ಬರುತ್ತಿದೆ. ಇದು ಎಂಥ ಜೀವನ! ಆದರೂ ನನ್ನ ಮನದಾಳದಲ್ಲಿ ನೀವೆಲ್ಲ ಗಾಢವಾಗಿ ಬೇರೂರಿದ್ದೀರಿ. ನಾನು ಎಲ್ಲಿದ್ದರೂ ನಿಮ್ಮನ್ನೆಲ್ಲ ನೆನಪಿಸಿಕೊಂಡೇ ಇರುತ್ತೇನೆ. ಕನ್ನಡದ ಸಾಹಿತ್ಯ ಪ್ರಪಂಚವೇ ನನ್ನನ್ನು ಮರೆತರೂ ನಾನು ಮರೆಯಲಾರೆ!

18799

ನಿಮ್ಮ 'ಬಯಲು ಬೆಟ್ಟ' ಪೂರ್ತಿ ಓದಿ ಆಮೇಲೆ ಬರೆಯಬೇಕೆಂದು ಇಷ್ಟು ತಡಮಾಡಿದೆ. ನಿನ್ನೆಗೆ ಓದಿ ಆಯಿತು. ತುಂಬ ಆತ್ಮೀಯವಾದ, ಎಲ್ಲಕ್ಕಿಂತ ಹೆಚ್ಚು–ಮೊಗಸಾಲೆಯವರದೆ ಆದ ತುಂಬ ಮುಗ್ಧತೆಯ ಬರಹ. ನೀವು ಈ ಹರೆಯದಲ್ಲೂ ಮಗುವಿನ ಮುಗ್ಧತೆಯನ್ನು ಉಳಿಸಿಕೊಂಡಿದ್ದೀರಲ್ಲ. ಅದು ಅಪೂರ್ವ. ನನಗೆ ಮೊಗಸಾಲೆ ತುಂಬ ಇಷ್ಟವಾಗುವುದೆ ಆ ಕಾರಣಕ್ಕಾಗಿ. ಅಭಿನಂದನೆಗಳು.

ಒಂದು ಮಾತು ಹೇಳಲೆ! ಬೇಸರವಿಲ್ಲ ತಾನೆ? ಇದರಲ್ಲಿ ಬಂದ ಸಂಸ್ಕೃತ ವಾಕ್ಯಗಳು, ಇಂಗ್ಲೀಷ್ ವಾಕ್ಯಗಳು ಕೂಡ ತುಂಬ ತಪ್ಪಾಗಿ ಮುದ್ರಣಗೊಂಡಿವೆ. ನನ್ನ ಮೊಗಸಾಲೆಯವರ ಪುಸ್ತಕದಲ್ಲಿ ತಪ್ಪುಗಳಿರಬಾರದು. ಅದರ ಪುನರ್ಮುದ್ರಣ (ಖಂಡಿತ ಆಗುತ್ತೆ; ಆಗಬೇಕು) ಆಗುವಾಗ ಅದನ್ನೆಲ್ಲ ನಾನು ತಿದ್ದಿಕೊಡುತ್ತೇನೆ. ಎರಡನೆಯ ಮುದ್ರಣ ಪೂರ್ತಿ ಶುದ್ಧವಾಗಿ ಬರಲಿ. ಆಗಬಹುದು ತಾನೆ?

ಆದಷ್ಟು ಬೇಗ ನಿಮ್ಮನ್ನು ಕಾಣಬೇಕು. ನಿಮ್ಮ ಜತೆ ಕೂತು ಉಣ್ಣಬೇಕು. ಉಣ್ಣುತ್ತ ಹರಟಬೇಕು. ಅಂಥ ದಿನಕ್ಕಾಗಿ ಕಾಯುತ್ತಿರುತ್ತೇನೆ. ನಿಮ್ಮ ಸಹೃದಯತೆಗೆ ವಂದನೆಗಳು.

ಎಂದೆಂದೂ ನಿಮ್ಮವನೆ.

–ಬನ್ನಂಜೆ ಗೋವಿಂದಾಚಾರ್ಯ
ಅಂಬಲಪಾಡಿ, ಉಡುಪಿ–576002



– ೩

**ಸುಮತೀಂದ್ರ ನಾಡಿಗ** ಬೆಂಗಳೂರು

ಪ್ರಿಯ ಮೊಗಸಾಲೆಯವರೆ,

ನಿಮ್ಮ ಕವಿತಾನೂ ನಾನೂ ಓದುತ್ತಾ, ಹೀಗಿದ್ದರೆ ಹೇಗೆ ಅಂತ ನನ್ನ ಲಹರಿಯನ್ನು ಹರಿಯಲಿಕ್ಕೆ ಬಿಟ್ಟೆ.

ಕವಿತಾ ನಾನು ಔಟ್ ಹೌಸ್‌ನಲ್ಲಿ, ವಿದ್ಯುತ್ ಇರಲಿಲ್ಲ
ಸಣ್ಣಗುರಿವ ಮೊಂಬತ್ತಿಯ ಬೆಳಕನು ಪ್ರತಿಫಲಿಸಿದ್ದವು ಕಣ್ಣುಗಳು
ಕರಗುತ್ತಿತ್ತು ಎದುರು ಮೊಂಬತ್ತಿ ನಮ್ಮ ಮನದಲ್ಲಿ
ಮಂದ ಬೆಳಕಿನಲ್ಲಿ ಮೆತ್ತಗೆ ಮಾತು.............ಚೆಲ್ಲಿ
ಎಲ್ಲೆಲ್ಲೆಲ್ಲು ಮಲ್ಲಿಗೆ ಬಣ್ಣದ ಬೆಳದಿಂಗಳು ಹಾಡಿ
ಪರ್ವತಗಾತ್ರದ ಒಂದು ಮೊಂಬತ್ತಿ ಕಂಡಿತು ಬಾನಲ್ಲಿ
ಲೋಕವ ಬೆಳಗುವ ಬೆಳುದಿಂಗಳು ಇದೆ ಏತಕೆ ಮೊಂಬತ್ತಿ?
ಇಂದು ಯೌವನ ಹುಣ್ಣಿಮೆ ಹಾಗೆ ಕ್ಷೀಣಿಸಿ ಕ್ಷೀಣಿಸಿ ಅಮವಾಸ್ಯೆ
ಏಕೆ ನಿನ್ನ ಮುಖ ಕಪ್ಪಗಾಯಿತು, ಏನಿದೆ ಅಂಥ ಸಮಸ್ಯೆ?
ನಮ್ಮ ಮೊಂಬತ್ತಿ ನಂದಿತು ಎಂದೆ? ಸದ್ಯ ಏಕೆ ಬೇಕು?
ಪ್ರೀತಿಯ ಚಂದಿರ ಬೆಳಗಿದ್ದಾನೆ. ಇನ್ನು ಏನು ಬೇಕು?
ಚಂದ್ರನ ದಿಕ್ಕಿಗೆ ಸ್ವಲ್ಪ ತಲೆಯೆತ್ತಿ ನೋಡುತ್ತಿರು ನೀನು,
ನಿನ್ನ ಕಣ್ಣಲ್ಲಿ ಎರಡು ಚಂದ್ರರನು ನೋಡಬೇಕು ನಾನು.

ಆಗೀಗ ನಿಮ್ಮ ಕವಿತೆಗಳನ್ನು ಓದುತ್ತಾ ಇರುತ್ತೇನೆ. ಟ್ಯೂನಾ ಮಾಡುತ್ತಾ ಕೂತಾಗ ಕೆಲವೊಮ್ಮೆ ನಿಮ್ಮ ತರಂಗಾಂತರ ಸಿಗುತ್ತೆ.

ನಿಮ್ಮ ಪುಸ್ತಕಗಳು 'ಸೇರಿದ್ದವು'. ಬರೆಯಲಿಕ್ಕೆ ಆಗಿರಲಿಲ್ಲ.

ಭೇಟಿಯಾಗೋಣ.

ನಿಮ್ಮ,
ಸುಮತೀಂದ್ರ ನಾಡಿಗ
ಬನಶಂಕರಿ, ಬೆಂಗಳೂರು–560 85

**ಚೆನ್ನವೀರ ಕಣವಿ**
'ಚೆಂಬೆಳಕು'
9ನೇ ತಿರುವು
ಕಲ್ಯಾಣನರ
ಧಾರವಾಡ-6

**ಪಾಟೀಲ್ ಪುಟ್ಟಪ್ಪ**
ಮಾನ್ಯ ಅಧ್ಯಕ್ಷರು
ಕರ್ನಾಟಕ ವಿದ್ಯಾವರ್ಧಕ ಸಂಘ
ಕಾರ್ಪೊರೇಷನ್ ಎದುರು
ಧಾರವಾಡ-1

**ಡಾ. ಬಿ. ಜನಾರ್ದನ ಭಟ್**
ಅಕ್ಷರ, ದೇವಸ್ಥಾನ ರಸ್ತೆ,
ಅಂಚೆ: ಬೆಳ್ಮಣ್ಣು - 576111

**ವೈದೇಹಿ**
ಇರುವಂತಿಗೆ
ಅನಂತನಗರ, ಎರಡನೇ ಹಂತ
ಅಂಚೆ: ಮಣಿಪಾಲ-576104

**ಡಾ. ಜಯಪ್ರಕಾಶ ಮಾವಿನಕುಳಿ.**
'ಮಾವಿನಕುಳಿ ಮನೆ'
ಮೂಡುಬಿದರೆ - 574197 (ದ.ಕ)
ಫೋನ್: 08258 - 2360871
ಮೊ: 94487 25065

**ವಿಷ್ಣುನಾಯ್ಕ**
'ಪರಿಮಳ'
ಅಂಬಾರಕೂಡ್ಲ
ಅಂಕೋಲಾ - 581314
(ಉತ್ತರ ಕನ್ನಡ ಜಿಲ್ಲೆ)

**ಪ್ರಕಾಶ ಕಡಮೆ**
90, ನಾಗಸುಧೆ,
ಕಾಳಿದಾಸ ನಗರ
ವಿದ್ಯಾನಗರ ಬಡಾವಣೆ
ಹುಬ್ಬಳ್ಳಿ

**ಎಚ್. ಡುಂಡಿರಾಜ್**
ಮುಖ್ಯ ಪ್ರಬಂಧಕ
ಕಾರ್ಪೊರೇಷನ್ ಬ್ಯಾಂಕ್
ವಲಯ ಕಚೇರಿ
ನೆಹರೂ ನಗರ,
ಬೆಳಗಾವಿ

**ವಿ.ಗ. ನಾಯಕ**
ಅಡ್ಯನಡ್ಕ-ಅಂಚೆ, Via-ವಿಟ್ಲ
ದಕ್ಷಿಣ ಕನ್ನಡ ಜಿಲ್ಲೆ

**ನಾರಾಯಣ ಮಾಳ್ಕೋಡ್**
ಸುಮುಖ ಪ್ರಕಾಶನ
ನಂ. 174 ಇ/28,
1ನೇ ಮುಖ್ಯರಸ್ತೆ, ವಿದ್ಯಾರಣ್ಯಾಪುರ
ಮಾಗಡಿ ರಸ್ತೆ, ಬೆಂಗಳೂರು-23
ಫೋನ್: 23118585
ಮೊಬೈಲ್: 98442 78792

**ಸುಬ್ರಾಯ ಚೊಕ್ಕಾಡಿ**
ಚೊಕ್ಕಾಡಿ - 574212
ದ.ಕ

**ಪ್ರೊ. ಚಂದ್ರಶೇಖರ ಪಾಟೀಲ**
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ
ಚಾಮರಾಜಪೇಟೆ, ಬೆಂಗಳೂರು-18

ಪ್ರೊ. ಎಚ್.ಬಿ. ಕೋಲ್ಕಾರ
ಮುಖ್ಯಸ್ಥರು, ಕನ್ನಡ ವಿಭಾಗ
ಜಿ.ಎಸ್. ಎಸ್. ಕಾಲೇಜು
ಬೆಳಗಾವಿ
ದೂ: 0831-2485229
ಮೊ: 9845755229

ರವಿ ಉಪಾಧ್ಯ
295, 'ಚಕ್ರೇಶ್ವರಿ'
1ನೇ ಹಂತ
ರಾಣಿ ಚೆನ್ನಮ್ಮ ನಗರ
ಬೆಳಗಾವಿ -6
ದೂ: 0831- 2440858

ಡಾ. ಶ್ರೀಧರ ಬಳಗಾರ
'ಸನ್ನಿಧಿ'
3ನೇ ಅಡ್ಡ ರಸ್ತೆ, ವಿವೇಕನಗರ
ಕುಮಟಾ - 581343
ಮೊ: 94489 34008

ಡಾ. ಅಶೋಕ ನರೋಡೆ
ಸಂಶೋಧನ ಮಾರ್ಗದರ್ಶಕರು
ಕನ್ನಡ ವಿಭಾಗ
ಎಸ್.ಸಿ.ಪಿ. ಮಹಾವಿದ್ಯಾಲಯ
ಮಹಾಲಿಂಗಪುರ - 587312

ರಾಘವೇಂದ್ರ ಪಾಟೀಲ
'ಬಲರಾಮ' ಅಧ್ಯಾಪಕರ ಕಾಲನಿ
ಮಲ್ಲಾಡಿಹಳ್ಳಿ - 577531
ಚಿತ್ರದುರ್ಗ ಜಿಲ್ಲೆ
ಮನೆ: 08191- 89501
ಮೊ: 94480 89501

ಎಸ್. ಮಂಜುನಾಥ್
ಬನ್ನೀಮಂಟಪ ಬಡಾವಣೆ
ಕೆ.ಆರ್. ನಗರ - 571602
ಮೈಸೂರು ಜಿಲ್ಲೆ

ಜನಾರ್ಧನ ಗುರ್ಕಾರ
585- ಸುಧಾಮ, ಉತ್ತರ-8ನೇ ತಿರುವು,
ಅನಿಕೇತನ ರಸ್ತೆ, ಕುವೆಂಪುನಗರ,
ಮೈಸೂರು.

ಅರವಿಂದ ಚೊಕ್ಕಾಡಿ
ಬೆಳ್ತಂಗಡಿ
ದ.ಕ. 574214

ಡಾ. ರಾಜಶೇಖರ ಮಠಪತಿ
ಅಧ್ಯಾಪಕರು
ಇಂಗ್ಲಿಷ್ ಸ್ನಾತಕೋತ್ತರ ವಿಭಾಗ
ಬಸವೇಶ್ವರ ಕಲಾ ಮಹಾವಿದ್ಯಾಲಯ
ಬಾಗಲಕೋಟೆ - 587 101

ಡಾ. ಮಲ್ಲಿಕಾರ್ಜುನ ಹಿರೇಮಠ
ಚೈತನ್ಯ 74, 1ನೇ ಮುಖ್ಯರಸ್ತೆ
ಚೆನ್ನಬಸವೇಶ್ವರ ನಗರ
ಧಾರವಾಡ - 7
ದೂ. 0836- 2772690

ಪ್ರೊ. ಅಬ್ಬಾಸ್ ಮೇಲಿನಮನಿ
ಹುಸೇನ್ ಪೇಟೆ
ಗುಳೇದಗುಡ್ಡ - 587203

ಸುಬ್ರಾಯ ಮತ್ತೀಹಳ್ಳಿ
ಅಂಚೆ - ತ್ಯಾಗಲಿ
ತಾ - ಸಿದ್ಧಾಪುರ
ಉತ್ತರ ಕನ್ನಡ ಜಿಲ್ಲೆ-581340

**ಸತೀಶ್ ಕುಲಕರ್ಣಿ**
ಕೆಪಿಟಿಸಿಎಲ್ ಅಧಿಕಾರಿ
ಹಾವೇರಿ

**ಡಾ. ಬಾಳಾಸಾಹೇಬ ಲೋಕಾಪೂರ**
ರತ್ನತ್ರಯ
15ನೇ ಕ್ರಾಸ್
ವಿದ್ಯಾಗಿರಿ
ಬಾಗಲಕೋಟೆ
ಮೊ: 9343110456

**ಮಾಲತಿ ಪಟ್ಟಣಶೆಟ್ಟಿ**
ಗಣೇಶ ಅಪಾರ್ಟ್‌ಮೆಂಟ್ಸ್
ರಜತಗಿರಿ
ಧಾರವಾಡ-4

**ವಿ. ಆರ್. ದಳವಾಯಿ**
ಜಮಖಂಡಿ,
ವಿಜಾಪುರ ಜಿಲ್ಲೆ

**ಡಾ. ಮಂದಾಕಿನಿ ಪುರೋಹಿತ**
'ಹೈವೇ ಫೋನ್ಸ್' ಪಿ.ಬಿ. ರಸ್ತೆ
ಹುಬ್ಬಳ್ಳಿ ಟೋಲ್ ನಾಕಾ ಹತ್ತಿರ,
ಧಾರವಾಡ - 580 004
ದೂ. 0836-2313090

**ಡಾ. ವಿಜಯಾಸುಬ್ಬರಾಜ್**
'ಹಂಸಿ' 17ನೇ ಕ್ರಾಸ್. 30ನೇ ಮೈನ್
ಅತ್ತಿಮಬ್ಬೆ ರಸ್ತೆ, ಬನಶಂಕರಿ 3ನೇ ಹಂತ
ಬೆಂಗಳೂರು-56 085

**ಜಯದೇವಪ್ಪ ಜೈನಕೇರಿ**
87. 'ಶಾಂತಲಾ', ರಾಷ್ಟ್ರಕವಿ ಕುವೆಂಪು ರಸ್ತೆ
ಶಿವಮೊಗ್ಗ-577 201

**ಈರಯ್ಯ ಕಿಲ್ಲೇದಾರ**
'ಈನಿಂಕಿ'
ಕವಿತಾ ಪ್ರಕಾಶನ
ಗುಡಿಕಟ್ಟಿ ಅಂಚೆ-591104
ಜಿ. ಬೆಳಗಾವಿ

**ಡಾ. ಕಮಲಾ ಹೆಮ್ಮಿಗೆ**
50, ಆಶೀರ್ವಾದ-ಶಿವಗಿರಿ
ಧಾರವಾಡ-580007

**ವಿಜಯೇಂದ್ರ ಪಾಟೀಲ**
ಅಸಿಸ್ಟೆಂಟ್ ಮ್ಯಾನೇಜರ್
ಯೂನಿಯರ್ ಬ್ಯಾಂಕ್ ಆಫ್ ಇಂಡಿಯಾ
ನಿಪ್ಪಾಣಿ, ಮೊ: 94489 20982

**ಡಾ. ಜಿ.ಎಂ. ಹೆಗಡೆ**
ಕನ್ನಡ ಉಪನ್ಯಾಸಕರು
ಕಿಟಲ್ ಕಾಲೇಜು
ಧಾರವಾಡ-1

**ಡಾ. ಶ್ಯಾಮಸುಂದರ ಬಿದರಕುಂದಿ**
ಚರ್ಚ್ ಬಳಿ
ನವನಗರ
ಹುಬ್ಬಳ್ಳಿ ಅಂಚೆ

**ಡಾ. ಎಸ್.ಪಿ. ಪದ್ಮಪ್ರಸಾದ್**
ತೃಪ್ತಿ, 2ನೇ ಕ್ರಾಸ್
9ನೇ ಮೈನ್
ಗೋಕುಲ ಬಡಾವಣೆ
ತುಮಕೂರು-4
ಫೋ: 0816-2285069

**ಡಾ. ಬಸವರಾಜ್ ಡೋಣೂರ್**
ಇಂಗ್ಲಿಷ್ ಉಪನ್ಯಾಸಕರು
ಕರ್ನಾಟಕ ಆರ್ಟ್ಸ್ ಕಾಲೇಜು
ಧಾರವಾಡ-1

**ಡಾ. ಸ.ಜ.ನಾಗಲೋಟಿಮಠ**
(ದಿವಂಗತರು)

**ಡಾ. ಪದ್ಮಿನಿ ನಾರಾಯಣ**
ನಂ. 578, 'ಹಣತೆ'
5ನೇ ಬ್ಲಾಕ್, 11ನೇ ಮುಖ್ಯರಸ್ತೆ
ಜಯನಗರ,
ಬೆಂಗಳೂರು.
ಮೊ: 98450 630716

**ಡಾ. ಸುಮತೀಂದ್ರ ನಾಡಿಗ**
ನಂ. 38, 'ಅಪೂರ್ವ'
1ನೇ ಮುಖ್ಯರಸ್ತೆ,
ಬಿಎಸ್‌ಕೆ 3ನೇ ಹಂತ
ಬೆಂಗಳೂರು - 560 085
ದೂ. 26691544

**ಡಾ. ಡಿ. ವೀರೇಂದ್ರ ಹೆಗ್ಗಡೆ**
ಧರ್ಮಾಧಿಕಾರಿಗಳು
ಶ್ರೀ ಧರ್ಮಸ್ಥಳ - 574 216
ಕರ್ನಾಟಕ

**ಧರ್ಮದರ್ಶಿ ಹರಿಕೃಷ್ಣ ಪುನರೂರು**
'ಶುಭವಾಗಲಿ' ಮೂಲ್ಕಿ - 574 154
ಮಂಗಳೂರು ತಾಲೂಕು, ದ.ಕ. ಜಿಲ್ಲೆ
ದೂ. ಮನೆ: 0824-2290175
ಕಚೇರಿ: 2290540

**ಸವಿತಾ ನಿರಂಜನ ಮೊಗಸಾಲೆ**
'ಕವಿತಾ'
ಅಂಚೆ: ಕಾಂತಾವರ, ಕಾರ್ಕಳ ತಾಲೂಕು
ಉಡುಪಿ ಜಿಲ್ಲೆ

**ಬೆಳಗೋಡು ರಮೇಶ ಭಟ್**
'ಭಾಗೀರಥಿ'
ಇಂದ್ರಾಳಿ ದೇವಸ್ಥಾನದ ರಸ್ತೆ
ಉಡುಪಿ - 576 102
ದೂ. 0820 - 2572942

**ಬನ್ನಂಜೆ ಗೋವಿಂದಾಚಾರ್ಯ**
'ಈಶಾವಾಸ್ಯಮ್'
ಅಂಬಲವಾಡಿ, ಉಡುಪಿ

**ಓ. ಎಲ್. ನಾಗಭೂಷಣ ಸ್ವಾಮಿ**
2883-ಹಿರಿಯಾಳ ರೆಸಿಡೆನ್ಸಿ
2ನೇ ಕ್ರಾಸ್, ಪಂಪಾಪತಿ ರಸ್ತೆ
ಸರಸ್ವತಿಪುರಂ,
ಮೈಸೂರು-570 009

**ಡಾ. ಹೆಚ್.ಎಸ್. ರಾಘವೇಂದ್ರರಾವ್**
ಶ್ರೀಮಾತಾ, 15ನೇ ಕ್ರಾಸ್
5ನೇ ಹಂತ, ಜೆ.ಸಿ. ನಗರ
ಬೆಂಗಳೂರು-560 078

**ಮಾಧವ ಕುಲಕರ್ಣಿ**
ನಿವೃತ್ತ ಪ್ರಾಚಾರ್ಯರು
ಮೈಸೂರು.
ದೂ: 92435 02802

**ಜಯದೇವಪ್ಪ ಜೈನಕೇರಿ**
ನಂ.87, ಶಾಂತಲಾ, ಕುವೆಂಪು ರಸ್ತೆ,
ಶಿವಮೊಗ್ಗ

| | | |
|---|---|---|
| 40. | ಗಾದೆಗೊಂದು ನೀತಿಕಥೆ/ ಕೃ. ನಾರಾಯಣರಾವ್/80 | 20-00 |
| 41. | ಮಾನಸಿ- ರವೀಂದ್ರನಾಥರ ಕವನ ಸಂಕಲನ/ ಅನು: ಪಂಚಾಕ್ಷರಿ ಹಿರೇಮಠ/88 | 30-00 |
| 42. | ಹೇಟ್ಲಿಂದ ಮಧುಪಾತ್ರೆ/ ಅಮೃತಾ ಪ್ರೀತಮ್ ಕಥೆಗಳು/ ಅನು: ಪಂಚಾಕ್ಷರಿ ಹಿರೇಮಠ/120 | 40-00 |
| 43. | ನಿಶ್ಶಬ್ದದ ಜಾಡು/ ವಿಮರ್ಶೆ/ ಎಸ್.ಜಿ. ಸಿದ್ಧರಾಮಯ್ಯ/232 | 70-00 |
| 44. | ಅನುರೂಪ ದಾಂಪತ್ಯ/ ಕೆ.ಪಿ. ವಿನಾಯಕ/90 | 45-00 |
| 45. | ಶಿಕ್ಷಣ ಮತ್ತು ರಾಷ್ಟ್ರೀಯ ಕಾಳಜಿಗಳು/ಡಾ. ಎಸ್.ಪಿ. ಪದ್ಮಪ್ರಸಾದ್/174 | 40-00 |
| 46. | Education and National Concerns/Dr. S.P. Padmaprasad/148 | 40-00 |
| 47. | ಹೋಗುವಾ... ನಮ್ಮ ದೇಸಕೆ/ ಜಾನಪದ ಲಾವಣಿಗಳ ಸಂಕಲನ/ ಡಾ. ಎಂ. ಬೈರೇಗೌಡ/208 | 80-00 |
| 48. | ಆಲ್ಜೀಮರನ ಕಾಯಿಲೆ ಮತ್ತು ಪಾರ್ಕಿನ್ಸನ್ಸ ವ್ಯಾಧಿ/ ಡಾ. ಸಿ. ಜಿ. ಕೇಶವಮೂರ್ತಿ/64 | 16-00 |
| 49. | ಪ್ರಾಣಿಗಳ ಲೋಕ/ಬಿ.ಜಿ. ಜೈಶೂರ್/60 | 16-00 |
| 50. | ಕನ್ನಡ ನವೋದಯ ಕಾವ್ಯ(ಸಂಶೋಧನಾ ಕೃತಿ)/ಡಾ. ದೊಡ್ಡರಂಗೇಗೌಡ/600 | 275-00 |
| 51. | ರಾಮಾಯಣ ಪರಂಪರೆಯಲ್ಲಿ ಕನ್ನಡ ರಾಮಾಯಣಗಳು-ಒಂದು ತೌಲನಿಕ ಅಧ್ಯಯನ / ಡಾ. ಎಸ್. ವಿ. ಪ್ರಭಾವತಿ/438 | 175-00 |
| 52. | Fantastic World of Numbers / A.D. Zakariah /48 | 50-00 |
| 53. | ಬಂಗಾರದ ಬೇರುಗಳು/ ಮಕ್ಕಳ ಕಥೆಗಳು/ ಕೆ.ಎಂ. ವಿಜಯಲಕ್ಷ್ಮಿ/108 | 25-00 |
| 54. | ಸುಂದರಿಯ ಎರಡನೇ ಅವತಾರ(ಕತೆಗಳು)/ನಾ. ಮೊಗಸಾಲೆ/168 | 60-00 |
| 55. | ಚುಟುಕಗಳು (ಹನಿಗವನ)/ಡಾ. ಎಂ.ಪಿ. ಪುಟ್ಟಣ್ಣ/48 | 25-00 |
| 56. | ಶೈಕ್ಷಣಿಕ ಸಂಶೋಧನೆ / ಡಾ. ಎಸ್.ಪಿ. ಪದ್ಮಪ್ರಸಾದ್ / 168 | 50-00 |
| 57. | ಪ್ರಣಯದ ಕ್ಷಣಗಳ ನೆನಪಿನಲ್ಲಿ...(ಕಿರು ಕಾದಂಬರಿ)/ಕಾವ್ಯಜೀವಿ/96 | 25-00 |
| 58. | ಮೊತ್ತ ಮತ್ತು ಇತರ ಕಥೆಗಳು / ಕಥಾ ಸಂಕಲನ / ಸಿ. ಎನ್. ರಾಮಚಂದ್ರ / 120 | 60-00 |
| 59. | ಆಯ್ದ ಭಾವಗೀತೆಗಳು / ಡಾ.ಕಾ. ವೆಂ. ಶ್ರೀನಿವಾಸಮೂರ್ತಿ / 148 | 45-00 |
| 60. | ಹೂ ದಂಡಿ/ ಆಯ್ದ ಕವನಗಳು/ಮಾಲತಿ ಪಟ್ಟಣಶೆಟ್ಟಿ/ 248 | 140-00 |
| 61. | ಹೃದಯ ತರಂಗಗಳು/ಕವನ ಸಂಕಲನ/ಜಿ. ತಿಪ್ಪೇಸ್ವಾಮಿ ಶಿರಾ/80 | 35-00 |
| 62. | ಮನಸ್ಸಿನ ಅದ್ಭುತ ಶಕ್ತಿ/ವ್ಯಕ್ತಿತ್ವ ವಿಕಾಸ/ ಚಿ.ದ್ಯ. ಹರೀಶ್/96 | 40-00 |
| 63. | ಪಂಚಮುಖಿ/ಲೇಖನ ಸಂಕಲನ/ ಡಾ. ಕಮಲಾ ಹೆಮ್ಮಿಗೆ/380 | 165-00 |
| 64. | ನಿಮ್ಮ ಪ್ರೀತಿ ನಿಮ್ಮ ಆರೋಗ್ಯ/ಎನ್.ವಿಶ್ವರೂಪಾಚಾರ್/64 | 18-00 |
| 65. | ಕೋಪ ಕಾರಣ ಪರಿಹಾರ/ ಎನ್.ವಿಶ್ವರೂಪಾಚಾರ್/56 | 16-00 |
| 66. | ನಿಂತ ಮಳೆ ಹನಿ/ಕವನ ಸಂಕಲನ/ನಾಗಣ್ಣ ಕಿಲಾರಿ/80 | 30-00 |
| 67. | ವಿಜ್ಞಾನದ ಕಥೆಗಳು/ ಜೈಶೂರ್/96 | 30-00 |
| 68. | ಕತ್ತಲಗರ್ಭ /ಕಥಾ ಸಂಕಲನ/ ಈಶ್ವರಚಂದ್ರ / 128 | 50-00 |
| 69. | ಕಸಿ/ ಕಥಾಸಂಕಲನ/ ಬಿ.ರಂ. ಜಗದೀಶ್/88 | 35-00 |
| 70. | ಚಿರಸ್ಮರಣೀಯರು/ ಜೀವನ ಚಿತ್ರಗಳು/ ಬಿ.ಎಂ. ಚಂದ್ರಶೇಖರಯ್ಯ/120 | 40-00 |
| 71. | ಕಲಿಕೆ ಮತ್ತು ಬೋಧನೆಯ ಮನೋವಿಜ್ಞಾನ/ಕೆ.ಎಂ. ಸುರೇಶ್/218 | 50-00 |
| 72. | ಹೇಮಾವತಿಯ ಚೇತನ/ ಸಂಭಾವನಾ ಕೃತಿ/ ಸಂ: ಕಮಲಾ ನರಸಿಂಹ/ 224 | 100-00 |
| 73. | ಕನ್ನಡ ರಂಗಭೂಮಿ / ಅಧ್ಯಯನ / ಡಾ.ಕಾ.ವೆಂ. ಶ್ರೀನಿವಾಸಮೂರ್ತಿ/112 | 40-00 |
| 74. | ಕಪಿಲ/ನಾಟಕ/ ಡಾ.ಸಿ. ವೀರಣ್ಣ/60 | 22-00 |
| 75. | ಪು.ತಿ.ನ. - ನೂರರ ನೆನಪು / ಸಂ: ಕಮಲಾ ನರಸಿಂಹ / 296 | 150-00 |
| 76. | ಬಯಲಬೆಟ್ಟ/ಆತ್ಮಕಥೆ/ಡಾ.ನಾ. ಮೊಗಸಾಲೆ/520 | 275-00 |
| 77. | ಆತಂಕದಿಂದ ಹೊರ ಬನ್ನಿ / ಮೋಹನ್ ವೆರ್ಣೇಕರ್/92 | 40-00 |
| 78. | ಅವಲೋಕನ/ ವಿಮರ್ಶೆ/ ಡಾ॥ಎಸ್.ವಿ. ಪ್ರಭಾವತಿ, ಡಾ॥ಎಚ್.ಎಲ್. ಪುಷ್ಪ/64 | 28-00 |
| 79. | ಉತ್ತರವಿರದ ಪ್ರಶ್ನೆಗಳು/ಕವನ ಸಂಕಲನ/ ಗೀತಾ ಡಿ.ಸಿ./64 | 30-00 |
| 80. | ಅಪ್ಪಾಜಿ ಬರೆದ ಪಾಪ್ಪೂ ಡೈರಿ / ಡಾ.ಎಸ್.ಪಿ. ಪದ್ಮಪ್ರಸಾದ್ /72 | 20-00 |
| 81. | ಆಯ್ದ ಪ್ರಬಂಧಗಳು/ ಕೃ. ನಾರಾಯಣರಾವ್/88 | 25-00 |
| 82. | ಶಾಲೆಗಳ ನಿರ್ವಹಣೆ / ಡಾ.ಎಸ್.ಪಿ. ಪದ್ಮಪ್ರಸಾದ್/160 | 40-00 |

| | |
|---|---|
| 83. ಮುಳ್ಳಿನ ಹಾದಿಯಲ್ಲಿ ಹೂ ಹಾಸಿಗೆ/ನೂರಾರು ಗಜಲುಗಳ ಸಂಕಲನ/ಜಂಬಣ್ಣ ಅಮರಚಿಂತ/80 | 33-00 |
| 84. ಶಿಕ್ಷಣದಲ್ಲಿ ಮೌಲ್ಯಮಾಪನ ಮತ್ತು ಸಂಖ್ಯಾಶಾಸ್ತ್ರ/ ಕೆ.ಎಸ್. ರಾಜಶೇಖರಯ್ಯ/236 | 70-00 |
| 85. Super School Essays/ Kru. Narayan Rao/80 | 25-00 |
| 86. ವಿಜ್ಞಾನದ ಕೌತುಕಗಳು/ ವೈಜ್ಞಾನಿಕ ಲೇಖನಗಳು/ ಡಿ.ವಿ. ಹೆಗಡೆ/72 | 28-00 |
| 87. Basic Electronics /PUC I Year/ D. Manjunatha / 300 | 125-00 |
| 88. ಮುಕ್ತ ಕಾವ್ಯ/ ಕವನ ಸಂಕಲನ/ಡಾ. ದೊಡ್ಡರಂಗೇಗೌಡ/108 | 50-00 |
| 89. Method of Teaching Chemistry/ Kamala Narasimha /196 | 70-00 |
| 90. ಪರೀಕ್ಷಾ ಸಿದ್ಧತೆ ಹೀಗಿರಲಿ/ ಕೃಪಾಕರ/ 104 | 32-00 |
| 91. ಮಗುವೆಂಬ ಮುದ್ದು ಕವಿತೆ/ ಲಲಿತ ಪ್ರಬಂಧ ಸಂಕಲನ/ಡಾ.ಎಸ್.ಪಿ. ಪದ್ಮಪ್ರಸಾದ್/156 | 60-00 |
| 92. ಮೇಪಲ್ ನಾಡಿನ ಮೆಲುಕು/ಕೆನಡಾ ಪ್ರವಾಸ ಕಥನ/ ನಿರಂಜನ ವಾನಳ್ಳಿ/ 80 | 30-00 |
| 93. ಹಾಸನ ಜಿಲ್ಲೆಯ ಹೊಯ್ಸಳರ ಬಸದಿಗಳು/ಸಂಶೋಧನೆ/ ಡಾ. ಕೆ. ವಸಂತಲಕ್ಷ್ಮಿ/280 | 125-00 |
| 94. ತಾನ್‌ಸೇನ್/ ಸಂತೋಷಕುಮಾರ್ ಗುಲ್ವಾಡಿ/ 208 | 90-00 |
| 95. ಮಹಾಭಾರತ ಮಂಥನ/ ಡಾ.ಸಿ. ವೀರಣ್ಣ/ 356 | 190-00 |
| 96. ಸನಾತನ ಧರ್ಮದ ಹಿರಿಮೆ/ ಸ್ವಾಮಿ ಹರ್ಷಾನಂದ/64 | 20-00 |
| 97. ಪ್ರತಿ ಕ್ಷಣವೂ ನಿಮ್ಮದೇ/ ಆರೋಗ್ಯ/ ಡಾ. ನಾ. ಮೊಗಸಾಲೆ/270 | 90-00 |
| 98. ಸ್ಪಂದನದ ಸೊಗಡು/ಕಥಾ ಸಂಕಲನ/ ಆರ್. ವಾದಿರಾಜ್/108 | 40-00 |
| 99. ಅಂಬಿಗನ ಹಂಗಿಲ್ಲ/ ಕವನ ಸಂಕಲನ/ಬೆಳಗೋಡು ರಮೇಶ ಭಟ್/96 | 50-00 |
| 100. ನುಡಿ ಚೇತನ/ಎಂ.ಎಸ್. ರಜನಿಕಾಂತ್/200 | 100-00 |
| 101. Quantitative techniques & operations research/ Santhos.M/500 | 210-00 |
| 102. School Management/ Dr.S.P. Padmaprasad/160 | 40-00 |
| 103. Method of Teaching Chemistry/ Kamala Narasimha /252 | 100-00 |
| 104. ಗಿಳಿ ಪದ್ಯ/ ಕತೆಗಳು/ಭಾಗೀರಥಿ ಹೆಗಡೆ/112 | 50-00 |
| 105. ಸಮನ್ವಯ/ ಡಾ॥ ಎಸ್.ವಿ. ಪ್ರಭಾವತಿ/ 96 | 35-00 |
| 106. Basic Electronics -II /PUC II Year/ D. Manjunatha / 335 | 140-00 |
| 107. ಇತಿಹಾಸ II / II ಪಿಯುಸಿ/ ಬಿ. ಸೀತಾರಾಮಭಟ್, ರಾಮ್‌ಪ್ರಸಾದ್/372 | 100-00 |
| 108. ಮಾತಾಡಲು ಮಾತೇ ಬೇಕೆ?/ಹಾಸ್ಯ ಬರಹಗಳು/ ಭುವನೇಶ್ವರಿ ಹೆಗಡೆ/112 | 50-00 |
| 109. ನನ್ನ ಬದುಕಿನ ಕಾರಣ/ಕವನ ಸಂಕಲನ/ಅನ್ನದಾನಿ ಹಿರೇಮಠ/80 | 40-00 |
| 110. ಐ.ಸಿ.ಯು.ನಲ್ಲಿ ನನ್ನ ಶಿಶು/ನಾರಾಯಣ ಮಾಳ್ಕೋಡ್/116 | 50-00 |
| 111. A Beam of light from the moon collection Quatations & says/ G. Thippeswamy, Sira/88 | 45-00 |
| 112. ಶೈಕ್ಷಣಿಕ ಮನೋವಿಜ್ಞಾನದ ಮೂಲಾಂಶಗಳು/ಕೆ.ಎಂ. ಸುರೇಶ್/254 | 75-00 |
| 113. ಕಾಂಗರೂ ಕಿವಿಯ ನಾಡಿನಲ್ಲಿ/ ಪ್ರವಾಸ ಕಥನ/ ಹೇಮಲತಾ ಮಹಿಷಿ/90 | 40-00 |
| 114. ಕಾರ್ತೀಕ/ ಕವನ ಸಂಕಲನ/ ಮಂಜುನಾಥ ಬಾಳೇಹಳ್ಳಿ/72 | 33-00 |
| 115. ಪ್ರಾಚೀನ ಕನ್ನಡ ಕಾವ್ಯ- ಧರ್ಮ ಮತ್ತು ಕಾವ್ಯ ಧರ್ಮ/ಡಾ. ಎಚ್. ಹನುಮಂತರಾಯಪ್ಪ/236 | 110-00 |
| 116. ಇತಿಹಾಸ ಕ್ವಿಜ್/ಬಿ.ಜೆ. ಜೈರೂರ್/76 | 25-00 |
| 117. ದೂರದ ಆಕಾಶ/ನಾಟಕ/ಆರ್.ಪಿ. ಹೆಗಡೆ/112 | 50-00 |
| 118. Human Resource Management/ Keshav & Sanjeev/ 196/ | 100-00 |
| 119. ಕರ್ನಾಟಕದ ಅರ್ಥಶಾಸ್ತ್ರ/ನೇ.ತಿ.ಸೋಮಶೇಖರ್/518 | 200-00 |
| 120. ಆಕಾಶ ಬುಟ್ಟಿ ಮತ್ತು ಏಣಿ/ಕಥಾ ಸಂಕಲನ/ ಕೆ.ಎನ್.ಭಗವಾನ್/144 | 70-00 |
| 121. ಕನ್ನಡದ ಜ್ಞಾನ ಕಲಶಗಳು/ ಬಾನುಲಿ ರೂಪಕಗಳು/ ಕೆ.ಎನ್.ಭಗವಾನ್/118 | 55-00 |
| 122. ದಳವಾಯಿ ಎಚ್ಚಮ ನಾಯಕ/ನಾಟಕ/ ಡಾ.ಸಿ. ವೀರಣ್ಣ/68 | 25-00 |
| 123. ಸಂಕಟವೇ ನಿಲ್ಲು, ಸಾಧನೆಯಾಗು...!/ಕಾದಂಬರಿ/ಅನಸೂಯಾದೇವಿ/160 | 70-00 |
| 124. ಅನುರಾಗ ಪ್ರೀತಿಯಿಂದ/ಕಥಾ ಸಂಕಲನ/ಎಂ.ಎಚ್.ನಾಯಕ ಬಾಡ/124 | 60-00 |
| 125. ಮಣ್ಣಿನ ಮಾತುಗಳು/ಚೌಪದಿ/ಡಾ. ದೊಡ್ಡರಂಗೇಗೌಡ/208 | 100-00 |

| | |
|---|---|
| 126. ಪ್ರೀತಿ ಪ್ರಗಾಥ/ಡಾ. ದೊಡ್ಡರಂಗೇಗೌಡ/164 | 70-00 |
| 127. ಮಧ್ಯಪ್ರದೇಶ: ಐದು ವರ್ಷ, ಹತ್ತು ಸುತ್ತು/ಎಚ್.ಎಸ್. ಮಂಜುನಾಥ/ 64 | 30-00 |
| 128. ಪ್ರೊ. ಹಂಪನಾರವರ ಚಾರುವಸಂತ ಅವಲೋಕನ/ವಿಮರ್ಶಾ ಸಂಕಲನ/ ಡಾ. ಜಿ.ಎಸ್. ಉಪಾಧ್ಯ/120 | 60-00 |
| 129. ಅಶ್ವಗಂಧಿ/ನಾಟಕ/ಸುಚೇತನ ಸ್ವರೂಪ/124 | 70-00 |
| 130. ಸಿಂಗಾರಿತ್ಲು/ನಾಟಕ/ಕರಿಸ್ವಾಮಿ ಕೆ./84 | 40-00 |
| 131. ನೆಲಸಂಸ್ಕೃತಿ/ವಿಮರ್ಶಾ ಸಂಕಲನ/ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ/292 | 160-00 |
| 132. ಇಹಪರದ ಕೊಳ/ಕವನ ಸಂಕಲನ/ ಡಾ. ನಾ. ಮೊಗಸಾಲೆ/136 | 90-00 |
| 133. ಮಾವಿನಕುಳಿ ಮೂರು ನಾಟಕಗಳು/ ಜಯಪ್ರಕಾಶ ಮಾವಿನ ಕುಳಿ/190 | 90-00 |
| 134. ಪ್ರಬಂಧ ಸಂಚಯ/ಈಶ್ವರಚಂದ್ರ/ 296 | 150-00 |
| 135. ಮುಟ್ಟು/ ಕಥಾ ಸಂಕಲನ/ ಶಾಂತಾಕುಮಾರಿ/150 | 75-00 |
| 136. ತಲೆಯ ಮೇಲಿನ ಕೈ/ ಕತೆಗಳು/ ಶಾಂತಾರಾಮ ಸೋಮಯಾಜಿ/108 | 50-00 |
| 137. ಕರ್ನಾಟಕದ ಇತಿಹಾಸ: ಹಲವು ಮುಖಗಳು/ಡಾ|| ಸೂರ್ಯನಾಥ ಕಾಮತ್/176 | 80-00 |
| 138. ಮಲ್ಲಿಗೆ ಮುಗುಳು-2006/ ಕತೆಗಳು/ಕವನಗಳು/ ಶಾಂತಾರಾಮ ಸೋಮಯಾಜಿ/92 | 40-00 |
| 139. ಉಳಿದ ಪ್ರತಿಮೆಗಳು/ಕವನ ಸಂಕಲನ/ಡಿ.ಎಸ್. ರಾಮಸ್ವಾಮಿ/64 | 30-00 |
| 140. ವಿಶ್ವಸುಂದರಿ ಮತ್ತು ಇತರ ಕಥೆಗಳು/ಕೆ.ಟಿ.ಗಟ್ಟಿ/160 | 75-00 |
| 141. ಕಲ್ಪನೆಗೆ ಕನ್ನಡಿ/ವಿಶ್ವೇಶ್ವರ ಭಟ್/92 | 40-00 |
| 142. ಮೆಲುಕು/ಲಕ್ಷ್ಮಣ ಕೊಡಸೆ/96 | 40-00 |
| 143. ಪರಿಣಾಮಕಾರಿ ಸಂವಹನ ಕಲೆ/ಡಾ. ನಿರಂಜನ ವಾನಳ್ಳಿ/104 | 40-00 |
| 144. ನಿಕ್ಷೇಪ/ಕವನ ಸಂಕಲನ/ಡಾ. ದೊಡ್ಡರಂಗೇಗೌಡ/112 | 60-00 |
| 145. ಸಾವಿರದವಳು/ ನಾಟಕ/ಡಾ.ಸಿ.ವೀರಣ್ಣ/64 | 25-00 |
| 146. ಬುರ್ಖಾದ ಹುಡುಗಿ/ಡಾ. ಬಿ.ಎ. ಸನದಿ/108 | 50-00 |
| 147. ಮನಸು ಜಾರುವ ಹೊತ್ತು/ಡಾ. ನಿರಂಜನ ವಾನಳ್ಳಿ/100 | 50-00 |
| 148. ಅಂತರಂಗ ಸುದ್ದಿ/ ಡಾ. ನಿರಂಜನ ವಾನಳ್ಳಿ/120 | 60-00 |
| 149. ಶಿಕ್ಷಣ ಮತ್ತು ಮನೋವಿಕಾಸ/ಕೆ.ಎನ್. ರಾಜಶೇಖರಯ್ಯ/160 | 65-00 |
| 150. ನಿರಬುದದೆಡೆಗೆ/ ಕಾ.ತ. ಚಿಕ್ಕಣ್ಣ/268 | 130-00 |
| 151. ಐದು ನಾಟಕಗಳು/ನಾಟಕ/ಎಲ್.ಜಿ. ಶಿವಕುಮಾರ್/104 | 50-00 |
| 152. ಮೌನ ಮಾತಾಡಿತು/ಕವನ ಸಂಕಲನ/ ಶೀಲಾ ಶಂಕರ ಟೆಂಗಿನಕಾಯಿ/112 | 55-00 |
| 153. ಚೈತ್ರಗಳ ಸೋಲು...? ಕವನ ಸಂಕಲನ/ ಧೀರೇಂದ್ರ ನಾಗರಹಳ್ಳಿ/ 36 | 20-00 |
| 154. ಬಿಂಬ-ಪ್ರತಿಬಿಂಬ/ಲೇಖನ ಸಂಕಲನ/ ಪ್ರೊ. ಜಿ.ಕೆ. ಗೋವಿಂದ ರಾವ್/280 | 135-00 |
| 155. ಬೆಲ್ಲದ ಮಡು/ಕವನ ಸಂಕಲನ/ಕಮಲಾ ನರಸಿಂಹ/112 | 55-00 |
| 156. ಇತಿಹಾಸ ಮತ್ತು ಪೌರನೀತಿ ಬೋಧನೆ/ಭಾನುಮತಿ/120 | 40-00 |
| 157. ನಿರೂಪಣೆ ಮಾತಲ್ಲ ಗೀತೆ/ ಬಿ.ಕೆ. ಸುಮತಿ/72 | 35-00 |
| 158. ಪದಾತಿ ಕಥೆಗಳು/ಕಥಾ ಸಂಕಲನ/ನರಸಿಂಹಪ್ಪ ಸಿಂಧನೂರು/98 | 45-00 |
| 159. ಕೂಳೆ/ಕಥಾ ಸಂಕಲನ/ಕುಂ. ವೀರಭದ್ರಪ್ಪ/ 120 | 60-00 |
| 160. ಭೂಗರ್ಭ/ಕಾದಂಬರಿ/ಕಮಲಾ ನರಸಿಂಹ/190 | 90-00 |
| 161. ಮಜ್ಜಿಗೆಯೊಳಗಿನ ಕುಮಾರಿಯಂತೆ.../ಲಘು ಬರಹಗಳು/ ಎಚ್. ಶಾಂತಾರಾಜ ಐತಾಳ/80 | 35-00 |
| 162. ಕಾಯುಮಾಯದ ಹಾಡು/ಪ್ರೊ. ಎಸ್.ಜಿ. ಸಿದ್ಧರಾಮಯ್ಯ/ಆಯ್ದ ಕವನಗಳು/212 | 120-00 |
| 163. ಬೀದಿ ಅಲ್ಲಮ/ಪ್ರೊ. ಎಸ್.ಜಿ. ಸಿದ್ಧರಾಮಯ್ಯ/ಆಯ್ದ ಕವನಗಳು/96 | 45-00 |
| **164. ಆಯಸ್ಕಾಂತವರ/ ಕಮಲಾ ಹೆಮ್ಮಿಗೆ/ 324** | **150-00** |
| 165. ಜೀವನ ರೇಖೆ/ ಕುರಾಡಿ ಸೀತಾರಂ ಅಡಿಕ/ಆತ್ಮಕಥನ/ 325 | 100-00 |
| 166. ರಾಜ್ಯಶಾಸ್ತ್ರ/ಮಲ್ಲೇಶ/310 | 100-00 |
| 167. ವ್ಯವಹಾರ ಅಧ್ಯಯನ ನೀತಿ/ ಸೋಮಶೇಖರ/310 | 100-00 |
| 168. ಓದು ಕಷ್ಟವೇನಲ್ಲ / ನಾರಾಯಣ ಮಾಳ್ಕೋಡ್/120 | 50-00 |



ಮೊಗಸಾಲೆ ದಂಪತಿಯ ಒಂದು ಪರಮ ಸಂತೋಷದ ಕ್ಷಣ! (2003)






ಹಿರಿಯ ಕವಿ ಪ್ರೊ. ಎಸ್.ವಿ. ಪರಮೇಶ್ವರ ಭಟ್ಟರ ಅಧ್ಯಕತೆಯಲ್ಲಿ ಮೊಗಸಾಲೆ ಐವತ್ತರ ಸಂಭ್ರಮದಲ್ಲಿ ಅಭಿನಂದಿಸುತ್ತಿರುವ ಹರಿಕೃಷ್ಣ ಪುನರೂರು. ಎಡದಿಂದ ಬಲಕ್ಕೆ ಡಾ. ಸಿ.ಎನ್. ರಾಮಚಂದ್ರನ್, ಶ್ರೀಮತಿ ಪ್ರೇಮಾ ಮೊಗಸಾಲೆ, ಮೊಗಸಾಲೆ ಮತ್ತು ಪರಮೇಶ್ವರ ಭಟ್ಟರು.



ಮೊಗಸಾಲೆಯವರಲ್ಲಿ ಸಾಹಿತ್ಯ ಪ್ರೀತಿ ಹುಟ್ಟಿಸಿದ ಮತ್ತು ಸಂಘಟನೆಯ ಬೀಜ ಬಿತ್ತಿದ ವಿದ್ಯಾಗುರು ಶ್ರೀ ಪಂಜಾಜೆ ಶಂಕರಭಟ್ಟರನ್ನು ಜಸ್ಟಿಸ್ ಕೆ.ಎಸ್.ಹೆಗ್ಡೆ ಅವರ ನೇತೃತ್ವದಲ್ಲಿ ಸನ್ಮಾನಿಸಿದಾಗ ಸನ್ಮಾನಕ್ಕೆ ಉತ್ತರ ನೀಡುವ ಪಂಜಾಜೆ ಅವರು. ಮಧ್ಯದಲ್ಲಿ ಇರುವವರು ಕುಲ್ಯಾಡಿ ಮಾಧವ ಪೈ



(ಎಡದಿಂದ ಬಲಕ್ಕೆ) ತಮ್ಮ ಗಣಪತಿ, ನಾ. ಮೊಗಸಾಲೆ, ಅಕ್ಕ ಶಾರದೆ, ತಾಯಿ ಸರಸ್ವತಿ (ಕುಳಿತವರು) ಅಕ್ಕಂದಿರಾದ ಲಕ್ಷ್ಮಿ ಮತ್ತು ಪಾರ್ವತಿ, ಅಣ್ಣಂದಿರಾದ ಮಾಪಣ್ಣ ಹಾಗೂ ಕೇಚಣ್ಣ



ಜೀವನದಲ್ಲಿ ಎಂದೂ ಕೋಟು ಟೈ ಧರಿಸದ ಮೊಗಸಾಲೆ, ವೈದ್ಯಕೀಯ ಪದವಿ ಪಡೆದ 'ಹುಡುಗಾಟದ' ಸಂತಸದಲ್ಲಿ ಸ್ಟುಡಿಯೋದಲ್ಲಿ ಕೋಟು ಟೈ ಧರಿಸಿ ತೆಗೆಸಿಕೊಂಡ ಫೋಟೋ (1965)



ಕಾಂತಾವರ ಕನ್ನಡ ಸಂಘದ ಬೆಳ್ಳಿ ಹಬ್ಬದ ರಾಜ್ಯ ಮಟ್ಟದ ಸಂಸ್ಕೃತಿ ಸಮ್ಮೇಳನವನ್ನು ಉದ್ಘಾಟಿಸುತ್ತಿರುವ ಕಯ್ಯಾರ ಕಿಞ್ಞಣ್ಣರೈ (ಎಡದಿಂದ) ಡಾ. ಬಲ್ಲಾಳ್ ಬಾ. ನಂದಳಿಕೆ, ಕೆ.ಕೆ.ಪೈ, ವ್ಯಾಸರಾಯ ಬಲ್ಲಾಳ (ಸಮ್ಮೇಳನಾಧ್ಯಕ್ಷ) ಡಾ.ಸಿ.ಕೆ. ಬಲ್ಲಾಳ್, ಶ್ರೀನಿವಾಸ ಜೋಕಟ್ಟೆ, ಪುನರೂರು, ಜನಾರ್ದನ ಭಟ್, ಮಾಜಿ ಶಾಸಕ ಗೋಪಾಲ ಭಂಡಾರಿ, ಎ.ಎಸ್. ಎನ್. ಹೆಬ್ಬಾರ್, ನರಸಿಂಹನಾಯಕ್



ಮೊಗಸಾಲೆಯವರು ಪ್ರಾಥಮಿಕ ವಿದ್ಯಾಭ್ಯಾಸ ಪಡೆದ ಕೋಳ್ಯೂರು ಶ್ರೀ ಶಂಕರ ನಾರಾಯಣ
ಕಿರಿಯ ಪ್ರಾಥಮಿಕ ಶಾಲೆ



ಮೊಗಸಾಲೆಯವ ಹಿರಿಯ ಮಗ ನಿರಂಜನ ವಿವಾಹೋತ್ಸವದ ಸಂಭ್ರಮ (1995) ಎಡದಿಂದ
ಬಲಕ್ಕೆ ತಮ್ಮ ಗಣಪತಿ, ಭಾವ ಚುಳ್ಳಿಕಾನ ಶಂಕರ ನಾರಾಯಣ ಭಟ್ಟ
ಅಣ್ಣ ಮಾಪಣ್ಣ, ಸಾಕುತಂದೆಯ ಹಾಗೆ ಸಾಕಿದ ಚಿಕ್ಕಪ್ಪ ಮೊಗಸಾಲೆ ಕೃಷ್ಣಭಟ್ಟ



2004ರ ಸಾಲಿನಲ್ಲಿ ಕರ್ನಾಟಕ ಸರಕಾರದ ರಾಜ್ಯೋತ್ಸವ ಪ್ರಶಸ್ತಿ ಪ್ರದಾನ ಸಮಾರಂಭ.
ಎಡದಿಂದ ಬಲಕ್ಕೆ - ಕನ್ನಡ ಮತ್ತು ಸಂಸ್ಕೃತಿ ನಿರ್ದೇಶಕನಾಲಯದ ನಿರ್ದೇಶಕ ಶ್ರೀ ಮುದ್ದುಮೋಹನ್,
ಸಚಿವರಾದ ಶ್ರೀ ಪಿ.ಜಿ.ಆರ್. ಸಿಂಧ್ಯಾ, ಮಾನ್ಯ ಮುಖ್ಯಮಂತ್ರಿ ಶ್ರೀ ಧರಂಸಿಂಗ್, ಕನ್ನಡ ಮತ್ತು
ಸಂಸ್ಕೃತಿ ಇಲಾಖಾ ಕಾರ್ಯದರ್ಶಿಯವರಾದ ಶ್ರೀಮತಿ ಉಷಾ ಗಣೇಶನ್



ಉಡುಪಿಯ ಹಿರಿಯ ಕಲಾ ಸಂಸ್ಥೆ ಕಲಾವೃಂದವು 'ಸಾಹಿತಿಯ ಮನೆಯಲ್ಲೇ ಸನ್ಮಾನ'
ಕಾರ್ಯಕ್ರಮದಡಿಯಲ್ಲಿ ಮಣಿಪಾಲ ಸಮೂಹ ಸಂಸ್ಥೆಗಳ ನೇತಾರ ಕೆ.ಕೆ. ಪೈ ಅವರ
ಹಿರಿತನದಲ್ಲಿ ಸನ್ಮಾನಿಸಿದಾಗ. ಎಡದಿಂದ ಬಲಕ್ಕೆ - ಕು.ಗೋ. ತಿಲಕನಾಥ ಮಂಜೇಶ್ವರ,
ಕೆ.ಕೆ. ಪೈ ವಿಮರ್ಶಕ ಬಿ.ಜನಾರ್ದನ ಭಟ್.



ವೈದ್ಯ ಮೊಗಸಾಲೆಯವರ ಕುಟುಂಬ ವೈದ್ಯ ಹೋಮಿಯೋಪಥಿ ತಜ್ಞ ಡಾ. ವಸಂತಕುಮಾರ್ ರಾವ್ ಕೈಕಂಬ ಅವರನ್ನು ಅವರ ಮನೆಯಲ್ಲೇ ಮೊಗಸಾಲೆಯವರು ಕನ್ನಡ ಸಂಘದಿಂದ ಅಭಿನಂದಿಸಿದರು.(2003)




ವರ್ಧಮಾನ ಪ್ರಶಸ್ತಿ ಪೀಠದ ದಶಮಾನೋತ್ಸವ ಸಂದರ್ಭ. ಪ್ರಶಸ್ತಿ ಸ್ವೀಕರಿಸಿ ಮಾತನಾಡುತ್ತಿರುವ ಡಾ. ಹಾ.ಮಾ.ನಾ. ಎಡದಿಂದ ಬಲಕ್ಕೆ - ಡಾ. ಮೊಗಸಾಲೆ, ಪುನರೂರು, ವಿಠಲ ಬೇಲಾಡಿ, ಹರಿಹರ ಪ್ರಿಯ, ಡಾ. ವೀರೇಂದ್ರ ಹೆಗ್ಡೆ ಪ್ರೊ. ಜಿ.ಎಸ್.ಸಿದ್ಧಲಿಂಗಯ್ಯ, ಮಾಜಿ ಸಚಿವ ಕೆ. ಅಮರನಾಥ ಶೆಟ್ಟಿ



24 ಲಕ್ಷ ರೂಪಾಯಿ ವೆಚ್ಚದಲ್ಲಿ ಉಪ್ಪುಗೊಂಡ ಮೊಗಸಾಲೆಯವರ ಕನಸಿನ ಕೂಸು:
ಕರ್ನಾಟಕ ಏಕೀಕರಣದ ನೇತಾರ ಕೆ.ಬಿ. (ಕಾಂತಾವರ ಬಾರಾಡಿಬೀಡು) ಜಿನರಾಜ ಹೆಗ್ಡೆ
ಜನ್ಮಶತಮಾನೋತ್ಸವ ಸ್ಮಾರಕ 'ಕನ್ನಡ ಭವನ' (2003)




ಮುದ್ದಣ ಕಾವ್ಯ ಪ್ರಶಸ್ತಿ ಯೋಜನೆಯ ಬೆಳ್ಳಿ ಹಬ್ಬ ಸಮಾರಂಭವನ್ನು ಉದ್ಘಾಟಿಸುತ್ತಿರುವ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಜಂಟಿ ನಿರ್ದೇಶಕ ಶ್ರೀ ಮಾರ್ಕಾಂಡಪುರ ಶ್ರೀನಿವಾಸ್ (2004)
ಡಾ. ಮೊಗಸಾಲೆ, ಡಾ.ಜೀವಂಧರ ಬಲ್ಲಾಳ್, ಭಾಸ್ಕರ್ ಕೋಟ್ಯಾನ್ ಇರ್ವತ್ತೂರು, ಸಿ.ಜೆ. ವಸಂತಕುಮಾರ್ ಮುಂಬೈ, ಡಾ. ಎಸ್.ಪಿ. ಪದ್ಮಪ್ರಸಾದ್, ಸುರೇಶ್ ಎಂ.ಮಾಡ ಮೊದಲಾದವರು



ಕಾಂತಾವರದ ಜನಸಮುದಾಯದ ಪ್ರೀತಿ ಮತ್ತು ಮನಸ್ಸಿನಿಂದ ರೂಪುಗೊಂಡ 'ಮೊಗಸಾಲೆ' ಇಲ್ಲದ ಮೊಗಸಾಲೆಯವರ ಮನೆಯ ಇದಿರು-ಮೊಗಸಾಲೆಯವರಿಗೆ ಪಿರಿಯಣ್ಣನ ಹಾಗೆ ಒದಗಿ ಬಂದ ವಸಂತಕುಮಾರ್ ಎ.ಜಿ. ಮುಂಬಯಿ (1979)



ಮೊಗಸಾಲೆಯವರ ಸಂಸಾರ

ಎಡದಿಂದ ಬಲಕ್ಕೆ: ಡಾ. ಪ್ರಜ್ಞಾ (3ನೇ ಮಗನ ಪತ್ನಿ) ಡಾ.ಪ್ರಸನ್ನ (3ನೇ ಮಗ), ಡಾ. ಮೊಗಸಾಲೆ ಪತ್ನಿ ಪ್ರೇಮಲತಾ, ಅನರ್ಘ್ಯ (2ನೇ ಮಗ ಸುದರ್ಶನನ ಮಗು) ಸುದರ್ಶನ (2ನೇ ಮಗ) ಸವಿತಾ (ಹಿರಿಯ ಸೊಸೆ) ಮನು (ಡಾ.ಪ್ರಸನ್ನ ದಂಪತಿಯ ಮಗು), ನಿರಂಜನ (ಹಿರಿಯ ಮಗ)

ಸೃಜನಶೀಲತೆ, ಸಂಘಟನಾಚತುರತೆ ಹಾಗೂ ಸಮುದಾಯಪ್ರೀತಿ ಮುಪ್ಪುರಿಗೊಂಡ ವ್ಯಕ್ತಿತ್ವ, ಡಾ. ನಾ. ಮೊಗಸಾಲೆ ಅವರದ್ದು. ಪುಟ್ಟಹಳ್ಳಿ ಶಾಂತಾವರವನ್ನು ಇಡೀ ರಾಜ್ಯಮಟ್ಟದಲ್ಲಿ ಖ್ಯಾತಿಗೊಳ್ಳುವಂತೆ ಮಾಡಿದ ಹಿರಿಮೆ ಅವರದ್ದು. ಒಳ್ಳೆ ಕತೆಗಾರ, ಕಾದಂಬರಿಕಾರ ಹಾಗೂ ಕವಿಯಾಗಿರುವ ಡಾ. ನಾ. ಮೊಗಸಾಲೆಯವರಿಗೆ ಅರವತ್ತು ದಾಟಿರುವ ಸಂದರ್ಭದಲ್ಲಿ ಅವರ ಸ್ನೇಹಿತರು, ಅಭಿಮಾನಿಗಳು ಅರ್ಪಿಸುತ್ತಿರುವ ಅಭಿನಂದನ ಗ್ರಂಥ ಈ 'ಅಯಸ್ಕಾಂತಾವರ'

ಧರ್ಮದರ್ಶಿ ಹರಿಕೃಷ್ಣ ಪುನರೂರು



ಸುಮುಖ ಪ್ರಕಾಶನ

ನಂ. 174ಇ/28, 1ನೇ ಮಹಡಿ, 1ನೇ ಮುಖ್ಯರಸ್ತೆ, ಮಾಗಡಿ ರಸ್ತೆ ಟೋಲ್‌ಗೇಟ್, ವಿದ್ಯಾರಣ್ಯನಗರ, ಬೆಂಗಳೂರು-23. ದೂ: 23118585, 98442 78792.

ರೂ. 200/-